ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀ ಸ್ಕಾಂದಮಹಾಪುರಾಣಂ

## ವೈಷ್ಣವಖಂಡ

೧

## ಶ್ರೀವೇಂಕಟಾಚಲಮಾಹಾತ್ಮ್ಯ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



ಬೆಂಗಳೂರು ಪ್ರೆಸ್
...ರು ರೋಡು, ಬೆಂಗಳೂರು ಸಿಟಿ
೧೯೪೬

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀ ಸ್ಕಾಂದಮಹಾಪುರಾಣಂ

## ವೈಷ್ಣವಖಂಡ

## ೧

## ಶ್ರೀ ವೇಂಕಟಾಚಲಮಾಹಾತ್ಮ್ಯೆ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

ವೋಟಿಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೭

# ಅರಿಕೆ

ಈ ಐದನೆಯ ಸಂಪುಟದಿಂದ ಶ್ರೀ ಸ್ಕಾಂದಮಹಾಪುರಾಣದ ದ್ವಿತೀಯ ಮೂಲಖಂಡವಾದ ವೈಷ್ಣವಖಂಡವು ಮೊದಲಾಗಿ ಅದರಲ್ಲಿಯ ಪ್ರಥಮಭಾಗ ವಾದ ಶ್ರೀ ವೇಂಕಟಾಚಲಮಾಹಾತ್ಮ್ಯವು ಸಮಾಪ್ತವಾಗಿರುತ್ತದೆ. ಈ ಖಂಡ ದಲ್ಲಿ ಮುಖ್ಯಮುಖ್ಯವಾದ ವೈಷ್ಣವಕ್ಷೇತ್ರಗಳ ಮಾಹಾತ್ಮ್ಯಗಳು ವರ್ಣಿತ ವಾಗಿರುತ್ತವೆಯಲ್ಲದೆ, ಅಲ್ಲಲ್ಲಿ ಸಂದರ್ಭಾನುಸಾರವಾಗಿ ವೈಷ್ಣವಪಂಥದ ಆಚಾರವ್ಯವಹಾರಗಳೂ, ವಿಷ್ಣುಭಕ್ತಿಯ ಸ್ವರೂಪ ಮತ್ತು ವಿಷ್ಣುಭಕ್ತರ ಲಕ್ಷಣ ಗಳೂ ಆಖ್ಯಾಯಿಕೆಗಳ ಮೂಲಕ ಬಹಳ ಚೆನ್ನಾಗಿ ಪ್ರತಿಪಾದಿತವಾಗಿರುತ್ತವೆ.

ಶ್ರೀ ವೇಂಕಟಾಚಲಮಾಹಾತ್ಮ್ಯವು ಈ ಸ್ಕಾಂದಮಹಾಪುರಾಣದಲ್ಲಿಯೇ ಅಲ್ಲದೆ ಭವಿಷ್ಯೋತ್ತರ, ವರಾಹ, ಪದ್ಮ, ಬ್ರಹ್ಮಾಂಡ ಮುಂತಾದ ಪುರಾಣ ಗಳೆಲ್ಲಿಯೂ ವಿಸ್ತಾರವಾಗಿಯೂ ಸಂಗ್ರಹವಾಗಿಯೂ ಪ್ರಸ್ತಾಪಿಸಿರುವುದು ಕಂಡುಬರುತ್ತದೆ. ಅವುಗಳಲ್ಲಿ ಕೆಲವು ವೇಂಕಟೇಶ್ವರಸ್ವಾಮಿಯ ವೈಭವವನ್ನೂ, ಪದ್ಮಾವತೀ ಕಲ್ಯಾಣ(ಶ್ರೀನಿವಾಸ ಕಲ್ಯಾಣ)ವನ್ನೂ ಲಂಬಿಸಿ ವರ್ಣಿಸಿರುತ್ತವೆ. ಕೆಲವು ಶ್ರೀ ವೇಂಕಟೇಶ್ವರಮೂರ್ತಿಯು ವಿರಾಜಿಸುತ್ತಿರುವ ಶ್ರೀ ನಾರಯಾಣಾದ್ರಿಯಲ್ಲಿ ಬೆಳಗುತ್ತಿರುವ ಪವಿತ್ರ ತೀರ್ಥಗಳ, ಪುಣ್ಯಾಶ್ರಮಗಳ ಮತ್ತು ಅವುಗಳ ಉದ್ಭವಾದಿ ವಿಷಯಗಳ ವಿಸ್ತಾರವರ್ಣನೆಗಳನ್ನೊಳಕೊಂಡಿರು ವುದರ ಜೊತೆಗೆ ಶ್ರೀ ವೇಂಕಟೇಶ್ವರನ ಮಾಹಾತ್ಮ್ಯವನ್ನೂ ಒಳಕೊಂಡಿರುತ್ತವೆ. ಇಲ್ಲಿ ಅನುವಾದಿತವಾಗಿರುವ ಶ್ರೀ ಸ್ಕಾಂದಾಂತರ್ಗತ ವೇಂಕಟಾಚಲ ಮಾಹಾತ್ಮ್ಯವು ಕ್ಷೇತ್ರಮಾಹಾತ್ಮ್ಯವನ್ನೇ ಮುಖ್ಯವಾಗಿ ನಿರೂಪಿಸಿರುವುದು.

ಶ್ರೀ ವೇಂಕಟಾಚಲಕ್ಷೇತ್ರದ ವಿಚಾರವಾಗಿ ಇಲ್ಲಿ ಕೆಲವು ಸಂಗತಿಗಳನ್ನು ಓದುಗರ ಗಮನಕ್ಕೆ ತರುವುದು ಅಪ್ರಸಕ್ತವಾಗಲಾರದು. ಇಲ್ಲಿ ಸೂಚಿಸಿರುವ ಅಂಶಗಳೆಲ್ಲವನ್ನೂ 'ತಿರುಮಲೈ ಶ್ರೀ ವೇಂಕಟೇಶ್ವರ' ಎಂಬ ಇಂಗ್ಲಿಷ್ ಮಾಸ ಪತ್ರಿಕೆಯಿಂದ ಆಯ್ದುಕೊಂಡುದಾಗಿದೆ.

ವೇಂಕಟಾಚಲವು ಚಿತ್ತೂರು ಜಿಲ್ಲೆಯ ತಿರುಪತಿಯೆಂಬ ಊರಿಗೆ ಸೇರಿ ದಂತಿರುತ್ತದೆ. ಇಲ್ಲಿಯೇ ಶ್ರೀ ವೇಂಕಟೇಶ್ವರಸ್ವಾಮಿಯ ಮೂರ್ತಿಯು ವಿರಾಜಿಸುತ್ತ ಅಖಂಡ ಭರತಖಂಡದಲ್ಲಿಯೇ ಇದಕ್ಕೆ ಪ್ರಮುಖಪುಣ್ಯಕ್ಷೇತ್ರತ್ವ ವನ್ನುಂಟುಮಾಡಿರುವುದೆಂದರೆ ಅತ್ಯುಕ್ತಿಯಾಗಲಾರದು. ಭರತಖಂಡದಲ್ಲಿ ಎಷ್ಟೋ ಸುಪ್ರಸಿದ್ಧ ಪುಣ್ಯಕ್ಷೇತ್ರಗಳಿರುವುವಾದರೂ ಶೈವ ವೈಷ್ಣವ ಭೇದ ವೆಂಬುದೇ ಇಲ್ಲದೆ ಪ್ರತಿಪಂಥದ ಭಕ್ತರೂ ಯಾತ್ರೆ ಹೋಗಿ ಶ್ರೀ ವೇಂಕಟೇಶ್ವರ ನನ್ನು ಸಂದರ್ಶಿಸಿ ಕೃತಾರ್ಥರಾಗುತ್ತಿರುವುದು ಈ ಕ್ಷೇತ್ರದ ವೈಶಿಷ್ಟ್ಯವೆನಿಸಿರು ವುದು. ಶ್ರೀ ವೇಂಕಟೇಶ್ವರಸ್ವಾಮಿಯು ಶೈವರೆನ್ನದೆ, ವೈಷ್ಣವರೆನ್ನದೆ ಸಮಸ್ತರ

ಅಭೀಷ್ಟಗಳನ್ನೂ ಈಡೇರಿಸಿ ಸಮಸ್ತರಿಗೂ ಏಕದೇವನಾಗಿ ಈ ಕ್ಷೇತ್ರದಲ್ಲಿ ಬೆಳಗು ತ್ತಿರುವನು. ಆದುದರಿಂದ ಈ ಮೂರ್ತಿಗೆ ಇಂತಹ ಅನನ್ಯ ಸುಲಭವಾದ ಪ್ರಾಶಸ್ತ್ಯವು ಬಂದಿರುವುದಕ್ಕೆ ಕಾರಣಗಳನ್ನೂ ಸ್ಥೂಲವಾಗಿ ತಿಳಿದುಕೊಳ್ಳುವುದು ಉಚಿತವೇ ಸರಿ.

ಶ್ರೀ ವೇಂಕಟಾಚಲದಲ್ಲಿ ನೆಲಸಿ ಬೆಳಗುತ್ತಿರುವ ಶ್ರೀ ವೇಂಕಟೇಶ್ವರನ ಮೂರ್ತಿಯನ್ನು ಯಾರು ಪ್ರತಿಷ್ಠೆಮಾಡಿದರೆಂಬ ವಿಷಯವು ಈವರೆಗೆ ಸಿಖರ ವಾಗಿ ತಿಳಿಯಲು ಯಾವ ಆಧಾರವೂ ಇರುವುದಿಲ್ಲ. ಆದರೆ ಪರಂಪರೆಯಾಗಿ ಬಂದಿರುವ ಐತಿಹ್ಯದಂತೆ ಈ ಮೂರ್ತಿಯು ಕಲಿಯುಗದ ಆರಂಭದಿಂದಲೂ ಎಂದರೆ ಐದುಸಾವಿರ ವರ್ಷಗಳಿಂದಲೂ ಆ ಪರ್ವತದಲ್ಲಿ ನೆಲಸಿರುವುದೆಂದು ತಿಳಿದುಬರುತ್ತದೆ. ಇದಕ್ಕೆ ನಮಗೆ ಪುರಾಣಗಳೇ ಆಧಾರಗಳು. ಅವು ಈ ಮೂರ್ತಿಯ ವಿಷಯವಾಗಿ ಕೆಲವು ಸಂಗತಿಗಳನ್ನು ತಿಳಿಸುತ್ತವೆ. ಆದಿತ್ಯ ಪುರಾಣದಲ್ಲಿ,

"ಕೃತೇ ತು ನರಸಿಂಹೋಽಭೂತ್ ತ್ರೇತಾಯಾಂ ರಘುನಂದನಃ ।
ದ್ವಾಪರೇ ವಾಸುದೇವಶ್ಚ ಕಲೌ ವೇಂಕಟನಾಯಕಃ" ॥

"ಜಗತ್ಪ್ರಭುವಾದ ಶ್ರೀಮನ್ನಾರಾಯಣನು ಕೃತಯುಗದಲ್ಲಿ ನೃಸಿಂಹನಾಗಿಯೂ, ತ್ರೇತಾಯುಗದಲ್ಲಿ ಶ್ರೀರಾಮನಾಗಿಯೂ, ದ್ವಾಪರಯುಗದಲ್ಲಿ ವಸುದೇವಸುತ ನಾದ ಶ್ರೀ ಕೃಷ್ಣನಾಗಿಯೂ, ಈ ಕಲಿಯುಗದಲ್ಲಿ ಶ್ರೀ ವೇಂಕಟನಾಯಕ ನಾಗಿಯೂ ಅವತರಿಸಿದನು" ಎಂದು ಹೇಳಿದೆ.

ಇದರಿಂದ ಪ್ರಸಕ್ತ ಕಲಿಯುಗದ ದೇವರೆಂದರೆ ವೇಂಕಟನಾಯಕನೆಂದೇ ಅರ್ಥವಾಗುವುದು. ವೇಂಕಟನಾಯಕನೇ ವೇಂಕಟೇಶ್ವರನು; ಆತನೇ ಕಲಿಯುಗದಾದಿಯಿಂದಲೂ ಬೆಳಗುತ್ತಿರುವ ಪ್ರಭುವೆಂದು ಸ್ಪಷ್ಟವಾಗುತ್ತದೆ.

ಈ ವೇಂಕಟೇಶ್ವರಸ್ವಾಮಿಯ ಒಂದು ವೈಚಿತ್ರ್ಯವೆಂದರೆ, ಶೈವ ವೈಷ್ಣವ ರೆನ್ನದೆ ಭರತಖಂಡ ನಿವಾಸಿಗಳಾದ ಸಮಸ್ತ ಪಂಥದವರಿಂದಲೂ ಸೇವೆಗೊಳ್ಳು ತ್ತಿರುವುದು. ಆಚಾರಶೀಲರಾದ ವೈಷ್ಣವರು ಯಾತ್ರೆ ಹೊರಟರೂ ಕಾಶೀ ಕ್ಷೇತ್ರದಲ್ಲಿರುವ ಶ್ರೀ ವಿಶ್ವೇಶ್ವರನನ್ನಾಗಲಿ, ರಾಮೇಶ್ವರದಲ್ಲಿರುವ ರಾಮ ಲಿಂಗೇಶ್ವರನನ್ನಾಗಲಿ ಶಿವನೆಂಬ ಭಾವನೆಯಿಂದಲೇ ಸೇವಿಸುವುದಿಲ್ಲ. ಅಂತೆಯೇ ಆಚಾರವಂತರಾದ ಶೈವರು ಶ್ರೀರಂಗದಲ್ಲಿರುವ ರಂಗನಾಥನನ್ನಾಗಲಿ, ಪುರುಷೋತ್ತಮದಲ್ಲಿರುವ ಜಗನ್ನಾಥನನ್ನಾಗಲಿ ಸೇವಿಸುವುದಿಲ್ಲ. ಈ ಭೇದವು ಅಂದಿನಿಂದ ಇಂದಿನವರೆಗೂ ಅಚ್ಚಳಿಯದೆ ನಡೆದುಕೊಂಡೇ ಬರುತ್ತಿರುವುದು. ಆದರೆ ಶ್ರೀ ನಾರಾಯಣಾದ್ರಿಯಲ್ಲಿ ಸಮಸ್ತ ಭಕ್ತರಿಗೂ ವರದಮೂರ್ತಿ ಯಾಗಿರುವ ಶ್ರೀ ವೇಂಕಟೇಶ್ವರನನ್ನು ಮಾತ್ರ ಶೈವರು, ವೈಷ್ಣವರು, ಶಾಕ್ತರು ಇಷ್ಟೆ ಏಕೆ ಇತರ ಅನೇಕಾನೇಕ ಪಂಥದವರು ಎಲ್ಲರೂ ಭಕ್ತಿಯಿಂದ ಸತತವೂ

ಸೇವಿಸುತ್ತಾರೆ. ಎಂದಮೇಲೆ ಈ ಮೂರ್ತಿಯಾವುದೆಂಬ ಸಂಶಯವು ಮೂಡದಿರದು. ಇಲ್ಲಿ ಕೆಲವು ವಿಷಯಗಳು ಗ್ರಾಹ್ಯಗಳು.

ಈ ಮೂರ್ತಿಯು ಪೂರ್ವದಲ್ಲಿ ಸ್ಕಂದಸ್ವಾಮಿಯದಾಗಿದ್ದಿತೆಂದೂ ಆಮೇಲೆ ಶ್ರೀ ರಾಮಾನುಜಾಚಾರ್ಯರು ಇದಕ್ಕೆ ಶಂಖ ಚಕ್ರಾದಿ ಚಿಹ್ನೆಗಳನ್ನು ಕೀಲಿಸಿ ವೈಷ್ಣವ ಮೂರ್ತಿಯನ್ನಾಗಿಸಿದರೆಂದೂ ಅಂದಿನಿಂದ ಎಂದರೆ ಶ್ರೀ ರಾಮಾನುಜಾಚಾರ್ಯರು ಯಾದವರಾಜನ ನೆರವಿನಿಂದ ಏರ್ಪಾಡುಮಾಡಿದ ಬಳಿಕ ಇದಕ್ಕೆ ವೈಷ್ಣವ ಸಂಪ್ರದಾಯದಂತೆ ಅರ್ಚನೆಯು ನಡೆಯುತ್ತಿರುವುದೆಂದೂ ಬಹುಕಾಲದಿಂದ ಜನಜನಿತವಾಗಿ ಹರಡಿರುವ ಒಂದು ಪ್ರವಾದವಿರುತ್ತದೆ. ಇದು ನಡೆದುದು ನಿಜವಾಗಿದ್ದರೆ ಈ ಮೂರ್ತಿಯ ವಕ್ಷಸ್ಥಳದಲ್ಲಿ ಮಹಾಲಕ್ಷ್ಮಿಯಿರುವುದಕ್ಕೆ ಕಾರಣವೇನೆಂಬ ಪ್ರಶ್ನೆಯು ಬರುತ್ತದೆ. ಶ್ರೀ ರಾಮಾನುಜರೇ ಅದನ್ನೂ ಕೆತ್ತಿಸಿದರೆಂಬುದಕ್ಕೆ ಯಾವ ಆಧಾರವೂ ಇರುವುದಿಲ್ಲ.

ಈ ವಿಷಯದಲ್ಲಿಯೂ ನಮಗೆ ಪುರಾಣಗಳೇ ದಾರಿತೋರುವುದಾಗಿವೆ. ವ್ರತಚೂಡಾಮಣಿಯಲ್ಲಿ (ಪೌರಾಣಿಕವ್ರತ ಸಂಗ್ರಹ)

"ಸೇನಾನೀಃ ಷಣ್ಮುಖಶ್ಚಾಪಿ ವಿಷ್ಣುರ್ಲಕ್ಷ್ಮೀಪತಿಃ ಸ್ವಯಂ ।
ಉಭೌ ಶಂಭುಂ ಸಮಾರಾಧ್ಯ ತತ್ರ ವೇಂಕಟಭೂಧರೇ ॥
ಸಂಗತಾವೇಕಭಾವೇನ ಸರ್ವಭೂತವರಪ್ರದೌ ।
ವಿಷ್ಣುಸ್ಕಂದಾತ್ಮಿಕಾ ಮೂರ್ತಿಃ ವೇಂಕಟೇಶ್ವರರೂಪಿಣೀ ।
ಸರ್ವದೇವಮಯೀ ಶಕ್ತಿಃ ಪೂಜ್ಯತಾಂ ಸರ್ವಮಾನವೈಃ" ॥

ಭಾವಾನುವಾದ—ದೇವಸೇನೆಗಳ ಒಡೆಯನಾದ ಷಣ್ಮುಖಸ್ವಾಮಿಯೂ, ಲಕ್ಷ್ಮೀಪತಿಯಾದ ಸಾಕ್ಷಾತ್ ಶ್ರೀಮನ್ಮಹಾವಿಷ್ಣುವೂ ಇಬ್ಬರೂ ವೇಂಕಟಾಚಲದಲ್ಲಿ ಶಂಭುವನ್ನಾರಾಧಿಸಿ ಏಕಮನಸ್ಕರೂ ಏಕಮೂರ್ತಿಧರರೂ ಆಗಿ ಸಮಸ್ತ ಭೂತಗಳಿಗೂ ವರಗಳನ್ನು ದಯಪಾಲಿಸುವವರಾದರು.

ಸಮಸ್ತ ದೇವತಾಮಯಿಯೂ ಶ್ರೀ ವಿಷ್ಣುಸ್ಕಂದಾತ್ಮಕಿಯೂ ಆದ ಶ್ರೀ ಪರಾಶಕ್ತಿಯು ಶ್ರೀ ವೇಂಕಟೇಶ್ವರ ಸ್ವರೂಪಿಣಿಯಾಗಿ ಸಮಸ್ತ ಮಾನವರಿಂದಲೂ ಪೂಜೆಗೊಳ್ಳುತ್ತಿರುವಳು, ಎಂದು ಹೇಳಿದೆ.

ಈ ಮೇಲಿನ ಆಧಾರವು ತಿರುಪತಿಯ ಬೆಟ್ಟದ ಮೇಲೆ ನೆಲಸಿರುವ ದೇವತಾಮೂರ್ತಿಯ ವಿಚಾರವಾಗಿ ಸತ್ಯಾಂಶವನ್ನು ನಿರೂಪಿಸುವುದಾಗಿದೆ. ಇದರಿಂದ ಈ ಮೂರ್ತಿಯು ಸ್ಕಂದ, ವಿಷ್ಣು, ಶಕ್ತಿದೇವತೆಗಳ ಸ್ವರೂಪವನ್ನೊಳಕೊಂಡು ಅವರಿವರೆನ್ನದೆ, ಎಲ್ಲರಿಗೂ ಆರಾಧ್ಯದೈವವಾಗಿರುವುದೆಂಬ ವಿಷಯವು ತಿಳಿದುಬರುವುದು.

ಪರಮ ಪವಿತ್ರವಾದ ಈ ಮೂರ್ತಿಯ ಶೀರ್ಷಭಾಗದಲ್ಲಿ ಜಟೆಗಳಿರುತ್ತವೆ. ಭುಜಗಳಮೇಲೆ ನಾಗಾಭರಣ. ಇವು ವಿಷ್ಣುಮೂರ್ತಿಯ ಚಿಹ್ನೆಗಳೇ ಅಲ್ಲ. ಆದರೆ

ಇವು ಶಿವನಿಗೂ ಸ್ಕಂದನಿಗೂ ವಿಶೇಷ ಚಿಹ್ನೆಗಳಾಗಿರುವುವು. ವಕ್ಷಸ್ಥಳದ ಬಲ ಭಾಗದಲ್ಲಿ ಲಕ್ಷ್ಮೀ ವಿಗ್ರಹವೂ ಕೆತ್ತಿರುತ್ತದೆ. ಇದಂತು ವಿಷ್ಣುಮೂರ್ತಿಯ ಚಿಹ್ನೆಯೆ! ಇದರೊಂದಿಗೆ ಮತ್ತೆ ಕೆಲವು ವಿಶೇಷಗಳುಂಟು. ಈ ಮೂರ್ತಿಗೆ ಶುಕ್ರವಾರಗಳಲ್ಲಿಯೇ ಅಭಿಷೇಕವು ನಡೆಯುವುದಲ್ಲದೆ, ಬ್ರಹ್ಮೋತ್ಸವವು ನಡೆಯುವುದು ಶಾರದಾ ನವರಾತ್ರಿಯಲ್ಲಿ. ದೇವಾಲಯದ ಒಳಪೌಳಿಯ ಮೇಲೆ ಸಿಂಹಗಳಿರುವುವು. ಮೂರ್ತಿಯ ಅಲಂಕಾರವು ಸ್ತ್ರೀ ವಿಗ್ರಹೋಚಿತವಾದ ಅಸಂಖ್ಯಾತಾಭರಣಗಳಿಂದಲೂ, ಅಮೂಲ್ಯ ಪೀತಾಂಬರಗಳಿಂದಲೂ ಶೋಭಿಸುತ್ತಿರುವುದು. ಇವೆಲ್ಲ ಪರಾಶಕ್ತಿಯ ಚಿಹ್ನೆಗಳು. ಹೀಗೆ ಈ ಮೂರೂ ದೇವತೆಗಳ ಭಾವಗಳು ಶ್ರೀ ವೆಂಕಟೇಶ್ವರಮೂರ್ತಿಯಲ್ಲಿ ಅಳವಟ್ಟಿರುವುದು ಕಂಡು ಬರುತ್ತವೆ. ಇದನ್ನು ಯೋಚಿಸಿನೋಡಿದರೆ ನಮ್ಮ ಪೂರ್ವಿಕರಾರೋ ತಮ್ಮ ಪ್ರತಿಭೆಯನ್ನೆಲ್ಲ ವಿನಿಯೋಜಿಸಿ ಸಮಸ್ತ ಜನರಿಗೂ ಆರಾಧ್ಯವಾದ ಮೂರ್ತಿಯೊಂದನ್ನು ಈ ರೀತಿ ನಿರ್ಮಿಸಿರುವರೆಂದು ತೋರದಿರದು.

ಆಳ್ವಾರರಲ್ಲಿ ಪ್ರಮುಖರಾದ ಪೇಯಾಳ್ವಾರ್ ಮತ್ತು ನಮ್ಮಾಳ್ವಾರರು ಶ್ರೀ ವೇಂಕಟೇಶ್ವರ ಮೂರ್ತಿಯು ಶಿವ ವಿಷ್ಣುಗಳ ಭಾವಗಳೆರಡನ್ನೂ ಒಳಗೊಂಡು ಭಕ್ತಾಭೀಷ್ಟಪ್ರದವಾಗಿ ಬೆಳಗುತ್ತಲಿರುವುದೆಂದು ತಮ್ಮ ತಮಿಳು ಪಾಶುರಗಳಲ್ಲಿ ಹೇಳಿರುತ್ತಾರೆ.

ಈ ಕಾರಣದಿಂದಲೇ ಶ್ರೀ ವೇಂಕಟಾಚಲವು ಪವಿತ್ರವಾದ ನಮ್ಮ ಭರತ ಖಂಡದ ಪಂಜಾಬ್, ಸಿಂಧ್, ಬಂಗಾಳ, ಅಸ್ಸಾಂ, ನೇಪಾಳ, ರಾಜಪುಟಾಣ, ಪಶ್ಚಿಮ ದಕ್ಷಿಣ ಭಾರತ ಪ್ರದೇಶಗಳು, ಕೊಡಗು, ಮಲಯಾಳಗಳಲ್ಲದೆ ಎಲ್ಲ ಪ್ರದೇಶಗಳ ಜನಕ್ಕೂ ಇಷ್ಟದೈವವಾಗಿರುವುದೆಂದು ಹೇಳಬಹುದು.

'ವೇಂಕಟೇಶ್ವರ' (ವೇಂಕಟ) ಎಂದರೆ ಸಮಸ್ತ ಪಾಪಗಳನ್ನೂ ದಹಿಸುವವನು ಎಂದರ್ಥ:

"ಸರ್ವಪಾಪಾನಿ ವೇಂ ಪ್ರಾಹುಃ ಕಟಸ್ತದ್ದಾಹ ಉಚ್ಯತೇ ।
ಸರ್ವಪಾಪದಹೋ ಯಸ್ಮಾತ್ತಸ್ಮಾದ್ವೇಂಕಟನಾಮವಾನ್" ॥

"ವೇಂ" ಎಂದರೆ ಸಮಸ್ತ ಪಾಪಗಳೆಂದು ಹೇಳುತ್ತಾರೆ. 'ಕಟ' ಎಂದರೆ ಅದನ್ನು ಸುಡುವುದೆಂದರ್ಥ. ಸಮಸ್ತಪಾಪಗಳನ್ನೂ ಸುಡುವವನಾದುದರಿಂದ ಸ್ವಾಮಿಯು ವೇಂಕಟನೆಂದು ಹೆಸರುಗೊಂಡಿರುವನು.

ಇಂತಹ ಶ್ರೀ ವೇಂಕಟೇಶ್ವರನ ಅಖಂಡವೈಭವವನ್ನು ವಿಸ್ತಾರವಾಗಿ ನಿರೂಪಿಸಿರುವ ಈ ವೇಂಕಟಾಚಲಮಾಹಾತ್ಮ್ಯದ ಪಠನ ಪಾರಾಯಣಾದಿಗಳಿಂದ ಮಾನವರ ಸಕಲಾಭೀಷ್ಟಗಳೂ ಸಿದ್ಧಿಸುವುವೆಂದು ಬೇರೆಯಾಗಿ ಹೇಳಬೇಕಾಗಿರುವುದಿಲ್ಲವು.

ಇಂತಹ ಅನೇಕಾನೇಕ ಕ್ಷೇತ್ರ ಮಾಹಾತ್ಮ್ಯಗಳ ನೆಲವೀಡೆನಿಸಿರುವ ಶ್ರೀ ಸ್ಕಾಂದಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕಾರವೆಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ., ಜಿ.ಬಿ.ಇ. ಮಹಾಪ್ರಭುಗಳವರಿಗೆ ಜಗತ್ಪ್ರಭುವಾದ ಶ್ರೀ ವೇಂಕಟೇಶ್ವರನು ಸಮಸ್ತ ಸನ್ಮಂಗಳಗಳನ್ನೂ ದಯಪಾಲಿಸಿ ಸಂರಕ್ಷಿಸಲೆಂದು ಸಂಪ್ರಾರ್ಥಿಸುತ್ತೇನೆ.

ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ

# ವಿಷಯಾನುಕ್ರಮಣಿಕೆ

ಪುಟ ಸಂಖ್ಯೆ

॥ ಶ್ರೀಃ ॥

ಅಥ ಮಂಗಳಾಚರಣಶ್ಲೋಕಃ

**ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।**
**ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥**

ತಾತ್ಪರ್ಯ

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಶ್ರೀ ವೇಂಕಟಾಚಲಮಾಹಾತ್ಮ್ಯಂ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

## ಅಥ ಪ್ರಥಮೋಽಧ್ಯಾಯಃ

### ನಾರದೇನ ಸುಮೇರುಶಿಖರಸ್ಥ ಯಜ್ಞವರಾಹದರ್ಶನಾದಿವರ್ಣನಂ

ಪಾವನೇ ನೈಮಿಷಾರಣ್ಯೇ ಶೌನಕಾದ್ಯಾ ಮಹರ್ಷಯಃ ।
ಚಕ್ರಿರೇ ಲೋಕರಕ್ಷಾರ್ಥಂ ಸತ್ರಂ ದ್ವಾದಶವಾರ್ಷಿಕಂ ॥ ೧ ॥
ತಾನಭ್ಯಗಚ್ಛತ್ಕಥಕೋ ವ್ಯಾಸಶಿಷ್ಯೋ ಮಹಾಮತಿಃ ।
ಮುನಿರುಗ್ರಶ್ರವಾ ನಾಮ ರೋಮಹರ್ಷಣಸಂಭವಃ ॥ ೨ ॥

---

## ಕನ್ನಡದ ಅನುವಾದ

### ನಾರದನು ಸುಮೇರು ಶಿಖರದಲ್ಲಿ ಯಜ್ಞವರಾಹನನ್ನು ನೋಡಿದುದು

೧. ಪವಿತ್ರವಾದ ನೈಮಿಷಾರಣ್ಯದಲ್ಲಿ ಶೌನಕಾದಿ ಮಹರ್ಷಿಗಳೆಲ್ಲರೂ ಸೇರಿ ಲೋಕಾನುಗ್ರಹಕ್ಕಾಗಿ ಹನ್ನೆರಡು ವರ್ಷಗಳು ನಡೆಯುವುದಾದ ದೀರ್ಘಸತ್ರ ಯಾಗವೊಂದನ್ನು ನಡೆಸಿದರು.

೨. ಅವರಿದ್ದೆಡೆಗೆ ರೋಮಹರ್ಷಣ ಪುತ್ರನಾದ ಉಗ್ರಶ್ರವನೆಂಬ ಹೆಸರಿನ ಮಹಾಮೇಧಾವಿಯೂ ವ್ಯಾಸ ಶಿಷ್ಯನೂ ಆದ ಇತಿಹಾಸ ಚತುರನೊಬ್ಬನು ಬಂದನು.

ಸಮ್ಯಗಭ್ಯರ್ಚಿತಸ್ತೇಷಾಂ ಸೂತಃ ಪೌರಾಣಿಕೋತ್ತಮಃ ।
ಕಥಯಾಮಾಸ ತದ್ದಿವ್ಯಂ ಪುರಾಣಂ ಸ್ಕಾಂದನಾಮಕಂ ॥ ೩ ॥
ಸೃಷ್ಟಿಸಂಹಾರವಂಶಾನಾಂ ವಂಶಾನುಚರಿತಸ್ಯ ಚ ।
ಕಥಾಂ ಮನ್ವಂತರಾಣಾಂ ಚ ವಿಸ್ತರಾತ್ಸ ನ್ಯವೇದಯತ್ ॥ ೪ ॥
ಕಥಾಸ್ತೀರ್ಥಪ್ರಭಾವಾನಾಂ ಶ್ರುತ್ವಾ ತೇ ಮುನಿಪುಂಗವಾಃ ।
ಊಚಿರೇ ವಶಿನಂ ಸೂತಂ ಕಥಾಶ್ರವಣಕಾಂಕ್ಷಯಾ ॥ ೫ ॥
ರೋಮಹರ್ಷಣ ಸರ್ವಜ್ಞ ಪುರಾಣಾರ್ಥವಿಶಾರದ ।
ಮಾಹಾತ್ಮ್ಯಂ ಶ್ರೋತುಮಿಚ್ಛಾಮೋ ಗಿರೀಂದ್ರಾಣಾಂ ಮಹೀತಲೇ ॥೬॥

ಸೂತ ಉವಾಚ :—

ಏತಮೇವ ಪುರಾ ಪ್ರಶ್ನಮಪೃಚ್ಛಂ ಜಾಹ್ನವೀತಟೇ ।
ವ್ಯಾಸಂ ಮುನಿವರಶ್ರೇಷ್ಠಂ ಸೋಽಬ್ರವೀನ್ಮೇ ಗುರೂತ್ತಮಃ ॥ ೭ ॥
ಪುರಾ ದೇವಯುಗೇ ಸೂತ ನಾರದೋ ಮುನಿಸತ್ತಮಃ ।
ಸುಮೇರುಶಿಖರಂ ಗತ್ವಾ ನಾನಾರತ್ನಸುಶೋಭಿತಂ ॥ ೮ ॥

---

೩. ಆ ಪೌರಾಣಿಕೋತ್ತಮನು ಆ ಶೌನಕಾದಿ ಮಹರ್ಷಿಗಳಿಂದ ಉತ್ತಮ ಪೂಜೆಯನ್ನು ಪಡೆದು ಅವರಿಗೆ ಸ್ಕಾಂದನಾಮಕವಾದ ಉತ್ತಮ ಪುರಾಣವನ್ನು ನಿರೂಪಿಸಿದನು.

೪. ಲೋಕಗಳ ಸೃಷ್ಟಿ ಪ್ರಳಯಗಳು, ರಾಜರ ವಂಶಗಳು, ವಂಶಸ್ಥ ರಾಜರ ಚರಿತ್ರೆಗಳು, ಮನ್ವಂತರಗಳು ಮುಂತಾದುವುಗಳನ್ನೆಲ್ಲ ಆ ಸೂತನು ವಿಸ್ತಾರವಾಗಿ ತಿಳಿಸಿದನು.

೫. ಸಕಲ ತೀರ್ಥಗಳ ಪ್ರಭಾವಗಳನ್ನೂ ತಿಳಿಸುವ ಕಥೆಗಳನ್ನೆಲ್ಲ ಕೇಳಿ ಆ ಮುನಿಶ್ರೇಷ್ಠರು ಮತ್ತೂ ಕೇಳಬೇಕೆಂಬ ಕುತೂಹಲದಿಂದ ಜಿತೇಂದ್ರಿಯ ನಾದ ಸೂತನನ್ನು ಕುರಿತು ಹೇಳತೊಡಗಿದರು :—

೬. "ಸಕಲ ಪುರಾಣಗಳ ರಹಸ್ಯಾರ್ಥಗಳನ್ನು ತಿಳಿದು ಸರ್ವಜ್ಞನಾಗಿರುವ ರೋಮಹರ್ಷಣಸುತನೆ! ಭೂಲೋಕದಲ್ಲಿರುವ ಉತ್ತಮ ಪರ್ವತಗಳ ಮಾಹಾತ್ಮ್ಯಗಳನ್ನು ತಿಳಿಯಲು ನಾವು ಕುತೂಹಲವುಳ್ಳವರಾಗಿರುವೆವು."

೭. ಸೂತನು ಹೇಳುತ್ತಾನೆ :—"ಪೂರ್ವದಲ್ಲಿ ನಾನೂ ಕೂಡ ಮುನಿಪುಂಗವರಲ್ಲಿ ಶ್ರೇಷ್ಠನಾದ ವ್ಯಾಸಮಹರ್ಷಿಯನ್ನು ಈ ವಿಷಯವನ್ನೇ ಕುರಿತು ಪ್ರಶ್ನಿಸಲಾಗಿ ಆ ದೇಶಿಕೋತ್ತಮನು ನನಗೆ ಹೇಳಿದನು."

೮. ಎಲೈ ಸೂತನೆ! ಪೂರ್ವದಲ್ಲಿ ಒಮ್ಮೆ ನಾರದಮುನಿಯು ಕೃತಯುಗದಲ್ಲಿ ಸಕಲ ರತ್ನಗಳಿಂದ ರಂಜಿಸುತ್ತಿರುವ ಸುಮೇರುಪರ್ವತದ ಶಿಖರಕ್ಕೆ ತೆರಳಿದನು.

ತನ್ಮಧ್ಯೇ ವಿಪುಲಂ ದೀಪ್ತಂ ಬ್ರಹ್ಮಣೋ ದಿವ್ಯಮಾಲಯಂ ।
ದೃಷ್ಟ್ವಾ ತಸ್ಯೋತ್ತರೇ ದೇಶೇ ಪಿಪ್ಪಲದ್ರುಮಮುತ್ತಮಂ ॥ ೯ ॥
ಸಹಸ್ರಯೋಜನೋಚ್ಛ್ರಾಯಂ ವಿಸ್ತೀರ್ಣಂ ದ್ವಿಗುಣಂ ತಥಾ ।
ತನ್ಮೂಲೇ ಮಂಡಪಂ ದಿವ್ಯಂ ನಾನಾರತ್ನಸಮನ್ವಿತಂ ॥ ೧೦ ॥
ಪದ್ಮರಾಗಮಣಿಸ್ತಂಭೈಸ್ಸಹಸ್ರೈಃ ಸಮಲಂಕೃತಂ ।
ವೈಡೂರ್ಯಮುಕ್ತಾಮಣಿಭಿಃ ಕೃತಸ್ವಸ್ತಿಕಮಾಲಿಕಂ ॥ ೧೧ ॥
ನವರತ್ನಸಮಾಕೀರ್ಣಂ ದಿವ್ಯತೋರಣಶೋಭಿತಂ ।
ಮೃಗಪಕ್ಷಿಭಿರಾಕೀರ್ಣಂ ನವರತ್ನಮಯೈಃ ಶುಭೈಃ ॥ ೧೨ ॥
ಪುಷ್ಪರಾಗಮಹಾದ್ವಾರಂ ಸಪ್ತಭೂಮಿಕಗೋಪುರಂ ।
ಸಂದೀಪ್ತವಜ್ರಸುಕೃತಕವಾಟದ್ವಯಶೋಭಿತಂ ॥ ೧೩ ॥
ಪ್ರವಿಶ್ಯಾಸೌ ದದರ್ಶಾಂತರ್ದಿವ್ಯಮೌಕ್ತಿಕಮಂಡಪಂ ।
ವೈಡೂರ್ಯವೇದಿಕಂ ತುಂಗಮಾರುರೋಹ ಮಹಾಮುನಿಃ ॥ ೧೪ ॥
ತನ್ಮಧ್ಯೇ ತುಂಗಮತುಲಂ ವಸುಪಾದವಿರಾಜಿತಂ ।
ದದರ್ಶ ಮುಕ್ತಾಸಂಕೀರ್ಣಂ ಸಿಂಹಪೀಠಂ ಮಹಾದ್ಯುತಿ ॥ ೧೫ ॥

---

೯–೧೦. ಅದರ ಮಧ್ಯದಲ್ಲಿ ವಿಶಾಲವಾದುದೂ ತೇಜೋವಂತವಾದುದೂ ಆದ ಬ್ರಹ್ಮನ ದಿವ್ಯಾಲಯವನ್ನು ಕಂಡನು. ಅದರ ಉತ್ತರದಲ್ಲಿಯೇ ಶ್ರೇಷ್ಠವಾದ ಅಶ್ವತ್ಥವೃಕ್ಷವೊಂದು ನೆಲಸಿದ್ದಿತು. ಆ ಮರವು ಒಂದು ಸಾವಿರ ಯೋಜನಗಳಷ್ಟು ಎತ್ತರವೂ, ಅದರ ಎರಡರಷ್ಟು ವಿಸ್ತಾರವೂ ಆಗಿದ್ದಿತು. ಅದರ ಮೂಲದಲ್ಲಿ ನವರತ್ನಖಚಿತವಾದ ದಿವ್ಯಮಂಟಪವು ಶೋಭಿಸುತ್ತಿದ್ದಿತು.

೧೧. ಅದು ಸಾವಿರಾರು ಪದ್ಮರಾಗಸ್ತಂಭಗಳಿಂದಲಂಕೃತವಾಗಿ ವೈಡೂರ್ಯಗಳಿಂದಲೂ, ಮುತ್ತುಗಳಿಂದಲೂ ಮಾಡಿದ ಸ್ವಸ್ತಿಕ ಹಾರಗಳಿಂದ ಕೂಡಿದ್ದಿತು.

೧೨. ನವರತ್ನಗಳಿಂದ ಕೂಡಿದ ಉತ್ತಮವಾದ ಮಹಾದ್ವಾರದಿಂದಲೂ ನವರತ್ನಗಳಿಂದ ಮಾಡಲ್ಪಟ್ಟ ಸುಂದರಗಳಾದ ಮೃಗಗಳಿಂದಲೂ, ಪಕ್ಷಿಗಳಿಂದಲೂ ಶೋಭಿತವಾಗಿದ್ದಿತು.

೧೩. ಅದರ ತಲೆಬಾಗಿಲು ಪುಷ್ಪರಾಗದಿಂದ ರಚಿತವಾಗಿದ್ದಿತು. ಅದಕ್ಕೆ ಏಳು ಅಂತಸ್ತುಗಳುಳ್ಳ ಗೋಪುರವಿದ್ದಿತು. ಹೊಳೆಯುತ್ತಿರುವ ವಜ್ರಗಳಿಂದ ಕೂಡಿದ ಎರಡು ಬಾಗಿಲುಗಳು ರಂಜಿಸುತ್ತಿದ್ದುವು.

೧೪–೧೫. ಅದನ್ನು ಒಳಹೊಕ್ಕು ನಾರದ ಮಹರ್ಷಿಯು ಎತ್ತರವಾದ ವೈಡೂರ್ಯ ವೇದಿಕೆಯ ಮೇಲೆ ನಿಂತಿರುವ ದಿವ್ಯವಾದ ಮುತ್ತಿನ ಮಂಟಪವನ್ನು ಹತ್ತಿದನು. ಆ ಮಂಟಪದ ಮಧ್ಯದಲ್ಲಿ ಉನ್ನತವಾದುದೂ, ಅಸಮಾನ

ತನ್ಮಧ್ಯೇ ಪುಷ್ಕರಂ ದಿವ್ಯಂ ಸಹಸ್ರದಳಶೋಭಿತಂ ।
ಶ್ವೇತಂ ಚಂದ್ರಸಹಸ್ರಾಭಂ ಕರ್ಣಿಕಾಕೇಸರೋಜ್ವಲಂ ॥ ೧೬ ॥
ತಸ್ಯ ಮಧ್ಯೇ ಸಮಾಸೀನಂ ಪೂರ್ಣಚಂದ್ರಾಯುತಪ್ರಭಂ ।
ಕೈಲಾಸಪರ್ವತಾಕಾರಂ ಸುಂದರಂ ಪುರುಷಾಕೃತಿಂ ॥ ೧೭ ॥
ಚತುರ್ಬಾಹುಮುದಾರಾಗಂ ವರಾಹವದನಂ ಶುಭಂ ।
ಶಂಖಚಕ್ರಾಭಯವರಾನ್ ಬಿಭ್ರಾಣಂ ಪುರುಷೋತ್ತಮಂ ॥ ೧೮ ॥
ಪೀತಾಂಬರಧರಂ ದೇವಂ ಪುಂಡರೀಕಾಯತೇಕ್ಷಣಂ ।
ಪೂರ್ಣೇಂದುಸೌಮ್ಯವದನಂ ಧೂಪಗಂಧಿಮುಖಾಂಬುಜಂ ॥ ೧೯ ॥
ಸಾಮಧ್ವನಿಂ ಯಜ್ಞಮೂರ್ತಿಂ ಸೃಕ್ತುಂಡಂ ಸ್ರುವನಾಸಿಕಂ ।
ಕ್ಷೀರಸಾಗರಸಂಕಾಶಂ ಕಿರೀಟೋಜ್ವಲಿತಾನನಂ ॥ ೨೦ ॥

---

ವಾದುದೂ, ಎಂಟು ಕಾಲುಗಳಿಂದ ವಿರಾಜಿಸುತ್ತಿರುವುದೂ, ಮುತ್ತುಗಳ ಗೊಂಚಲುಗಳಿಂದ ಕೂಡಿದುದೂ, ಅತ್ಯಂತ ಕಾಂತಿಯುಕ್ತವಾದುದೂ ಆದ ಸಿಂಹಾಸನವೊಂದನ್ನು ಕಂಡನು.

೧೬. ಅದರ ಮಧ್ಯದಲ್ಲಿ ಸಾವಿರ ದಳಗಳಿಂದ ಶೋಭಿಸುವ ದಿವ್ಯವಾದ ಪದ್ಮಪೀಠವನ್ನು ಕಂಡನು. ಅದು ಶುಭ್ರವಾಗಿಯೂ ಸಹಸ್ರಚಂದ್ರರ ಕಾಂತಿಯುಳ್ಳದ್ದಾಗಿಯೂ ದಂಟು, ಕೇಸರಗಳಿಂದ ಉಜ್ವಲವಾಗಿಯೂ ಇದ್ದಿತು.

೧೭. ಅದರಲ್ಲಿ ಹತ್ತುಸಾವಿರ ಪೂರ್ಣಚಂದ್ರರ ಪ್ರಭೆಯಿಂದೊಡಗೂಡಿ ಕೈಲಾಸಪರ್ವತದಂತೆ ಉನ್ನತವಾದುದೂ ಸುಂದರವಾದುದೂ ಆದ ಪುರುಷ ಶರೀರದಿಂದಿರುವ ಪರಮಾತ್ಮನು ಸುಖಾಸೀನನಾಗಿದ್ದುದನ್ನು ಕಂಡನು.

೧೮. ಆತನಿಗೆ ನಾಲ್ಕು ಕೈಗಳೂ, ವಿಶಾಲವಾದ ವಕ್ಷವೂ, ವರಾಹ ಮುಖವೂ ಇದ್ದುವು. ಆ ಪುರುಷೋತ್ತಮನು ಎರಡು ಕೈಗಳಲ್ಲಿ ಶಂಖ, ಚಕ್ರಗಳನ್ನು ಹಿಡಿದು, ಮತ್ತೆರಡರಿಂದ ಅಭಯ, ವರದಮುದ್ರೆಗಳನ್ನು ತೋರುತ್ತಿದ್ದನು.

೧೯. ದೇವದೇವನು ಪೀತಾಂಬರಧಾರಿಯಾಗಿ ಕಮಲಗಳಂತೆ ವಿಶಾಲಗಳಾದ ನೇತ್ರಗಳಿಂದಲೂ, ಪೂರ್ಣಚಂದ್ರನಂತೆ ಆಹ್ಲಾದಕವಾದ ವದನದಿಂದಲೂ, ಧೂಪಗಳಿಂದ ಸುಗಂಧಯುಕ್ತವಾದ ಮುಖಕಮಲದಿಂದಲೂ ಕೂಡಿದ್ದನು.

೨೦. ಆ ಯಜ್ಞವರಾಹಮೂರ್ತಿಯು ಸಾಮಧ್ವನಿಯುಳ್ಳವನಾಗಿ ಸೃಕ್ಕನ್ನೇ ಹನುವನ್ನಾಗಿಯೂ, ಸ್ರುವವನ್ನೇ ನಾಸಿಕೆಯನ್ನಾಗಿಯೂ ಮಾಡಿ ಕ್ಷೀರಸಾಗರದಂತೆ ವಿಶಾಲವಾದುದೂ ಶುಭ್ರವಾದುದೂ ಆದ ದೇಹದಿಂದಲೂ ಕಿರೀಟಕಾಂತಿಯಿಂದ ಥಳಥಳಿಸುತ್ತಿರುವ ಮುಖದಿಂದಲೂ ರಂಜಿಸುತ್ತಿದ್ದನು.

ಶ್ರೀವತ್ಸವಕ್ಷಸಂ ಶುಭ್ರಯಜ್ಞಸೂತ್ರವಿರಾಜಿತಂ ।
ಕೌಸ್ತುಭಶ್ರೀಸಮುದ್ಯೋತಂ ಸಮುನ್ನತಮಹೋರಸಂ ॥ ೨೧ ॥
ಜಾಂಬೂನದಮಯೈರ್ದಿವ್ಯೈಃ ಸುರತ್ನಾಭರಣೈರ್ಯುತಂ ।
ವಿದ್ಯುನ್ಮಾಲಾಪರಿಕ್ಷಿಪ್ತಶರನ್ಮೇಘಮಿವೋಜ್ವಲಂ ॥ ೨೨ ॥
ವಾಮಪಾದತಲಾಕ್ರಾಂತಪಾದಪೀಠವಿರಾಜಿತಂ ।
ಕಟಿಕಾಂಗದಕೇಯೂರಕುಂಡಲೋಜ್ವಲಿತಂ ಸದಾ ॥ ೨೩ ॥
ಚತುರ್ಮುಖವಸಿಷ್ಠಾತ್ರಿಮಾರ್ಕಂಡೇಯೈರ್ಮುನೀಶ್ವರೈಃ ।
ಭೃಂಗ್ಯಾದಿಭಿರನೇಕೈಶ್ಚ ಸೇವ್ಯಮಾನಮಹರ್ನಿಶಂ ॥ ೨೪ ॥
ಇಂದ್ರಾದಿಲೋಕಪಾಲೈಶ್ಚ ಗಂಧರ್ವಾಪ್ಸರಸಾಂ ಗಣೈಃ ।
ಸೇವಿತಂ ದೇವದೇವೇಶಂ ಪ್ರಣಿಪತ್ಯಾಭಿಗಮ್ಯ ಚ ॥ ೨೫ ॥
ದಿವ್ಯೈರುಪನಿಷದ್ವಾಕ್ಯೈರಭಿಷ್ಟೂಯ ಧರಾಧರಂ ।
ನಾರದಃ ಪರಮಪ್ರೀತಃ ಸ್ಥಿತೋ ದೇವಸ್ಯ ಸನ್ನಿಧೌ ॥ ೨೬ ॥
ಏತಸ್ಮಿನ್ನಂತರೇ ಚಾಭೂದ್ದಿವ್ಯದುಂದುಭಿನಿಸ್ವನಃ ॥ ೨೭ ॥

---

೨೧–೨೨. ಆತನ ವಕ್ಷಸ್ಥಳದಲ್ಲಿ ಶ್ರೀವತ್ಸಲಾಂಛನವು ಶೋಭಿಸುತ್ತಿದ್ದಿತು. ತೇಜೋಮಯವಾದ ಯಜ್ಞೋಪವೀತವು ಕಂಠದಲ್ಲಿ ರಾಜಿಸುತ್ತಿದ್ದಿತು. ಕೌಸ್ತುಭಮಣಿಯ ಕಾಂತಿಯಿಂದ ಕೂಡಿದ ವಕ್ಷಸ್ಥಳವು ಉನ್ನತವಾಗಿಯೂ ವ್ಯೂಢವಾಗಿಯೂ ಇದ್ದಿತು. ಬೆಳ್ಳಗಿರುವ ಆತನ ದೇಹವು ಪುಟಕ್ಕೆ ಹಾಕಿದ ಚಿನ್ನದಿಂದ ಮಾಡಿದ ಆಭರಣಗಳಿಂದಲಂಕೃತವಾಗಿ ಮಿಂಚಿನ ಬಳ್ಳಿಗಳಿಂದ ಆವೃತವಾದ ಶರತ್ಕಾಲದ ಮೇಘದಂತೆ ರಂಜಿಸುತ್ತಿದ್ದಿತು.

೨೩. ಆ ವರಾಹಸ್ವಾಮಿಯು ತನ್ನ ಎಡಗಾಲಿನಿಂದ ಪಾದಪೀಠವೊಂದ ನ್ನಲಂಕರಿಸಿದ್ದನು. ಯಾವಾಗಲೂ ಕಡಗ, ಭಾಪುರಿ, ಕೇಯೂರ, ಕುಂಡಲಾ ದ್ಯಾಭರಣಗಳಿಂದ ಮೆರೆಯುತ್ತಿದ್ದನು.

೨೪. ಬ್ರಹ್ಮದೇವ, ವಸಿಷ್ಠ, ಅತ್ರಿ, ಮಾರ್ಕಂಡೇಯ ಮುಂತಾದ ಮಹರ್ಷಿಗಳಿಂದಲೂ, ಭೃಂಗಿಯೇ ಮೊದಲಾದ ಗಣಗಳಿಂದಲೂ ಸರ್ವಕಾಲ ಗಳಲ್ಲಿಯೂ ಸೇವೆಯನ್ನು ಸ್ವೀಕರಿಸುತ್ತಿದ್ದನು.

೨೫–೨೭. ಇಂದ್ರನೇ ಮೊದಲಾದ ಅಷ್ಟದಿಕ್ಪಾಲಕರಿಂದಲೂ, ಗಂಧರ್ವ ರಿಂದಲೂ, ಅಪ್ಸರೆಯರ ಸಮೂಹಗಳಿಂದಲೂ ಸೇವಿತನಾಗಿದ್ದನು. ಇಂತಹ ದೇವದೇವೋತ್ತಮನಾದ ವರಾಹನಿಗೆ ನಮಸ್ಕರಿಸಿ ಬಳಿಸಾರ್ದು ಭೂಮಿಯನ್ನು ಧ್ಧರಿಸಿದ ಆ ಮೂರ್ತಿಯನ್ನು ಅನೇಕ ಉಪನಿಷದ್ವಾಕ್ಯಗಳಿಂದ ಸ್ತೋತ್ರಮಾಡಿ, ಬಹಳ ಸಂತೋಷದಿಂದ ನಾರದಮುನಿಯು ದೇವನ ಸನ್ನಿಧಿಯಲ್ಲಿ ನಿಂತನು. ಆ ಸಮಯದಲ್ಲಿ ದೇವದುಂದುಭಿಗಳ ಧ್ವನಿಯು ಕೇಳಿಸಿತು.

ತತಸ್ಸಮಾಗತಾ ದೇವೀ ಧರಣೀ ಸಖಿಸಂಯುತಾ ।
ಸರತ್ನಸಾಗರಾಕಾರದಿವ್ಯಾಂಬರಸಮುಜ್ಜ್ವಲಾ ॥ ೨೮ ॥
ಸುಮೇರು ಮಂದರಾಕಾರಸ್ತನಭಾರಾವನಾಮಿತಾ ।
ನವದೂರ್ವಾದಳಶ್ಯಾಮಾ ಸರ್ವಾಭರಣಭೂಷಿತಾ ॥ ೨೯ ॥
ಇಲಯಾ ವೈ ಪಿಂಗಳಯಾ ಸಖೀಭ್ಯಾಂ ಚ ಸಮನ್ವಿತಾ ।
ತತಸ್ತಾಭ್ಯಾಂ ಸಮಾನೀತಂ ಪುಷ್ಪಾಣಾಂ ನಿಚಯಂ ಮಹೀ ॥ ೩೦ ॥
ಶ್ರೀಮದ್ವರಾಹದೇವಸ್ಯ ಪಾದಮೂಲೇ ವಿಕೀರ್ಯ ಚ ।
ಪ್ರಣಮ್ಯ ದೇವದೇವೇಶಂ ಕೃತಾಂಜಲಿಪುಟಾ ಸ್ಥಿತಾ ॥ ೩೧ ॥
ತಾಂ ದೇವೀಂ ಶ್ರೀವರಾಹೋಽಪಿ ಹ್ಯಾಲಿಂಗ್ಯಾಂಕೇ ನಿಧಾಯ ಚ ।
ಪಪ್ರಚ್ಛ ಕುಶಲಂ ಪೃಥ್ವೀಂ ಪ್ರೀತಿಪ್ರವಣಮಾನಸಃ ॥ ೩೨ ॥
ತ್ವಾಂ ನಿವೇಶ್ಯ ಮಹೀಂ ದೇವಿ ಶೇಷಶೀರ್ಷೇ ಸುಖಾವಹೇ ।
ಲೋಕಂ ತ್ವಯಿ ನಿವೇಶ್ಯೈವ ತ್ವತ್ಸಹಾಯಾನ್ಧರಾಧರಾನ್ ।
ಇಹಾಗತೋಽಸ್ಮ್ಯಹಂ ದೇವಿ ಕಿಮರ್ಥಂ ತ್ವಮಿಹಾಗತಾ ॥ ೩೩ ॥

---

೨೮. ಆಗ ಭೂದೇವಿಯು ತನ್ನ ಸಖಿಯರೊಡನೆ ಅಲ್ಲಿಗೆ ಬಿಜಿಗೈದಳು. ರತ್ನಾಕರಗಳಾದ ಸಮುದ್ರಗಳೇ ಆಕೆಯ ಹೊಳೆಯುವ ಪೀತಾಂಬರಗಳಾಗಿದ್ದುವು.

೨೯. ಮೇರು, ಮಂದರಪರ್ವತಗಳೆಂಬ ಸ್ತನಗಳ ಭಾರದಿಂದ ಬಡನಡುವು ಬಾಗಿದ್ದಿತು. ಎಳೆಯ ಹುಲ್ಲಿನ ಚಿಗುರುಬಣ್ಣದ ಮೈಯುಳ್ಳವಳಾಗಿ ಆಕೆಯು ಸಮಸ್ತ ಭೂಷಣಭೂಷಿತೆಯಾಗಿದ್ದಳು.

೩೦–೩೧. ಇಳಾ, ಪಿಂಗಳಾ ಎಂಬಿಬ್ಬರು ಸಖಿಯರಿಂದೊಡಗೂಡಿ ಬಂದು ಭೂದೇವಿಯು ಅವರ ಕೈಗಳಿಂದ ಪುಷ್ಪನಿಚಯವನ್ನು ತೆಗೆದುಕೊಂಡು, ಶ್ರೀ ವರಾಹದೇವನ ಪಾದಪ್ರದೇಶದಲ್ಲಿ ಚೆಲ್ಲಿ ಆ ದೇವೋತ್ತಮನಿಗೆ ನಮಸ್ಕರಿಸಿ ಅಂಜಲಿಬಂಧವನ್ನು ಮಾಡಿ ನಿಂತಿದ್ದಳು.

೩೨. ವರಾಹಸ್ವಾಮಿಯೂ ಆಕೆಯನ್ನು ಆಲಿಂಗಿಸಿಕೊಂಡು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಪ್ರೀತಿಯಿಂದ ತುಂಬಿದ ಮನಸ್ಸುಳ್ಳವನಾಗಿ ಆಕೆಯ ಕುಶಲಪ್ರಶ್ನೆಯನ್ನು ಮಾಡಿದನು.

೩೩. "ಎಲೌ ದೇವಿಯೆ! ನಿನ್ನನ್ನು ಸುಖಮಯವಾದ ಶೇಷನ ಹೆಡೆಯಲ್ಲಿ ನಿಲ್ಲಿಸಿಹೆನು. ನಿನ್ನಲ್ಲಿ ಲೋಕವನ್ನು ನೆಲೆಗೊಳಿಸಿ ನಿನ್ನ ಸಹಾಯಕ್ಕಾಗಿ ಸಪ್ತ ಕುಲಪರ್ವತಗಳನ್ನು ನಿರ್ಮಿಸಿ ನಾನು ಇಲ್ಲಿಗೆ ಬಂದೆನು. ಇಷ್ಟಾದರೂ ಈಗ ನೀನು ಇಲ್ಲಿಗೆ ಬಂದ ಕಾರಣವೇನು?"

ಭೂದೇವ್ಯುವಾಚ :—

ಮಾಂ ಸಮುದ್ಧೃತ್ಯ ಪಾತಾಲಾತ್ಸಹಸ್ರಫಣಶೋಭಿತೇ ।
ರತ್ನಪೀಠ ಇವೋತ್ತುಂಗೇ ಸರತ್ನೇಽನಂತಮೂರ್ಧನಿ ॥ ೩೪ ॥
ಕೃತ್ವಾ ಮಾಂ ಸುಸ್ಥಿರಾಂ ದೇವ ಭೂಧರಾನ್ಸನ್ನಿವೇಶ್ಯ ಚ ॥ ೩೫ ॥
ಮದ್ಧಾರಣಕ್ಷಮಾನ್ ಪುಣ್ಯಾಂಸ್ತ್ವನ್ಮಯಾನ್ಪುರುಷೋತ್ತಮ ।
ತೇಷು ಮುಖ್ಯಾನ್ಮಹಾಬಾಹೋ ಮದಾಧಾರಾನ್ವದಸ್ವ ಮೇ ॥ ೩೬ ॥

ವರಾಹ ಉವಾಚ :—

ಸುಮೇರುರ್ಹಿಮವಾನ್ವಿಂಧ್ಯೋ ಮಂದರೋ ಗಂಧಮಾದನಃ ।
ಸಾಲಗ್ರಾಮಶ್ಚಿತ್ರಕೂಟೋ ಮಾಲ್ಯವಾನ್ಪಾರಿಯಾತ್ರಕಃ ॥ ೩೭ ॥
ಮಹೇಂದ್ರೋ ಮಲಯಃ ಸಹ್ಯಃ ಸಿಂಹಾದ್ರಿರಪಿ ರೈವತಃ ।
ಮೇರುಪುತ್ರೋಽಂಜನೋ ನಾಮ ಶೈಲಃ ಸ್ವರ್ಣಮಯೋ ಮಹಾನ್ ॥
ಏತೇ ಶೈಲವರಾಃ ಸರ್ವೇ ತ್ವದಾಧಾರಾ ವಸುಂಧರೇ ।
ಯೇ ಮಯಾ ದೇವಸಂಘೈಶ್ಚ ಋಷಿಸಂಘೈಶ್ಚ ಸೇವಿತಾಃ ॥ ೩೯ ॥

---

೩೪. ಭೂದೇವಿಯು ಹೇಳುತ್ತಾಳೆ:— "ಎಲೈ ದೇವದೇವನೆ! ನೀನು ಪಾತಾಲದಿಂದ ನನ್ನನ್ನುದ್ಧರಿಸಿ ಒಂದು ಸಾವಿರ ಹೆಡೆಗಳಿಂದಲಂಕೃತವಾಗಿ ರತ್ನಮಯವಾದ ಆದಿಶೇಷನ ತಲೆಯಮೇಲೆ ನನ್ನನ್ನಿರಿಸಿದೆಯಷ್ಟೆ.

೩೫. ನನಗೆ ಸಹಾಯಕಗಳಾದ ಪರ್ವತಗಳನ್ನೂ ಕೊಟ್ಟು ನನ್ನನ್ನು ಸ್ಥಿರಗೊಳಿಸಿರುವೆ.

೩೬. ಅವುಗಳೆಲ್ಲವೂ ನಿನ್ನ ಅಂಶದಿಂದ ಕೂಡಿರುವುವಾಗಿರುವುದರಿಂದ ನನ್ನನ್ನು ಧರಿಸುವ ಶಕ್ತಿಯುಳ್ಳವುಗಳಾಗಿವೆ. ಎಲೈ ಪುರುಷೋತ್ತಮನೆ! ನನಗೆ ಆಧಾರಭೂತಗಳಾದ ಆ ಪರ್ವತಗಳಲ್ಲಿ ಮುಖ್ಯಗಳಾವುವೆಂಬುದನ್ನು ನನಗೆ ತಿಳಿಸುವವನಾಗು."

೩೭–೩೯. ವರಾಹಸ್ವಾಮಿಯು ಹೇಳುತ್ತಾನೆ:—"ಎಲೈ ಭೂದೇವಿಯೇ! ಸುಮೇರು, ಹಿಮವಂತ, ವಿಂಧ್ಯ, ಮಂದರ, ಗಂಧಮಾದನ, ಸಾಲಗ್ರಾಮ, ಚಿತ್ರಕೂಟ, ಮಾಲ್ಯವಂತ, ಪಾರಿಯಾತ್ರಕ, ಮಹೇಂದ್ರ, ಮಲಯ, ಸಹ್ಯ, ಸಿಂಹಾದ್ರಿ, ರೈವತ, ಮಹತ್ತರವಾದುದೂ, ಹೇಮಮಯವಾದುದೂ ಆದ ಮೇರುಪುತ್ರನಾದ ಅಂಜನಶೈಲ— ಇವುಗಳೇ ನಿನಗೆ ಆಧಾರಗಳಾದ ಪರ್ವತೋತ್ತಮಗಳು. ಇವುಗಳು ನನ್ನಿಂದಲೂ, ದೇವಸಮೂಹಗಳಿಂದಲೂ, ಋಷಿಗಳಿಂದಲೂ ನಿತ್ಯವೂ ಸೇವಿಸಲ್ಪಡುತ್ತಿರುವುವು.

ಏತೇಷು ಪ್ರವರಾನ್ವಕ್ಷ್ಯೇ ತತ್ತ್ವತಃ ಶೃಣು ಮಾಧವಿ ।
ಸಾಲಗ್ರಾಮಶ್ಚ ಸಿಂಹಾದ್ರಿಶ್ಶೈಲೇಂದ್ರೋ ಗಂಧಮಾದನಃ ॥ ೪೦ ॥
ಏತೇ ಶೈಲವರಾ ದೇವಿ ದಿಶಂ ಹೈಮವತೀಂ ಶ್ರಿತಾಃ ।
ದಕ್ಷಿಣಸ್ಯಾಂ ಪ್ರತೀತಾಂಸ್ತು ವಕ್ಷ್ಯೇ ಶೈಲಾನ್ವಸುಂಧರೇ ॥ ೪೧ ॥
ಅರುಣಾದ್ರಿರ್ಹಸ್ತಿಶೈಲೋ ಗೃಧ್ರಾದ್ರಿರ್ಘಟಿಕಾಚಲಃ ।
ಏತೇ ಶೈಲವರಾಃ ಸರ್ವೇ ಕ್ಷೀರನದ್ಯಾಃ ಸಮೀಪಗಾಃ ॥ ೪೨ ॥
ಹಸ್ತಿಶೈಲಾದುತ್ತರತಃ ಪಂಚಯೋಜನಮಾತ್ರತಃ ।
ಸುವರ್ಣಮುಖರೀನಾಮ ನದೀನಾಂ ಪ್ರವರಾ ನದೀ ॥ ೪೩ ॥
ತಸ್ಯಾ ಏವೋತ್ತರೇ ತೀರೇ ಕಮಲಾಖ್ಯಂ ಸರೋವರಂ ।
ತತ್ತೀರೇ ಭಗವಾನಾಸ್ತೇ ಶುಕಸ್ಯ ವರದೋ ಹರಿಃ ॥ ೪೪ ॥
ಬಲಭದ್ರೇಣ ಸಂಯುಕ್ತಃ ಕೃಷ್ಣೋ ಭಕ್ತಾರ್ತಿನಾಶನಃ ।
ವೈಖಾನಸೈರ್ಮುನಿಗಣೈಃ ನಿತ್ಯಮಾರಾಧಿತೋಽಮಲೈಃ ॥ ೪೫ ॥
ಕಮಲಾಖ್ಯಸ್ಯ ಸರಸ ಉತ್ತರೇ ಕಾನನೋತ್ತಮೇ ।
ಕ್ರೋಶದ್ವಯಾರ್ಧಮಾತ್ರೇ ತು ಹರಿಚಂದನಶೋಭಿತೇ ।
ಶ್ರೀ ವೇಂಕಟಾಚಲೋ ನಾಮ ವಾಸುದೇವಾಲಯೋ ಮಹಾನ್ ॥ ೪೬ ॥

---

೪೦–೪೧. ಎಲೌ ಭೂಮಿಯೆ! ವಾಸ್ತವವಾಗಿಯೂ ಇವುಗಳಲ್ಲಿ ಅತ್ಯುತ್ತಮಗಳಾದುವುಗಳನ್ನು ತಿಳಿಸುವೆನು, ಕೇಳು. ಸಾಲಗ್ರಾಮ, ಪರ್ವತಶ್ರೇಷ್ಠವಾದ ಸಿಂಹಾದ್ರಿ, ಗಂಧಮಾದನ, ಇವುಗಳೆಲ್ಲವೂ ಉತ್ತರದಿಕ್ಕಿನಲ್ಲಿರುವ ಶೈಲೋತ್ತಮಗಳು. ಇನ್ನು ದಕ್ಷಿಣದಿಕ್ಕಿನಲ್ಲಿ ಪ್ರಸಿದ್ಧಿಯನ್ನು ಹೊಂದಿರುವ ಪರ್ವತಗಳನ್ನು ತಿಳಿಸುವೆನು.

೪೨. ಅರುಣಾಚಲ, ಹಸ್ತಿಶೈಲ, ಗೃಧ್ರಾದ್ರಿ ಮತ್ತು ಘಟಿಕಾಚಲ— ಈ ಪರ್ವತಗಳೆಲ್ಲವೂ ಕ್ಷೀರನದಿಯ ಸಮೀಪದಲ್ಲಿರುವುವು.

೪೩. ಹಸ್ತಿಶೈಲಕ್ಕೆ ಉತ್ತರದಲ್ಲಿ ಐದು ಯೋಜನಗಳ ದೂರದಲ್ಲಿ ನದಿಗಳಲ್ಲೆಲ್ಲ ಅತ್ಯುತ್ತಮವಾದ ಸುವರ್ಣಮುಖರಿಯೆಂಬ ನದಿಯು ಪ್ರವಹಿಸುತ್ತಿರುವುದು.

೪೪–೪೬. ಆ ನದಿಯ ಉತ್ತರ ತೀರದಲ್ಲಿಯೇ ಕಮಲಾ ನಾಮಕವಾದ ಸರೋವರವಿರುವುದು. ಅದರ ದಡದಲ್ಲಿಯೇ ಶುಕಮಹರ್ಷಿಗೆ ವರಪ್ರದಾನವನ್ನು ಮಾಡಿದ ಮಹಾವಿಷ್ಣುವು ಬಲರಾಮ ಸಹಿತನಾದ ಶ್ರೀಕೃಷ್ಣನ ರೂಪದಿಂದ ಭಕ್ತರ ಕಷ್ಟಗಳನ್ನು ನಿವಾರಿಸುತ್ತ ನೆಲಸಿರುವನು. ಆತನು ನಿಷ್ಪಾಪರೂ ವಾನಪ್ರಸ್ಥರೂ ಆದ ಮುನಿಗಳ ಸಮೂಹಗಳಿಂದ ನಿತ್ಯದಲ್ಲಿಯೂ ಪೂಜಿಸಲ್ಪಡುತ್ತಿರುವನು. ಆ ಕಮಲಾ ಸರೋವರದ ಉತ್ತರಕ್ಕೆ ಎರಡೂವರೆ ಕ್ರೋಶಗಳ

ಸಪ್ತಯೋಜನವಿಸ್ತೀರ್ಣಃ ಶೈಲೇಂದ್ರೋ ಯೋಜನೋಚ್ಛ್ರಿತಃ ।
ಅಸ್ತಿ ಸ್ವರ್ಣಮಯೋ ದೇವಿ ರತ್ನಸಾನುಭೃದಾಯತಃ ॥ ೪೭ ॥
ಇಂದ್ರಾದ್ಯಾ ದೈವತಗಣಾ ವಸಿಷ್ಠಾದ್ಯಾ ಮುನೀಶ್ವರಾಃ ।
ಸಿದ್ಧಾಸ್ಸಾಧ್ಯಾಶ್ಚ ಮರುತೋ ದಾನವಾ ದೈತ್ಯರಾಕ್ಷಸಾಃ ।
ರಂಭಾದ್ಯಾ ಅಪ್ಸರಸ್ಸಂಘಾ ವಸಂತಿ ನಿಯತಂ ಧರೇ ॥ ೪೮ ॥
ತಪಶ್ಚರಂತಿ ನಾಗಾಶ್ಚ ಗರುಡಾಃ ಕಿನ್ನರಾಸ್ತಥಾ ।
ಏತೈರಧಿಷ್ಠಿತಾಸ್ತತ್ರ ಸರಿತಃ ಪುಣ್ಯದರ್ಶನಾಃ ॥ ೪೯ ॥
ಸರಾಂಸಿ ವಿವಿಧಾನ್ಯತ್ರ ಸಂತಿ ದಿವ್ಯಾನಿ ಮಾಧವಿ ।
ತೀರ್ಥಾನಾಂ ಚೈವ ಸರ್ವೇಷಾಂ ಶ್ರುಣುಷ್ವ ಪ್ರವರಾಣಿ ವೈ ॥ ೫೦ ॥
ಚಕ್ರತೀರ್ಥಂ ದೈವತೀರ್ಥಂ ವಿಯದ್ಗಂಗಾ ತಥೈವ ಚ ।
ಕುಮಾರಧಾರಿಕಾತೀರ್ಥಂ ಪಾಪನಾಶನಮೇವ ಚ ।
ಪಾಂಡವಂ ನಾಮ ತೀರ್ಥಂ ಚ ಸ್ವಾಮಿಪುಷ್ಕರಿಣೀ ತಥಾ ॥ ೫೧ ॥
ಸಪ್ತೈತಾನಿ ವರಾಣ್ಯಾಹುರ್ನಾರಾಯಣಗಿರೌ ಶುಭೇ ।
ಏತೇಷುಪ್ರವರಾ ದೇವಿ ಸ್ವಾಮಿಪುಷ್ಕರಿಣೀ ಶುಭಾ ॥ ೫೨ ॥

---

ದೂರದಲ್ಲಿ ಹರಿಚಂದನ ವೃಕ್ಷಗಳಿಂದ ತುಂಬಿದ ಉತ್ತಮವಾದ ಅರಣ್ಯವೊಂದಿರುವುದು. ಅದರಲ್ಲಿರುವ ವೆಂಕಟಾಚಲವೆಂಬ ಪರ್ವತವು ಶ್ರೀಮನ್ನಾರಾಯಣನಿಗೆ ಪರಮಪ್ರಿಯವಾದ ನಿವಾಸವಾಗಿರುವುದು.

೪೭. ಆ ಪರ್ವತಶ್ರೇಷ್ಠವು ಏಳು ಯೋಜನಗಳ ವಿಸ್ತಾರವೂ, ಒಂದು ಯೋಜನದ ಎತ್ತರವೂ ಉಳ್ಳದ್ದಾಗಿ, ವಿಶಾಲವೂ, ಸ್ವರ್ಣಮಯವೂ ಆಗಿರುವುದು. ಅದರ ತಪ್ಪಲುಗಳೆಲ್ಲ ರತ್ನಪೂರಿತಗಳೆನಿಸಿರುವುವು.

೪೮. ಇಂದ್ರನೇ ಮೊದಲಾದ ದೇವತಾಕೋಟಿಗಳು, ವಸಿಷ್ಠನೇ ಮುಂತಾದ ಮುನಿಶ್ರೇಷ್ಠರೂ, ಸಿದ್ಧರು, ಸಾಧ್ಯರು, ಮಾರುತರು, ದಾನವರು, ದೈತ್ಯರು, ರಾಕ್ಷಸರು, ರಂಭಾದಿ ಅಪ್ಸರಸೆಯರು—ಇವರೆಲ್ಲರೂ ಇಲ್ಲಿ ಅವಶ್ಯವಾಗಿ ವಾಸ ಮಾಡುತ್ತಿರುವರು.

೪೯–೫೦. ಅನೇಕ ನಾಗರೂ, ಗರುಡರೂ, ಕಿನ್ನರರೂ ಅಲ್ಲಿ ತಪಸ್ಸುಗಳನ್ನಾಚರಿಸುವರು. ಅಲ್ಲಿ ಈ ದೇವತೆಗಳಿಂದ ಅಧಿಷ್ಠಿತಗಳಾಗಿ ದರ್ಶನಮಾತ್ರದಿಂದಲೇ ಪುಣ್ಯವನ್ನು ಸಂಪಾದಿಸಿಕೊಡುವ ಅನೇಕ ನದಿಗಳೂ ವಿಧವಿಧಗಳಾದ ಅನೇಕ ದಿವ್ಯತೀರ್ಥಗಳೂ ನೆಲಸಿರುವುವು. ಅಲ್ಲಿರುವ ಸಕಲತೀರ್ಥಗಳಲ್ಲಿಯೂ ಪ್ರಮುಖಗಳಾಗಿರುವುವನ್ನು ನಿನಗೆ ತಿಳಿಸುವೆನು.

೫೧–೫೨. ಚಕ್ರತೀರ್ಥ, ದೈವತೀರ್ಥ, ಆಕಾಶಗಂಗೆ, ಕುಮಾರಧಾರಾತೀರ್ಥ, ಪಾಪನಾಶನ ತೀರ್ಥ, ಪಾಂಡವ ತೀರ್ಥ, ಸ್ವಾಮಿ ಪುಷ್ಕರಿಣಿ—

ಅಸ್ಯಾಸ್ತು ಪಶ್ಚಿಮೇ ತೀರೇ ನಿವಸಾಮಿ ತ್ವಯಾ ಸಹ ।
ಆಸ್ತೇಽಸ್ಯಾ ದಕ್ಷಿಣೇ ತೀರೇ ಶ್ರೀನಿವಾಸೋ ಜಗತ್ಪತಿಃ ॥ ೫೩ ॥
ಗಂಗಾದ್ಯೈಃ ಸಕಲೈಸ್ತೀರ್ಥೈಃ ಸಮಾಸಾ ಸಾಗರಾಂಬರೇ ।
ತ್ರೈಲೋಕ್ಯೇ ಯಾನಿ ತೀರ್ಥಾನಿ ಸರಾಂಸಿ ಸರಿತಸ್ತಥಾ ।
ತೇಷಾಂ ಸ್ವಾಮಿತ್ವಮಾಪನ್ನಂ ಧರೇ ಸ್ವಾಮಿಸರೋವರೇ ॥ ೫೪ ॥
ಸ್ವಾಮಿಪುಷ್ಕರಿಣೀಂ ಪುಣ್ಯಾಂ ಸೇವಿತುಂ ದಿವ್ಯಭೂಧರೇ ।
ವಸಂತಿ ಸರ್ವತೀರ್ಥಾನಿ ತೇಷಾಂ ಸಂಖ್ಯಾಂ ವದಾಮಿ ತೇ ॥ ೫೫ ॥
ಷಟ್ಷಷ್ಟಿಕೋಟಿತೀರ್ಥಾನಿ ಪುಣ್ಯೇಽಸ್ಮಿನ್ಭೂಧರೋತ್ತಮೇ ।
ತೇಷು ಚಾತ್ಯಂತಮುಖ್ಯಾನಿ ಷಟ್ತೀರ್ಥಾನಿ ವಸುಂಧರೇ ॥ ೫೬ ॥

ಭೂದೇವ್ಯುವಾಚ :—

ಷಟ್ತೀರ್ಥಾನಿ ಮಹಾಬಾಹೋ ತ್ವಯೋಕ್ತಾನಿ ಮಹೀಧರೇ ।
ಮಾಹಾತ್ಮ್ಯಂ ವದ ತೇಷಾಂ ಮೇ ಯಥಾಕಾಲಂ ಯಥಾವಿಧಿ ।
ಫಲಾನಿ ತೇಷು ಸ್ನಾತಾನಾಂ ನರಾಣಾಂ ವದ ಭೂಧರ ॥ ೫೭ ॥

---

ಈ ಏಳು ತೀರ್ಥಗಳನ್ನೂ ನಾರಾಯಣಗಿರಿಯಲ್ಲಿರುವ ಉತ್ತಮ ತೀರ್ಥಗಳನ್ನಾಗಿ ಹೇಳುವರು. ಎಲೌ ಭೂದೇವಿಯೆ! ಇವುಗಳಲ್ಲಿಯೂ ಕೂಡ ಸ್ವಾಮಿ ಪುಷ್ಕರಿಣಿಯೇ ಉತ್ತಮೋತ್ತಮವಾದುದು.

೫೩. ಸಮುದ್ರವಸನೆಯಾದ ಓ ಧರಣಿಯೆ! ಈ ಸ್ವಾಮಿ ಪುಷ್ಕರಿಣಿಯ ಪಶ್ಚಿಮ ತೀರದಲ್ಲಿ ನಾನು ನಿನ್ನೊಡನೆ ನೆಲಸುವೆನು. ಆ ತೀರ್ಥದ ದಕ್ಷಿಣಕ್ಕೆ ಜಗನ್ನಾಥನಾದ ಶ್ರೀನಿವಾಸನು ವಾಸಮಾಡುವನು.

೫೪. ಸ್ವಾಮಿಪುಷ್ಕರಿಣಿಯಲ್ಲಿ ಗಂಗಾದಿ ಸಮಸ್ತ ತೀರ್ಥಗಳೂ ಸನ್ನಿಹಿತ ಗಳಾಗಿರುವುವು. ಆದುದರಿಂದ ಮೂರು ಲೋಕಗಳಲ್ಲಿಯೂ ಯಾವ ತೀರ್ಥ ಗಳೂ, ಸರೋವರಗಳೂ, ನದಿಗಳೂ ಇರುವುವೊ, ಅವುಗಳಲ್ಲೆಲ್ಲ ಸ್ವಾಮಿ ಪುಷ್ಕರಿಣಿಯು ಶ್ರೇಷ್ಠತ್ವವನ್ನು ಹೊಂದಿರುವುದು.

೫೫. ಈ ತೀರ್ಥವನ್ನು ಸೇವಿಸುವುದಕ್ಕಾಗಿಯೇ ವೆಂಕಟಾಚಲದಲ್ಲಿ ಸಕಲ ತೀರ್ಥಗಳೂ ನೆರೆದಿರುವುವು. ಅವುಗಳ ಸಂಖ್ಯೆಯನ್ನು ನಿನಗೆ ತಿಳಿಸುವೆನು, ಕೇಳು.

೫೬. ಈ ಪವಿತ್ರವಾದ ಉತ್ತಮ ಪರ್ವತದಲ್ಲಿ ಅರವತ್ತಾರುಕೋಟಿ ತೀರ್ಥ ಗಳು ವಾಸಿಸುತ್ತಿರುವುವು. ಅವುಗಳಲ್ಲಿ ಮೇಲೆ ಹೇಳಿದ ಆರು ತೀರ್ಥಗಳೇ ಅತ್ಯಂತ ಮುಖ್ಯಗಳಾಗಿರುವುವು.''

೫೭. ಭೂದೇವಿಯು ಹೇಳುತ್ತಾಳೆ:—''ಮಹಾ ಪರಾಕ್ರಮಿಯಾದ ವರಾಹ ಸ್ವಾಮಿಯೆ! ನೀನು ಪರ್ವತದಲ್ಲಿ ಆರು ತೀರ್ಥಗಳನ್ನು ನಿರೂಪಿಸಿದೆಯಷ್ಟೆ.

ವರಾಹ ಉವಾಚ :—

ನಾರಾಯಣಾದ್ರಿಮಾಹಾತ್ಮ್ಯಂ ವದಾಮಿ ಶೃಣು ಮಾಧವಿ ॥ ೫೮ ॥
ದೇವಾಶ್ಚ ಋಷಯಶ್ಚೈವ ಯೋಗಿನಃ ಸನಕಾದಯಃ ।
ಕೃತೇಽಂಜನಾದ್ರಿಂ ತ್ರೇತಾಯಾಂ ನಾರಾಯಣಗಿರಿಂ ತಥಾ ॥ ೫೯ ॥
ದ್ವಾಪರೇ ಸಿಂಹಶೈಲಂ ಚ ಕಲೌ ಶ್ರೀವೇಂಕಟಾಚಲಂ ।
ಪ್ರವದಂತೀಹ ವಿದ್ವಾಂಸಃ ಪರಮಾತ್ಮಾಲಯಂ ಗಿರಿಂ ॥ ೬೦ ॥
ಯೋಜನಾನಾಂ ಸಹಸ್ರಾಂತೇ ದ್ವೀಪಾಂತರಗತೋಽಪಿ ವಾ ।
ಯೋ ನಮೇದ್ಭೂಧರೇಂದ್ರಂ ತದ್ದಿಶಮುದ್ದಿಶ್ಯ ಭಕ್ತಿತಃ ॥ ೬೧ ॥
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಸ ಗಚ್ಛತಿ ।
ತಸ್ಮಿನ್ಷಟ್ತೀರ್ಥಮಾಹಾತ್ಮ್ಯಂ ಯಥಾಕಾಲಂ ವದಾಮಿ ತೇ ॥ ೬೨ ॥
ಶೃಣುಷ್ವಾವಹಿತಾ ಭದ್ರೇ ಸರ್ವಪಾಪಪ್ರಣಾಶನಂ ।
ಕುಂಭಸಂಸ್ಥೇ ರವೌ ಮಾಘೇ ಪೌರ್ಣಮಾಸ್ಯಾಂ ಮಹಾತಿಥೌ ॥ ೬೩ ॥
ಮಖಾನಕ್ಷತ್ರಯುಕ್ತಾಯಾಂ ಭೂಧರೇಂದ್ರೇ ವಸುಂಧರೇ ।
ಕುಮಾರಧಾರಿಕಾನಾಮ ಸರಸೀ ಲೋಕಪಾವನೀ ॥ ೬೪ ॥

---

ಅವುಗಳ ಮಾಹಾತ್ಮ್ಯೆಯನ್ನು ನನಗೆ ತಿಳಿಸು. ಯಾವ ಕಾಲಗಳಲ್ಲಿ ಯಥಾವಿಧಿಯಾಗಿ ಅವುಗಳಲ್ಲಿ ಸ್ನಾನಮಾಡುವ ಮಾನವರಿಗೆ ಯಾವ ಫಲಗಳು ಲಭಿಸುವುವೆಂಬುದನ್ನು ಹೇಳುವವನಾಗು.''

೫೮. ವರಾಹಸ್ವಾಮಿಯು ಹೇಳುತ್ತಾನೆ:—'' ಪೃಥ್ವೀದೇವಿಯೆ! ನಾರಾಯಣಾಚಲದ ಮಾಹಾತ್ಮ್ಯೆಯನ್ನು ನಿನಗೆ ತಿಳಿಸುವೆನು, ಕೇಳು.

೫೯–೬೦. ವಿದ್ವಾಂಸರಾದ ದೇವತೆಗಳೂ, ಮಹರ್ಷಿಗಳೂ, ಸನಕಾದಿ ಯೋಗಿವರ್ಯರೂ ಪರಮಾತ್ಮನಿಗೆ ನಿವಾಸವಾದ ಈ ಪರ್ವತವನ್ನು ಕೃತಯುಗದಲ್ಲಿ ಅಂಜನಾದ್ರಿಯೆಂದೂ, ತ್ರೇತಾಯುಗದಲ್ಲಿ ನಾರಾಯಣಾಚಲವೆಂದೂ, ದ್ವಾಪರದಲ್ಲಿ ಸಿಂಹಶೈಲವೆಂದೂ, ಕಲಿಯುಗದಲ್ಲಿ ಶ್ರೀವೆಂಕಟಗಿರಿಯೆಂದೂ ಕರೆಯುವರು.

೬೧–೬೨. ಸಹಸ್ರಯೋಜನಗಳ ದೂರದಲ್ಲಿರುವವನಾಗಲಿ, ದ್ವೀಪಾಂತರಸ್ಥನಾಗಲಿ ಈ ಪರ್ವತವಿರುವ ದಿಕ್ಕಿಗೆ ತಿರುಗಿಕೊಂಡು ಭಕ್ತಿಯುಕ್ತನಾಗಿ ನಮಸ್ಕರಿಸಿದರೆ, ಆ ಮನುಷ್ಯನು ಸಕಲ ಪಾಪಗಳಿಂದಲೂ ಮುಕ್ತನಾಗಿ ವೈಕುಂಠಲೋಕವನ್ನು ಸೇರುವನು. ಈ ಪರ್ವತದಲ್ಲಿರುವ ಆರು ತೀರ್ಥಗಳ ಮಾಹಾತ್ಮ್ಯೆಯನ್ನೂ ಅವುಗಳಲ್ಲಿ ಸ್ನಾನಮಾಡಬೇಕಾದ ವಿಶೇಷ ಕಾಲಗಳನ್ನೂ ನಿನಗೆ ಹೇಳುವೆನು.

೬೩–೬೪. ಸರ್ವ ಪಾಪಪ್ರಣಾಶಕವಾದ ಈ ಮಾಹಾತ್ಮ್ಯೆಯನ್ನು ಏಕಾಗ್ರಚಿತ್ತಳಾಗಿ ಕೇಳು. ಎಲೌ ಭೂದೇವಿಯೆ! ಮಾಘಮಾಸದ ಪೌರ್ಣಿಮೆಯು

ಯತ್ರಾಸ್ತೇ ಪಾರ್ವತೀಸೂನುಃ ಕಾರ್ತಿಕೇಯೋಽಗ್ನಿಸಂಭವಃ ।
ದೇವಸೇನಾಸಮಾಯುಕ್ತಃ ಶ್ರೀನಿವಾಸಾರ್ಚಕೋಽಮಲೇ ॥ ೬೫ ॥
ತಸ್ಯಾಂ ಯಸ್ಸ್ನಾತಿ ಮಧ್ಯಾಹ್ನೇ ತಸ್ಯ ಪುಣ್ಯಫಲಂ ಶೃಣು ॥ ೬೬ ॥
ಗಂಗಾದಿ ಸರ್ವತೀರ್ಥೇಷು ಯಃ ಸ್ನಾತಿ ನಿಯಮಾದ್ಧರೇ ।
ದ್ವಾದಶಾಬ್ದಂ ಜಗದ್ಧಾತ್ರಿ ತತ್ಫಲಂ ಸಮವಾಪ್ನುಯಾತ್ ॥ ೬೭ ॥
ಯೋಽನ್ನಂ ದದಾತಿ ತತ್ತೀರ್ಥೇ ಶಕ್ತ್ಯಾ ದಕ್ಷಿಣಯಾನ್ವಿತಂ ।
ಸ ತಾವತ್ಫಲಮಾಪ್ನೋತಿ ಸ್ನಾನೇ ತೂಕ್ತಂ ಫಲಂ ಯಥಾ ॥ ೬೮ ॥
ಮೀನಸಂಸ್ಥೇ ಸವಿತರಿ ಪೌರ್ಣಮಾಸೀತಿಥೌ ಧರೇ ।
ಉತ್ತರಾಫಲ್ಗುನೀಯುಕ್ತೇ ಚತುರ್ಥೇ ಕಾಲ ಉತ್ತಮೇ ॥ ೬೯ ॥
ಪಂಚಾನಾಮಪಿ ತೀರ್ಥಾನಾಂ ತುಂಬೇಽಸ್ಮಿನ್ ಗಿರಿಗಹ್ವರೇ ।
ಯಃ ಸ್ನಾತಿ ಮನುಜೋ ದೇವಿ ಪುನರ್ಗರ್ಭೇ ನ ಜಾಯತೇ ॥ ೭೦ ॥

---

ಮಖಾನಕ್ಷತ್ರಯುಕ್ತವಾಗಿರಲು ಸೂರ್ಯನು ಕುಂಭಲಗ್ನದಲ್ಲಿರುವ ಸಮಯವು ಈ ಪರ್ವತದಲ್ಲಿ ಮಹಾ ಪರ್ವಕಾಲವಾಗಿರುವುದು. ಲೋಕಪಾವನೆಯಾದ ಕುಮಾರಧಾರೆಯೆಂಬ ಸರೋವರವೊಂದು ಪರ್ವತದಲ್ಲಿರುವುದು.

೬೫. ಮೇಲೆ ಹೇಳಿದ ಸಮಯದಲ್ಲಿ ಪಾರ್ವತೀಪುತ್ರನೂ, ಅಗ್ನಿಸಂಭವನೂ ಆದ ಕಾರ್ತಿಕೇಯ ಸ್ವಾಮಿಯು ನಿರ್ಮಲವಾದ ಆ ತೀರ್ಥದಲ್ಲಿ ದೇವಸೇನಾದೇವಿಯೊಡನೆ ಶ್ರೀನಿವಾಸನ ಪೂಜೆಯನ್ನು ಮಾಡುವನು.

೬೬. ಆ ದಿನದ ಮಧ್ಯಾಹ್ನದಲ್ಲಿ ತೀರ್ಥಸ್ನಾನವನ್ನು ಮಾಡಿದ ಮಾನವನ ಪುಣ್ಯಫಲವನ್ನು ಕೇಳು.

೬೭. ಅವನು ಗಂಗಾದಿ ಸಕಲ ತೀರ್ಥಗಳಲ್ಲಿಯೂ ನಿಯಮದಿಂದ ಹನ್ನೆರಡು ವರುಷಗಳ ಕಾಲ ಸ್ನಾನಮಾಡಿದ ಫಲವನ್ನು ಪಡೆಯುವನು.

೬೮. ಯಾವನು ಯಥಾಶಕ್ತಿಯಾದ ದಕ್ಷಿಣೆಯಿಂದೊಡಗೂಡಿದ ಭೋಜನವನ್ನು ಆ ಕಾಲದಲ್ಲಿ ನೀಡುವನೊ, ಅವನಿಗೂ ಕೂಡ ಮೇಲೆ ಹೇಳಿದ ಫಲಕ್ಕೆ ಸಮಾನವಾದ ಪುಣ್ಯವೇ ಲಭಿಸುವುದು.

೬೯. ಎಲೌ ದೇವಿಯೆ! ಫಾಲ್ಗುನಮಾಸದ ಪೌರ್ಣಿಮೆಯು ಉತ್ತರಾ ನಕ್ಷತ್ರಯುಕ್ತವಾಗಿರುವಾಗ ಸೂರ್ಯನು ಮೀನಲಗ್ನದಲ್ಲಿರಲು ಅಪರಾಹ್ಣವು ಉತ್ತಮಕಾಲವಾಗಿರುವುದು.

೭೦. ಆ ಸಮಯದಲ್ಲಿ ಪಂಚತೀರ್ಥಗಳ ಸಮೂಹವಿರುವ ಈ ಪರ್ವತದ ಕೊರಕಲಿನಲ್ಲಿ ಯಾರು ಸ್ನಾನಮಾಡುವರೊ, ಅವರು ತಾಯಿಯ ಗರ್ಭದಲ್ಲಿ ಪುನರ್ಜನ್ಮವನ್ನು ಪಡೆಯುವುದಿಲ್ಲ.

ಅಗ್ನಿವಾಹಸ್ಥಿತೇ ಭಾನೌ ಚಿತ್ರಾನಕ್ಷತ್ರ ಸಂಯುತೇ ।
ಪೂರ್ಣಿಮಾಖ್ಯೇ ತಿಥೌ ಪುಣ್ಯೇ ಪ್ರಾತಃಕಾಲೇ ತಥೈವ ಚ ।
ಆಕಾಶಗಂಗಾಸರಿತಿ ಸ್ನಾತೋ ಮೋಕ್ಷಮವಾಪ್ನುಯಾತ್ ॥ ೭೧ ॥
ವೃಷಭಸ್ಥೇ ರವೌ ರಾಧೇ ದ್ವಾದಶ್ಯಾಂ ರವಿವಾಸರೇ ।
ಶುಕ್ಲೇ ವಾಪ್ಯಥವಾ ಕೃಷ್ಣೇ ಪಕ್ಷೇ ಭೌಮಸಮನ್ವಿತೇ ॥ ೭೨ ॥
ಶುಕ್ಲೇ ವಾಪ್ಯಥವಾ ಕೃಷ್ಣೇ ಭಾನುವಾರೇಣ ಸಂಯುತೇ ।
ಪುಷ್ಯ ನಕ್ಷತ್ರಯುಕ್ತೇ ತು ಹಸ್ತರ್ಕ್ಷೇಣ ಯುತೇಽಪಿ ವಾ ॥ ೭೩ ॥
ತೀರ್ಥೇ ಪಾಂಡವನಾಮ್ನ್ಯತ್ರ ಸಂಗಮೇ ಸ್ನಾತಿ ಯೋ ನರಃ ।
ನೇಹ ದುಃಖಮವಾಪ್ನೋತಿ ಪರತ್ರ ಸುಖಮಶ್ನುತೇ ॥ ೭೪ ॥
ಶುಕ್ಲೇ ಪಕ್ಷೇಽಥ ವಾ ಕೃಷ್ಣೇ ಯಾರ್ಕವಾರೇಣ ಸಪ್ತಮೀ ।
ಪುಷ್ಯನಕ್ಷತ್ರಸಂಯುಕ್ತಾ ಹಸ್ತರ್ಕ್ಷೇಣ ಯುತಾಪಿ ವಾ ॥ ೭೫ ॥
ತಸ್ಯಾಂ ತಿಥೌ ಮಹಾಭಾಗೇ ಪಾಪನಾಶನಸಂಜ್ಞಕೇ ।
ತೀರ್ಥೇ ಯಃ ಸ್ನಾತಿ ನಿಯಮಾದ್ಭೂಧರೇಂದ್ರಸ್ಯ ಮಸ್ತಕೇ ॥ ೭೬ ॥
ಕೋಟಿಜನ್ಮಾರ್ಜಿತೈಃ ಪಾಪೈರ್ಮುಚ್ಯತೇ ಸ ನರೋತ್ತಮಃ ॥ ೭೭ ॥
ಶೃಣು ದೇವಿ ಪರಂ ಗುಹ್ಯಂ ಅನಂತಾಖ್ಯೇ ಮಹಾಗಿರೌ ।
ಮದ್ದಿವ್ಯಾಲಯಮಾಯಮ್ಯೇ ಶಿಖರೇ ಗಿರಿಗಹ್ವರೇ . ॥ ೭೮ ॥

---

೭೧. ಸೂರ್ಯನು ಮೇಷರಾಶಿಯಲ್ಲಿರುವಾಗ ಚೈತ್ರಮಾಸದ ಪೂರ್ಣಿಮೆಯ ತಿಥಿಯಲ್ಲಿ ಪ್ರಾತಃಕಾಲದ ಶುಭ ಸಮಯದಲ್ಲಿ ಆಕಾಶಗಂಗೆಯಲ್ಲಿ ಸ್ನಾನ ಮಾಡಲು ಮನುಷ್ಯನು ಮೋಕ್ಷವನ್ನು ಪಡೆಯುವನು.

೭೨–೭೪. ಸೂರ್ಯನು ವೃಷಭರಾಶಿಯಲ್ಲಿರಲು ದ್ವಾದಶಿಯಿಂದ ಕೂಡಿದ ಭಾನುವಾರದಲ್ಲಾಗಲಿ, ಯಾವ ಮಾಸದಲ್ಲಾದರೂ ಪುಷ್ಯ ಅಥವ ಹಸ್ತ ನಕ್ಷತ್ರಗಳಿಂದ ಕೂಡಿದ ಮಂಗಳವಾರ, ಭಾನುವಾರಗಳಲ್ಲಾಗಲಿ, ಶುಕ್ಲ ಕೃಷ್ಣಪಕ್ಷಗಳಲ್ಲಿ ಮನುಷ್ಯನು ಪೂರ್ವಾಹ್ಣದಲ್ಲಿ ಪಾಂಡವ ತೀರ್ಥದಲ್ಲಿ ಸ್ನಾನವನ್ನು ಮಾಡಲು, ಇಹಲೋಕದಲ್ಲಿ ಸಕಲ ದುಃಖಗಳನ್ನೂ ಕಳೆದುಕೊಂಡು ಪರದಲ್ಲಿ ಪರಮ ಸೌಖ್ಯವನ್ನು ಪಡೆಯುವನು.

೭೫–೭೭. ಯಾವ ಮಾಸದ ಯಾವ ಪಕ್ಷದಲ್ಲಾಗಲಿ ಪುಷ್ಯ ಅಥವ ಹಸ್ತ ನಕ್ಷತ್ರಗಳಿಂದ ಕೂಡಿದ ಭಾನುವಾರವು ಸಪ್ತಮೀ ತಿಥಿಯಿಂದ ಕೂಡಿರಲು, ಆ ದಿವಸ ಈ ಪರ್ವತದ ತುದಿಯಲ್ಲಿರುವ ಪಾಪನಾಶನ ತೀರ್ಥದಲ್ಲಿ ನಿಯಮ ಸಹಿತವಾಗಿ ಸ್ನಾನಮಾಡಲು, ಮನುಷ್ಯಶ್ರೇಷ್ಠನು ಕೋಟಿಜನ್ಮಗಳಲ್ಲಿ ಮಾಡಿದ ಪಾಪಗಳನ್ನೂ ಕಳೆದುಕೊಳ್ಳುವನು.

೭೮–೭೯. ಎಲೌ ದೇವಿಯೆ! ನಿನಗೆ ಬಹಳ ರಹಸ್ಯವಾದ ವಿಷಯವೊಂದನ್ನು ಈಗ ತಿಳಿಸುವೆನು. ಅನಂತಾಚಲವೆಂಬ ಈ ಮಹಾ ಪರ್ವತದಲ್ಲಿ

ದೇವತೀರ್ಥಮಿತಿ ಖ್ಯಾತಂ ತಟಾಕಮತಿಶೋಭನಂ ।
ತಸ್ಮಿನ್ಪುಣ್ಯತಮೇ ದೇವಿ ಸ್ನಾನಕಾಲಂ ವದಾಮಿ ತೇ ॥ ೭೯ ॥
ಗುರುಪುಷ್ಯೇ ವ್ಯತೀಪಾತೇ ಸೋಮಶ್ರವಣಕೇ ತಥಾ ।
ದಿನೇಷ್ವೇತೇಷು ಯಃ ಸ್ನಾತಿ ತಸ್ಯ ಪುಣ್ಯಫಲಂ ಶ್ರುಣು ॥ ೮೦ ॥
ಯಾನಿ ಯಾನೀಹ ಪಾಪಾನಿ ಜ್ಞಾನಾಜ್ಞಾನಕೃತಾನಿ ಚ ।
ತಾನಿ ಸರ್ವಾಣಿ ನಶ್ಯಂತಿ ದೇವತೀರ್ಥೇಽತಿಪಾವನೇ ॥ ೮೧ ॥
ಪುಣ್ಯಾನ್ಯಪಿ ಚ ವರ್ಧಂತೇ ದೇವತೀರ್ಥನಿಮಜ್ಜನಾತ್ ।
ದೀರ್ಘಮಾಯುರವಾಪ್ನೋತಿ ಪುತ್ರಪೌತ್ರಸಮನ್ವಿತಃ ।
ಅಂತೇ ಸ್ವರ್ಗಂ ಸಮಾಸಾದ್ಯ ಚಂದ್ರಲೋಕೇ ಮಹೀಯತೇ ॥ ೮೨ ॥
ತದ್ದಿನೇಷ್ವನ್ನದೋ ದೇವಿ ಯಾವಜ್ಜೀವಾನ್ನದೋ ಭವೇತ್ ।
ಅತಿಗುಹ್ಯತಮಂ ದೇವಿ ಪ್ರೋಕ್ತಂ ತುಭ್ಯಂ ವಸುಂಧರೇ ॥ ೮೩ ॥
ಶ್ರುತ್ವಾಥ ಪೃಥಿವೀ ದೇವೀ ಪ್ರೀತಿಪ್ರವಣಮಾನಸಾ ।
ಇಷ್ಟಾಭಿರ್ವಾಗ್ಭಿರತುಲಂ ತುಷ್ಟಾವ ಧರಣೀಧರಂ ॥ ೮೪ ॥

---

ನನ್ನ ದಿವ್ಯವಾದ ಆಲಯಕ್ಕೆ ವಾಯುವ್ಯಕೋಣದಲ್ಲಿರುವ ಗುಹಾಪ್ರದೇಶದಲ್ಲಿ ಪರಮಪವಿತ್ರವಾದ ದೇವತೀರ್ಥವೆಂಬ ತಟಾಕವೊಂದಿರುವುದು. ಅದರಲ್ಲಿ ಸ್ನಾನಮಾಡಲು ಯುಕ್ತವಾದ ಪುಣ್ಯಕಾಲವನ್ನು ನಿನಗೆ ಹೇಳುವೆನು.

೮೦. ಪುಷ್ಯ ನಕ್ಷತ್ರದಿಂದ ಕೂಡಿದ ಗುರುವಾರವೂ, ವ್ಯತೀಪಾತಯೋಗದ ದಿವಸವೂ, ಶ್ರವಣ ನಕ್ಷತ್ರಯುಕ್ತವಾದ ಸೋಮವಾರವೂ ಉತ್ತಮ ಕಾಲಗಳು. ಈ ಪುಣ್ಯದಿವಸಗಳಲ್ಲಿ ಯಾವನು ಅಲ್ಲಿ ಸ್ನಾನಮಾಡುವನೊ ಅವನಿಗೆ ದೊರಕುವ ಫಲವನ್ನು ಕೇಳು.

೮೧. ದೇವತೀರ್ಥದಲ್ಲಿ ಸ್ನಾನಮಾಡುವುದರಿಂದ ತಿಳಿದಾಗಲಿ ತಿಳಿಯದೆ ಯಾಗಲಿ ಇಹಲೋಕದಲ್ಲಿ ಯಾವ ಪಾಪಗಳನ್ನು ಮನುಷ್ಯರು ಮಾಡುವರೊ, ಅವುಗಳೆಲ್ಲವೂ ನಾಶವಾಗುವುವು.

೮೨. ಪಾವನವಾದ ದೇವತೀರ್ಥದ ಸ್ನಾನದಿಂದ ಪುಣ್ಯವು ಹೆಚ್ಚುವುದು. ಮನುಷ್ಯನು ದೀರ್ಘಾಯುಷ್ಯವಂತನಾಗಿ ಪುತ್ರ ಪೌತ್ರ ಸಂಪತ್ತಿಸಿಂದ ಕೂಡಿರುವನು. ಕೊನೆಯಲ್ಲಿ ಸ್ವರ್ಗಸುಖಗಳನ್ನೂ ಹೊಂದಿ ಚಂದ್ರಲೋಕದಲ್ಲಿ ಮರ್ಯಾದೆಯನ್ನೂ ಗಳಿಸುವನು.

೮೩. ಭೂದೇವಿಯೆ! ಆ ದಿನಗಳಲ್ಲಿ ಅನ್ನದಾನವನ್ನು ಮಾಡಿದವನಿಗೆ ಯಾವಜ್ಜೀವವೂ ಅನ್ನದಾನ ಮಾಡಿದ ಪುಣ್ಯವು ಲಭಿಸುವುದು. ಇಂತು ಪರಮ ರಹಸ್ಯವಾದ ವೃತ್ತಾಂತವನ್ನೆಲ್ಲ ನಿನಗೆ ವಿಶದಪಡಿಸಿರುವೆನು.''

೮೪. ಈ ಮಾತುಗಳನ್ನು ಕೇಳಿ ಭೂಮಿದೇವತೆಯು ಪ್ರೀತಿಯಿಂದ ತುಂಬಿದ

ನಮಸ್ತೇ ದೇವದೇವೇಶ ವರಾಹವದನಾಚ್ಯುತ ।
ಕ್ಷೀರಸಾಗರಸಂಕಾಶ ವಜ್ರಶೃಂಗ ಮಹಾಬಲ ॥ ೮೫ ॥
ಉದ್ಧೃತಾಸ್ಮಿ ತ್ವಯಾ ದೇವ ಕಲ್ಪಾದೌ ಸಾಗರಾಂಭಸಃ ।
ಸಹಸ್ರಬಾಹುನಾ ವಿಷ್ಣೋ ಧಾರಯಾಮಿ ಜಗಂತ್ಯಹಂ ॥ ೮೬ ॥
ಅನೇಕದಿವ್ಯಾಭರಣಯಜ್ಞಸೂತ್ರವಿರಾಜಿತ ।
ಅರುಣಾರುಣಾಂಬರಧರ ದಿವ್ಯರತ್ನವಿಭೂಷಿತ ॥ ೮೭ ॥
ಉದ್ಯದ್ಭಾನುಪ್ರತೀಕಾಶಪಾದಪದ್ಮ ನಮೋನಮಃ ।
ಬಾಲಚಂದ್ರಾಭದಂಷ್ಟ್ರಾಗ್ರ ಮಹಾಬಲಪರಾಕ್ರಮ ॥ ೮೮ ॥
ದಿವ್ಯಚಂದನಲಿಪ್ತಾಂಗ ತಪ್ತಕಾಂಚನಕುಂಡಲ ।
ಇಂದ್ರನೀಲಮಣಿದ್ಯೋತಿ ಹೇಮಾಂಗದವಿಭೂಷಿತ ॥ ೮೯ ॥

---

ಹೃದಯವುಳ್ಳವಳಾಗಿ ಅಪಾರವಾದ ಮಾತುಗಳಿಂದ ಮನಃಪೂರ್ತಿಯಾಗಿ ವರಾಹ ಸ್ವಾಮಿಯನ್ನು ಸ್ತೋತ್ರಮಾಡಿದಳು.

೮೫. "ದೇವದೇವರಿಗೆ ಒಡೆಯನೂ, ವರಾಹಮುಖವುಳ್ಳ ಮಹಾವಿಷ್ಣುವೂ ಆದ ನಿನಗೆ ನಮಸ್ಕಾರವು! ನೀನು ಕ್ಷೀರಸಾಗರದಂತೆ ಶುಭ್ರವಾದ ಶರೀರವುಳ್ಳವನೂ, ವಜ್ರಕಠಿನಗಳಾದ ಕೋರೆಗಳುಳ್ಳವನೂ, ಮಹಾ ಬಲಶಾಲಿಯೂ ಆಗಿರುವೆ.

೮೬. ಎಲೈ ದೇವದೇವನಾದ ನಾರಾಯಣನೆ! ನೀನು ಸರ್ಗದ ಆದಿಯಲ್ಲಿ ಸಮುದ್ರದ ನೀರಿನಿಂದ ನನ್ನನ್ನು ಮೇಲಕ್ಕೆತ್ತಿದೆ. ಸಹಸ್ರಬಾಹುವಾದ ನಿನ್ನ ಸಹಾಯದಿಂದಲೇ ನಾನು ಸಕಲ ಲೋಕಗಳನ್ನೂ ಧರಿಸಲು ಶಕ್ತಳಾಗಿರುವೆನು.

೮೭. ನೀನು ಅನೇಕ ದಿವ್ಯಭೂಷಣಗಳಿಂದಲೂ, ಯಜ್ಞೋಪವೀತದಿಂದಲೂ ರಂಜಿಸುತ್ತಿರುವೆ. ಮುಂಬೆಳಗಿನ ಹೊಂಬಣ್ಣದ ವಸ್ತ್ರವನ್ನುಟ್ಟು ದಿವ್ಯರತ್ನಗಳಿಂದ ಮಾಡಲ್ಪಟ್ಟ ಆಭರಣಗಳನ್ನು ತೊಟ್ಟಿರುವೆ.

೮೮. ಉದಯಿಸುತ್ತಿರುವ ಸೂರ್ಯನಂತೆ ಕಣ್ಣುಗಳನ್ನು ಕುಕ್ಕುತ್ತಿರುವ ನಿನ್ನ ಪಾದಕಮಲಗಳಿಗೆ ನಮಸ್ಕಾರವು. ನೀನು ಬಾಲಚಂದ್ರನಂತಿರುವ ಕೋರೆದಾಡೆಗಳಿಂದಲೂ ಅಪರಿಮಿತವಾದ ದೇಹಬಲದಿಂದಲೂ ಶೌರ್ಯದಿಂದಲೂ ಕೂಡಿರುವೆ.

೮೯. ದಿವ್ಯಸುಗಂಧಯುಕ್ತವಾದ ಚಂದನದಿಂದ ನಿನ್ನ ದೇಹವು ಲೇಪಿತವಾಗಿರುವುದು. ಪುಟಕ್ಕೆ ಹಾಕಿದ ಚಿನ್ನದ ಕುಂಡಲಗಳು ನಿನ್ನ ಕಿವಿಗಳಲ್ಲಿ ಶೋಭಿಸುತ್ತಿರುವುವು. ಇಂದ್ರನೀಲಮಣಿಗಳ ಕಾಂತಿಯಿಂದ ಕೂಡಿದ ಚಿನ್ನದ ಭಾಪುರಿಗಳು ನಿನ್ನ ಬಾಹುಗಳಲ್ಲಿ ಕಾಣುತ್ತಿರುವುವು.

ವಜ್ರದಂಷ್ಟ್ರಾಗ್ರನಿರ್ಭಿನ್ನಹಿರಣ್ಯಾಕ್ಷ ಮಹಾಬಲ ।
ಪುಂಡರೀಕಾಭಿರಾಮಾಕ್ಷ ಸಾಮಸ್ವನಮನೋಹರ ॥ ೬೦ ॥
ಶ್ರುತಿಸೀಮಂತಭೂಷಾತ್ಮನ್ ಸರ್ವಾತ್ಮಂಶ್ಚಾರುವಿಕ್ರಮ ।
ಚತುರಾನನಶಂಭುಭ್ಯಾಂ ವಂದಿತಾಯತಲೋಚನ ॥ ೬೧ ॥
ಸರ್ವವಿದ್ಯಾಮಯಾಕಾರ ಶಬ್ದಾತೀತ ನಮೋನಮಃ ।
ಆನಂದವಿಗ್ರಹಾನಂತ ಕಾಲಕಾಲ ನಮೋನಮಃ ॥ ೬೨ ॥
ಇತಿಸ್ತುತ್ವಾಚಲಾ ದೇವೀ ವವಂದೇ ಪಾದಯೋರ್ವಿಭುಂ ।
ವಂದಮಾನಾಂ ಸಮುದ್ವೀಕ್ಷ್ಯ ದೇವಃ ಫುಲ್ಲವಿಲೋಚನಃ ॥ ೬೩ ॥
ಉದ್ಧೃತ್ಯ ಧರಣೀಂ ದೇವೀಂ ಆಲಿಲಿಂಗೇಽಥ ಬಾಹುಭಿಃ ।
ಆಘ್ರಾಯ ಧರಣೀವಕ್ತ್ರಂ ವಾಮಾಂಕೇ ಸನ್ನಿವೇಶ್ಯ ಚ ॥ ೬೪ ॥
ಆರುಹ್ಯ ಗರುಡೇಶಾನಂ ಜಗಾಮ ವೃಷಭಾಚಲಂ ।
ಮುನೀಂದ್ರೈರ್ನಾರದಾದ್ಯೈಶ್ಚ ಸ್ತೂಯಮಾನೋ ಮಹೀಪತಿಃ ॥ ೬೫ ॥

---

೬೦. ನೀನು ವಜ್ರಕಠಿನಗಳಾದ ಕೋರೆಹಲ್ಲುಗಳಿಂದ ಹಿರಣ್ಯಾಕ್ಷನನ್ನು ಸೀಳಿದ ಮಹಾಪರಾಕ್ರಮಿಯು. ಕಮಲಗಳಂತೆ ವಿಶಾಲಗಳೂ ಮನೋಹರಗಳೂ ಆದ ನೇತ್ರಗಳುಳ್ಳವನಾಗಿ ಸಾಮಧ್ವನಿಯಲ್ಲಿ ಪ್ರೀತನಾಗಿರುವೆ.

೬೧. ಶ್ರುತಿಶಿರೋಭಾಗಗಳೆಂಬ ಉಪನಿಷದ್ಭಾಗಗಳಿಗೆಲ್ಲ ಪ್ರತಿಪಾದ್ಯವಾದ ಭೂಷಣಪ್ರಾಯನಾಗಿ ನೀನಿರುವೆ. ಸರ್ವರಲ್ಲಿಯೂ ಅಂತರ್ಯಾಮಿಯಾಗಿ ಅತುಲಪರಾಕ್ರಮಿಯಾಗಿರುವೆ. ವಿಶಾಲನೇತ್ರನಾದ ನಿನ್ನನ್ನು ಬ್ರಹ್ಮ ಮಹೇಶ್ವರರು ವಂದಿಸುತ್ತಿರುವರು.

೬೨. ಸಕಲ ವಿದ್ಯೆಗಳೂ ನಿನಗೆ ದೇಹಸ್ವರೂಪಗಳಾಗಿರುವುವು. ಆದರೂ ವೇದಾದಿ ಶಬ್ದಗಳಿಗೆ ಸಿಲುಕದವನಾಗಿರುವೆ. ನಿನಗೆ ನಮಸ್ಕಾರವು. ಆನಂದಮಯವಾದ ಶರೀರವುಳ್ಳವನೂ, ಅಪರಿಚ್ಛಿನ್ನನೂ, ಜರಾಮರಣವರ್ಜಿತನೂ ಆದ ನಿನಗೆ ನಮಸ್ಕರಿಸುವೆನು.''

೬೩–೬೫. ಇಂತು ವರಾಹಸ್ವಾಮಿಯನ್ನು ಸ್ತುತಿಸಿ ಭೂದೇವಿಯು ನಾಥನ ಪಾದಗಳಲ್ಲಿ ವಂದಿಸಿದಳು. ಇಂತು ನಮ್ರಳಾಗಿರುವ ದೇವಿಯನ್ನು ಕಂಡು ಸ್ವಾಮಿಯು ಅರಳಿದ ಕಣ್ಣುಗಳುಳ್ಳವನಾಗಿ ಆಕೆಯನ್ನು ಮೇಲಕ್ಕೆತ್ತಿ ತನ್ನ ಬಾಹುಗಳಿಂದ ಆಲಿಂಗನಮಾಡಿಕೊಂಡನು. ಆಕೆಯ ಮುಖವನ್ನು ಆಘ್ರಾಣಿಸುತ್ತ ಎಡದೊಡೆಯಲ್ಲಿ ಕುಳ್ಳಿರಿಸಿಕೊಂಡು ಗರುಡವಾಹನನಾಗಿ ವೃಷಭಾಚಲವನ್ನು ಕುರಿತು ತೆರಳಿದನು. ಭೂದೇವಿಯೊಡನಿದ್ದ ಆತನನ್ನು ನಾರದನೇ ಮೊದಲಾದ ಸಕಲ ಮುನಿಶ್ರೇಷ್ಠರೂ ಸ್ತೋತ್ರಮಾಡಿದರು.

ಸ್ವಾಮಿಪುಷ್ಕರಿಣೀತೀರೇ ಪಶ್ಚಿಮೇ ಲೋಕಪೂಜಿತೇ ।
ಆಸ್ತೇ ವರಾಹವದನೋ ಮುನೀಂದ್ರೈಸ್ತತ್ರ ಪೂಜಿತಃ ।
ವೈಖಾನಸೈರ್ಮಹಾಭಾಗ್ಯೈರ್ಬ್ರಹ್ಮತುಲ್ಯೈರ್ಮಹಾತ್ಮಭಿಃ ॥ ೯೬ ॥

ವ್ಯಾಸ ಉವಾಚ :—

ತಂ ದೃಷ್ಟ್ವಾ ನಾರದಃ ಸೂತ ಮುನೀನಾಮುಕ್ತವಾನ್ಪುರಾ ।
ತದೇತದಹಮಶ್ರೌಷಂ ತತ್ರ ವೈ ಮುನಿಸಂಸದಿ ॥ ೯೭ ॥
ಯತ್ಪೃಷ್ಟೋಽಹಂ ತ್ವಯಾ ಸೂತ ಮಾಹಾತ್ಮ್ಯಂ ಧರಣೀಭೃತಾಂ ।
ಮಯಾ ತೂಕ್ತಂ ಯಥಾವದ್ಧಿ ನಾರದಾಚ್ಚ ಪುರಾ ಶ್ರುತಂ ॥ ೯೮ ॥
ಯ ಇದಂ ಧರ್ಮಸಂವಾದಮಾವಯೋಃ ಸೂತ ಪಾವನಂ ।
ಪಠೇದ್ವಾ ದೇವಪುರತೋ ಬ್ರಾಹ್ಮಣಾನಾಂ ಪುರಸ್ತಥಾ ॥ ೯೯ ॥
ಸರ್ವೇಷಾಮಪಿ ವರ್ಣಾನಾಂ ಶೃಣ್ವತಾಂ ಭಕ್ತಿಪೂರ್ವಕಂ ।
ಸ ಪ್ರತಿಷ್ಠಾಮವಾಪ್ನೋತಿ ಪುತ್ರಪೌತ್ರೈಸ್ಸಮನ್ವಿತಃ ॥ ೧೦೦ ॥
ಶೃಣ್ವತಾಮಪಿ ಸರ್ವೇಷಾಂ ಯದಿಷ್ಟಂ ತದ್ಭವಿಷ್ಯತಿ ॥ ೧೦೧ ॥

ಸೂತ ಉವಾಚ :—

ಇತಿ ಮೇ ಭಗವಾನ್ವ್ಯಾಸಃ ಪ್ರೋವಾಚ ಮುನಿಸೇವಿತಃ ।
ಯಥಾ ಶ್ರುತಂ ಮಯಾ ಪೂರ್ವಂ ಕೃಷ್ಣದ್ವೈಪಾಯನಾದ್ಗುರೋಃ ॥೧೦೨॥

---

೯೬. ಈಗ ವರಾಹಸ್ವಾಮಿಯು ಲೋಕಪ್ರಸಿದ್ಧವೂ ಪಾವನವೂ ಆದ ಸ್ವಾಮಿ ಪುಷ್ಕರಿಣೀತೀರ್ಥದ ಪಶ್ಚಿಮ ತೀರದಲ್ಲಿ ನೆಲಸಿ ಅಲ್ಲಿ ಮುನಿವರ್ಯ ರಿಂದಲೂ, ಮಹಾಶಯರಾದ ವಾನಪ್ರಸ್ಥರಿಂದಲೂ, ಬ್ರಹ್ಮನಿಗೆ ಸಮಾನರಾದ ಇತರ ಮಹಾತ್ಮರಿಂದಲೂ ಪೂಜೆಯನ್ನು ಸ್ವೀಕರಿಸುತ್ತಿರುವನು.

೯೭. ವ್ಯಾಸನು ಹೇಳುತ್ತಾನೆ:—"ಎಲೈ ಸೂತನೆ! ಇಂತು ವರಾಹಮೂರ್ತಿ ಯನ್ನು ಕಂಡ ನಾರದನು ಈ ವಿಷಯವನ್ನು ಮುನಿಗಳಿಗೆ ತಿಳಿಸಿದನು. ಆ ಮುನಿ ಗಳ ಮಧ್ಯದಲ್ಲಿದ್ದ ನಾನೂ ವಿಚಾರವನ್ನು ಚೆನ್ನಾಗಿ ಕೇಳಿದೆನು.

೯೮. ಪ್ರಪಂಚದಲ್ಲಿರುವ ಪರ್ವತಗಳ ಮಾಹಾತ್ಮ್ಯೆಯನ್ನು ಕುರಿತು ನೀನು ಕೇಳಿದೆಯಷ್ಟೆ. ನಾರದಮಹರ್ಷಿಯಿಂದ ಮುನ್ನು ಕೇಳಿದ ವಿಷಯವನ್ನು ಯಥಾವತ್ತಾಗಿ ನಿನಗೆ ತಿಳಿಸಿರುವೆನು.

೯೯–೧೦೧. ಎಲೈ ಸೂತನೆ! ಪರಮಪಾವನವೂ ಧರ್ಮವರ್ಧಕವೂ ಆದ ನಮ್ಮಿಬ್ಬರ ಈ ಸಂವಾದವನ್ನು ದೇವತಾ ಸನ್ನಿಧಿಯಲ್ಲಾಗಲಿ, ಬ್ರಾಹ್ಮಣ ಸಮೂಹದಲ್ಲಾಗಲಿ, ಭಕ್ತಿಯುಕ್ತರಾಗಿ ಕೇಳುವ ಸಕಲ ವರ್ಣಗಳ ಜನರಲ್ಲಾಗಲಿ ಪಠಿಸುವ ಮಾನವನು ಪುತ್ರಪೌತ್ರರನ್ನು ಪಡೆದು ಲೋಕದಲ್ಲಿ ಉನ್ನತಪದವಿ ಯನ್ನೂ ಮರ್ಯಾದೆಯನ್ನೂ ಹೊಂದುವನು. ಮತ್ತು ಕೇಳುವವರೂ ಕೂಡ ತಮ್ಮ ಇಷ್ಟಾರ್ಥಗಳನ್ನು ಪಡೆದು ಸುಖಿಸುವರು.

೧೦೨–೧೦೩. ಸೂತನು ಹೇಳುತ್ತಾನೆ:—"ಇಂತು ಮುನಿಸೇವಿತನಾದ

ತತ್ತಥಾ ಸರ್ವಮೇವಾತ್ರ ಮಯಾಪ್ಯುಕ್ತಂ ಮುನೀಶ್ವರಾಃ ।
ಶ್ರುತ್ವಾ ಸೂತವಚಸ್ತ್ವಿತ್ಥಂ ತೇ ಪ್ರೀತಮನಸೋಽಭವನ್ ॥ ೧೦೩ ॥

ಋಷಯ ಊಚುಃ:—

ಸೂತ ತ್ವಯೋಕ್ತಂ ಭುವಿ ಪರ್ವತೇಷು
ಪುಣ್ಯೇಷು ಪುಣ್ಯಸ್ಯ ಮಹೀಧರಸ್ಯ ।
ಮಾಹಾತ್ಮ್ಯಮಸ್ಮಾಕಮಹೀಂದ್ರನಾಮ್ನಃ
ಪಾಪಾಪಹಂ ಮೋಕ್ಷಫಲಪ್ರದಾಯಕಂ ॥ ೧೦೪ ॥

ತತೋ ವೃಷಾದ್ರಿಂ ಸಂಪ್ರಾಪ್ಯ ವರಾಹೋ ಧರಣೀಯುತಃ ।
ಕಿಮುಕ್ತವಾನ್ ಧರಣ್ಯೈ ಸ ತನ್ನೋ ಬ್ರೂಹಿ ಮಹಾಮತೇ ॥ ೧೦೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಶ್ರೀ ವೇಂಕಟಾಚಲಮಾಹಾತ್ಮ್ಯೇ ಧರಣೀ
ವರಾಹಸಂವಾದೇ "ನಾರದೇನ ಸುಮೇರುಶಿಖರಸ್ಥ ಯಜ್ಞವರಾಹದರ್ಶನಾದಿ
ವರ್ಣನಂ" ನಾಮ ಪ್ರಥಮೋಽಧ್ಯಾಯಃ

---

ವ್ಯಾಸಮಹರ್ಷಿಯು ನನಗೆ ಹೇಳಿದನು. ಪೂರ್ವದಲ್ಲಿ ಈ ವಿಷಯವನ್ನು ನನ್ನ ಗುರುವಾದ ಕೃಷ್ಣದ್ವೈಪಾಯನರಿಂದ ಹೇಗೆ ಕೇಳಿದೆನೊ, ಹಾಗೆಯೆ ಅದನ್ನೆಲ್ಲ ಚಾಚೂ ತಪ್ಪದೆ ನಾನೂ ಹೇಳಿರುವೆನು." ಇಂತು ಹೇಳಿದ ಸೂತನ ಮಾತುಗಳನ್ನು ಕೇಳಿ ಅಲ್ಲಿ ನೆರೆದಿದ್ದ ಮುನಿಗಳೆಲ್ಲರೂ ಸಂತುಷ್ಟಾಂತರಂಗರಾದರು.

೧೦೪. ಋಷಿಗಳು ಹೇಳುತ್ತಾರೆ:—"ಸೂತನೆ! ಭೂಲೋಕದ ಪರ್ವತಗಳಲ್ಲೆಲ್ಲ ಪುಣ್ಯತಮವೂ, ಶೇಷಾಚಲವೆಂಬ ಹೆಸರನ್ನು ಹೊಂದಿರುವುದೂ ಆದ ಪರ್ವತದ ಮಾಹಾತ್ಮ್ಯೆಯನ್ನು ನೀನು ತಿಳಿಸಿರುವೆ. ಈ ಚರಿತ್ರೆಯು ಸಕಲ ಕಲ್ಮಷಘ್ನವೂ, ಮೋಕ್ಷವೆಂಬ ಪರಮಪ್ರಯೋಜನವನ್ನು ಕೊಡುವುದೂ ಆಗಿರುವುದು.

೧೦೫. ಎಲೈ ಮಹಾಬುದ್ಧಿಯೆ! ಭೂದೇವಿಯೊಡನೆ ಯಜ್ಞವರಾಹಸ್ವಾಮಿಯು ವೃಷಭಾಚಲವನ್ನು ಸೇರಿದಮೇಲೆ ಆಕೆಗೆ ಮತ್ತೇನನ್ನು ಹೇಳಿದನು? ನಮಗೆ ತಿಳಿಸುವವನಾಗು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೆಂಕಟಾಚಲ
ಮಾಹಾತ್ಮ್ಯೆಯ ಧರಣೀ ವರಾಹ ಸಂವಾದದಲ್ಲಿ "ನಾರದನು ಸುಮೇರು ಶಿಖರದಲ್ಲಿ
ಯಜ್ಞವರಾಹನನ್ನು ನೋಡಿದುದು" ಎಂಬ ಮೊದಲನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿತೀಯೋಽಧ್ಯಾಯಃ

### ವರಾಹಮಂತ್ರಾರಾಧನವಿಧಿವರ್ಣನಂ

ಸೂತ ಉವಾಚ :—

ಶೃಣುಧ್ವಂ ಮುನಯಃ ಸರ್ವೇ ಕಥಾಂ ಪುಣ್ಯಾಂ ಪುರಾತನೀಂ ।
ವೈವಸ್ವಂತೇಽಂತರೇ ಪೂರ್ವಂ ಕೃತೇ ಪುಣ್ಯತಮೇ ಯುಗೇ ॥ ೧ ॥
ನಾರಾಯಣಾದ್ರೌ ದೇವೇಶಂ ನಿವಸಂತಂ ಕ್ಷ್ಮಾಪತಿಂ ।
ವರಾಹರೂಪಿಣಂ ದೇವಂ ಧರಣೀಸಖಿಭಿರ್ವೃತಾ ॥ ೨ ॥
ಪ್ರಣಮ್ಯ ಪರಿಪಪ್ರಚ್ಛ ರಕ್ತಪದ್ಮಾಯತೇಕ್ಷಣಂ ॥ ೩ ॥
ಆರಾಧ್ಯಃ ಕೇನ ಮಂತ್ರೇಣ ಭವಾನ್ಪ್ರೀತೋ ಭವಿಷ್ಯತಿ ।
ತಂ ಮೇ ವದ ತ್ವಂ ದೇವೇಶ ಯಃ ಪ್ರಿಯೋ ಭವತಃ ಸದಾ ॥ ೪ ॥
ಜಪತಾಂ ಸರ್ವಸಂಪತ್ತಿಕಾರಕಂ ಪುತ್ರಪೌತ್ರದಂ ।
ಸಾರ್ವಭೌಮತ್ವದಂ ಚೈವ ಕಾಮಿನಾಂ ಕಾಮದಂ ಸದಾ ॥ ೫ ॥
ಅಂತೇ ಯಸ್ತ್ವತ್ಪದಪ್ರಾಪ್ತಿಂ ದದಾತಿ ನಿಯತಾತ್ಮನಾಂ ।
ಏವಂ ಭೂತಂ ವದ ಪ್ರೀತ್ಯಾ ಮಯಿ ವಾರಾಹ ಮಾನದ ॥ ೬ ॥

---

## ಕನ್ನಡದ ಅನುವಾದ

### ವರಾಹಮಂತ್ರಾರಾಧನ ವಿಧಿಯ ವರ್ಣನ

೧–೩. ಸೂತನು ಹೇಳುತ್ತಾನೆ:—“ಎಲೈ ಮುನಿಗಳಿರಾ! ಪುರಾತನವೂ ಪುಣ್ಯಪ್ರದವೂ ಆದ ಈ ಕಥೆಯನ್ನು ಕೇಳಿರಿ. ಪೂರ್ವದ ವೈವಸ್ವತ ಮನ್ವಂತರದ ಪುಣ್ಯಭೂಯಿಷ್ಠವಾದ ಕೃತಯುಗದಲ್ಲಿ ಅಂಜನಾಚಲವಾಸಿಯೂ, ದೇವ ದೇವನೂ ಆದ ವರಾಹಸ್ವಾಮಿಯನ್ನು ಕುರಿತು ಭೂದೇವಿಯು ತನ್ನ ಸಖಿಯರೊಡನೆ ಕೂಡಿದವಳಾಗಿ ಕೆಂದಾವರೆಗಳಂತೆ ವಿಶಾಲವಾದ ನೇತ್ರಗಳುಳ್ಳ ಆತನನ್ನು ಕೇಳಿದಳು.”

೪. “ಎಲೈ ದೇವತಾಸಾರ್ವಭೌಮನೆ! ಯಾವ ಮಂತ್ರದ ಜಪದಿಂದ ನಿನ್ನನ್ನು ಪೂಜಿಸಲು ನೀನು ಸುಪ್ರೀತನಾಗುವೆ? ಅದನ್ನು ನನಗೆ ತಿಳಿಸು. ನಿನಗೆ ಪ್ರಿಯತಮನಾದ ಭಕ್ತನು ಯಾವನು?

೫–೬. ಜಪಿಸುವವರಿಗೆ ಸಕಲ ಸೌಭಾಗ್ಯದಾಯಕವೂ, ಪುತ್ರಪೌತ್ರ ಪ್ರದವೂ, ಸಾರ್ವಭೌಮಪದವಿಯನ್ನು ಕೊಡುವುದೂ, ಕಾಮಿಗಳಿಗೆ ಇಷ್ಟಾರ್ಥ ದಾಯಕವೂ, ಕೊನೆಯಲ್ಲಿ ನಿಯಮಸಹಿತರಾದವರಿಗೆ ನಿನ್ನ ಲೋಕವನ್ನು ಕೊಡು

ಸೂತ ಉವಾಚ :—

ಇತಿ ಪೃಷ್ಟಸ್ತ್ವಯಾ ಭೂಮ್ಯಾ ಪ್ರಾಹ ಪ್ರೀತಿಸ್ಮಿತಾನನಃ ॥ ೭ ॥
ಶೃಣು ದೇವಿ ಪರಂ ಗುಹ್ಯಂ ಸದ್ಯಃ ಸಂಪತ್ತಿಕಾರಕಂ ।
ಭೂಮಿದಂ ಪುತ್ರದಂ ಗೋಪ್ಯಮಪ್ರಕಾಶ್ಯಂ ಕದಾಚನ ॥ ೮ ॥
ಕಿಂ ಚ ಶುಶ್ರೂಷವೇ ವಾಚ್ಯಂ ಭಕ್ತಾಯ ನಿಯತಾತ್ಮನೇ ॥ ೯ ॥
ಓಂ ನಮಃ ಶ್ರೀವರಾಹಾಯ ಧರಣ್ಯುದ್ಧರಣಾಯ ಚ ।
ವಹ್ನಿಜಾಯಾಸಮಾಯುಕ್ತಃ ಸದಾ ಜಪ್ಯೋ ಮುಮುಕ್ಷುಭಿಃ ॥ ೧೦ ॥
ಅಯಂ ಮಂತ್ರೋ ಧರಾದೇವಿ ಸರ್ವಸಿದ್ಧಿಪ್ರದಾಯಕಃ ।
ಋಷಿಃ ಸಂಕರ್ಷಣಃ ಪ್ರೋಕ್ತೋ ದೇವತಾ ತ್ವಹಮೇವ ಹಿ ॥ ೧೧ ॥
ಛಂದಃ ಪಂಙ್ಕ್ತಿಸ್ಸಮಾಖ್ಯಾತಾ ಶ್ರೀಂ ಬೀಜಂ ಸಮುದಾಹೃತಂ ।
ಚತುರ್ಲಕ್ಷಂ ಜಪೇನ್ಮಂತ್ರಂ ಸದ್ಗುರೋರ್ಲಬ್ಧತನ್ಮನಾಃ ॥ ೧೨ ॥

---

ವುದೂ ಆದ ಮಂತ್ರವಾವುದು? ಮಾನದನಾದ ವರಾಹಮೂರ್ತಿಯೆ! ಇಂತಹ ಉತ್ತಮೋತ್ತಮವಾದ ಮಂತ್ರವನ್ನು ನನ್ನಲ್ಲಿ ಪ್ರೀತಿಯುಳ್ಳವನಾಗಿ ತಿಳಿಸು.''

೭. ಸೂತನು ಹೇಳುತ್ತಾನೆ:— ಇಂತು ಭೂದೇವಿಯಿಂದ ಪ್ರಾರ್ಥಿತನಾಗಿ ಪ್ರೀತಿಯಿಂದ ಅರಳಿದ ಮುಖವುಳ್ಳ ಆ ಸ್ವಾಮಿಯು ಹೇಳತೊಡಗಿದನು.

೮. ''ಎಲೌ ದೇವಿಯೆ! ಈಗ ನಿನಗೆ ಹೇಳುವ ಮಂತ್ರವು ಬಹಳ ರಹಸ್ಯವಾದುದು. ತಕ್ಷಣದಲ್ಲಿಯೇ ಐಶ್ವರ್ಯವನ್ನು ಕೊಡುವಂತಹುದು. ಮತ್ತು ಭೂಲಾಭವನ್ನೂ ಪುತ್ರಲಾಭವನ್ನೂ ಮಾಡಿಸುವುದು. ಇದನ್ನು ಯಾವಾಗಲೂ ಗೋಪ್ಯವಾಗಿಟ್ಟಿರಬೇಕು. ಯಾವಾಗಲೂ ಬಹಿರಂಗಪಡಿಸಕೂಡದು.

೯. ಆದರೆ ಶಿಷ್ಯನೂ, ಭಕ್ತನೂ, ನಿಯಮಗಳನ್ನನುಸರಿಸುವವನೂ ಆದವನಿಗೆ ಮಾತ್ರ ಈ ಮಂತ್ರವನ್ನು ಉಪದೇಶ ಮಾಡಬಹುದು.

೧೦. ''ಶ್ರೀ ಯಜ್ಞವರಾಹನೂ, ಭೂಮಿಯನ್ನುದ್ಧರಿಸಿದವನೂ ಆದವನಿಗೆ ನಮಸ್ಕಾರವು. ವಹ್ನಿಪತ್ನಿಯಿಂದೊಡಗೂಡಿದ ನೀನೇ ಮುಮುಕ್ಷುಗಳಿಗೆ ಯಾವಾಗಲೂ ಉಪಾಸ್ಯ ಮೂರ್ತಿಯು.

೧೧. ಎಲೌ ಭೂದೇವಿಯೆ! ಈ ಮಂತ್ರವು ಸಕಲ ಸಿದ್ಧಿಗಳನ್ನೂ ಉಂಟುಮಾಡಿಕೊಡುವುದು. ಈ ಮಂತ್ರಕ್ಕೆ ಸಂಕರ್ಷಣನೇ ಪ್ರವರ್ತಕ ಋಷಿಯು, ನಾನೇ ದೇವತೆಯು.

೧೨. ಪಙ್ಕ್ತಿಯೇ ಛಂದಸ್ಸೆಂದು ಹೇಳಲ್ಪಟ್ಟಿರುವುದು. 'ಶ್ರೀಂ' ಎಂಬುದೇ ಬೀಜಾಕ್ಷರವೆಂದು ಉಕ್ತವಾಗಿರುವುದು. ಈ ಮಂತ್ರವನ್ನು ಸದ್ಗುರುವಿನಿಂದ ಉಪದೇಶವನ್ನು ಪಡೆದು ತದೇಕಮನಸ್ಕನಾಗಿ ನಾಲ್ಕುಲಕ್ಷ ಜಪವನ್ನು ಮಾಡಬೇಕು.

ಜುಹುಯಾತ್ಪಾಯಸಾನ್ನಂ ವೈ ಕ್ಷೌದ್ರಸರ್ಪಿಸಮನ್ವಿತಂ ।
ಅಥ ಧ್ಯಾನಂ ಪ್ರವಕ್ಷ್ಯಾಮಿ ಮನಃಶುದ್ಧಿಪ್ರದಾಯಕಂ ॥ ೧೩ ॥
ಶುದ್ಧಸ್ಫಟಿಕಶೈಲಾಭಂ ರಕ್ತಪದ್ಮದಳೇಕ್ಷಣಂ ।
ವರಾಹವದನಂ ಸೌಮ್ಯಂ ಚತುರ್ಬಾಹುಂ ಕಿರೀಟಿನಂ ॥ ೧೪ ॥
ಶ್ರೀವತ್ಸವಕ್ಷಸಂ ಚಕ್ರಶಂಖಾಭಯಕರಾಂಬುಜಂ ।
ವಾಮೋರುಸ್ಥಿತಯಾ ಯುಕ್ತಂ ತ್ವಯಾ ಮಾಂ ಸಾಗರಾಂಬರೇ ॥ ೧೫ ॥
ರಕ್ತಪೀತಾಂಬರಧರಂ ರಕ್ತಾಭರಣಭೂಷಿತಂ ।
ಶ್ರೀಕೂರ್ಮಪೃಷ್ಠಮಧ್ಯಸ್ಥಶೇಷಮೂರ್ತ್ಯಬ್ಜಸಂಸ್ಥಿತಂ ॥ ೧೬ ॥
ಏವಂ ಧ್ಯಾತ್ವಾ ಜಪೇನ್ಮಂತ್ರಂ ಸದಾ ಚಾಷ್ಟೋತ್ತರಂ ಶತಂ ।
ಸರ್ವಾನ್ಕಾಮಾನವಾಪ್ನೋತಿ ಮೋಕ್ಷಂ ಚಾಂತೇ ವ್ರಜೇದ್ಧ್ರುವಂ॥ ೧೭ ॥
ಪ್ರೋಕ್ತಂ ಮಯಾ ತೇ ಧರಣೇ ಯತ್ಪೃಷ್ಟೋಽಹಂ ತ್ವಯಾಽಮಲೇ ।
ಅತಃ ಕಿಂ ತೇ ವ್ಯವಸಿತಂ ಬ್ರೂಹಿ ತದ್ವಿಮಲಾನನೇ ॥ ೧೮ ॥

---

೧೩. ಬಳಿಕ ಜೇನುತುಪ್ಪ, ತುಪ್ಪಗಳಿಂದ ಕೂಡಿದ ಪಾಯಸಾನ್ನದಿಂದ ಹೋಮವನ್ನು ಮಾಡಬೇಕು. ಇನ್ನು ಮನಸ್ಸಿಗೆ ಶಾಂತಿಯನ್ನುಂಟುಮಾಡುವ ಧ್ಯಾನಕ್ರಮವನ್ನು ಹೇಳುವೆನು.

೧೪-೧೭. ಸಮುದ್ರವಸನೆಯಾದ ದೇವಿಯೆ! ಶುದ್ಧ ಸ್ಫಟಿಕದ ಪರ್ವತದಂತಿರುವವನೂ, ಕೆಂದಾವರೆಯ ದಳದಂತೆ ನೇತ್ರಗಳುಳ್ಳವನೂ, ವರಾಹಮುಖವುಳ್ಳವನೂ, ಸೌಮ್ಯಮೂರ್ತಿಯೂ, ನಾಲ್ಕು ಕೈಗಳಿಂದಲೂ ಕಿರೀಟದಿಂದಲೂ ಕೂಡಿದವನೂ, ಎದೆಯಲ್ಲಿ ಶ್ರೀವತ್ಸಚಿಹ್ನೆಯುಳ್ಳವನೂ, ಕೈಗಳಲ್ಲಿ ಶಂಖಚಕ್ರಗಳನ್ನೂ ಅಭಯ ವರದಮುದ್ರೆಗಳನ್ನೂ ಹೊಂದಿದವನೂ, ಎಡದೊಡೆಯಮೇಲೆ ಭೂದೇವಿಯನ್ನು ಕುಳ್ಳಿರಿಸಿಕೊಂಡಿರುವವನೂ, ಕೆಂಪು ಪೀತಾಂಬರವನ್ನುಟ್ಟು ಕೆಂಪು ಆಭರಣಗಳಿಂದ ಅಲಂಕೃತನಾದವನೂ, ಆದಿಕೂರ್ಮನ ಬೆನ್ನಿನ ಮಧ್ಯದಲ್ಲಿ ನಿಂತಿರುವ ಆದಿಶೇಷನೆಂಬ ಪರ್ಯಂಕದಲ್ಲಿ ಕಮಲಾಸನದಲ್ಲಿ ಕುಳಿತಿರುವವನೂ ಆದ ನನ್ನ ಮೂರ್ತಿಯನ್ನು ಧ್ಯಾನಿಸುತ್ತ ಯಾವಾಗಲೂ ಮೇಲೆ ಹೇಳಿದ ಮಂತ್ರವನ್ನು ನೂರೆಂಟು ಸಲ ಜಪಿಸುತ್ತಿರಬೇಕು. ಆ ಸಾಧಕನು ಇಹಲೋಕದಲ್ಲಿ ಸಕಲ ಇಷ್ಟಾರ್ಥಗಳನ್ನೂ ಪಡೆದು, ಅವಸಾನದಲ್ಲಿ ಮೋಕ್ಷವನ್ನು ಪಡೆಯುವನು; ಇದು ನಿಶ್ಚಯವು.

೧೮. ಧರಣಿದೇವಿಯೆ! ನೀನು ಕೇಳಿದುದನ್ನೆಲ್ಲ ಹೇಳಿರುವೆನು. ಪವಿತ್ರೆಯಾದ ಮಂಗಳವದನೆಯೆ! ಮುಂದೆ ನಿನಗೆ ಹೇಳಬೇಕಾದ ವಿಷಯವೇನು? ಕೇಳುವವಳಾಗು.”

ಏತಚ್ಛ್ರುತ್ವಾ ತತೋ ಭೂಮಿಃ ಪಪ್ರಚ್ಛ ಪುನರೇವ ತಂ ।
ಕೇನ ವಾನುಷ್ಠಿತಂ ದೇವ ಪುರಾ ಪ್ರಾಪ್ತಂ ಫಲಂ ಚ ಕಿಂ ॥ ೧೯ ॥
ಇತಿ ಪೃಷ್ಟಃ ಪುನರ್ದೇವಃ ಶ್ರೀವರಾಹೋಽಬ್ರವೀದಿದಂ ।
ಪುರಾ ಕೃತಯುಗೇ ದೇವಿ ಧರ್ಮೋ ನಾಮ ಮನುರ್ಮಹಾನ್ ॥ ೨೦ ॥
ಬ್ರಹ್ಮಣೋಽಮುಂ ಮನುರ್ಲಬ್ಧ್ವಾ ಜಪ್ತ್ವಾಸ್ಮಿನ್ಧರಣೀಧರೇ ।
ಮಾಂ ಚ ದೃಷ್ಟ್ವಾ ವರಂ ಲಬ್ಧ್ವಾ ಪ್ರಾಪ್ತೋಽಭೂನ್ಮಾಮಕಂ ಪದಂ ॥
ಇಂದ್ರೋ ದುರ್ವಾಸಸಃ ಶಾಪಾತ್ಪುರಾ ಭ್ರಷ್ಟಸ್ತ್ರಿವಿಷ್ಟಪಾತ್ ।
ಅನೇನೇಷ್ಟ್ವಾತ್ರ ಮಾಂ ದೇವಿ ಪುನಃ ಪ್ರಾಪ್ತಸ್ತ್ರಿವಿಷ್ಟಪಂ ॥ ೨೨ ॥
ಅನ್ಯೇಽಪಿ ಮುನಯೋ ಭೂಮೇ ಜಪ್ತ್ವಾ ಪ್ರಾಪ್ತಾಃ ಪರಾಂ ಗತಿಂ ।
ಅನಂತಃ ಪನ್ನಗಾಧೀಶೋ ಹ್ಯಮುಂ ಲಬ್ಧ್ವಾಥ ಕಾಶ್ಯಪಾತ್ ॥ ೨೩ ॥
ಶ್ವೇತದ್ವೀಪೇ ಜಪಂಶ್ಚೈವ ಬಭೂವ ಧರಣೀಧರಃ ।
ತಸ್ಮಾಜ್ಜಪ್ಯಃ ಸದಾ ಚೇಹ ಮನುಷ್ಯೈಶ್ಚ ಧರಾರ್ಥಿಭಿಃ ॥ ೨೪ ॥

---

೧೯. ಈ ಮಾತುಗಳನ್ನು ಕೇಳಿ ಭೂದೇವಿಯು ಮತ್ತೆ ವರಾಹಮೂರ್ತಿಯನ್ನು ಕುರಿತು "ದೇವ! ಈ ಮಂತ್ರಕ್ರಮವನ್ನು ಹಿಂದೆ ಯಾರು ಅನುಷ್ಠಾನ ಮಾಡಿದರು? ಅದರಿಂದ ಯಾವ ಫಲವನ್ನು ಪಡೆದರು?" ಎಂದು ಪ್ರಶ್ನೆ ಮಾಡಿದಳು.

೨೦. ಇಂತು ಕೇಳಲ್ಪಟ್ಟವನಾಗಿ ಶ್ರೀವರಾಹನು ಮತ್ತೆ ಹೇಳತೊಡಗಿದನು:—"ಎಲೌ ದೇವಿಯೆ! ಮುನ್ನು ಕೃತಯುಗದಲ್ಲಿ ಧರ್ಮಮನುವೆಂಬ ಮಹಾತ್ಮನೊಬ್ಬನಿದ್ದನು.

೨೧. ಆತನು ಬ್ರಹ್ಮನಿಂದ ಈ ಮಂತ್ರದ ಉಪದೇಶವನ್ನು ಪಡೆದು ಈ ಪರ್ವತದಲ್ಲಿಯೇ ನಿಂತು ಜಪವನ್ನು ಮಾಡುತ್ತ ನನ್ನ ದರ್ಶನವನ್ನು ಪಡೆದು ವರವನ್ನು ಹೊಂದಿ ಕಡೆಗೆ ನನ್ನ ಪದವಿಯನ್ನು ಹೊಂದಿದನು.

೨೨. ಮಹೇಂದ್ರನೂ ಒಮ್ಮೆ ದೂರ್ವಾಸ ಮಹರ್ಷಿಗಳ ಶಾಪಕ್ಕೆ ಸಿಕ್ಕಿ ಸ್ವರ್ಗಚ್ಯುತನಾಗಿ ಇಲ್ಲಿ ಬಂದು ಈ ಮಂತ್ರದಿಂದಲೇ ಹೋಮಾದಿಗಳನ್ನು ಮಾಡಿ ಪುನಃ ಸ್ವರ್ಗಲೋಕಾಧಿಪತ್ಯವನ್ನು ಪಡೆದನು.

೨೩–೨೪. ದೇವೀ! ಇತರ ಅನೇಕ ಮುನಿಗಳೂ ಸಹ ಈ ಮಂತ್ರವನ್ನು ಜಪಿಸಿ ಉತ್ತಮ ಸದ್ಗತಿಯನ್ನು ಪಡೆದಿರುವರು. ಕಶ್ಯಪಬ್ರಹ್ಮನಿಂದ ಈ ಮಂತ್ರದ ಉಪದೇಶವನ್ನು ಹೊಂದಿ ನಾಗರಿಗೆ ಒಡೆಯನಾದ ಅನಂತನು ಶ್ವೇತದ್ವೀಪದಲ್ಲಿ ಜಪಿಸಿದುದರ ಫಲವಾಗಿಯೇ ಭೂಮಿಯನ್ನು ತನ್ನ ತಲೆಯ ಮೇಲೆ ಹೊರಲು ಶಕ್ತನಾದನು. ಆದುದರಿಂದ ಭೂಕಾಮರಾದ ಮನುಷ್ಯರೂ ಸಹ ನಿತ್ಯದಲ್ಲಿಯೂ ಈ ಮಂತ್ರವನ್ನು ಜಪಿಸುತ್ತಿರಬೇಕು."

ಏತಚ್ಛ್ರುತ್ವಾಥ ಸುಪ್ರೀತಾ ಪುನಃ ಪ್ರಾಹ ಧರಾಧರಂ ॥ ೨೫ ॥
ವೇಂಕಟಾಖ್ಯೇ ಮಹಾಶೈಲೇ ಶ್ರೀನಿವಾಸೋ ಜಗತ್ಪತಿಃ ।
ಕದಾ ಹ್ಯಾಯಾತಿ ದೇವೇಶಃ ಶ್ರೀ ಭೂಮಿ ಸಹಿತೋಽಮಲಃ ॥ ೨೬ ॥
ಕಥಂ ಕಲ್ಪಾಂತರಸ್ಥಾಯಿೀ ಭವಿಷ್ಯತಿ ಜನಾರ್ದನಃ ।
ಏತದ್ಬ್ರೂಹಿ ವರಾಹಾತ್ಮನ್ಮಹತ್ಕೌತೂಹಲಂ ಮಮ ॥ ೨೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಶ್ರೀ ವೇಂಕಟಾಚಲಮಾಹಾತ್ಮ್ಯೇ ಧರಣೀ
ವರಾಹಸಂವಾದೇ "ವರಾಹಮಂತ್ರಾರಾಧನವಿಧಿವರ್ಣನಂ"
ನಾಮ ದ್ವಿತೀಯೋಽಧ್ಯಾಯಃ

---

೨೫. ಇದನ್ನು ಕೇಳಿ ಪ್ರೀತಿಗೊಂಡ ಭೂದೇವಿಯು ಮತ್ತೆ ನಾಥನಾದ ವರಾಹನನ್ನು ಕೇಳಲುಪಕ್ರಮಿಸಿದಳು.

೨೬. "ಎಲೈ ಸ್ವಾಮಿಯೇ! ವೇಂಕಟಾಚಲವೆಂದು ಪ್ರಖ್ಯಾತವಾಗಿರುವ ಈ ಮಹಾ ಪರ್ವತಕ್ಕೆ ಲೋಕನಾಯಕನೂ, ದೇವಾಧಿದೇವನೂ, ನಿಷ್ಪಾಪನೂ, ಶ್ರೀಭೂದೇವಿಯರೊಡನಿರುವವನೂ ಆದ ಶ್ರೀನಿವಾಸನು ಯಾವಾಗ ಬರುವನು?

೨೭. ಆ ಮಹಾವಿಷ್ಣುವು ಕಲ್ಪಾಂತರಗಳಲ್ಲಿಯೂ ಶಾಶ್ವತನಾಗಿ ಹೇಗೆ ನಿಲ್ಲುವನು? ನಾಥಾ! ಇದನ್ನು ನನಗೆ ತಿಳಿಸು. ಈ ವಿಷಯದಲ್ಲಿ ನನಗೆ ಅತ್ಯಂತವಾದ ಕುತೂಹಲವುಂಟಾಗಿರುವುದು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೆಂಕಟಾಚಲ
ಮಾಹಾತ್ಮ್ಯೆಯ ಧರಣೀ ವರಾಹ ಸಂವಾದದಲ್ಲಿ "ವರಾಹಮಂತ್ರಾರಾದನವಿಧಿವರ್ಣನ"
ವೆಂಬ ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತೃತೀಯೋಽಧ್ಯಾಯಃ

ಅಗಸ್ತ್ಯಪ್ರಾರ್ಥನಯಾ ಭಗವತಃ ಸರ್ವಜನ ದೃಗ್ಗೋಚರತ್ವಾದಿವರ್ಣನಂ

ವರಾಹ ಉವಾಚ :—

ಹಂತ ತೇ ಕಥಯಿಷ್ಯಾಮಿ ಪುರಾವೃತ್ತಂ ವರಾನನೇ ।
ಶೃಣು ಪುಣ್ಯಂ ಮಹಾದೇವಿ ಸಭವಿಷ್ಯಂ ಸಹೋತ್ತರಂ ॥ ೧ ॥
ವೈವಸ್ವತೇಽಂತರೇ ದೇವಿ ಪೂರ್ವೇ ಕೃತಯುಗೇಽಂತರೇ ।
ವಾಯೋಸ್ತಪೋ ಮಹದ್ದೃಷ್ಟ್ವಾ ಶ್ರೀಭೂಮಿಸಹಿತೋಽನಘೇ ॥ ೨ ॥
ಆಗಚ್ಛಚ್ಛ್ರೀನಿವಾಸಶ್ಚ ಸ್ವಾಮಿಪುಷ್ಕರಿಣೀತಟೇ ।
ದಕ್ಷಿಣೇಽಸ್ಮಿನ್ಪುಣ್ಯತಮೇ ಆನಂದಾಖ್ಯವಿಮಾನಕೇ ॥ ೩ ॥
ವಸಿಷ್ಯತಿ ಚ ಶ್ರೀಕಾಂತೋ ವಾಯೋಃ ಪ್ರಿಯಕರೋ ಹರಿಃ ॥ ೪ ॥

ಧರಣ್ಯುವಾಚ :—

ಅದೃಶ್ಯೋ ಭಗವಾನ್ಮರ್ತ್ಯೈಃ ಕಥಂ ದೃಶ್ಯೋ ಭವಿಷ್ಯತಿ ॥ ೫ ॥
ಶ್ರೀನಿವಾಸೋಽಪಿ ದೇವೇಶೋ ಭವದ್ದಕ್ಷಿಣಪಾರ್ಶ್ವಗಃ ।
ಏತದ್ವದ ಸುರಾಧೀಶ ಜನೈರಾರಾಧ್ಯತೇ ಕಥಂ ॥ ೬ ॥

---

## ಕನ್ನಡದ ಅನುವಾದ

ಭಗವಂತನು ಅಗಸ್ತ್ಯಮುನಿಯ ಪ್ರಾರ್ಥನೆಯಂತೆ ಸಕಲ ಜನರಿಗೂ ಗೋಚರನಾದುದು

೧. ವರಾಹಸ್ವಾಮಿಯು ಹೇಳುತ್ತಾನೆ:— "ಪ್ರಸನ್ನಮುಖಳಾದ ದೇವಿಯೆ! ಮುನ್ನ ನಡೆದ ಪುಣ್ಯಚರಿತ್ರೆಯೊಂದನ್ನು ತಿಳಿಸುವೆನು. ಇನ್ನು ಮೇಲೆ ನಡೆಯಲಿರುವುದನ್ನೂ ಹೇಳುವೆನು. ಪುಣ್ಯತಮವಾದ ಈ ಕಥೆಯನ್ನು ಕೇಳುವವಳಾಗು.

೨–೩. ಈಗ ನಡೆಯುತ್ತಿರುವ ವೈವಸ್ವತಮನ್ವಂತರದಲ್ಲಿ ಹಿಂದಿನ ಮಹಾಯುಗದ ಕೃತಯುಗದಲ್ಲಿ ವಾಯುದೇವನು ನಾರಾಯಣನನ್ನು ಕುರಿತು ಮಹತ್ತರವಾದ ತಪಸ್ಸನ್ನು ಮಾಡುತ್ತಿರಲು ಶ್ರೀದೇವಿ ಭೂದೇವಿಯರೊಡನೆ ಶ್ರೀನಿವಾಸನು ಸ್ವಾಮಿಪುಷ್ಕರಿಣಿಯ ತೀರದಲ್ಲಿ ಆತನಿಗೆ ಪ್ರತ್ಯಕ್ಷನಾದನು.

೪. ಆ ತೀರ್ಥದ ದಕ್ಷಿಣತೀರದಲ್ಲಿ ಆನಂದವೆಂಬ ವಿಮಾನದಲ್ಲಿ ವಾಸಿಸುತ್ತ ಶ್ರೀನಿವಾಸನು ವಾಯುದೇವನಿಗೆ ಮಂಗಳವನ್ನುಂಟುಮಾಡುತ್ತ ನೆಲಸಿರುವನು."

೫–೬. ಭೂದೇವಿಯು ಪ್ರಶ್ನೆಮಾಡುತ್ತಾಳೆ:—"ಸಾಮಾನ್ಯ ಮಾನವರಿಗೆ ಅದೃಶ್ಯನಾದ ಪರಮಾತ್ಮನು ಇಲ್ಲಿ ಎಲ್ಲರಿಗೂ ದೃಗ್ಗೋಚರನಾಗುವುದೆಂತು?

ವರಾಹ ಉವಾಚ:—
ಅಗಸ್ತ್ಯೋಽಸ್ಮಿನ್ಸಮಾಸಾದ್ಯ ದೃಷ್ಟ್ವಾ ದೇವಂ ಸನಾತನಂ ।
ಆರಾಧ್ಯ ದ್ವಾದಶಾಬ್ದಂ ತಂ ಪ್ರೀಣಯಿತ್ವಾ ಪುನಃ ಪುನಃ ॥ ೭ ॥
ಯಯಾಚೇ ತತ್ರ ಸಾನ್ನಿಧ್ಯಂ ಭವಾನ್ದೃಶ್ಯೋ ಭವತ್ವಿತಿ ।
ಏವಮುಕ್ತೋ ಹೃಷೀಕೇಶಃ ಶ್ರೀಭೂಮಿಸಹಿತೋ ಧರೇ ॥ ೮ ॥
ಅಹಂ ದೃಶ್ಯೋ ಭವಿಷ್ಯಾಮಿ ತ್ವತ್ಕೃತೇ ಸರ್ವದೇಹಿನಾಂ ।
ಏತದ್ವಿಮಾನಂ ದೇವರ್ಷೇ ನ ದೃಶ್ಯಂ ಸ್ಯಾತ್ಕಥಂಚನ ॥ ೯ ॥
ಆಕಲ್ಪಾಂತಂ ಮುನೀಂದ್ರಾಸ್ಮಿನ್ದೃಶ್ಯೋಽಹಂ ನಾತ್ರ ಸಂಶಯಃ ।
ಮುನಿಸ್ತದ್ವಚನಂ ಶ್ರುತ್ವಾ ಪ್ರೀತಃ ಪ್ರಾಯಾತ್ಸ್ವಮಾಶ್ರಮಂ ॥ ೧೦ ॥
ತತಶ್ಚತುರ್ಭುಜೋ ದೇವಸ್ಸ ದೃಶ್ಯೋಽಭೂನ್ನರಾದಿಭಿಃ ।
ವಿಮಾನೇ ಮುನಿಚಿಂತ್ಯೇಽಸ್ಮಿನ್ನಾಸೀನಶ್ಚ ತಥೋತ್ತರಂ ॥ ೧೧ ॥
ಆರಾಧ್ಯಮಾನಃ ಸ್ಕಂದೇನ ವಾಯುನಾ ಸೇವಿತಃ ಸದಾ ।
ಏವಂಗತೇ ಮಹಾಕಾಲೇ ಚತುರ್ಯುಗ ಸಮನ್ವಿತೇ ॥ ೧೨ ॥

---

ದೇವತೆಗಳಿಗೆ ಒಡೆಯನಾದ ಶ್ರೀನಿವಾಸಮೂರ್ತಿಯು ನಿನ್ನ ಬಲಗಡೆಗೆ ನೆಲಸಿರುವನಲ್ಲವೆ. ಎಲೈ ದೇವನಾಯಕನೆ! ಆತನು ಜನರಿಂದ ಹೇಗೆ ಪೂಜೆಯನ್ನು ಕೈಕೊಳ್ಳುವನು?"

೭–೯. ವರಾಹನು ಹೇಳುತ್ತಾನೆ:—"ಒಮ್ಮೆ ಅಗಸ್ತ್ಯಮುನಿಯು ಈ ಕ್ಷೇತ್ರಕ್ಕೆ ಬಂದು ಅನಾದಿಯಾಗಿ ನೆಲಸಿರುವ ಶ್ರೀಮನ್ನಾರಾಯಣನನ್ನು ಕಂಡು ಹನ್ನೆರಡು ವರ್ಷಗಳ ಕಾಲ ಪೂಜಿಸಿ ಅನೇಕ ವಿಧವಾಗಿ ತೃಪ್ತಿಪಡಿಸಿ 'ಇಲ್ಲಿ ನಿನ್ನ ದರ್ಶನವು ಎಲ್ಲರಿಗೂ ಆಗಬೇಕು' ಎಂಬುದಾಗಿ ಪರಮಾತ್ಮನ ಸಾನ್ನಿಧ್ಯವನ್ನು ಬೇಡಿಕೊಂಡನು. ಎಲೌ ಭೂದೇವಿಯೆ! ಆಗ ನಾರಾಯಣನಿಂತೆಂದನು: ನಿನ್ನ ಪ್ರಾರ್ಥನೆಯನ್ನನುಸರಿಸಿ ಸಕಲ ಜೀವರ ಉದ್ಧಾರಕ್ಕಾಗಿ ನಾನು ಶ್ರೀಭೂದೇವಿಯರೊಡನೆ ಇಲ್ಲಿ ಪ್ರತ್ಯಕ್ಷನಾಗುತ್ತೇನೆ. ಎಲೈ ಅಗಸ್ತ್ಯನೆ! ಆದರೆ ನನ್ನ ಈ ಆನಂದವಿಮಾನವು ಮಾತ್ರ ಖಂಡಿತವಾಗಿಯೂ ಯಾರಿಗೂ ಕಾಣುವುದಿಲ್ಲ.

೧೦–೧೧. ಮುನೀಂದ್ರ! ಕಲ್ಪಾವಸಾನದವರೆಗೂ ನಾನು ಇಲ್ಲಿ ಪ್ರತ್ಯಕ್ಷನಾಗಿರುವೆನು. ಸಂದೇಹವಿಲ್ಲ.—ಪರಮಾತ್ಮನ ಈ ಮಾತುಗಳನ್ನು ಕೇಳಿ ಅಗಸ್ತ್ಯಮಹರ್ಷಿಯು ಅತ್ಯಂತ ಸಂತೋಷಯುಕ್ತನಾಗಿ ತನ್ನ ಆಶ್ರಮವನ್ನು ಕುರಿತು ತೆರಳಿದನು. ಅಂದಿನಿಂದ ದೇವದೇವನು ಜನರ ಕಣ್ಣುಗಳಿಗೂ ಕಾಣತೊಡಗಿದನಲ್ಲದೆ ಮುನಿಗಳ ಜ್ಞಾನನೇತ್ರಗಳಿಗೆ ಮಾತ್ರ ಕಾಣುವ ದಿವ್ಯ ವಿಮಾನದಲ್ಲಿಯೂ ಸುಖಾಸೀನನಾಗಿರುತ್ತಿದ್ದನು.

೧೨–೧೪. ಷಣ್ಮುಖಸ್ವಾಮಿಯಿಂದ ಪೂಜೆಯನ್ನು ಕೈಕೊಂಡು ವಾಯು

ಅಷ್ಟಾವಿಂಶೇ ತು ಸಂಜಾತೇ ದ್ವಾಪರಾಂತೇ ವಸುಂಧರೇ ।
ಯುದ್ಧೇ ಚ ಭಾರತೇಽತೀತೇ ತಿಷ್ಯೇ ಸತಿ ಯುಗೇ ತಥಾ ॥ ೧೩ ॥
ವಿಕ್ರಮಾರ್ಕಾದಯೋ ಭೂಪಾಃ ಶಕಾಃ ಶೂದ್ರಾದಯಸ್ತಥಾ ।
ಗಮಿಷ್ಯಂತಿ ಸ್ವರ್ಗಲೋಕಂ ಮಾಮಜ್ಞಾತ್ವಾ ವರಾನನೇ ॥ ೧೪ ॥
ತತಃ ಸೋಮಕುಲೋದ್ಭೂತೋ ಮಿತ್ರವರ್ಮಾ ಮಹಾರಥಃ ।
ತುಂಡೀರಮಂಡಲೇ ರಾಜಾ ನಾರಾಯಣಪುರೇ ವಸನ್ ॥ ೧೫ ॥
ಭವಿಷ್ಯತಿ ವರಾರೋಹೇ ಮಹಾಭಾಗ್ಯೋದಯೋ ಮಹಾನ್ ।
ತಸ್ಮಿಂಚ್ಛಾಸತಿ ಭೂಲೋಕಂ ಧರ್ಮೇಣ ಪೃಥಿವೀಪತೌ ।
ಅಕೃಷ್ಟಪಚ್ಯಾ ಪೃಥಿವೀ ಸರ್ವಸಸ್ಯವಿಭೂಷಣಾ ॥ ೧೬ ॥
ನಿರೀತಿಕೋಽಭವತ್ಸರ್ವೋ ಜನೋ ಧರ್ಮಸಮನ್ವಿತಃ ।
ತಸ್ಯ ಪತ್ನೀ ಸಮಭವತ್ಪಾಂಡ್ಯಕನ್ಯಾ ಮನೋರಮಾ ॥ ೧೭ ॥
ತಸ್ಯ ಜಜ್ಞೇ ಕುಲೋತ್ತಂಸೋ ವಿಯನ್ನಾಮಸುತೋಽಸ್ಯ ವೈ ॥ ೧೮ ॥

---

ದೇವರ ಸೇವೆಯನ್ನು ಕೈಕೊಳ್ಳುತ್ತಿರುವನು. ಇಂತು ಅನೇಕ ಮಹಾಯುಗಗಳನ್ನೊಳಕೊಂಡ ಮಹಾಕಾಲವು ಕಳೆಯಲು ಇಪ್ಪತ್ತೆಂಟನೆಯ ಚತುರ್ಯುಗದಲ್ಲಿ ದ್ವಾಪರದ ಕೊನೆಯಲ್ಲಿ ಮಹಾಭಾರತದ ಯುದ್ಧವು ಸಂಭವಿಸಿ ಕಲಿಯುಗವು ಪ್ರಾಪ್ತವಾಗಲು ವಿಕ್ರಮಾರ್ಕನೇ ಮೊದಲಾದ ಮಹಾರಾಜರೂ, ಶಕರೂ, ಶೂದ್ರಾದಿಗಳೂ ನನ್ನನ್ನು ನೋಡದೆಯೇ ಸ್ವರ್ಗವನ್ನು ಕುರಿತು ಹೊರಡುವರು.

೧೫. ಕೆಲವು ಕಾಲದಮೇಲೆ ಚಂದ್ರವಂಶದಲ್ಲಿ ಹುಟ್ಟಿದ ಮಿತ್ರವರ್ಮನೆಂಬ ಮಹಾರಥಿಕನು ತೊಂಡಮಾನ ರಾಜ್ಯದಲ್ಲಿ ನಾರಾಯಣಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅಲ್ಲಿ ವಾಸಮಾಡುವನು.

೧೬. ಓ ಪೃಥುನಿತಂಬಿನಿ, ದೇವೀ! ಆ ಮಹಾತ್ಮನು ಅತ್ಯಂತ ಭಾಗ್ಯವಂತನಾಗಿ ಕೀರ್ತಿಯನ್ನು ಪಡೆಯುವನು. ಆತನು ಧರ್ಮದಿಂದ ರಾಜ್ಯಭಾರವನ್ನು ನಡೆಸುತ್ತಿರಲು ಭೂಮಿಯು ಸಾಗುವಳಿಯಿಲ್ಲದೆಯೇ ಸಕಲ ಧಾನ್ಯಗಳನ್ನೂ ಕೊಡುವುದಲ್ಲದೆ ಸಕಲ ವೃಕ್ಷಗಳಿಂದಲಂಕೃತವಾಗುವುದು.

೧೭. ಜನರೆಲ್ಲರೂ ಧರ್ಮದಲ್ಲಿಯೇ ನಿರತರಾಗಿ ಯಾವ ವಿಧಗಳಾದ ಈತಿ ಬಾಧೆಗಳಿಂದಲೂ ಹಿಂಸಿಸಲ್ಪಡುವುದಿಲ್ಲ. ಆತನಿಗೆ ಪಾಂಡ್ಯರಾಜನ ಪುತ್ರಿಯಾದ ಮನೋರಮೆಯೆಂಬಾಕೆಯು ಸಹಧರ್ಮಿಣಿಯಾಗಿರುವಳು.

೧೮. ಆತನಿಗೆ ವಂಶೋದ್ಧಾರಕನಾದ ಆಕಾಶರಾಜನೆಂಬುವನು ಮಗನಾಗಿ ಹುಟ್ಟಿದನು.

ತಸ್ಯ ಪತ್ನೀ ತು ಧರಣೀ ನಾಮ್ನಾಸೀಚ್ಛುಕವಂಶಜಾ ॥ ೧೯ ॥
ತಸ್ಮಿನ್ರಾಜ್ಯಂ ವಿನಿಕ್ಷಿಪ್ಯ ಮಿತ್ರವರ್ಮಾ ನೃಪೋತ್ತಮಃ ।
ಯಯೌ ತಪೋವನಂ ಪುಣ್ಯಂ ವೇಂಕಟಾದ್ರೇಃ ಸಮೀಪತಃ ॥ ೨೦ ॥
ಆಕಾಶನಾಮಾ ತು ಮಹಾನ್ರಾಜಾಭೂತ್ಸಾರ್ವಭೌಮಕಃ ।
ಏಕದಾರವ್ರತೋ ರಾಜಾ ಧರಣೀಸಕ್ತಚೇತನಃ ॥ ೨೧ ॥
ಯಜ್ಞಾರ್ಥಂ ಶೋಧಯಾಮಾಸ ಭುವಮಾರಣಿತೀರತಃ ।
ಕಾಂಚನೇನ ಹಲೇನೈವ ಕೃಷ್ಯಮಾಣೇ ಧರಾತಲೇ ॥ ೨೨ ॥
ಬೀಜಮುಷ್ಟಿಂ ವಿಕಿರತಾ ದೃಷ್ಟಾ ಕನ್ಯಾ ಧರೋದ್ಗತಾ ।
ಪದ್ಮಶಯ್ಯಾಗತಾ ರಮ್ಯಾ ಸರ್ವಲಕ್ಷಣಲಕ್ಷಿತಾ ॥ ೨೩ ॥
ತಪ್ತಜಾಂಬೂನದಮಯೀಂ ಪುತ್ರಿಕೇವ ವಿರಾಜತೀಂ ।
ತಾಂ ದೃಷ್ಟ್ವಾ ಸ ಮಹೀಪಾಲೋ ವಿಸ್ಮಯೋತ್ಫುಲ್ಲಲೋಚನಃ ॥ ೨೪ ॥
ಆದಾಯ ತನಯಾ ಚೇಯಂ ಮಮೈವೇತಿ ಪುನಃ ಪುನಃ ।
ಜಹರ್ಷ ಮಂತ್ರಿಭಿಶ್ಚೈನಂ ಪ್ರಾಹ ವಾಗಶರೀರಿಣೀ ॥ ೨೫ ॥

---

೧೯–೨೦. ಆ ಆಕಾಶರಾಜನಿಗೆ ಶಕವಂಶೋತ್ಪನ್ನೆಯಾದ ಧರಣೀದೇವಿಯೆಂಬುವಳು ಪತ್ನಿಯಾದಳು. ರಾಜರಾಜನಾದ ಮಿತ್ರವರ್ಮನು ಮಗನಿಗೆ ರಾಜ್ಯಭಾರವನ್ನು ವಹಿಸಿಕೊಟ್ಟು ವೆಂಕಟಾಚಲದ ಸಮೀಪದಲ್ಲಿದ್ದ ಪರಮ ಪಾವನವಾದ ತಪೋವನವನ್ನು ಕುರಿತು ಹೊರಡುವವನಾದನು.

೨೧. ಬಳಿಕ ಆಕಾಶರಾಜನು ಮಹಾ ವಿಭವದಿಂದ ರಾಜ್ಯವನ್ನಾಳುತ್ತ ಅಧೀನ ರಾಜರಿಗೆಲ್ಲ ಸಾರ್ವಭೌಮನಾಗಿದ್ದನು. ಏಕಪತ್ನೀವ್ರತವನ್ನು ನಡೆಸುವವನಾಗಿ ಆತನು ಧರಣೀದೇವಿಯಲ್ಲಿಯೇ ನೆಟ್ಟ ಮನಸ್ಸುಳ್ಳವನಾಗಿದ್ದನು.

೨೨. ಕೆಲವು ಕಾಲಾನಂತರ ಮಹಾಯಜ್ಞವನ್ನು ಮಾಡಲೆಳಸಿ ಆ ರಾಜನು ಆರಣೀ ತೀರದಲ್ಲಿ ಯಜ್ಞವಾಟಕ್ಕಾಗಿ ಭೂಮಿಯನ್ನು ಶೋಧಿಸಲು ಚಿನ್ನದ ನೇಗಿಲಿನಿಂದ ಉಳುತ್ತಿದ್ದನು.

೨೩. ಅವನು ಹಿಡಿಯಿಂದ ಧಾನ್ಯಗಳನ್ನು ಚೆಲ್ಲುತ್ತಿರಲು ಭೂಮಿಯಲ್ಲಿ ಒಂದು ತಾವರೆಯೂ ಅದರಲ್ಲಿ ಮನೋಹರವೂ ಸಕಲಲಕ್ಷಣಲಕ್ಷಿತವೂ ಆದ ಸ್ತ್ರೀ ಶಿಶುವು ಮಲಗಿರುವುದೂ ಕಂಡುಬಂದಿತು.

೨೪–೨೫. ಪುಟಕ್ಕೆ ಹಾಕಿದ ಚಿನ್ನದ ಪುತ್ಥಳಿಯಂತೆ ಆ ಮಗುವು ರಂಜಿಸುತ್ತಿದ್ದಿತು. ಅದನ್ನು ಕಂಡು ಮಹಾರಾಜನು ಸಂಭ್ರಮದಿಂದ ಅರಳಿದ ಕಣ್ಣುಗಳುಳ್ಳವನಾಗಿ ಎತ್ತಿಕೊಂಡು ತನ್ನ ಮಗಳೆಂದೇ ಭಾವಿಸಿಕೊಂಡು ಅಪರಿಮಿತಾನಂದವನ್ನು ಹೊಂದುತ್ತಿದ್ದನು. ಆಗ ಮಂತ್ರಿಗಳೊಡನಿದ್ದ ಆತನಿಗೆ ಅಶರೀರವಾಣಿಯು ಈ ರೀತಿ ಹೇಳತೊಡಗಿತು.

ಸತ್ಯಂ ತವೈವ ತನಯಾ ವರ್ಧಯಸ್ವ ಸುಲೋಚನಾಂ ।
ತತಃ ಪ್ರೀತಮನಾ ರಾಜಾ ಸ್ವಪುರಂ ಪ್ರವಿವೇಶ ಹ ॥ ೨೬ ॥
ಆಹೂಯ ಧರಣೀಂ ದೇವೀಮಿದಮಾಹ ಮಹೀಪತಿಃ ।
ದೇವದತ್ತಾಮಿಮಾಂ ಪಶ್ಯ ಭೂತಲಾದುತ್ಥಿತಾಂ ಮಮ ॥ ೨೭ ॥
ಆವಾಭ್ಯಾಂ ತದಪುತ್ರಾಭ್ಯಾಂ ಪುತ್ರೀಯಂ ಭಾವಿತಾ ಧ್ರುವಂ ।
ಇತ್ಯುಕ್ತ್ವಾ ಪ್ರದದೌ ದೇವ್ಯಾ ಹಸ್ತೇ ಪ್ರೀತ್ಯಾ ವಿಯನ್ನೃಪಃ ॥ ೨೮ ॥
ತಸ್ಯಾಂ ಗೃಹಂ ಪ್ರವಿಷ್ಟಾಯಾಂ ಧರಣೀ ಗರ್ಭಮಾದಧೌ ।
ವಿಯನ್ನೃಪಶ್ಚ ಸುಪ್ರೀತೋ ವೀಕ್ಷ್ಯ ಸ್ನಿಗ್ಧವಿಲೋಚನಾಂ ॥ ೨೯ ॥
ಉವಾಚ ಫಲಿತಾ ಸುಭ್ರೂರ್ಲತಾ ಸಂತಾನಿಕೀ ಚ ಮೇ ॥ ೩೦ ॥
ಅಥ ಸಾ ಧರಣೀ ದೇವೀ ಕಾಲೇ ಕಮಲಲೋಚನಾ ।
ಸುಪ್ರಶಸ್ತೇ ಮುಹೂರ್ತೇ ಚ ಸ್ವೋಚ್ಚಸಂಸ್ಥೇಷು ಪಂಚಸು ।
ಗ್ರಹೇಷು ಸುಷುವೇ ಪುತ್ರಂ ಮೇಷಸ್ಥೇ ಚ ದಿವಾಕರೇ ॥ ೩೧ ॥
ದೇವದುಂದುಭಯೋ ನೇದುಃ ಪುಷ್ಪವೃಷ್ಟಿರ್ಗೃಹೇಽಪತತ್ ।
ವವೌ ವಾಯುಸ್ಸುಖಸ್ಪರ್ಶೋ ತಜ್ಜನ್ಮದಿವಸೇ ತದಾ ॥ ೩೨ ॥

---

೨೬. 'ಈಕೆಯು ನಿಜವಾಗಿಯೂ ನಿನಗೆ ಮಗಳೇ ಸರಿ. ವಿಶಾಲನೇತ್ರೆಯಾದ ಈಕೆಯನ್ನು ಪೋಷಿಸುತ್ತಿರು.' ಈ ಮಾತುಗಳಿಂದ ಸಂತೋಷಗೊಂಡ ಮನಸ್ಸುಳ್ಳವನಾಗಿ ಮಹಾರಾಜನು ತನ್ನ ರಾಜಧಾನಿಯನ್ನು ಪ್ರವೇಶಿಸಿದನು.

೨೭. ಆತನು ತನ್ನ ಪತ್ನಿಯಾದ ಧರಣೀದೇವಿಯನ್ನು ಕರೆದು ಇಂತೆಂದನು :—'ದೇವತೆಗಳಿಂದ ಅನುಗ್ರಹಿಸಲ್ಪಟ್ಟ ನನಗೆ ಭೂಮಿಯಲ್ಲಿ ದೊರೆತ ಈ ಕನ್ಯಾರತ್ನವನ್ನು ನೋಡು.

೨೮. ಮಕ್ಕಳಿಲ್ಲದ ನಮ್ಮಿಬ್ಬರಿಗೂ ಇವಳು ನಿಜವಾಗಿಯೂ ಪುತ್ರಿಯಾಗಿರುವಳು.' ಇಂತೆಂದು ಆಕಾಶರಾಜನು ಆ ಶಿಶುರತ್ನವನ್ನು ಪ್ರೀತಿಯಿಂದ ದೇವಿಯ ಕೈಗಳಲ್ಲಿಟ್ಟನು.

೨೯–೩೦. ಆ ಶಿಶುವು ಮನೆಗೆ ಬಂದೊಡನೆಯೇ ಧರಣೀದೇವಿಯು ಗರ್ಭವನ್ನು ತಳೆದಳು. ಆಕಾಶರಾಜನೂ ಕೂಡ ಪ್ರೀತಿಯಿಂದ ಚಾರುಲೋಚನೆಯಾದ ಪತ್ನಿಯನ್ನು ಕಂಡು, 'ಎಲೌ ಸುಭ್ರುವೆ! ನಮ್ಮ ಸಂತಾನಲತೆಯು ಫಲಪ್ರದವಾಗುವ ಸಮಯವೊದಗಿದೆ' ಎಂಬುದಾಗಿ ಹೇಳಿದನು.

೩೧. ಬಳಿಕ ಸಕಾಲದಲ್ಲಿ ಪದ್ಮನೇತ್ರೆಯಾದ ದೇವಿಯು ಐದು ಗ್ರಹಗಳು ಉಚ್ಚಸ್ಥಾನಗಳಲ್ಲಿದ್ದು ಸೂರ್ಯನು ಮೇಷರಾಶಿಸ್ಥನಾಗಿದ್ದ ಸುಮುಹೂರ್ತದಲ್ಲಿ ಪುತ್ರರತ್ನವನ್ನು ಪಡೆದಳು.

೩೨. ದೇವತೆಗಳು ದುಂದುಭಿಗಳನ್ನು ಮೊಳಗಿಸಿದರು. ಅರಮನೆಯಲ್ಲಿ

ಪುತ್ರಪ್ರಸೂತಿವಕ್ತೄಣಾಂ ಸುಪ್ರೀತಃ ಪುತ್ರಜನ್ಮನಿ ।
ಸರ್ವಸ್ವದಾನಮಕರೋಚ್ಛತ್ರಚಾಮರವರ್ಜಿತಂ ॥ ೩೩ ॥
ಕಪಿಲಾಕೋಟಿದಾನಂ ಚ ವೃಷಭಾಣಾಂ ಶತಾಧಿಕಂ ।
ದಿವಸೇ ದ್ವಾದಶೇ ಪುಣ್ಯೇ ಜಾತಕರ್ಮಾದಿಕಾಃ ಕ್ರಿಯಾಃ ।
ಚಕಾರ ನಾಮಧೇಯಂ ಚ ವಸುದಾನ ಇತಿ ಸ್ವಯಂ ॥ ೩೪ ॥
ಆಕಾಶತನಯೋ ದೇವಿ ವಸುದಾನೋ ಮನೋರಮಃ ।
ವವೃಧೇ ದಿವಸೈರ್ಬಾಲಃ ಶುಕ್ಲಪಕ್ಷ ಇವೋಡುರಾಟ್ ॥ ೩೫ ॥
ಉಪನೀತೋ ವಿನೀತೋಽಸೌ ಗುರುಭಿರ್ಬ್ರಹ್ಮಪಾರಗೈಃ ।
ಪಿತುರಸ್ತ್ರಾಣಿ ಶಸ್ತ್ರಾಣಿ ಮಂತ್ರವಿತ್ಸೋಽಪ್ಯಶಿಕ್ಷತ ॥ ೩೬ ॥
ಚತುಷ್ಪಾದಂ ಧನುರ್ವೇದಂ ಸಾಂಗೋಪಾಂಗಮಧೀತವಾನ್ ।
ಪಿತಾ ತೇನಾತಿಬಲಿನಾ ದುರಾಧರ್ಷಃ ಪರೈರಭೂತ್ ॥ ೩೭ ॥

---

ಪೂಮಳೆಯಾಯಿತು. ಆ ಶಿಶುವಿನ ಜನ್ಮದಿವಸದಲ್ಲಿ ವಾಯುವೂ ಕೂಡ ಸುಖಸ್ಪರ್ಶವುಳ್ಳುದಾಗಿ ಬೀಸತೊಡಗಿತು.

೩೩. ಆಕಾಶರಾಜನಾದರೊ ಪುತ್ರೋತ್ಸವದಿಂದ ಸುಪ್ರೀತನಾಗಿ ಶುಭ ಸಮಾಚಾರವನ್ನು ತನಗೆ ತಿಳಿಸಿದ ಜನರಿಗೆ ಛತ್ರಚಾಮರಗಳೆರಡನ್ನು ಮಾತ್ರ ಬಿಟ್ಟು ತನ್ನ ಸರ್ವಸ್ವವನ್ನೂ ದಾನಮಾಡಿದನು.

೩೪. ಬಳಿಕ ಹನ್ನೆರಡನೆಯ ದಿನದಲ್ಲಿ ಕೋಟಿ ಕಪಿಲ ಗೋವುಗಳನ್ನೂ ನೂರಕ್ಕೆ ಮೇಲ್ಪಟ್ಟ ಹೋರಿಗಳನ್ನೂ ದಾನಮಾಡಿ ಮಗನಿಗೆ ಜಾತಕರ್ಮವೇ ಮೊದಲಾದ ಸಂಸ್ಕಾರಗಳನ್ನು ನಡೆಸಿ ತಾನೇ ವಸುದಾನನೆಂಬ ಹೆಸರನ್ನು ಕೊಟ್ಟನು.

೩೫. ಎಲೌ ಭೂದೇವಿಯೆ! ಆಕಾಶರಾಜನ ಮಗನಾದ ವಸುದಾನನು ಸಕಲರ ಮನಸ್ಸನ್ನೂ ಆಕರ್ಷಿಸುವವನಾಗಿ ದಿವಸಗಳು ಕಳೆದಂತೆಲ್ಲ ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿಯನ್ನು ಹೊಂದುತ್ತಿದ್ದನು.

೩೬. ಸಕಾಲದಲ್ಲಿ ಉಪನಯನವಾಗಲು ಅವನು ವಿನಯಾನ್ವಿತನಾಗಿ ವೇದನಿಷ್ಣಾತರಾದ ಆಚಾರ್ಯರಿಂದಲೂ, ತಂದೆಯಿಂದಲೂ ಅಸ್ತ್ರಶಸ್ತ್ರಗಳನ್ನೂ ಮಂತ್ರವಿದ್ಯೆಯನ್ನೂ ಕಲಿತನು.

೩೭. ನಾಲ್ಕು ಭಾಗಗಳುಳ್ಳ ಧನುರ್ವೇದವನ್ನು ಕೂಲಂಕಷವಾದ ರೀತಿಯಲ್ಲಿ ಅಧ್ಯಯನಮಾಡಿದನು. ಅತ್ಯಂತ ಬಲಿಷ್ಠನಾದ ಆತನ ಸಹಾಯದಿಂದ ತಂದೆಯಾದ ಆಕಾಶರಾಜನು ಶತ್ರುರಾಜರಿಗೆ ಅಜೇಯನಾಗಿದ್ದನು.

ಆಕಾಶ ಇವ ನಿಷ್ಪಂಕೋ ಗ್ರೀಷ್ಮೇ ಭಾನುಮತಾ ಯುತಃ ।
ವೈಶಾಖ ಇವ ಮಧ್ಯಾಹ್ನೇ ದುಸ್ಸಹೋ ದುರ್ನಿರೀಕ್ಷ್ಯಕಃ ॥ ೩೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹಸಂವಾದೇ
"ಅಗಸ್ತ್ಯಪ್ರಾರ್ಥನಯಾ ಭಗವತಃ ಸರ್ವಜನ ದೃಗ್ಗೋಚರತ್ವಾದಿವರ್ಣನಂ"
ನಾಮ ತೃತೀಯೋಽಧ್ಯಾಯಃ

---

೩೮. ಆ ದೊರೆಯು ಗ್ರೀಷ್ಮಋತುವಿನಲ್ಲಿ ಸೂರ್ಯನೊಡಗೂಡಿದ ಆಕಾಶದಂತೆ ನಿಷ್ಕಲ್ಮಷನೂ, ತೇಜಸ್ಸಿನಿಂದ ವೈಶಾಖಮಾಸದ ಮಧ್ಯಾಹ್ನದ ಸೂರ್ಯನಂತೆ ಸಹಿಸುವುದಕ್ಕೂ ನೋಡುವುದಕ್ಕೂ ಅಶಕ್ಯನೂ ಆಗಿದ್ದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೆಂಕಟಾಚಲ
ಮಾಹಾತ್ಮ್ಯೆಯ ಧರಣೀ ವರಾಹ ಸಂವಾದದಲ್ಲಿ "ಭಗವಂತನು ಅಗಸ್ತ್ಯಮುನಿಯ
ಪ್ರಾರ್ಥನೆಯಂತೆ ಸಕಲ ಜನರಿಗೂ ಗೋಚರನಾದುದು" ಎಂಬ
ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ಥೋಽಧ್ಯಾಯಃ

### ನಾರದಾಗಮನಂ— ಶ್ರೀನಿವಾಸ ಮೃಗಯಾವಿಹಾರವರ್ಣನಂ

ಧರಣ್ಯುವಾಚ :—

ಉಕ್ತ್ತಂ ಭಗವತಾ ತಸ್ಯ ವಿಯತುತ್ಪುತ್ರಸ್ಯ ನಾಮ ಚ ।
ಅಯೋನಿಜಾಯಾಸ್ತತ್ಪುತ್ರ್ಯಾಃ ಕಿಂ ನಾಮ ಚ ತದಾಕರೋತ್ ॥ ೧ ॥
ಇತಿ ಪೃಷ್ಟಃ ಪುನಃ ಪ್ರಾಹ ಶ್ರೀವರಾಹೋ ಜಗತ್ಪತಿಃ ॥ ೨ ॥
ಆಕಾಶರಾಜೋ ಮತಿಮಾಂಸ್ತಾಂ ದೃಷ್ಟ್ವಾ ಕಮಲೇಶಯಾಂ ।
ಪದ್ಮಿನೀತಿ ಚ ನಾಮ್ನಾ ವೈ ಚಕಾರ ವಸುಧಾಸುತಾಂ ॥ ೩ ॥
ತಾಂ ತು ಯೌವನಸಂಪನ್ನಾಂ ಸಖೀಭಿಃ ಪರಿವಾರಿತಾಂ ॥ ೪ ॥
ಆರಾಮೇ ವಿಹರಂತೀಂ ಚ ಶುಕಕೋಕಿಲನಾದಿತೇ ।
ಯದೃಚ್ಛಯಾಗತಸ್ತತ್ರ ನಾರದೋ ಮುನಿಸತ್ತಮಃ ॥ ೫ ॥
ವನಲಕ್ಷ್ಮೀಮಿವಾಲಕ್ಷ್ಯ ವಿಸ್ಮಯಾದಿದಮಬ್ರವೀತ್ ॥ ೬ ॥

---

### ಕನ್ನಡದ ಅನುವಾದ

#### ನಾರದಾಗಮನ — ಶ್ರೀನಿವಾಸನ ಮೃಗಯಾವಿಹಾರವರ್ಣನ

೧. ಧರಣೀದೇವಿಯು ಹೇಳುತ್ತಾಳೆ:—"ಭಗವಂತನಾದ ನೀನು ಆಕಾಶ ರಾಜನ ಮಗನ ಹೆಸರನ್ನು ತಿಳಿಸಿದೆಯಷ್ಟೆ. ಅಯೋನಿಜೆಯಾದ ತನ್ನ ಹೆಣ್ಣು ಮಗಳಿಗೆ ಏನು ಹೆಸರನ್ನಿಟ್ಟನು ?"

೨–೩. ಇಂತೆಂದು ಕೇಳಲ್ಪಟ್ಟ ಶ್ರೀ ವರಾಹಸ್ವಾಮಿಯು ಹೇಳತೊಡಗಿದನು :—ಪದ್ಮದಲ್ಲಿ ಮಲಗಿದ್ದ ಆ ಬಾಲಿಕೆಯನ್ನು ಕಂಡು ಬುದ್ಧಿವಂತನಾದ ಆಕಾಶರಾಜನು ಭೂಮಿಯಲ್ಲಿ ದೊರೆತ ಆಕೆಗೆ ಪದ್ಮಾವತಿಯೆಂಬ ಸೊಗಸಾದ ಹೆಸರನ್ನು ಕೊಟ್ಟನು.

೪–೫. ಕಾಲಕ್ರಮದಲ್ಲಿ ಆಕೆಯು ಯೌವನವಂತಳಾಗಲು ಒಂದಾನೊಂದು ದಿನ ಸಖಿಯರಿಂದ ಸುತ್ತುವರೆಯಲ್ಪಟ್ಟು, ಗಿಳಿ, ಕೋಗಿಲೆಗಳ ಧ್ವನಿಗಳಿಂದ ತುಂಬಿರುವ ಉದ್ಯಾನವನದಲ್ಲಿ ವಿಹರಿಸುತ್ತಿದ್ದ ಆಕೆಯನ್ನು ಯಾದೃಚ್ಛಿಕವಾಗಿ ಅಲ್ಲಿಗೈತಂದ ನಾರದಮಹರ್ಷಿಯು ನೋಡಿದನು.

೬. ಆಕೆಯು ವನಲಕ್ಷ್ಮಿಯಂತೆ ಶೋಭಿಸುತ್ತಿದ್ದುದನ್ನು ಕಂಡು ವಿಸ್ಮಯಗೊಂಡು ಆ ಮುನಿಯಿಂತೆಂದನು :—

ಕಾಸಿ ಕಸ್ಯ ಸುತಾ ಭೀರು ಹಸ್ತಂ ದರ್ಶಯ ಮೇ ತವ ।
ಇತ್ಯುಕ್ತ್ವಾ ಸಾ ಸುಚಾರ್ವಂಗೀ ಸ್ವಾತ್ಮಾನಂ ಮುನಯೇಽಬ್ರವೀತ್ ॥ ೭ ॥
ವಿಜಯದ್ರಾಜಸುತಾ ಬ್ರಹ್ಮಂಲ್ಲಕ್ಷಣಾನಿ ವದಸ್ವ ಮೇ ।
ಇತ್ಯುಕ್ತಃ ಸ ತದಾ ಪ್ರಾಹ ನಾರದೋ ಮುನಿಸತ್ತಮಃ ॥ ೮ ॥
ಶೃಣು ತ್ವಂ ಚಾರುವದನೇ ಲಕ್ಷಣಾನಿ ವದಾಮಿ ತೇ ।
ಪಾದೌ ಪ್ರತಿಷ್ಠಿತೌ ಸುಭ್ರು ರಕ್ತಪದ್ಮದಳಾನ್ವಿತೌ ॥ ೯ ॥
ಪಾದಾಂಗುಲ್ಯಸ್ಸಮಾ ರಕ್ತಾ ರಕ್ತತುಂಗನಖಾನ್ವಿತಾಃ ।
ಗುಲ್ಫೌ ಗೂಢೌ ಸಮಾವೇತೌ ಜಂಘೇ ಚಾರೋಮಶೇ ಶುಭೇ ॥ ೧೦ ॥
ಜಾನುನೀ ಸಮಸುಸ್ನಿಗ್ಧೇ ಸಮಾವೂರೂ ಕ್ರಮಾದುರೂ ।
ನಿತಂಬೌ ಪೃಥುಲೌ ಪೀನೌ ಜಘನಂ ಸ್ನಿಗ್ಧಮೇವ ಹಿ ॥ ೧೧ ॥
ನಾಭಿರ್ಮಂಡಲವಾನ್ನಿಮ್ನಃ ಪಾರ್ಶ್ವೌ ತೇ ಮೇದುರಾವುಭೌ ।
ತ್ರಿವಲೀಲಲಿತಂ ಮಧ್ಯಂ ರೋಮರಾಜಿವಿರಾಜಿತಂ ॥ ೧೨ ॥

---

೭. "ಎಲೈ ಭೀರುವೆ ನೀನಾರು ? ಯಾರ ಮಗಳು ? ಎಲ್ಲಿ ; ನಿನ್ನ ಕೈಯನ್ನು ತೋರು." ಇಂತೆಂದ ನಾರದನಿಗೆ ಸುಂದರರೂಪಳಾದ ಆ ಕನ್ಯಕೆಯು ತನ್ನ ವಿಷಯವನ್ನು ಹೀಗೆ ಹೇಳಿಕೊಂಡಳು.

೮. "ಎಲೈ ಬ್ರಾಹ್ಮಣನೆ! ನಾನು ಆಕಾಶರಾಜನ ಪುತ್ರಿ. ನನ್ನ ಕೈಯನ್ನು ನೋಡಿ ಲಕ್ಷಣಗಳನ್ನು ತಿಳಿಸುವವನಾಗು." ಇಂತೆನ್ನಲು ಆ ಮುನಿ ಶ್ರೇಷ್ಠನಾದ ನಾರದನು ಹೇಳತೊಡಗಿದನು :—

೯–೧೦. "ಎಲೌ ಸುಂದರಮುಖಿಯೆ ! ನಿನ್ನ ಅವಯವಗಳ ಲಕ್ಷಣಗಳನ್ನು ತಿಳಿಸುವೆನು. ನಿನ್ನ ಅಂಗಾಲುಗಳು ಚೆನ್ನಾಗಿ ನೆಲಕ್ಕೆ ತಾಕುತ್ತ ಪದ್ಮರೇಖೆ ಗಳಿಂದೊಡಗೂಡಿರುವುವು. ಕಾಲ್ಬೆರಳುಗಳು ರಕ್ತವರ್ಣರಂಜಿತಗಳಾಗಿದ್ದು, ಕೆಂಪಾಗಿಯೂ, ಉನ್ನತವಾಗಿಯೂ ಇರುವ ಉಗುರುಗಳಿಂದ ಶೋಭಿಸುತ್ತಿರು ವುವು. ಮೇಗಾಲುಗಳು ತುಂಬಿಕೊಂಡು ಸಮಾನಪ್ರಮಾಣವುಳ್ಳುದಾಗಿರುವುವು. ಕಾಲುಗಳು ಕೂದಲುಗಳಿಲ್ಲದೆ ಶುಭಪ್ರದಗಳಾಗಿರುವುವು.

೧೧. ಮೊಣಕಾಲುಗಳು ಸಮವಾಗಿಯೂ ನುಣುಪಾಗಿಯೂ ಇರುವುವು. ಎರಡು ತೊಡೆಗಳೂ ದುಂಡಾಗಿ ಪರಸ್ಪರಸದೃಶಗಳಾಗಿರುವುವು. ನಿತಂಬಗಳು ಭಾರವಾಗಿಯೂ ದುಂಡಾಗಿಯೂ ಇರುವುವು. ಜಘನವೂ ಸ್ನಿಗ್ಧವಾಗಿಯೇ ಇರುವುದು.

೧೨. ನಾಭಿಯು ಮಂಡಲಾಕಾರವಾಗಿ ಆಳವಾಗಿರುವುದು. ಪಕ್ಕೆಗಳು ಮಾಂಸಲಗಳಾಗಿರುವುವು. ನಡುವು ತ್ರಿವಳಿಗಳಿಂದ ಕೂಡಿದುದಾಗಿ ಕೂದಲು ಗಳಿಂದ ರಾಜಿಸುತ್ತಿರುವುದು.

ಸ್ತನೌ ಪೀನೌ ಘನೌ ಸ್ನಿಗ್ಧೌ ಉನ್ನತೌ ಮಗ್ನಚೂಚುಕೌ ।
ಕರೌ ತೇ ರಕ್ತಪದ್ಮಾಭೌ ಪದ್ಮರೇಖಾಸಮನ್ವಿತೌ ॥ ೧೩ ॥
ಸುಸೂಕ್ಷ್ಮೌ ರಕ್ತಸತ್ಪರ್ವನಿರಂತರಸಮಾಂಗುಲೀ ।
ಶುಕತುಂಡಸಮಾಕಾರನಖಪಙ್ಕ್ತಿವಿರಾಜಿತೌ ।
ದೀರ್ಘೌ ಚ ಕೋಮಲೌ ಭದ್ರೇ ಭುಜೌ ತೇ ಪುಷ್ಪದಂಡವತ್ ॥ ೧೪ ॥
ಪೃಷ್ಠಂ ತೇ ವೇದಿವದ್ಭಾತಿ ವಿಲಗ್ನಂ ಋಜು ಮಧ್ಯಮಂ ।
ಕಂಠಸ್ತು ರಕ್ತೋ ದೀರ್ಘಶ್ಚ ಸ್ಕಂಧೌ ಚಾವನತೌ ಶುಭೇ ॥ ೧೫ ॥
ಮುಖಂ ಪ್ರಸನ್ನಂ ಸತತಮಕಲಂಕಶಶಿಪ್ರಭಂ ।
ಕಪೋಲೌ ಕನಕಾದರ್ಶಸದೃಶೌ ಕುಂಡಲೋಜ್ಜ್ವಲೌ ॥ ೧೬ ॥
ತಿಲಪುಷ್ಪಸಮಾಕಾರಾ ನಾಸಿಕಾ ತೇ ಶುಭಾನನೇ ।
ಅಕಲಂಕಾಷ್ಟಮೀಚಂದ್ರಸದೃಶೋಽತಿಮನೋಹರಃ ॥ ೧೭ ॥
ದೃಶ್ಯತೇಽಯಂ ಲಲಾಟಸ್ತೇ ನೀಲಾಲಕಸುಶೋಭಿತಃ ।
ಮೂರ್ಧಾ ತೇ ಸಮವೃತ್ತಶ್ಚ ಸ್ನಿಗ್ಧಾಯತಕಚಾನ್ವಿತಃ ॥ ೧೮ ॥

---

೧೩. ಸ್ತನಗಳು ದುಂಡಾಗಿಯೂ, ಭಾರವಾಗಿಯೂ, ಎಡೆಬಿಡದೆಯೂ, ಉನ್ನತಗಳಾಗಿಯೂ ಇದ್ದು ಚೂಚುಕಗಳು ಅಡಗಿರುವುವು. ನಿನ್ನ ಕೈಗಳು ಕೆಂದಾವರೆಗಳನ್ನು ಹೋಲುತ್ತ, ಅಂಗೈಗಳಲ್ಲಿ ಪದ್ಮರೇಖೆಗಳನ್ನೊಳಗೊಂಡಿರುವುವು.

೧೪. ಹಸ್ತಗಳು ಕೋಮಲಗಳಾಗಿ ಅಂತರವಿಲ್ಲದೆ ಸಮಗಳಾದ ಬೆರಳುಗಳಿಂದ ಕೂಡಿರುವುವು. ಬೆರಳುಗಳು ಗಿಳಿಯ ಮೂಗಿನ ಆಕಾರದ ಉಗುರುಗಳಿಂದ ವಿರಾಜಿಸುತ್ತಿರುವುವು. ಎಲೌ ಮಂಗಳಾಂಗಿಯೆ! ನಿನ್ನ ಬಾಹುಗಳು ಹೂದಂಡೆಗಳಂತೆ ಉದ್ದವಾಗಿಯೂ ದುಂಡಾಗಿಯೂ ಇರುವುವು.

೧೫. ಪೃಷ್ಠಭಾಗವು ಯಜ್ಞವೇದಿಯಂತೆ ಕಾಣುತ್ತಿರುವುದಲ್ಲದೆ ಮಧ್ಯದಲ್ಲಿ ಬೇರ್ಪಟ್ಟು ಋಜುವಾಗಿರುವುದು. ಕಂಠವು ಕೆಂಪಗೆ ನೀಳವಾಗಿರುವುದು. ಹೆಗಲುಗಳು ಹೊರಕ್ಕೆ ಬಾಗಿರುವುವು.

೧೬. ಮುಖವು ಯಾವಾಗಲೂ ಪ್ರಸನ್ನವಾಗಿ ನಿಷ್ಕಲ್ಮಷನಾದ ಚಂದ್ರನಂತೆ ಹೊಳೆಯುತ್ತಿರುವುದು. ಕೆನ್ನೆಗಳು ಚಿನ್ನದ ಕೈಗನ್ನಡಿಗಳನ್ನು ಹೋಲುತ್ತ ಕಿವಿಯೋಲೆಗಳಿಂದ ಮೆರೆಯುತ್ತಿರುವುವು.

೧೭–೧೮. ಎಲೌ ಶುಭಾನನೆಯೆ! ನಿನ್ನ ಮೂಗು ತಿಲಪುಷ್ಪಕ್ಕೆ ಸಮಾನವಾದ ಆಕಾರವುಳ್ಳುದಾಗಿರುವುದು. ನಿನ್ನ ಹಣೆಯು ನಿಷ್ಕಳಂಕನಾದ ಅಷ್ಟಮೀ ಚಂದ್ರನಂತೆ ಮನೋಹರವಾಗಿದ್ದು ಕಪ್ಪು ಮುಂಗುರುಳುಗಳಿಂದ ಶೋಭಿತ

ಸ್ಮಿತಸಂಶೋಭಿದಶನಂ ಬಿಂಬಾಧರಸಮನ್ವಿತಂ ।
ಮುಖಂ ತೇ ವಿಷ್ಣುಯೋಗ್ಯಂ ಸ್ಯಾದಿತಿ ಮೇ ನಿಶ್ಚಿತಾ ಮತಿಃ ॥ ೧೯ ॥
ನಾಭಿಸ್ತೇ ದಕ್ಷಿಣಾವರ್ತ ಆವರ್ತ ಇವ ಗಾಂಗಜಃ ।
ತ್ವಂ ಹಿ ಕ್ಷೀರಾಬ್ಧಿಸಂಭೂತಾ ಲಕ್ಷ್ಮೀರಿವ ಹಿ ದೃಶ್ಯಸೇ ॥ ೨೦ ॥
ಇತ್ಯುಕ್ತ್ವಾ ಪೂಜಿತಸ್ತಾಭಿಃ ನಾರದೋಽಂತರ್ದಧೇ ತದಾ ।
ಏತಚ್ಛ್ರುತ್ವಾಥ ತತ್ಸಖ್ಯಸ್ತಾಮೂಚುಃ ಪದ್ಮಿನೀಂ ಸಖೀಂ ॥ ೨೧ ॥
ವನಂ ಗಚ್ಛಾಮ ಪುಷ್ಪಾರ್ಥಂ ವಸಂತಃ ಸಮುಪಾಗತಃ
ಕರ್ಣಿಕಾರಶ್ಚ ಚೂತಾಶ್ಚ ಚಂಪಕಾಃ ಪಾರಿಭದ್ರಕಾಃ ॥ ೨೨ ॥
ಪಲಾಶಾಃ ಪಾಟಲಾಃ ಕುಂದಾಃ ರಕ್ತಾಶೋಕಾಶ್ಚ ಪುಷ್ಪಿತಾಃ ।
ಪದ್ಮಿನ್ಯಃ ಸಿಂಧುವಾರಾಶ್ಚ ಮಾಲತ್ಯೋ ಯೂಥಿಕಾಲತಾಃ ॥ ೨೩ ॥
ಕಲ್ಹಾರಾ ಕರವೀರಾಶ್ಚ ಸಂಘರ್ಷಾದಿವ ಪುಷ್ಪಿತಾಃ ।
ಪುಷ್ಪಾಪಚಯನಂ ಕುರ್ಮೋ ವನೇಽಸ್ಮಿನ್ಸುಮನೋಹರೇ ॥ ೨೪ ॥

---

ವಾಗಿ ಕಾಣುತ್ತಿರುವುದು. ತಲೆಯು ಸಮವಾಗಿಯೂ ದುಂಡಗೂ ದಟ್ಟವಾಗಿ ಉದ್ದವಾಗಿ ಬೆಳೆದ ಕೂದಲುಗಳಿಂದ ಕೂಡಿದುದೂ ಆಗಿರುವುದು.

೧೯. ತೊಂಡೆಯ ಹಣ್ಣುಗಳಂತಿರುವ ನಿನ್ನ ತುಟಿಗಳ ಮಧ್ಯದಲ್ಲಿ ದಂತ ಪಙ್ತಿಯು ಮುಗುಳ್ನಗೆಯ ಸಮಯದಲ್ಲಿ ಶೋಭಿಸುತ್ತಿರುವುದು. ಈ ನಿನ್ನ ಮುಖಸೌಂದರ್ಯವು ನಿಜವಾಗಿಯೂ ಶ್ರೀಮನ್ನಾರಾಯಣನ ಉಪಭೋಗಕ್ಕೇ ಯೋಗ್ಯವಾಗಿರುವುದೆಂಬುದೇ ನನ್ನ ದೃಢನಿಶ್ಚಯವಾಗಿರುವುದು.

೨೦. ನಿನ್ನ ನಾಭಿಯು ಬಲಮುರಿ ಸುಳಿಯುಳ್ಳದಾಗಿ ಗಂಗಾಜಲದ ಸುಳಿಯಂತೆ ಆಳವಾಗಿರುವುದು. ನೀನು ನಿಜವಾಗಿಯೂ ಕ್ಷೀರಸಾಗರದಲ್ಲಿ ಜನಿಸಿದ ಮಹಾಲಕ್ಷ್ಮಿಯಂತೆಯೇ ತೋರುತ್ತಿರುವೆ.''

೨೧. ಇಂತೆಂದು ನಾರದನು ಆ ಕನ್ಯಕೆಯರಿಂದ ಸತ್ಕಾರವನ್ನು ಪಡೆದು ತಕ್ಷಣದಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಈ ಮಾತುಗಳನ್ನು ಕೇಳಿ ಆಕೆಯ ಸಖಿಯರು ಪದ್ಮಾವತಿಯನ್ನು ಕುರಿತು ಹೇಳತೊಡಗಿದರು :—

೨೨–೨೪. "ಹೂವುಗಳಿಗಾಗಿ ನಾವು ಕಾಡಿಗೆ ಹೋಗೋಣ. ಈಗ ವಸಂತ ಕಾಲವು ಸಂಪ್ರಾಪ್ತವಾಗಿರುವುದು. ಕಣಿಗಲು, ಮಾವು, ಸಂಪಗೆ, ದೇವದಾರು, ಮುತ್ತುಗ, ಪಾದರಿ, ಮಲ್ಲಿಗೆ, ಅಶೋಕ ಮುಂತಾದ ವೃಕ್ಷಗಳು ಪುಷ್ಪಿತಗಳಾಗಿರುವುವು. ಕಮಲಗಳು, ಚಂದನವೃಕ್ಷ, ಮಾಲತೀಲತೆ, ಜಾಜೀಲತೆ, ತಾವರೆ, ಕರವೀರ— ಇವುಗಳೆಲ್ಲವೂ ತಮ್ಮತಮ್ಮಲ್ಲಿಯೇ ಸ್ಪರ್ಧಿಸುತ್ತಿರುವಂತೆ ಪುಷ್ಪಭರಿತಗಳಾಗಿರುವುವು. ಇಂತು ಮನೋಹರವಾದವನದಲ್ಲಿ ಹೂವುಗಳನ್ನು ಕಿತ್ತುಕೊಂಡು ಬರೋಣ.

ಇತ್ಯುಕ್ತ್ವಾ ತಾ ವನಂ ಜಗ್ಮುರಾಕಾಶತನಯಾಯುತಾಃ ।
ಪುಷ್ಪಾಣ್ಯಾಹರಮಾಣಾಸ್ತು ವಿಚರಂತ್ಯಸ್ತತಃ ತತಃ ॥ ೨೫ ॥
ಕಂಚಿದ್ಗಜೇಂದ್ರಂ ದದೃಶುಃ ಶುಭ್ರದಂತದ್ವಯೋಜ್ಜ್ವಲಂ ॥ ೨೬ ॥
ಉನ್ನತಂ ಕರಿಣೀಯೂಥೈಸ್ಸಮುಪೇತಂ ರಜೋಜ್ಜ್ವಲಂ ।
ಫೂತ್ಕಾರಿಪುಷ್ಕರಪ್ರೋದ್ಯಚ್ಛೀಕರಾಪೂರಿತಾನನಂ ॥ ೨೭ ॥
ದೃಷ್ಟ್ವಾ ಚೋದ್ವಿಗ್ನಹೃದಯಾ ವನಸ್ಪತಿಮುಪಾಶ್ರಿತಾಃ ।
ಏತಸ್ಮಿನ್ನಂತರೇ ಚಾಶು ದದೃಶುರ್ಹಯಮುತ್ತಮಂ ॥ ೨೮ ॥
ಅಕಲಂಕೇಂದುಧವಲಂ ಜಾಂಬೂನದಪರಿಷ್ಕೃತಂ ।
ಸ್ಫುರದ್ವಿದ್ಯುಲ್ಲತಾಯುಕ್ತಶರನ್ಮೇಘಮಿವೋನ್ನತಂ ॥ ೨೯ ॥
ತಸ್ಮಿಂಸ್ತು ಪುರುಷಂ ಕೃಷ್ಣಂ ಮದನಾಕಾರವರ್ಚಸಂ ।
ಪುಂಡರೀಕದಳಾಕಾರಕರ್ಣಾಂತಾಯತಲೋಚನಂ ॥ ೩೦ ॥
ಸುಸೂಕ್ಷ್ಮಕೌಮಸಂವೀತನೀಲಚೂಲಿಕಯೋಜ್ಜ್ವಲಂ ।
ಪದ್ಮರಾಗಮಣಿದ್ಯೋತಿಸ್ಫುರತ್ಕನಕಕುಂಡಲಂ ॥ ೩೧ ॥

---

೨೫-೨೬. ಇಂತೆಂದು ಪದ್ಮಾವತೀ ದೇವಿಯೊಡನೆ ಅವರೆಲ್ಲರೂ ವನವನ್ನು ಕುರಿತು ಹೊರಟರು. ಅವರು ಹೂವುಗಳನ್ನು ಬಿಡಿಸುತ್ತ ಅಲ್ಲಿಯೇ ತಿರುಗಾಡುತ್ತಿರಲು ಬಿಳಿದಾದ ದಂತಗಳಿಂದ ಕೂಡಿದ ಒಂದಾನೊಂದು ಮದ್ದಾನೆಯು ಬರುತ್ತಿದ್ದುದನ್ನು ಕಂಡರು.

೨೭. ಅದು ಎತ್ತರವಾಗಿಯೂ, ಹೆಣ್ಣಾನೆಗಳಿಂದ ಸುತ್ತುವರೆಯಲ್ಪಟ್ಟುದಾಗಿಯೂ, ಮೈಯೆಲ್ಲ ಧೂಳಿಧೂಸರಿತವಾಗಿಯೂ, ಮೇಲಕ್ಕೆತ್ತಿ ಫೂತ್ಕರಿಸುತ್ತಿರುವ ಸೊಂಡಿಲಿನಿಂದ ಹೊರಹೊಮ್ಮುತ್ತಿರುವ ಜಲಬಿಂದುಗಳಿಂದ ತೊಯ್ದ ಮುಖವುಳ್ಳುದಾಗಿಯೂ ಕಾಣಿಸಿತು.

೨೮. ಇಂತಹ ಮದೋನ್ಮತ್ತವಾದ ಆನೆಯನ್ನು ಕಂಡು ಹೃದಯದಲ್ಲಿ ಉದ್ವೇಗವನ್ನು ತಾಳಿ ಸ್ತ್ರೀಯರೆಲ್ಲರೂ ಮರಗಳ ಮರೆಯನ್ನು ಹೊಕ್ಕರು. ಇಷ್ಟರಲ್ಲಿಯೇ ಅಲ್ಲಿಗೆ ಉತ್ತಮವಾದ ಅಶ್ವವೊಂದು ಪ್ರಾಪ್ತವಾದುದನ್ನು ಕಂಡರು.

೨೯. ನಿಷ್ಕಲ್ಮಷನಾದ ಚಂದ್ರನಂತೆ ಶುಭ್ರವೂ, ಚಿನ್ನದ ಕಡಿವಾಣ ಆಭರಣಗಳಿಂದ ಅಲಂಕೃತವಾದುದೂ ಆಗಿ ಆ ಕುದುರೆಯು ಮಿಂಚಿನ ಬಳ್ಳಿಯಿಂದ ಅಲಂಕರಿಸಲ್ಪಟ್ಟ ಶರತ್ಕಾಲದ ಮೇಘದಂತೆ ಉನ್ನತವಾಗಿದ್ದಿತು.

೩೦. ಅದರ ಮೇಲೆ ನೀಲಮೇಘಶ್ಯಾಮಳನೂ, ಮನ್ಮಥಸದೃಶ ಸೌಂದರ್ಯಯುತನೂ, ಕಮಲದಳಗಳಂತೆ ಕಿವಿಗಳ ವರೆಗೆ ಹರಡಿರುವ ದೀರ್ಘಗಳಾದ ನೇತ್ರಗಳುಳ್ಳವನೂ ಆದ ಪುರುಷನೊಬ್ಬನಿದ್ದನು.

೩೧. ಆತನ ತಲೆಯಲ್ಲಿ ಸೂಕ್ಷ್ಮವಾದ ರೇಷ್ಮೆಯ ರುಮಾಲಿನ ಮಧ್ಯದಲ್ಲಿ

ಸುವರ್ಣರತ್ನಖಚಿತಶಾರ್ಙ್ಗದಿವ್ಯಧನುರ್ಧರಂ ।
ಅಪರೇಣ ಕರೇಣೈವ ವಹಂತಂ ಕಾಂಚನಂ ಶರಂ ॥ ೩೨ ॥
ಪೀತಕೌಶೇಯಸಂವೀತಕಟಿದೇಶಂ ಸುಮಧ್ಯಮಂ ।
ರತ್ನಕಂಕಣಕೇಯೂರಕಟಿಸೂತ್ರವಿರಾಜಿತಂ ॥ ೩೩ ॥
ವಿಶಾಲವಕ್ಷಸ್ಸಂಶೋಭಿದಕ್ಷಿಣಾವರ್ತಸಂಯುತಂ ।
ಸ್ವರ್ಣಯಜ್ಞೋಪವೀತೇನ ಸ್ಫುರತ್ಸ್ಕಂಧಂ ಮನೋಹರಂ ॥ ೩೪ ॥
ಈಹಾಮೃಗಂ ಸಮುದ್ದಿಶ್ಯ ಮಹಾವೇಗಾದನುದ್ರುತಂ ।
ತಂ ದೃಷ್ಟ್ವಾ ವಿಸ್ಮಿತಾ ನಾರ್ಯಃ ಸಸ್ಮಿತಾಸ್ತಸ್ಥುರತ್ರ ವೈ ॥ ೩೫ ॥
ತಂ ದೃಷ್ಟ್ವಾ ಹಯಮಾರೂಢಂ ಗಜೇಂದ್ರೋ ನಮ್ರಮಸ್ತಕಃ ।
ತುಂಡಮುದ್ಧೃತ್ಯ ಗರ್ಜನ್ವೈ ವಿನಿವೃತ್ಯ ಯಯೌ ವನಂ ॥ ೩೬ ॥
ತಸ್ಮಿನ್ಗತೇ ಗಜೇ ತತ್ರ ಹಯಾರೂಢಃ ಸಮಾಯಯೌ ।
ಈಹಾಮೃಗಂ ವಿಚಿನ್ವಾನಃ ಪುಷ್ಪಲಾವೀಸಮೀಪತಃ ॥ ೩೭ ॥

---

ನೀಲವಾದ ತುರಾಯಿಯು ಶೋಭಿಸುತ್ತಿದ್ದಿತು. ಪದ್ಮರಾಗಗಳ ಕಾಂತಿಯಿಂದ ಕೂಡಿದ ಚಿನ್ನದ ಕುಂಡಲಗಳು ಕಿವಿಗಳಲ್ಲಿ ಜ್ವಲಿಸುತ್ತಿದ್ದುವು.

೩೨-೩೩. ಆತನು ಚಿನ್ನ ಮತ್ತು ರತ್ನಗಳಿಂದ ಕೆತ್ತಿದ್ದ ಶಾರ್ಙ್ಗವೆಂಬ ಉತ್ತಮವಾದ ಧನುಸ್ಸನ್ನು ಹಿಡಿದು ಮತ್ತೊಂದು ಕೈಯಲ್ಲಿ ಚಿನ್ನದ ಬಾಣವನ್ನು ಸಂಧಾನ ಮಾಡುತ್ತಿದ್ದನು. ನಡುವಿನಲ್ಲಿ ಹಳದಿಯ ರೇಷ್ಮೆಯ ವಸ್ತ್ರವು ಸುತ್ತಲ್ಪಟ್ಟಿದ್ದಿತು. ಕೈಗಳಲ್ಲಿ ರತ್ನಮಯಗಳಾದ ಕಡಗಗಳೂ, ಭಾಪುರಿಗಳೂ, ನಡುವಿನಲ್ಲಿ ಉಡಿದಾರವೂ ರಾಜಿಸುತ್ತಿದ್ದುವು.

೩೪-೩೫. ವಿಶಾಲವಾದ ಎದೆಯಲ್ಲಿ ಬಲಸುತ್ತಿನ ಕೂದಲಿನ ಸುಳಿಯು ಕಾಣುತ್ತಿದ್ದಿತು. ಚಿನ್ನದ ಯಜ್ಞೋಪವೀತದಿಂದ ಹೊಳೆಯುವ ಭುಜವುಳ್ಳವನಾಗಿ ಆತನು ಎಲ್ಲರ ಮನಸ್ಸನ್ನೂ ಆಕರ್ಷಿಸುತ್ತಿದ್ದನು. ಆ ಪುರುಷೋತ್ತಮನು ತೋಳವೊಂದನ್ನು ಹಿಂಬಾಲಿಸುತ್ತ ಅತ್ಯಂತ ವೇಗದಿಂದ ಕುದುರೆಯನ್ನು ಓಡಿಸುತ್ತಿದ್ದನು. ಆತನನ್ನು ಕಂಡು ಸ್ತ್ರೀಯರೆಲ್ಲರೂ ರೂಪಕ್ಕೆ ಮರುಳಾದವರಂತೆ ಮುಗುಳ್ನಗೆಗಳಿಂದ ಕೂಡಿದವರಾಗಿ ಅಲ್ಲಿಯೇ ನಿಂತಿದ್ದರು.

೩೬. ಇಂತು ಕುದುರೆಯ ಮೇಲೆ ಬಂದ ಸವಾರನನ್ನು ನೋಡಿ ಆನೆಯು ತಲೆಯನ್ನು ಬಗ್ಗಿಸಿಕೊಂಡು ಸೊಂಡಿಲನ್ನೆತ್ತಿ ನಮಸ್ಕರಿಸಿ ಗರ್ಜಿಸುತ್ತ ಕಾಡಿಗೆ ಹಿಂದಿರುಗಿತು.

೩೭. ಇಂತು ಆ ಗಜವು ಹೊರಟುಹೋಗಲು ಅಶ್ವಾರೋಹಿಯಾದ ಪುರುಷನು ತನ್ನ ಬೇಟೆಯ ಮೃಗವಾದ ತೋಳನನ್ನು ಹುಡುಕುತ್ತ ಒಬ್ಬಾನೊಬ್ಬ ಸಖಿಯ ಹತ್ತಿರಕ್ಕೆ ಬಂದನು.

ತಾಂ ಸಮೇತ್ಯ ಸ ಚೋವಾಚ ತುರಗೋಪರಿ ಸಂಸ್ಥಿತಃ ।
ಅತ್ರಾಗತೋ ಮೃಗಃ ಕಶ್ಚಿದೀಹಾಮೃಗ ಇತೀರಿತಃ ॥ ೩೮ ॥
ದೃಷ್ಟೋ ವಾ ಭವತೀಭಿಃ ಸ ಬ್ರೂತ ಮೇ ಕನ್ಯಕಾ ಇತಿ ॥ ೩೯ ॥
ಪ್ರತ್ಯೂಚುಸ್ತಾಸ್ತು ತಂ ಕನ್ಯಾಃ ದೃಷ್ಟೋಽಸ್ಮಾಭಿರ್ನಕಶ್ಚನ ॥ ೪೦ ॥
ಕಿಮರ್ಥಮಾಗತೋಽಸ್ಮಾಕಂ ವನಂ ವರಧನುರ್ಧರಃ ।
ಅತ್ರಾವಧ್ಯಾ ಮೃಗಾಸ್ಸರ್ವೇ ವರ್ತಮಾನಾ ನಿಷಾದಪ ॥ ೪೧ ॥
ಆಶು ಗಚ್ಛ ವನಾದಸ್ಮಾದಾಕಾಶನೃಪಪಾಲಿತಾತ್ ।
ಇತಿ ತಾಸಾಂ ವಚಃ ಶ್ರುತ್ವಾ ಹಯಾದವರುರೋಹ ಸಃ ॥ ೪೨ ॥
ಕಾಶ್ಚ ಯೂಯಮಿಯಂ ಚಾಪಿ ಕನ್ಯಕಾಂಬುಜಸನ್ನಿಭಾ ।
ಸುಭಗಾ ಚಾರುಸರ್ವಾಂಗೀ ಪೀನೋನ್ನತಪಯೋಧರಾ ।
ಬ್ರೂತ ಮೇಽಹಂ ಗಮಿಷ್ಯಾಮಿ ಶ್ರುತ್ವಾ ಸ್ವಸ್ಯಾಲಯಂ ಗಿರಿಂ ॥ ೪೩ ॥
ಇತಿ ತಸ್ಯ ವಚಃ ಶ್ರುತ್ವಾ ಧರಣ್ಯಾತ್ಮಜಯೇರಿತಾ ।
ಸಖೀ ಪದ್ಮಾವತೀ ಪ್ರಾಹ ನಿಷಾದಂ ಪರ್ವತಾಲಯಂ ॥ ೪೪ ॥

---

೩೮–೪೦. ಆಕೆಯನ್ನು ಸಮೀಪಿಸಿ ಕುದುರೆಯ ಮೇಲಿನಿಂದಲೇ ಆತ ನಿಂತುಮಾತನಾಡಿಸಿದನು. "ಎಲೈ ಕನ್ಯೆಯರೇ! ತೋಳವೆಂದು ಕರೆಯಲ್ಪಡುವ ಹಿಂಸ್ರಮೃಗವೊಂದು ಈ ಕಡೆಗೆ ಬಂದಿತಲ್ಲವೆ? ನೀವೇನಾದರೂ ಅದನ್ನು ನೋಡಿದಿರಾ? ಹೇಳಿರಿ." ಆ ಕನ್ಯೆಯರು "ನಾವು ಯಾವ ಮೃಗವನ್ನೂ ಕಾಣಲಿಲ್ಲ" ಎಂದು ಪ್ರತ್ಯುತ್ತರವನ್ನು ಕೊಟ್ಟರು.

೪೧–೪೨. ಮತ್ತೂ ಆತನನ್ನು ಕೇಳತೊಡಗಿದರು:—"ನೀನು ಶ್ರೇಷ್ಠವಾದ ಧನುಸ್ಸನ್ನು ಹಿಡಿದು ನಮ್ಮ ಈ ವನಕ್ಕೆ ಬರಲು ಕಾರಣವೇನು? ಎಲೈ ಬೇಡರನಾಯಕನೆ! ಇಲ್ಲಿ ಸಂಚರಿಸುವ ಮೃಗಗಳೆಲ್ಲವೂ ಕೊಲ್ಲಲ್ಪಡಲು ಅನರ್ಹಗಳಾಗಿರುವುವು. ಆಕಾಶರಾಜನಿಂದ ಪಾಲಿಸಲ್ಪಡುತ್ತಿರುವ ಈ ವನವನ್ನು ಶೀಘ್ರವಾಗಿ ಬಿಟ್ಟು ಹೊರಡು." ಇಂತೆಂದ ಸಖಿಯರ ಮಾತುಗಳನ್ನು ಕೇಳಿ ಆ ಸವಾರನು ಕುದುರೆಯಿಂದ ಕೆಳಕ್ಕೆ ಇಳಿದನು.

೪೩. ಅವರನ್ನು ಕುರಿತು "ನೀವು ಯಾರು? ಕಮಲಮುಖಿಯೂ, ಸೌಭಾಗ್ಯವತಿಯೂ, ಸುಂದರಾವಯವಗಳುಳ್ಳವಳೂ, ದುಂಡಾಗಿಯೂ, ಉನ್ನತವಾಗಿಯೂ ಇರುವ ಸ್ತನಗಳುಳ್ಳ ಈ ಕನ್ಯಕೆಯು ಯಾರು? ನನಗೆ ತಿಳಿಸಿರಿ; ನಾನು ನನ್ನ ನಿವಾಸಸ್ಥಾನವಾದ ವೆಂಕಟಾಚಲಕ್ಕೆ ಮರಳಿ ಹೋಗುವೆನು" ಎಂದು ಹೇಳಿದನು.

೪೪. ಇಂತೆಂದ ಆ ಮಾತುಗಳನ್ನು ಕೇಳಿ ಪದ್ಮಾವತೀದೇವಿಯಿಂದ ಚೋದಿತಳಾದ ಸಖಿಯೊಬ್ಬಳು ಪರ್ವತನಿವಾಸಿಯಾದ ಆ ಬೇಡನಿಗೆ ತಿಳಿಸಿದಳು.

ಆಕಾಶರಾಜತನಯಾ ವಸುಧಾತಲಸಂಭವಾ ।
ಅಸ್ಮಾಕಂ ನಾಯಿಕಾ ಶೂರ ಪದ್ಮಿನೀ ನಾಮ ನಾಮತಃ ॥ ೪೫ ॥
ಬ್ರೂಹಿ ತ್ವಂ ಸುಭಗಾಕಾರ ಕಿಂ ನಾಮಾ ಕಸ್ಯ ವಾ ಸುತಃ ।
ಜಾತಿಃ ಕಾ ಕುತ್ರ ತೇ ವಾಸಃ ಕಿಮರ್ಥಂ ತ್ವಮಿಹಾಗತಃ ।
ಇತಿ ಪೃಷ್ಟಸ್ಸ ತಾಃ ಪ್ರಾಹ ಮಂದಸ್ಮಿತಮುಖಾಂಬುಜಃ ॥ ೪೬ ॥
ದಿವಾಕರಕುಲಂ ಪ್ರಾಹುರಸ್ಮಾಕಂ ತು ಪುರಾವಿದಃ ।
ಯಸ್ಯ ನಾಮಾನ್ಯನಂತಾನಿ ಪಾವನಾನಿ ಮನೀಷಿಣಃ ॥ ೪೭ ॥
ವರ್ಣತೋ ನಾಮತಶ್ಚಾಪಿ ಕೃಷ್ಣಂ ಪ್ರಾಹುಸ್ತಪಸ್ವಿನಃ ।
ಬ್ರಹ್ಮದ್ವಿಷಾಂ ಸುರಾರೀಣಾಂ ಯಸ್ಯ ಚಕ್ರಂ ಭಯಾವಹಂ ॥ ೪೮ ॥
ಯಸ್ಯ ಶಂಖಧ್ವನಿಂ ಶ್ರುತ್ವಾ ಮೋಹಮಾಯಯುರ್ಹಿ ವೈರಿಣಃ ।
ಯಸ್ಯ ವೈ ಧನುಷಸ್ತುಲ್ಯಂ ಧನುರ್ನೈವಾಮರೇಷ್ವಪಿ ॥ ೪೯ ॥
ತಂ ಮಾಂ ವೀರಪತಿಂ ಪ್ರಾಹುರ್ವೇಂಕಟಾದ್ರಿನಿವಾಸಿನಂ ।
ತಸ್ಮಾದದ್ರಿತಟಾತ್ಸೋಽಹಂ ನಿಷಾದೈರನುಗೈರ್ವೃತಃ ॥ ೫೦ ॥

---

೪೫. "ಎಲೈ ಶೂರನೆ! ಈಕೆಯು ಆಕಾಶರಾಜನ ಮಗಳು. ಆತನ ಯಜ್ಞ ಭೂಮಿಯಲ್ಲಿ ದೊರೆತ ಕನ್ಯೆಯು. ಈಕೆಯೇ ನಮ್ಮೆಲ್ಲರಿಗೂ ಸ್ವಾಮಿನಿಯು. ಈಕೆಗೆ ಪದ್ಮಾವತಿಯೆಂಬ ಶುಭನಾಮವಿರುವುದು.

೪೬. ಎಲೈ ಸುಂದರಾಂಗನೆ! ನಿನ್ನ ಹೆಸರೇನು? ನೀನು ಯಾರ ಮಗನು? ನಿನ್ನ ಜಾತಿಯಾವುದು? ವಾಸಸ್ಥಳವೆಲ್ಲಿ? ಇಲ್ಲಿಗೆ ನೀನು ಯಾವ ಪ್ರಯೋಜನಕ್ಕಾಗಿ ಬಂದಿರುವೆಯೆಂಬುದನ್ನು ತಿಳಿಸು." ಇಂತೆಂದು ಕೇಳಲ್ಪಟ್ಟವನಾಗಿ ಆತನು ಮುಗುಳ್ನಗೆಯಿಂದ ಕೂಡಿದ ಮುಖಕಮಲವುಳ್ಳವನಾಗಿ ಅವರಿಗೆ ಹೇಳತೊಡಗಿದನು.

೪೭–೪೯. "ವಂಶಚಾರಿತ್ರವನ್ನು ಬಲ್ಲವರು ನಮ್ಮ ವಂಶವನ್ನು ಸೂರ್ಯವಂಶವೆಂದು ಹೇಳುವರು. ನನ್ನ ಹೆಸರುಗಳು ಅಸಂಖ್ಯೇಯಗಳಾಗಿರುವುವು. ಅವುಗಳೆಲ್ಲವೂ ಬುದ್ಧಿವಂತರಿಗೆ ಪರಮಪಾವನಗಳೆನಿಸಿರುವುವು. ತಪಸ್ಸಂಪನ್ನರು ನನ್ನನ್ನು ಬಣ್ಣದಿಂದಲೂ ಹೆಸರಿನಿಂದಲೂ ಕೃಷ್ಣನೆಂದೇ ಕರೆಯುವರು. ನನ್ನ ಚಕ್ರಾಯುಧವು ಬ್ರಾಹ್ಮಣದ್ವೇಷಿಗಳಿಗೂ, ದೇವಶತ್ರುಗಳಾದ ದಾನವರಿಗೂ ಭಯವನ್ನುಂಟುಮಾಡುವುದಾಗಿರುವುದು. ನನ್ನ ಪಾಂಚಜನ್ಯವೆಂಬ ಶಂಖದ ಧ್ವನಿಯನ್ನು ಕೇಳಿ ಶತ್ರುಗಳೆಲ್ಲರೂ ಮೂರ್ಛೆಗೊಳ್ಳುವರು. ನನ್ನ ಧನುಸ್ಸಿಗೆ ಸಮಾನವಾದುದು ಮಹೇಂದ್ರಾದಿ ದೇವತೆಗಳ ಬಳಿಯಲ್ಲಿಯೂ ಇಲ್ಲ.

೫೦–೫೧. ಎಲೌ ಸುಂದರಿಯರೇ! ಇಂತಹ ಪರಾಕ್ರಮಿಯಾದ ನಾನು ವೇಂಕಟಾಚಲದಲ್ಲಿ ವಾಸಿಸುತ್ತ ವೀರನಾಯಕನೆಂಬ ಹೆಸರನ್ನು ಪಡೆದಿರುವೆನು.

ಮೃಗಯಾರ್ಥಂ ಹಯಾರೂಢೋ ಯುಷ್ಮಾಕಂ ವನಮಾಗತಃ ।
ಮಯಾಪ್ಯನುದ್ರುತಃ ಕಶ್ಚಿನ್ಮೃಗೋ ವಾಯುಗತಿರ್ಯಯೌ ॥ ೫೧ ॥
ತಮದೃಷ್ಟ್ವಾ ವನಂ ಪಶ್ಯನ್ದೃಷ್ಟವಾನ್ಸುಭಗಾಮಿಮಾಂ ।
ಕಾಮಾದಿಹಾಗತೋಽಹಂ ವೋ ಮಯಾ ಕಿಂ ಲಭ್ಯತೇ ಸ್ತ್ರಿಯಂ ॥ ೫೨ ॥
ಇತಿ ಕೃಷ್ಣವಚಃ ಶ್ರುತ್ವಾ ಕ್ರುದ್ಧಾಸ್ತಾಃ ಪುನರಬ್ರುವನ್ ।
ಆಕಾಶರಾಜೋ ದೃಷ್ಟ್ವಾ ತ್ವಾಂ ಕೃತ್ವಾ ನಿಗಡಬಂಧನಂ ।
ಯಾವನ್ನಯಾತಿ ತಾವತ್ತ್ವಂ ಗಚ್ಛ ಶೀಘ್ರಂ ಸ್ವಮಾಲಯಂ ॥ ೫೩ ॥
ತರ್ಜಿತಸ್ತಾಭಿರೇವಂ ಸ ಹಯಮಾರುಹ್ಯ ಶೀಘ್ರಗಂ ।
ಯುಕ್ತಃ ಸ್ವಾನುಚರೈಃ ಸರ್ವೈರ್ಯಯೌ ದ್ರುತತರಂ ಗಿರಿಂ ॥ ೫೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹಸಂವಾದೇ "ಉದ್ಯಾನವಾಸಿನ್ಯಾಃ ಪದ್ಮಾವತ್ಯಾಸ್ಸಮೀಪೇ ನಾರದಾಗಮನಂ – ಶ್ರೀನಿವಾಸ ಮೃಗಯಾವಿಹಾರವರ್ಣನಂ" ನಾಮ ಚತುರ್ಥೋಽಧ್ಯಾಯಃ

---

ಆ ಪರ್ವತ ಪ್ರದೇಶದಿಂದಲೇ ಹೊರಟು ನನ್ನ ಅನುಚರರಾದ ಬೇಡರೊಡನೆ ಕಲೆತು ಬೇಟೆಯನ್ನು ಮಾಡುತ್ತ ಕುದುರೆಯನ್ನೇರಿ ನಿಮ್ಮ ವನಕ್ಕೆ ಬಂದು ಸೇರಿದೆನು. ಇಲ್ಲಿಗೆ ನನ್ನಿಂದ ಹಿಂಬಾಲಿಸಲ್ಪಟ್ಟ ಕಾಡುಮೃಗವೊಂದು ವಾಯು ವೇಗದಿಂದ ಓಡಿಬಂದಿತು.

೫೨. ಅದನ್ನು ಕಾಣದೆ ಹುಡುಕುತ್ತ ವನಸಂಪತ್ತನ್ನು ನೋಡುತ್ತ ಈ ನಾರೀಮಣಿಯನ್ನೂ ಕಂಡೆನು. ಕಂಡೊಡನೆಯೇ ಮೋಹಪರವಶನಾಗಿರು ವೆನು. ಈ ಕನ್ಯೆಯು ನನಗೆ ಲಭಿಸುವ ಸಂಭವವೇನಾದರೂ ಇರುವುದೆ?"

೫೩. ಇಂತೆಂದ ಕೃಷ್ಣನ ಮಾತುಗಳನ್ನು ಕೇಳಿ ಆ ಸಖಿಯರೆಲ್ಲರೂ ಕೋಪ ಗೊಂಡು ಹೇಳಿದರು:—"ಎಲೈ ಬೇಡನೆ! ಆಕಾಶರಾಜನು ನಿನ್ನನ್ನು ನೋಡಿದವ ನಾದರೆ ಸಂಕೋಲೆಗಳಿಂದ ಬಂಧಿತನನ್ನಾಗಿ ಮಾಡಿ ಎಳೆದುಕೊಂಡು ಹೋಗು ವುದು ಖಂಡಿತ. ನೀನು ನಿನ್ನ ನಿವಾಸವನ್ನು ಕುರಿತು ಬೇಗನೆ ಹೊರಟುಹೋಗು."

೫೪. ಈ ರೀತಿಯಾಗಿ ಅವರಿಂದ ಬೆದರಿಸಲ್ಪಟ್ಟ ಆ ಶ್ರೀನಿವಾಸನು ವಾಯು ವೇಗವುಳ್ಳ ತನ್ನ ಕುದುರೆಯನ್ನೇರಿಕೊಂಡು ಅನುಚರರಿಂದ ಪರಿವೃತನಾಗಿ ಬಹಳ ಶೀಘ್ರವಾಗಿ ತನ್ನ ನಿವಾಸವಾದ ವೆಂಕಟಾಚಲವನ್ನು ಸೇರಿದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೆಂಕಟಾಚಲ ಮಾಹಾತ್ಮ್ಯೆಯ ಧರಣೀ ವರಾಹ ಸಂವಾದದಲ್ಲಿ "ನಾರದಾಗಮನ – ಶ್ರೀನಿವಾಸನ ಮೃಗಯಾವಿಹಾರವರ್ಣನ"ವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಮೋಽಧ್ಯಾಯಃ

### ಪದ್ಮಾವತೀದರ್ಶನೇನ ಶ್ರೀನಿವಾಸಸ್ಯ ಮೋಹಪ್ರಾಪ್ತ್ಯಾದಿವರ್ಣನಂ

ಶ್ರೀ ವರಾಹ ಉವಾಚ :—

ಸಂಪ್ರಾಪ್ಯ ಚಾಲಯಂ ದಿವ್ಯಮವತೀರ್ಯ ಹಯೋತ್ತಮಾತ್ ।
ವಿಸೃಜ್ಯ ಸಾನುಗಾನ್ಸರ್ವಾನ್ದೇವಾನ್ಕೈರಾತರೂಪಕಾನ್ ॥ ೧ ॥
ವಿಶ್ರಮಧ್ವಮಿತಿ ಪ್ರೋಚ್ಯ ವಿವೇಶ ಮಣಿಮಂಡಪಂ ।
ಆರುಹ್ಯ ಮಣಿಸೋಪಾನಂ ಪಂಚಕಕ್ಷ್ಯಾ ಅತೀತ್ಯ ಚ ॥ ೨ ॥
ಮುಕ್ತಾಗೃಹಂ ಸಮಾಸಾದ್ಯ ತಸ್ಮಿಂಲ್ಲೋಲಾಯಿತೇ ಶುಭೇ ।
ನವರತ್ನಮಯೇ ಮಂಚೇ ಸಂವಿವೇಶಾವಶೋ ಹರಿಃ ॥ ೩ ॥
ಸಂಸ್ಮರನ್ಪದ್ಮಗರ್ಭಾಭಾಂ ತಾಮೇವಾಯತಲೋಚನಾಂ ।
ತನುಮಧ್ಯಾಂ ಪೀನಕುಚಾಂ ಮಂದಸ್ಮಿತಮುಖಾಂಬುಜಾಂ ॥ ೪ ॥
ಕ್ಷೀರಾಬ್ಧಿತನಯಾಮೇವ ಮೇನೇ ಪದ್ಮೋದ್ಭವಾಂ ಶುಭಾಂ ।
ತಸ್ಯಾಂ ಗತಮನಾ ದೇವಃ ಶ್ರೀನಿವಾಸೋ ಮುಮೋಹ ಚ ॥ ೫ ॥

---

### ಕನ್ನಡದ ಅನುವಾದ

#### ಪದ್ಮಾವತಿಯ ದರ್ಶನದಿಂದ ಶ್ರೀನಿವಾಸನು ಕಾಮಪರವಶನಾದುದು

೧. ವರಾಹನು ಹೇಳುತ್ತಾನೆ:—ಇಂತು ಶ್ರೀನಿವಾಸನು ತನ್ನ ಮನೆಯನ್ನು ಸೇರಿ ಉತ್ತಮಾಶ್ವದಿಂದ ಇಳಿದು ಕಿರಾತ ರೂಪಗಳನ್ನು ಧರಿಸಿ ತನ್ನ ಸಹಾಯಕ್ಕೆ ಬಂದಿದ್ದ ದೇವತೆಗಳನ್ನೂ ಅವರ ಅನುಯಾಯಿಗಳನ್ನೂ ಬೀಳ್ಕೊಟ್ಟನು.

೨. ಅವರಿಗೆಲ್ಲರಿಗೂ ವಿಶ್ರಮಿಸಿಕೊಳ್ಳಹೇಳಿ ತನ್ನ ಮಣಿಗಣ ಖಚಿತವಾದ ಅರಮನೆಯನ್ನು ಹೊಕ್ಕು ಮಣಿಗಳಿಂದ ಮಾಡಲ್ಪಟ್ಟ ಸೋಪಾನಗಳನ್ನೇರಿ ಐದು ಹೆಬ್ಬಾಗಿಲುಗಳನ್ನು ದಾಟಿದನು.

೩. ಬಳಿಕ ಮುತ್ತಿನ ಮನೆಯನ್ನು ಸೇರಿ ಅದರಲ್ಲಿ ತೂಗುಹಾಕಿದ್ದ ಮಂಗಳ ಕರವೂ, ನವರತ್ನಮಯವೂ ಆದ ತೂಗುಮಂಚದಲ್ಲಿ ಶ್ರೀನಿವಾಸನು ಮಲಗಿ ಕೊಂಡು ಕಾಮಪರವಶನಾದನು.

೪. ಪದ್ಮಗರ್ಭದಂತೆ ಅತಿ ಸುಂದರಳೂ, ದೀರ್ಘನೇತ್ರಗಳುಳ್ಳವಳೂ, ಬಡನಡುವಿನವಳೂ, ತುಂಗಸ್ತನಿಯೂ, ಮುಗುಳ್ನಗೆಯ ಮುಖವುಳ್ಳವಳೂ ಆದ ಪದ್ಮಾವತಿಯನ್ನೇ ಮತ್ತೆ ಮತ್ತೆ ಮನಸ್ಸಿನಲ್ಲಿ ಸ್ಮರಿಸುತ್ತಿದ್ದನು.

೫. ಶುಭಾಂಗಿಯಾದ ಪದ್ಮಾವತಿಯು ಕ್ಷೀರಸಾಗರದಲ್ಲಿ ಜನಿಸಿದ ಮಹಾ ಲಕ್ಷ್ಮಿಯೆಂದೇ ಆತನು ನಿಶ್ಚಯಿಸಿದನು. ಇಂತು ಆಕೆಯಲ್ಲಿಯೇ ನಟ್ಟ ಮನಸ್ಸುಳ್ಳವನಾಗಿ ಶ್ರೀನಿವಾಸನು ಮೋಹವನ್ನೈದಿದನು.

ತತೋ ಮಧ್ಯಾಹ್ನಸಮಯೇ ಕೃತ್ವಾನ್ನಂ ದಿವ್ಯಮುತ್ತಮಂ ।
ಸೂಪದಂಶಂ ಸುಗಂಧಂ ಚ ದೇವಾರ್ಹಮತಿಶೋಭನಂ ॥ ೬ ॥
ಶುದ್ಧಾನ್ನಂ ಪಾಯಸಾನ್ನಂ ಚ ಗೌಡಂ ಮುದ್ಗಾನ್ನಮೇವ ಚ ।
ಕೃತ್ವಾ ಪಂಚವಿಧಾಪೂಪಾನ್ಪೂರಿಕಾವಟಕಾನಪಿ ॥ ೭ ॥
ದೇವಂ ದ್ರಷ್ಟುಂ ಯಯೌ ಶೀಘ್ರಂ ಸಖೀ ಬಕುಲಮಾಲಿಕಾ ।
ಪದ್ಮಾವತೀಪದ್ಮಪತ್ರಚಿತ್ರರೇಖಾಸಮನ್ವಿತಾ ॥ ೮ ॥
ನಿವೇಶ್ಯ ದ್ವಾರಿ ದೇವಸ್ಯ ತಾಃ ಸರ್ವಾಃ ಪ್ರಮದೋತ್ತಮಾಃ ।
ವಿವೇಶ ತತ್ಸಮೀಪಂ ಸಾ ಸ್ವಯಂ ಬಕುಲಮಾಲಿಕಾ ॥ ೯ ॥
ಗತ್ವಾ ಸಮೀಪಂ ದೇವಸ್ಯ ವವಂದೇ ಭಕ್ತಿಭಾವತಃ ।
ದೃಷ್ಟ್ವಾಽಥ ದೇವಂ ವಿವಶಂ ಪರ್ಯಂಕೇ ರತ್ನಭೂಷಿತೇ ॥ ೧೦ ॥
ಪಾದಸಂವಾಹನಂ ಕೃತ್ವಾ ನಿಮೀಲಿತವಿಲೋಚನಂ ।
ತಂ ಧ್ಯಾಯಂತಂ ಚ ಕಿಮಪಿ ವ್ಯಾಜಹಾರ ಶುಚಿಸ್ಮಿತಾ ॥ ೧೧ ॥
ಉತ್ತಿಷ್ಠ ದೇವದೇವೇಶ ಕಿಂ ಶೇಷೇ ಪುರುಷೋತ್ತಮ ।
ಪರಮಾನ್ನಂ ಕೃತಂ ದೇವ ಭೋಕ್ತುಮಾಗಚ್ಛ ಮಾಧವ ॥ ೧೨ ॥

---

೬–೮. ಆಗ ಮಧ್ಯಾಹ್ನ ಸಮಯವು ಪ್ರಾಪ್ತವಾಗಲು ದಿವ್ಯವಾದುದೂ, ರಸಭರಿತವಾದುದೂ, ವ್ಯಂಜನಸಹಿತವಾದುದೂ, ಸುವಾಸನೆಯುಳ್ಳುದೂ, ದೇವಭೋಗಕ್ಕೂ ಅರ್ಹವೆನಿಸಿ ಪರಿಶುದ್ಧವಾದುದೂ ಆದ ಶಾಲ್ಯನ್ನವನ್ನೂ ಮತ್ತು ಪಾಯಸಾನ್ನ, ಗುಡಾನ್ನ, ಮುದ್ಗಾನ್ನಗಳನ್ನೂ, ಐದು ವಿಧಗಳಾದ ಅಪೂಪಗಳನ್ನೂ, ಹೋಳಿಗೆ, ಆಂಬೊಡೆಗಳನ್ನೂ ಊಟಕ್ಕೆ ಸಿದ್ಧಗೊಳಿಸಿ ದೇವ ದೇವನ ಪರಿಚಾರಿಕೆಯಾದ ಬಕುಳಮಾಲಿಕೆಯು ಆತನನ್ನು ಕರೆಯಲು ವೇಗ ವಾಗಿ ಬಂದಳು. ಆಕೆಯು ಪದ್ಮಾವತಿ, ಪದ್ಮಪತ್ರೆ, ಚಿತ್ರರೇಖೆಯರೆಂಬ ಸಖಿಯರೊಡನೆ ಬಂದಳು.

೯. ಆ ಸಖಿಯರೆಲ್ಲರನ್ನೂ ಪರಮಾತ್ಮನ ನಿವಾಸಭವನದ ಬಾಗಿಲಿನಲ್ಲಿಯೇ ನಿಲ್ಲಿಸಿ ಬಕುಳಮಾಲಿಕೆಯು ತಾನೊಬ್ಬಳೇ ಶ್ರೀನಿವಾಸನ ಸಮೀಪಕ್ಕೆ ಹೋಗಿ ಸೇರಿದಳು.

೧೦–೧೧. ದೇವನ ಸಮೀಪವನ್ನು ಸೇರಿ ಭಕ್ತಿಭರಿತಳಾಗಿ ಆತನಿಗೆ ನಮಸ್ಕ ರಿಸಿದಳು. ನವರತ್ನಖಚಿತವಾದ ಪರ್ಯಂಕದಲ್ಲಿ ಮಲಗಿ ಪರವಶನಾಗಿ ಕಣ್ಣುಗಳನ್ನು ಮುಚ್ಚಿ ಯಾವ ವಿಷಯವನ್ನೋ ಕುರಿತು ಧ್ಯಾನಿಸುತ್ತಿರುವ ಆತನನ್ನು ಕಂಡು ಮೆಲ್ಲಗೆ ಪಾದಗಳನ್ನೊತ್ತುತ್ತ ಮಂದಸ್ಮಿತೆಯಾದ ಆಕೆಯು ಹೇಳತೊಡಗಿದಳು :—

೧೨–೧೩. "ಎಲೈ ದೇವಾಧೀಶನೆ! ಪುರುಷೋತ್ತಮನೆ! ಲಕ್ಷ್ಮೀ

ಕಿಂ ವಾ ತ್ವಮಾರ್ತವಚ್ಛೇಷೇ ಸರ್ವಲೋಕಾರ್ತಿನಾಶನ ।
ಮೃಗಯಾಮಟಿತಾ ದೇವ ಕಿಂ ದೃಷ್ಟಂ ಭವತಾ ವನೇ ॥ ೧೩ ॥
ಅವಸ್ಥಾ ತೇ ವಿಶಾಲಾಕ್ಷ ಕಾಮುಕಸ್ಯೇವ ಲಕ್ಷ್ಯತೇ ।
ಕಾ ದೃಷ್ಟಾ ದೇವಕನ್ಯಾ ವಾ ಮಾನುಷೀ ವಾಹಿಕನ್ಯಕಾ ॥ ೧೪ ॥
ಬ್ರೂಹಿ ಮೇ ತ್ವಮಚಿಂತ್ಯಾತ್ಮನ್ಕನ್ಯಾಂ ತಾಂ ಚಿತ್ತಹಾರಿಣೀಂ ॥ ೧೫ ॥
ಶ್ರೀ ವರಾಹ ಉವಾಚ :—
ತಸ್ಯಾಸ್ತದ್ವಚನಂ ಶ್ರುತ್ವಾ ನಿಶ್ವಾಸಮಕರೋದ್ವಿಭುಃ ।
ನಿಶ್ವಸಂತಂ ಪುನಃ ಪ್ರಾಹ ಪ್ರೀತಾ ಬಕುಲಮಾಲಿಕಾ ॥ ೧೬ ॥
ಏವಂ ಮನೋಹರಾ ಕಾ ಸಾ ತವಾಪಿ ಪುರುಷೋತ್ತಮ ।
ತಾಮುವೋಚದ್ಧೃಷೀಕೇಶೋ ವಕ್ಷ್ಯಾಮಿ ಶ್ರುಣು ತತ್ತ್ವತಃ ॥ ೧೭ ॥
ಶ್ರೀ ಭಗವಾನುವಾಚ :—
ಪುರಾ ತ್ರೇತಾಯುಗೇ ಪುಣ್ಯೇ ರಾವಣಂ ಹತವಾನಹಂ ।
ತದಾ ವೇದವತೀ ಕನ್ಯಾ ಸಾಹಾಯ್ಯಮಕರೋಚ್ಛ್ರಿಯಃ ॥ ೧೮ ॥

---

ರಮಣನೆ! ಮೇಲಕ್ಕೇಳು. ಏತಕ್ಕೆ ಮಲಗಿರುವೆ? ನಿನ್ನ ಭೋಜನಕ್ಕಾಗಿ ಪರಮಾನ್ನವು ಸಿದ್ಧವಾಗಿರುವುದು. ಎದ್ದುಬಾ. ಸಕಲ ಲೋಕಗಳ ದುಃಖಗಳನ್ನೂ ನಿರ್ಮೂಲಗೊಳಿಸುವ ನೀನು ಹೀಗೇಕೆ ದುಃಖಗೊಂಡವನಂತೆ ಬಿದ್ದುಕೊಂಡಿರುವೆ? ಬೇಟೆಗೆ ಹೋಗಿದ್ದ ನೀನು ಅರಣ್ಯದಲ್ಲಿ ಏನಾದರೂ ವಿಶೇಷವನ್ನು ನೋಡಿದೆಯ?

೧೪–೧೫. ಓ ದೀರ್ಘಲೋಚನನೆ! ನೀನು ಜನರ ಊಹೆಗೆ ಸಿಲುಕದ ಬುದ್ಧಿಯುಳ್ಳವನು. ನಿನ್ನ ಈ ಪರಿಸ್ಥಿತಿಯು ಕಾಮಜ್ವರದಂತೆ ಕಾಣುತ್ತಿರುವುದು. ಯಾವುದಾದರೂ ದೇವಕನ್ಯೆಯನ್ನೋ, ಮನುಷ್ಯ ಸ್ತ್ರೀಯನ್ನೋ, ನಾಗಕನ್ಯೆಯನ್ನೋ ಕಂಡೆಯಾ? ನಿನ್ನ ಮನಸ್ಸನ್ನು ಆಕರ್ಷಿಸಿದ ಪ್ರಮದೆಯು ಯಾರೆಂಬುದನ್ನು ನನಗೆ ತಿಳಿಯಹೇಳು.''

೧೬. ವರಾಹಸ್ವಾಮಿಯು ಹೇಳುತ್ತಾನೆ:—ಆಕೆಯ ಈ ಮಾತುಗಳನ್ನು ಕೇಳಿ ಲೋಕನಾಯಕನು ನಿಟ್ಟುಸಿರನ್ನು ಬಿಟ್ಟನು. ಇಂತು ನಿಟ್ಟುಸಿರನ್ನು ಬಿಡುತ್ತಿರುವ ಆತನನ್ನು ಕುರಿತು ಬಕುಲಮಾಲಿಕೆಯು ಪ್ರೀತಿಯಿಂದ ಮತ್ತೆ ಕೇಳತೊಡಗಿದಳು.

೧೭. '' ಎಲೈ ಪುರುಷೋತ್ತಮನೆ! ನಿನಗೂ ಮನಸ್ಸನ್ನು ಕದಡಿಸುವ ಆ ಸುಂದರಿಯು ಯಾರು?'' ಆಕೆಗೆ ಶ್ರೀನಿವಾಸನು '' ನಿನಗೆ ನಡೆದ ವಿಷಯವನ್ನು ಯಥಾರ್ಥವಾಗಿ ತಿಳಿಸುವೆನು ; ಕೇಳು'' ಎಂದು ನಿರೂಪಿಸತೊಡಗಿದನು.

೧೮. ಶ್ರೀನಿವಾಸನು ಹೇಳುತ್ತಾನೆ:—'' ಹಿಂದಿನ ತ್ರೇತಾಯುಗದಲ್ಲಿ

ಸೀತಾರೂಪಾಭವಲ್ಲಕ್ಷ್ಮೀರ್ಜನಕಸ್ಯ ಮಹೀತಲಾತ್ ।
ಗತೇ ಮಯಿ ತು ಮಾರೀಚಂ ಹಂತುಂ ಪಂಚವಟೀವನೇ ॥ ೧೯ ॥
ಮಮಾನುಜೋಽಪಿ ಮಾಮೇವ ಸೀತಯಾ ಚೋದಿತೋಽನ್ವಯಾತ್ ।
ತದಂತರೇ ರಾಕ್ಷಸೇಂದ್ರೋ ಹರ್ತುಂ ಸೀತಾಮುಪಾಯಯೌ ॥ ೨೦ ॥
ಅಗ್ನಿಹೋತ್ರಗತೋ ವಹ್ನಿಸ್ತಂ ಜ್ಞಾತ್ವಾ ರಾವಣೋದ್ಯಮಂ ।
ಆದಾಯ ಸೀತಾಂ ಪಾತಾಲೇ ಸ್ವಾಹಾಯಾಂ ಸನ್ನಿವೇಶ್ಯ ಚ ॥ ೨೧ ॥
ತೇನೈವ ರಕ್ಷಸಾ ಸ್ಪೃಷ್ಟಾಂ ಪುರಾ ವೇದವತೀಂ ಶುಭಾಂ ।
ಅಗ್ನೌ ವಿಸೃಷ್ಟದೇಹಾಂ ತಾಂ ಸಂಹರ್ತುಂ ರಾವಣಂ ಪುನಃ ॥ ೨೨ ॥
ಸೀತಾಯಾ ರೂಪಸದೃಶೀಂ ಕೃತ್ವಾ ಚೈವೋತ್ಸಸರ್ಜ ಹ ।
ಸಾ ರಾವಣಹೃತಾ ಭೂತ್ವಾ ಲಂಕಾಯಾಂ ಚ ನಿವೇಶಿತಾ ॥ ೨೩ ॥
ಹತೇ ತು ರಾವಣೇ ಪಶ್ಚಾತ್ಪುನರಗ್ನಿಂ ವಿವೇಶ ಸಾ ।
ಅಗ್ನಿಸ್ತು ರಕ್ಷಿತಾಂ ಲಕ್ಷ್ಮೀಂ ಸ್ವಾಹಾಯಾಂ ಮಮ ಜಾನಕೀಂ ॥ ೨೪ ॥

---

ನಾನು ರಾವಣಾಸುರನನ್ನು ಸಂಹಾರ ಮಾಡಿದೆನು. ಆಗ ವೇದವತಿಯೆಂಬ ಕನ್ಯೆಯು ಲಕ್ಷ್ಮಿಯ ಅವತಾರವಾಗಿದ್ದ ಸೀತೆಗೆ ಸಹಾಯವನ್ನು ಮಾಡಿದಳು.

೧೯. ಲಕ್ಷ್ಮಿಯೇ ಜನಕರಾಜನ ಯಜ್ಞಭೂಮಿಯಲ್ಲಿ ಸೀತೆಯಾಗಿ ಹುಟ್ಟಿದಳು. ಪಂಚವಟಿಯಲ್ಲಿ ನಾನು ಮಾಯಾಮೃಗ ರೂಪಿಯಾದ ಮಾರೀಚನನ್ನು ಕೊಲ್ಲಲು ಆಶ್ರಮವನ್ನು ಬಿಟ್ಟು ಹೊರಟೆನು.

೨೦-೨೧. ನನ್ನ ತಮ್ಮನಾದ ಲಕ್ಷ್ಮಣನೂ ಕೂಡ ಸೀತೆಯ ಕಠಿನ ವಾಕ್ಯಗಳನ್ನು ತಡೆಯಲಾರದೆ ನನ್ನ ಹಿಂದೆಯೇ ಬಂದನು. ಆ ಸಮಯದಲ್ಲಿಯೇ ರಾಕ್ಷಸೇಶ್ವರನಾದ ರಾವಣನು ಸೀತೆಯನ್ನು ಅಪಹರಿಸಲು ಆಶ್ರಮವನ್ನು ಸಮೀಪಿಸಿದನು. ಆಗ ನಮ್ಮ ಗಾರ್ಹಪತ್ಯಾಗ್ನಿಯ ಅಧಿದೇವತೆಯು ರಾವಣನ ಈ ಪ್ರಯತ್ನವನ್ನು ಕಂಡು ಸೀತೆಯನ್ನು ಪಾತಾಲಕ್ಕೆ ತೆಗೆದುಕೊಂಡು ಹೋಗಿ ತನ್ನ ಪತ್ನಿಯಾದ ಸ್ವಾಹಾದೇವಿಯೊಡನೆ ಬಿಟ್ಟುಬಂದನು.

೨೨-೨೩. ಮತ್ತು ಆ ರಾಕ್ಷಸನಿಂದಲೇ ಮುನ್ನು ಸ್ಪರ್ಶಿಸಲ್ಪಟ್ಟ ಮಂಗಳಾಂಗಿಯಾದ ವೇದವತಿಯು ಅಗ್ನಿಯಲ್ಲಿ ದೇಹವನ್ನು ಪರಿತ್ಯಾಗಮಾಡಿರಲು ರಾವಣಾಸುರನನ್ನು ಸಂಹಾರಮಾಡುವುದಕ್ಕಾಗಿ ಆಕೆಯನ್ನೇ ಸೀತೆಯ ರೂಪವನ್ನು ಸ್ವೀಕರಿಸುವಂತೆ ಮಾಡಿ ನನ್ನ ಆಶ್ರಮದಲ್ಲಿ ತಂದುಬಿಟ್ಟಿದ್ದನು. ಆ ವೇದವತಿಯನ್ನೇ ರಾವಣನು ಅಪಹರಿಸಿಕೊಂಡು ಹೋಗಿ ಲಂಕೆಯಲ್ಲಿಟ್ಟುಕೊಂಡಿದ್ದನು.

೨೪-೨೬. ರಾವಣಾಸುರನು ನನ್ನಿಂದ ಸಂಹೃತನಾಗಲು ಆಕೆಯು ಮತ್ತೆ ಅಗ್ನಿಪ್ರವೇಶವನ್ನು ಮಾಡಿದಳು. ಆಗ ಅಗ್ನಿದೇವನು ಸ್ವಾಹಾದೇವಿಯೊಡನೆ

ದತ್ತ್ವಾ ಹಸ್ತೇ ಚ ಮಾಮಾಹ ಸೀತಯಾ ಸಹಿತಾಂ ಸಖೀಂ ।
ಇಯಂ ವೇದವತೀ ದೇವ ಸೀತಾಯಾಃ ಪ್ರಿಯಕಾರಿಣೀ ॥ ೨೫ ॥
ಸೀತಾರ್ಥಂ ರಾಕ್ಷಸಪುರೇ ತೇನ ಬಂದೀಕೃತಾ ಸ್ಥಿತಾ ।
ತಸ್ಮಾದೇನಾಂ ವರೇಣೈವ ಪ್ರೀಣಯ ತ್ವಂ ಶ್ರಿಯಾ ಸಹ ॥ ೨೬ ॥
ಇತಿ ವಹ್ನಿವಚಃ ಶ್ರುತ್ವಾ ಸೀತಾ ಮಾಮವದಚ್ಛುಭಾ ।
ಮಮ ಪ್ರೀತಿಕರೀ ನಿತ್ಯಮಿಯಂ ವೇದವತೀ ವಿಭೋ ॥ ೨೭ ॥
ತಸ್ಮಾತ್ಪರಂ ಭಾಗವತೀಂ ದೇವ್ಯೈನಾಂ ವರಯ ಪ್ರಭೋ ॥ ೨೮ ॥

ಶ್ರೀ ಭಗವಾನುವಾಚ :—

ತಥಾ ದೇವಿ ಕರಿಷ್ಯಾಮಿ ಹ್ಯಷ್ಟಾವಿಂಶೇ ಕಲೌ ಯುಗೇ ।
ತಾವದೇಷಾ ಬ್ರಹ್ಮಲೋಕೇ ವಸತ್ವಮರ ಪೂಜಿತಾ ॥ ೨೯ ॥
ಪಶ್ಚಾತ್ತು ಭೂಮಿತನಯಾ ಭವಿಷ್ಯತಿ ಮಿಯತ್ಸುತಾ ।
ಇತಿ ದತ್ತವರಾ ಪೂರ್ವಂ ಮಯಾ ಲಕ್ಷ್ಮ್ಯಾ ಚ ಸುಂದರೀ ॥ ೩೦ ॥

---

ಬಿಟ್ಟಿದ್ದ ಜಾನಕಿಯನ್ನು ನನ್ನ ಕೈಯಲ್ಲಿಟ್ಟು ಸೀತೆಯೊಡನಿದ್ದ ಸಖಿಯಾದ ವೇದವತಿಯ ವಿಷಯವಾಗಿ ಹೇಳತೊಡಗಿದನು. 'ಎಲೈ ದೇವೋತ್ತಮನೆ! ಈಕೆಯೇ ಸೀತೆಗೆ ಅತ್ಯಂತ ಪ್ರಿಯವನ್ನುಂಟುಮಾಡಿದ ವೇದವತಿಯೆಂಬುವಳು. ಸೀತೆಗಾಗಿಯೇ ಈಕೆಯು ಲಂಕಾಪಟ್ಟಣದಲ್ಲಿ ರಾಕ್ಷಸರಿಂದ ಬಂಧನದ ದುಃಖವನ್ನನುಭವಿಸಿದಳು. ಆದುದರಿಂದ ಲಕ್ಷ್ಮೀರಮಣನಾದ ನೀನು ವರಗಳನ್ನು ಕೊಟ್ಟು ಈಕೆಯನ್ನು ಸಂತೋಷಗೊಳಿಸು.'

೨೭–೨೮. ಇಂತೆಂದ ಅಗ್ನಿದೇವನ ಮಾತುಗಳನ್ನು ಕೇಳಿ ಪಾವನೆಯಾದ ಸೀತೆಯು ನನ್ನನ್ನು ಕುರಿತು 'ನಾಥನೆ! ಈಕೆಯೇ ನನಗೆ ಪ್ರಿಯವನ್ನುಂಟುಮಾಡಿದ ವೇದವತಿಯು. ಆದುದರಿಂದ ಉತ್ತಮ ಭಾಗವತೆಯಾದ ಈಕೆಯನ್ನು ಸ್ವೀಕರಿಸು' ಎಂಬುದಾಗಿ ಹೇಳಿದಳು.

೨೯. ಭಗವಂತನು ಹೇಳುತ್ತಾನೆ:—'ಎಲೌ ದೇವಿಯೆ! ಮುಂದೆ ಬರುವ ಇಪ್ಪತ್ತೆಂಟನೆಯ ಕಲಿಯುಗದಲ್ಲಿ ಹಾಗೆ ಮಾಡುವೆನು. ಅಲ್ಲಿಯವರೆಗೂ ಈಕೆಯು ಬ್ರಹ್ಮಲೋಕದಲ್ಲಿ ದೇವತೆಗಳ ಪೂಜೆಯನ್ನು ಸ್ವೀಕರಿಸುತ್ತ ವಾಸಮಾಡುತ್ತಿರಲಿ.

೩೦. ಆಗ ಈಕೆಯು ಭೂಮಿಯಲ್ಲಿ ಉದ್ಭವಿಸಿ ಆಕಾಶರಾಜನ ಮಗಳೆನಿಸುವಳು.' ಇಂತೆಂದು ಆ ಸುಂದರಿಯು ನನ್ನಿಂದಲೂ, ಮಹಾಲಕ್ಷ್ಮಿಯಿಂದಲೂ ಪೂರ್ವದಲ್ಲಿ ವರವನ್ನು ಪಡೆದಿದ್ದಳು.

ಅದ್ಯ ನಾರಾಯಣಪುರೇ ಸಂಭೂತಾ ಧರಣೀತಲಾತ್ ।
ಪದ್ಮಾಸಮಾ ಪದ್ಮನೇತ್ರೀ ಪದ್ಮಾದತ್ತವರಾ ಸತೀ ॥ ೩೧ ॥
ಸಖೀಭಿರನುರೂಪಾಭಿರ್ವನೇ ಪುಷ್ಪಾಣಿ ಚಿನ್ವತೀ ।
ಮೃಗಯಾಮಟಿತಾ ತತ್ರ ಮಯಾ ದೃಷ್ಟಾ ಮನೋರಮಾ ॥ ೩೨ ॥
ತಸ್ಯಾ ರೂಪಂ ಮಯಾ ವಕ್ತುಂ ನ ಶಕ್ಯಂ ಶತಹಾಯನೈಃ ।
ಲಕ್ಷ್ಮ್ಯೇವ ಚ ತಯಾ ಮೇಽದ್ಯ ಸಂಗಮೋ ಭವಿತಾ ಯದಿ ॥ ೩೩ ॥
ಪ್ರಾಣಾಃ ಸ್ಥಿರಾ ಭವಿಷ್ಯಂತಿ ಸತ್ಯಮಿತ್ಯವಧಾರಯ ॥ ೩೪ ॥
ತ್ವಂ ತತ್ರ ಗತ್ವಾ ತಾಂ ಕನ್ಯಾಂ ದೃಷ್ಟ್ವಾ ಬಕುಲಮಾಲಿಕೇ ।
ಜಾನೀಹಿ ರೂಪಲಾವಣ್ಯಾದಿಯುಂ ಯೋಗ್ಯೇತಿ ಚಾಸ್ಯ ಮೈ ।
ಅನವದ್ಯಾ ವಿಶಾಲಾಕ್ಷೀ ಪದ್ಮೇಂದೀವರಲೋಚನಾ ॥ ೩೫ ॥
ಇತ್ಯುಕ್ತ್ವಾ ಮೋಹಮಾಪನ್ನಂ ತಂ ಪ್ರಾಹ ಬಕುಲಾ ಪುನಃ ।
ಇತೋ ಗಚ್ಛಾಮಿ ದೇವೇಶ ಮನೋಜ್ಞಾ ತವ ಯತ್ರ ಸಾ ॥ ೩೬ ॥

---

೩೧. ಆಕೆಯೇ ಲಕ್ಷ್ಮಿಯ ವರದ ಫಲವಾಗಿ ಈಗ ನಾರಾಯಣಪುರದಲ್ಲಿ ಭೂಮಿಯಿಂದುದ್ಭವಿಸಿ ಲಕ್ಷ್ಮಿಗೆ ಸಮಾನಳೂ ಪದ್ಮದಳದಂತೆ ವಿಶಾಲಗಳಾದ ನೇತ್ರಗಳುಳ್ಳವಳೂ ಆಗಿ ಬೆಳೆಯುತ್ತಿರುವಳು.

೩೨. ತನಗೆ ಅನುರೂಪರಾದ ಸಖಿಯರೊಡನೆ ವನದಲ್ಲಿ ಪುಷ್ಪಾಪಚಯವನ್ನು ಮಾಡುತ್ತಿರಲು ನಾನೂ ಬೇಟೆಯನ್ನಾಡುತ್ತ ಬಂದು ಮನೋಹರಳಾದ ಆಕೆಯನ್ನು ಕಂಡೆನು.

೩೩–೩೪. ಆಕೆಯ ರೂಪವನ್ನು ಬಣ್ಣಿಸಲು ನನಗೆ ನೂರು ವರ್ಷಗಳ ಕಾಲವೂ ಸಾಲದಾಗಿದೆ. ಅನಪಾಯಿನಿಯಾದ ಲಕ್ಷ್ಮಿಯೊಡನೆ ಹೇಗೆ ನನಗೆ ಸಂಬಂಧವುಂಟಾಗಿರುವುದೊ, ಹಾಗೆಯೇ ಈಗ ಆಕೆಯೊಡನೆ ಸಂಬಂಧವೇರ್ಪಟ್ಟರೆ ಮಾತ್ರ ನನ್ನ ಪ್ರಾಣಗಳು ಈ ಶರೀರದಲ್ಲಿ ನಿಲ್ಲುವುವೆಂಬುದನ್ನು ಖಂಡಿತವಾಗಿ ತಿಳಿ.

೩೫. ಎಲೌ ಬಕುಳಮಾಲಿಕೆಯೆ ! ನೀನು ಅಲ್ಲಿಗೆ ಹೋಗಿ ಆ ಕನ್ಯೆಯನ್ನು ಕಂಡು ನನಗೆ ರೂಪಲಾವಣ್ಯಗಳಿಂದ ಸಮಾನಳಾದವಳು ಅವಳೊಬ್ಬಳೇ ಎಂಬುದನ್ನು ತಿಳಿ. ಅವಳು ಸರ್ವಾಂಗಸುಂದರಿಯೂ ಕಮಲ, ಕನ್ನೈದಿಲೆಗಳನ್ನು ಹೋಲುವ ದೀರ್ಘಗಳಾದ ನೇತ್ರಗಳುಳ್ಳವಳೂ ಆಗಿರುವಳು.''

೩೬. ಇಂತೆಂದು ಮತ್ತೆ ಮೋಹವನ್ನು ತಾಳಿದ ಶ್ರೀನಿವಾಸನನ್ನು ಕುರಿತು ಆಕೆಯು ಸಮಾಧಾನ ಮಾಡತೊಡಗಿದಳು. "ದೇವತಾಸಾರ್ವಭೌಮನೆ! ನಿನ್ನ ಪ್ರೀತಿಗೆ ಪಾತ್ರಳಾದ ಆ ಕನ್ಯೆಯಿರುವಲ್ಲಿಗೆ ನಾನೇ ಹೋಗುವೆನು.

ಮಾರ್ಗಂ ವದ ರಮಾಧೀಶ ಗಮಿಷ್ಯೇ ಯೇನ ತಾಂ ಪ್ರತಿ ।
ಏವಮುಕ್ತೋ ರಮಾಧೀಶಸ್ತಾಂ ಪ್ರಾಹ ಬಕುಲಸ್ರಜಂ ॥ ೩೭ ॥
ಇತೋ ಗಚ್ಛ ಮಹಾಭಾಗೇ ಶ್ರೀನೃಸಿಂಹಗೃಹೋ ಯತಃ ।
ತನ್ಮಾರ್ಗೇಣಾವತೀರ್ಯಾಸ್ಮಾದ್ಭೂಧರೇಂದ್ರಾನ್ಮನೋರಮಾತ್ ॥ ೩೮ ॥
ಅಗಸ್ತ್ಯಾಶ್ರಮಮಾಸಾದ್ಯ ದೃಷ್ಟ್ವಾ ಲಿಂಗಂ ತದರ್ಚಿತಂ ।
ಅಗಸ್ತ್ಯೇಶ ಇತಿ ಖ್ಯಾತಂ ಸುವರ್ಣಮುಖರೀತಟೇ ॥ ೩೯ ॥
ತೀರೇಣೈವ ತತೋ ಗಚ್ಛ ಶುಕಬ್ರಹ್ಮಋಷೇರ್ವನಂ ।
ಪಶ್ಯಂತೀ ಸ್ವರ್ಣಮುಖರೀಂ ತತ್ರ ಕಲ್ಲೋಲಮಾಲಿನೀಂ ॥ ೪೦ ॥
ತತ್ರ ಪದ್ಮಸರೋನಾಮ ಪಾವನಂ ಪದ್ಮಸಂಯುತಂ ।
ತತ್ರ ಸ್ನಾತ್ವಾಥ ತತ್ತೀರೇ ತಪಂತಂ ಮುನಿಸತ್ತಮಂ ॥ ೪೧ ॥
ಛಾಯಾಶುಕಂ ನಮಸ್ಕೃತ್ಯ ಕೃಷ್ಣಂ ಚ ಬಲಸಂಯುತಂ ।
ಆರಾಧ್ಯಮಾನಂ ಮುನಿನಾ ಶುಕೇನ ಸತತಂ ಶುಭೇ ॥ ೪೨ ॥
ಇಂದ್ರನೀಲಮಣಿಶ್ಯಾಮಂ ಪೀತನಿರ್ಮಲವಾಸಸಂ ।
ತೀರ್ಥಯಾತ್ರಾಂ ಗಮಿಷ್ಯಂತಂ ಬಲಭದ್ರಂ ಸಿತಾಕೃತಿಂ ॥ ೪೩ ॥

---

೩೭. ಅವಳ ಹತ್ತಿರಕ್ಕೆ ಹೋಗುವುದಕ್ಕೆ ಯಾವ ಮಾರ್ಗವನ್ನು ಹಿಡಿಯಬೇಕೆಂಬುದನ್ನು ಹೇಳು.'' ಇಂತೆಂದ ಬಕುಳಮಾಲಿಕೆಯನ್ನು ಕುರಿತು ಪರಮಾತ್ಮನು ಆಕೆಗೆ ಹೇಳತೊಡಗಿದನು.

೩೮. "ಮಹಾಭಾಗಳೆ! ಇಲ್ಲಿಂದ ನೀನು ಶ್ರೀ ನೃಸಿಂಹಾಲಯವಿರುವಲ್ಲಿಗೆ ಹೋಗಬೇಕು. ಅದೇ ಮಾರ್ಗವಾಗಿ ಈ ಪರ್ವತ ಶ್ರೇಷ್ಠವನ್ನು ಇಳಿಯಬೇಕು.

೩೯–೪೦. ಪರ್ವತದ ಬುಡದಲ್ಲಿ ಸುವರ್ಣಮುಖರೀನದಿಯ ದಡದಲ್ಲಿರುವ ಅಗಸ್ತ್ಯಾಶ್ರಮವನ್ನು ಸೇರುವೆ. ಅಲ್ಲಿ ಅಗಸ್ತ್ಯ ಮಹರ್ಷಿಯಿಂದ ಪೂಜಿತವಾದ ಅಗಸ್ತ್ಯೇಶ್ವರನೆಂಬ ಹೆಸರಿನ ಲಿಂಗದ ದರ್ಶನವನ್ನು ಮಾಡು. ಬಳಿಕ ಅಲೆಗಳಿಂದ ಮನೋಹರವಾದ ಸುವರ್ಣಮುಖರೀ ನದಿಯನ್ನು ನೋಡುತ್ತ ಅದರ ದಡದಲ್ಲಿಯೇ ನಡೆದರೆ ಶುಕಬ್ರಹ್ಮಮಹರ್ಷಿಯ ತಪೋವನವನ್ನು ಸೇರುವೆ.

೪೧–೪೨. ಅಲ್ಲಿ ಕಮಲಗಳಿಂದ ಕೂಡಿ ಪಾವನವಾದ ಪದ್ಮಸರಸ್ಸೆಂಬ ಕೊಳವಿರುವುದು. ಅದರಲ್ಲಿ ಸ್ನಾನಮಾಡಿ ತೀರದಲ್ಲಿ ತಪೋನಿರತನಾಗಿರುವ ಮುನಿಶ್ರೇಷ್ಠನಾದ ಛಾಯಾಶುಕನನ್ನೂ ಆತನಿಂದ ನಿತ್ಯದಲ್ಲಿಯೂ ಪೂಜೆಯನ್ನು ಸ್ವೀಕರಿಸುತ್ತಿರುವ ಬಲರಾಮ ಸಹಿತನಾದ ಶ್ರೀ ಕೃಷ್ಣನನ್ನೂ ನಮಸ್ಕರಿಸು.

೪೩. ಶ್ರೀಕೃಷ್ಣನು ಇಂದ್ರನೀಲದ ಮಣಿಯಂತೆ ನೀಲವರ್ಣದಿಂದ ಕೂಡಿದವನಾಗಿ ಶುಭ್ರವಾದ ಪೀತಾಂಬರವನ್ನು ಧರಿಸಿರುವನು. ಬಲರಾಮನು ಶ್ವೇತ ವರ್ಣದವನಾಗಿ ತೀರ್ಥಯಾತ್ರೆಗೆ ಹೊರಡುವ ಸಿದ್ಧತೆಯ ರೂಪದಲ್ಲಿರುವನು.

ಉಪಾಸಯಂತಂ ಮಂತ್ರಾಣಿ ಮುಕ್ತಾನ್ವಿತಕರದ್ವಯಂ ।
ಉದ್ಯಂತಂ ಪಾದುಕಾಯುಕ್ತಂ ಬಲಭದ್ರಂ ಪ್ರಣಮ್ಯ ಚ ॥ ೪೪ ॥
ಆದಾಯ ಸ್ವರ್ಣಕಮಲಂ ಸರಸೋಽಸ್ಮಾದ್ವರಾನನೇ ।
ತೀರ್ತ್ವಾ ಸುವರ್ಣಮುಖರೀಂ ವನಾನ್ಯುಪವನಾನಿ ಚ ॥ ೪೫ ॥
ಅರಣೀತೀರಮಾಸಾದ್ಯ ವಿಶ್ರಮ್ಯ ಚ ವನಾಂತರೇ ।
ನಾರಾಯಣಪುರೀಂ ದೃಷ್ಟ್ವಾ ವಿಸ್ಮಯಂ ಚ ಗಮಿಷ್ಯಸಿ ॥ ೪೬ ॥
ತಸ್ಯಾಶ್ಚೋಪವನೇ ವೃಕ್ಷಾನ್ಪುಷ್ಪಾಢ್ಯಾನ್ಫಲಸಂಯುತಾನ್ ।
ಪನಸಾಮ್ರಶಿರೀಷಾಂಶ್ಚ ಕುಂದತಿಂದುಲಪಾಟಲಾನ್ ॥ ೪೭ ॥
ಪುನ್ನಾಗನಾಗವರಣರಸಾಲಾಂಕೋಲಚಂಪಕಾನ್ ।
ಬಕುಲಾಮಲಕಾನ್ಸಾಲಾಂಸ್ತಾಲಹಿಂತಾಲಪದ್ಮಕಾನ್ ॥ ೪೮ ॥
ಜಂಬೂನಿಂಬಕದಂಬೈಲಾಪಿಪ್ಪಲೀಮಧುಕಾರ್ಜುನಾನ್ ।
ಪ್ರಿಯಂಗುಹಿಂಗುಖರ್ಜೂರಮಾಯೂರಾಶೋಕಲೋಧ್ರಕಾನ್ ॥ ೪೯ ॥
ಅಶ್ವತ್ಥೋದುಂಬರಪ್ಲಕ್ಷಬದರೀಭೂರ್ಜಕೀಚಕಾನ್ ।
ಚಿಂಚಾಕಿಂಶುಕಮಂದಾರಶಾಲ್ಮಲೀಬೀಜಪೂರಕಾನ್ ॥ ೫೦ ॥
ಪೂಗನಾರಂಗಲಿಕುಚನಾರಿಕೇಲವನಾಕುಲಾನ್ ।
ಮಲ್ಲಿಕಾಮಾಲತೀಕುಂದಯೂಥಿಕಾಕೇತಕೀಯುತಾನ್ ॥ ೫೧ ॥

---

೪೪. ಇಂತು ಮಂತ್ರಗಳನ್ನು ಜಪಿಸುತ್ತ ಮುಕ್ತಾಹಾರವನ್ನು ಎರಡು ಕೈಗಳಲ್ಲಿಯೂ ಹಿಡಿದಿರುವ ಕೃಷ್ಣನನ್ನೂ ಪಾದುಕೆಗಳನ್ನು ಧರಿಸಿ ಎದ್ದು ನಿಂತಿರುವ ಬಲರಾಮನನ್ನೂ ನಮಸ್ಕರಿಸು.

೪೫–೪೬. ಆ ಪದ್ಮಸರೋವರದಿಂದ ಸ್ವರ್ಣಕಮಲವೊಂದನ್ನು ತೆಗೆದು ಕೊಂಡು ಸುವರ್ಣಮುಖರಿಯನ್ನು ದಾಟಿ ಅನೇಕ ವನಗಳನ್ನೂ ಉದ್ಯಾನಗಳನ್ನೂ ಕಳೆದು ಅರಣೀ ನದಿಯ ದಡವನ್ನು ಸೇರಿ ಕಾಡಿನಲ್ಲಿ ವಿಶ್ರಾಂತಿಯನ್ನು ಹೊಂದುತ್ತಿರಲು ನಾರಾಯಣಪುರವನ್ನು ಕಂಡು ಅತ್ಯಂತ ವಿಸ್ಮಯವನ್ನು ಹೊಂದುವೆ.

೪೭–೫೫. ಆ ಪಟ್ಟಣದ ಉಪವನದಲ್ಲಿ ಅನೇಕ ವೃಕ್ಷಗಳು ಪುಷ್ಪಗಳಿಂದಲೂ, ಫಲಗಳಿಂದಲೂ ತುಂಬಿರುವುವು. ಹಲಸು, ಮಾವು, ಶಿರೀಷ, ಕುಂದ, ತಿಂದುಲ, ಪಾಟಲ, ಪುನ್ನಾಗ, ನಾಗ, ಬಾಳೆ, ಅಂಕೋಲ, ಸಂಪಗೆ, ವರಣ, ವಕುಳ, ಆಮಲಕ, ಸಾಲ, ತಾಲ, ಹಿಂತಾಲ, ಪದ್ಮಕ, ಜಂಬು, ನಿಂಬ, ಕದಂಬ, ಏಲಾ, ಪಿಪ್ಪಲಿ, ಮಧುಕ, ಅರ್ಜುನ, ಪ್ರಿಯಂಗು, ಹಿಂಗು, ಖರ್ಜೂರ, ಮಾಯೂರ, ಅಶೋಕ, ಲೋಧ್ರ, ಅಶ್ವತ್ಥ, ಉದುಂಬರ, ಪ್ಲಕ್ಷ, ಬದರಿ, ಭೂರ್ಜ, ಕೀಚಕ, ಚಿಂಚಾ, ಕಿಂಶುಕ, ಮಂದಾರ, ಶಾಲ್ಮಲಿ, ಬೀಜಪೂರ, ಪೂಗ, ನಾರಂಗ, ಲಿಕುಚ, ನಾರಿಕೇಳ ಮುಂತಾದ ವೃಕ್ಷಗಳಿಂದಲೂ, ಮಲ್ಲಿಗೆ,

ಕರವೀರಾಬ್ಜಸಂಪನ್ನಾನ್ರಾಜರಂಭಾವಿರಾಜಿತಾನ್ ।
ಮಯೂರಕೀರಗರುಡ ಶುಕಸಾರಸಸಂಕುಲಾನ್ ॥ ೫೨ ॥
ಭೃಂಗಝುಂಕಾರನಿಬಿಡಾನಾರಾಮಾನ್ಸುಮನೋಹರಾನ್ ।
ಪಶ್ಯಂತೀ ಪರಮಂ ಹರ್ಷಮವಾಪ್ಯ ಚ ನದೀತಟೇ ॥ ೫೩ ॥
ಗತ್ವಾ ಪೂರ್ವೋತ್ತರೇ ಮಾರ್ಗೇ ಪುರೀಮಿಂದ್ರಪುರೀಸಮಾಂ ।
ಗಂಗಯೇವಾವೃತಾಂ ನಿತ್ಯಂ ಸರಿತಾರಣಿನಾಮಯಾ ॥ ೫೪ ॥
ಆಕಾಶರಾಜನಗರೀಂ ಗತ್ವಾ ತತ್ರೋಚಿತಂ ಕುರು ॥ ೫೫ ॥
ಇತ್ಯಾದಿಶ್ಯ ಸುರಾಧೀಶೋ ಸಖೀಂ ತಾಂ ಬಕುಲಾಭಿಧಾಂ ।
ವಿಸೃಜ್ಯ ಶಯನೇ ಶುಭ್ರೇ ಸ ಶಿಶ್ಯೇ ಶ್ರೀಸಮನ್ವಿತಃ ॥ ೫೬ ॥
ಪ್ರಣಮ್ಯ ದೇವದೇವೇಶಂ ಸಖೀ ಬಕುಲಮಾಲಿಕಾ ।
ಗುಂಜಾಮಣಿಸಮಾಕಾರಂ ರಕ್ತಾಶ್ವಮಧಿರುಹ್ಯ ಸಾ ॥ ೫೭ ॥
ಯಥೋಕ್ತಮಾರ್ಗೇಣ ಯಯೌ ಪಶ್ಯಂತೀ ವಿವಿಧಾನ್ಮೃಗಾನ್ ।
ಮತ್ತೇಭಾನ್ಪರ್ವತಾಕಾರಾನ್ಶ್ವೇತದಂತವಿಭೂಷಿತಾನ್ ॥ ೫೮ ॥

---

ಮಾಲತಿ, ಕುಂದ, ಯೂಥಿಕಾ, ಕೇತಕೀ, ಕರವೀರ, ಕಮಲ ಮುಂತಾದ ಪುಷ್ಪ ಲತಾದಿಗಳಿಂದಲೂ, ಬಾಳೆಯ ತೋಟಗಳಿಂದಲೂ, ಮಯೂರ, ಕೀರ, ಗರುಡ, ಶುಕ, ಸಾರಸಗಳೇ ಮೊದಲಾದ ಪಕ್ಷಿಗಳಿಂದಲೂ, ದುಂಬಿಗಳ ಝೇಂಕಾರ ದಿಂದಲೂ, ಮನೋಹರಗಳಾಗಿರುವ ಉದ್ಯಾನವನಗಳನ್ನು ನೋಡುತ್ತ ಅಪರಿ ಮಿತವಾದ ಆನಂದವನ್ನು ಹೊಂದಿ ನದಿಯ ದಡದಲ್ಲಿಯೇ ನಡೆದು ಬರುತ್ತ ಈಶಾನ್ಯ ದಿಕ್ಕಿಗೆ ಪ್ರಯಾಣಮಾಡಲು ಇಂದ್ರನ ಅಮರಾವತಿಗೆ ಸಮಾನವಾದ ಪಟ್ಟಣವೊಂದನ್ನು ನೋಡುವೆ. ಆ ನಗರವು ಗಂಗಾನದಿಗೆ ಸಮಾನವಾದ ಅರಣಿ ಯೆಂಬ ನದಿಯಿಂದ ಸುತ್ತುವರೆಯಲ್ಪಟ್ಟಿರುವುದು. ಆಕಾಶರಾಜನ ರಾಜಧಾನಿ ಯಾದ ಆ ನಾರಾಯಣಪುರಕ್ಕೆ ಹೋಗಿ ಸಂದರ್ಭಾನುಸಾರವಾಗಿ ಕೆಲಸವನ್ನು ಮುಂದುವರೆಸು."

೫೬. ಇಂತೆಂದು ದೇವಾಧೀಶನಾದ ಶ್ರೀನಿವಾಸನು ಸಖಿಯಾದ ಬಕುಳ ಮಾಲಿಕೆಗೆ ದಾರಿಯನ್ನು ತಿಳಿಸಿ ಬೀಳುಕೊಟ್ಟು, ತನ್ನ ಶುಭ್ರವಾದ ಮಂಚದಲ್ಲಿ ಮಲಗಿದನು.

೫೭-೬೨. ಆ ಬಕುಳಮಾಲಿಕೆಯೂ ಆತನಿಗೆ ನಮಸ್ಕಾರವನ್ನು ಮಾಡಿ ಗುಲಗಂಜಿಯ ಬಣ್ಣದ ಕುದುರೆಯೊಂದನ್ನುಏರಿಕೊಂಡು ಶ್ರೀನಿವಾಸನು ಹೇಳಿದ್ದ ಮಾರ್ಗವನ್ನನುಸರಿಸುತ್ತ ನಾನಾವಿಧಗಳಾದ ಕಾಡುಮೃಗಗಳನ್ನು ನೋಡುತ್ತ ಹೊರಟಳು. ಪರ್ವತಗಳಂತೆ ಉನ್ನತಗಳಾದ ಮದ್ದಾನೆಗಳು ಬೆಳ್ಳಗಿರುವ

ಕರಿಣೀಯೂಥಸಹಿತಾನ್ಜಲದಾದಾನತತ್ಪರಾನ್ ।
ಸಿಂಹಾನ್ಶ್ವೇತಘನಪ್ರಖ್ಯಾನ್ಸಿಂಹೀಯೂಥೈರನುದ್ರುತಾನ್ ॥ ೫೯ ॥
ಶಾರ್ದೂಲಕ್ಷಾರ್ಂಶ್ಚ ಖಡ್ಗಾಂಶ್ಚ ಶರಭಾನ್ಗವಯಾನ್ಮೃಗಾನ್ ।
ಕೃಷ್ಣಸಾರಾಂಶ್ಚ ಗೋಮಾಯೂನ್ಪಶಾಂಶ್ಚ ಪ್ರಿಯಕಾನಪಿ ॥ ೬೦ ॥
ಸಾರಸಾಂಶ್ಚ ಮಯೂರಾಂಶ್ಚ ಮಾರ್ಜಾರಾನ್ವನಗೋಚರಾನ್ ।
ವೃಕಾನ್ಭಕಾನ್ಸೂಕರಾಂಶ್ಚ ಸುವಾಚಃ ಪಕ್ಷಿಣಸ್ತಥಾ ॥ ೬೧ ॥
ಪಶ್ಯಂತೀ ವಿವಿಧಾಕಾರಾನ್ಸ್ತುಷ್ಯಂತೀ ಚ ಮುಹುರ್ಮುಹುಃ ।
ಆಸಸಾದಾರಣೀತೀರಂ ಪಶ್ಚಿಮಂ ಪಾದಪಾಕುಲಂ ॥ ೬೨ ॥
ಅವತೀರ್ಯಾರುಣಾದಶ್ವಾದಗಸ್ತ್ಯೇಶಸಮೀಪತಃ ।
ದೃಷ್ಟ್ವಾಗಸ್ತ್ಯೇಶ್ವರಂ ಲಿಂಗಮಗಸ್ತ್ಯೇನ ಸುಪೂಜಿತಂ ॥ ೬೩ ॥
ತತ್ರ ಸ್ನಾತ್ವಾ ಚ ಪೀತ್ವಾ ಚ ವಿಶಶ್ರಾಮ ನದೀತಟೇ ॥ ೬೪ ॥
ತತ್ರಾಗತಾ ರಾಜಗೃಹಾದ್ಯೋಷಿತೋ ದೇವಸನ್ನಿಧೌ ।
ಸಖೀಃ ಪದ್ಮಾಲಯಾಯಾಸ್ತಾ ದೃಷ್ಟ್ವಾ ಬಕುಲಮಾಲಿಕಾ ॥ ೬೫ ॥
ಗತ್ವಾ ಸಮೀಪೇ ತಾಸಾಂ ಸಾ ಕಿಂವದಂತೀಂಸ್ಮ ಪೃಚ್ಛತಿ ॥ ೬೬ ॥

---

ದಂತಗಳಿಂದ ಕೂಡಿದುವಾಗಿ ಹೆಣ್ಣಾನೆಗಳ ಹಿಂಡು ಬಳಸಿ ಬರುತ್ತಿರಲು ಮೇಘ ಗಳನ್ನು ಭೂಮಿಗೆ ಸೆಳೆಯುವುವೊ ಎಂಬಂತೆ ಕಾಣುತ್ತಿದ್ದುವು. ಬಿಳಿಯ ಮೇಘ ಗಳಂತೆ ಕಾಣುತ್ತಿರುವ ಸಿಂಹಗಳನ್ನು ಹೆಣ್ಣು ಸಿಂಹಗಳ ಹಿಂಡುಗಳು ಹಿಂಬಾಲಿ ಸುತ್ತಿದ್ದುವು. ಹೆಬ್ಬುಲಿಗಳು, ಕರಡಿಗಳು, ಖಡ್ಗಮೃಗಗಳು, ಶರಭಗಳು, ಗವಯುಗಳು, ಕೃಷ್ಣಸಾರಮೃಗಗಳು, ನರಿಗಳು, ಮೊಲಗಳು, ಪ್ರಿಯಕಗಳೆಂಬ ಜಿಂಕೆಗಳು ಮುಂತಾದ ಮೃಗಗಳನ್ನೂ, ಚಕ್ರವಾಕಗಳನ್ನೂ, ನವಿಲುಗಳನ್ನೂ, ಬೆಕ್ಕು–ಕೋತಿಗಳನ್ನೂ, ತೋಳಗಳನ್ನೂ, ಗಿಳಿವಿಂಡುಗಳನ್ನೂ, ಕಾಡುಹಂದಿ ಗಳನ್ನೂ, ಮೃದುಸ್ವರವುಳ್ಳ ಪಕ್ಷಿಗಳನ್ನೂ ನೋಡುತ್ತ, ನಾನಾರೂಪಗಳಾದ ಅವುಗಳನ್ನೆಲ್ಲ ಮತ್ತೆ ಮತ್ತೆ ಹೊಗಳಿಕೊಳ್ಳುತ್ತ ವೃಕ್ಷಗಳಿಂದ ನಿಬಿಡವಾಗಿದ್ದ ಅರಣೀ ನದಿಯ ಪಶ್ಚಿಮ ತೀರಕ್ಕೆ ಬಂದು ಸೇರಿದಳು.

೬೩–೬೪. ಅಲ್ಲಿ ತನ್ನ ಅರುಣಾಶ್ವದಿಂದ ಅಗಸ್ತ್ಯೇಶ್ವರನ ಸಮೀಪದಲ್ಲಿಳಿದು ಆ ಮಹರ್ಷಿಯಿಂದ ಬಹಳವಾಗಿ ಪೂಜಿಸಲ್ಪಟ್ಟು ಆತನ ಹೆಸರಿನಿಂದ ಪ್ರಸಿದ್ಧ ವಾದ ಲಿಂಗವನ್ನು ಕಂಡು ತೀರ್ಥದಲ್ಲಿ ಸ್ನಾನಮಾಡಿ ದಾಹವನ್ನು ನೀಗಿಸಿಕೊಂಡು ಅಲ್ಲಿಯೇ ವಿಶ್ರಮಿಸಿಕೊಳ್ಳುತ್ತಿದ್ದಳು.

೬೫–೬೬. ಅಲ್ಲಿಗೆ ಮಹೇಶ್ವರನ ದರ್ಶನಕ್ಕಾಗಿ ರಾಜನ ಅರಮನೆಯಿಂದ ಪದ್ಮಾವತಿಯ ಸಖಿಯರು ಬಂದರು. ಅವರನ್ನು ಕಂಡು ಬಕುಳಮಾಲಿಕೆಯು ಅವರ ಸಮೀಪಕ್ಕೈದಿ ಅವರ ಸಮಾಚಾರವನ್ನು ಕೇಳುವವಳಾದಳು.

ಬಕುಲಮಾಲಿಕೋವಾಚ :—

ಕಾ ಯೂಯಂ ಯೋಷಿತೋ ಬ್ರೂತ ವಿಚಿತ್ರಾಭರಣಸ್ರಜಃ ।
ಕುತಃ ಸಮಾಗತಾ ಹ್ಯತ್ರ ಕಿಂ ಕಾರ್ಯಂ ವೋಽಮಲಾನನಾಃ ॥ ೬೭ ॥
ತಾಸ್ತು ತಸ್ಯಾ ವಚಃ ಶ್ರುತ್ವಾ ಸ್ಮಿತಪೂರ್ವಮಥಾಬ್ರುವನ್ ।
ಶೃಣುಷ್ವಾವಹಿತಾ ದೇವಿ ವಯಂ ವಕ್ಷ್ಯಾಮಹೇಽಧುನಾ ॥ ೬೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಶ್ರೀ ವೆಂಕಟಾಚಲಮಾಹಾತ್ಮ್ಯೇ ಧರಣೀ
ವರಾಹ ಸಂವಾದೇ "ಪದ್ಮಾವತೀದರ್ಶನೇನ ಶ್ರೀನಿವಾಸಸ್ಯ
ಮೋಹಪ್ರಾಪ್ತ್ಯಾದಿವರ್ಣನಂ" ನಾಮ
ಪಂಚಮೋಽಧ್ಯಾಯಃ

---

೬೭. ಬಕುಳಮಾಲಿಕೆಯು ಕೇಳುತ್ತಾಳೆ :—"ಎಲೌ ಮಂಗಳಾಂಗಿಯರೆ! ವಿಚಿತ್ರಗಳಾದ ಆಭರಣಗಳನ್ನೂ ಪೂಮಾಲೆಗಳನ್ನೂ ಧರಿಸಿರುವ ನೀವು ಯಾರು? ನನಗೆ ತಿಳಿಸಿರಿ. ಎಲ್ಲಿಂದ ಇಲ್ಲಿಗೆ ಬಂದಿರಿ? ಇಲ್ಲಿ ನಿಮಗೆ ಏನು ಕಾರ್ಯವಿರುವುದು?"

೬೮. ಆಕೆಯ ಮಾತನ್ನು ಕೇಳಿ ಆ ಕನ್ಯಕೆಯರು ಮಂದಸ್ಮಿತಪೂರ್ವಕವಾಗಿ "ಎಲೌ ದೇವಿಯೆ! ನೀನು ಕೇಳಿದ ಪ್ರಶ್ನೆಗಳಿಗೆಲ್ಲ ಉತ್ತರಗಳನ್ನು ಹೇಳುವೆವು. ಸಾವಧಾನಚಿತ್ತದಿಂದ ಕೇಳು" ಎಂದು ಹೇಳತೊಡಗಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೆಂಕಟಾಚಲ
ಮಾಹಾತ್ಮ್ಯೆಯ ಧರಣೀ ವರಾಹ ಸಂವಾದದಲ್ಲಿ "ಪದ್ಮಾವತಿಯ ದರ್ಶನದಿಂದ
ಶ್ರೀನಿವಾಸನು ಕಾಮಪರವಶನಾದುದು" ಎಂಬ ಐದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಷ್ಠೋಽಧ್ಯಾಯಃ

ಬಕುಲಮಾಲಿಕಾಂ ಪ್ರತಿ ಸಖೀವಿನಿವೇದಿತ ಪದ್ಮಾವತ್ಯುದಂತ ವಿಷ್ಣುಭಕ್ತ ಲಕ್ಷಣಾದಿ ವರ್ಣನಂ

ಯೋಷಿತ ಊಚುಃ:—

ವಯಮಾಕಾಶರಾಜಸ್ಯ ಶುದ್ಧಾಂತನಿಲಯಾಃ ಸ್ತ್ರಿಯಃ ।
ಸಖ್ಯಃ ಪದ್ಮಾಲಯಾಯಾ ವೈ ದುಹಿತುರ್ವಸುಧಾಪತೇಃ ॥ ೧ ॥
ರಾಜಪುತ್ರೀಂ ಪುರಸ್ಕೃತ್ಯ ಗತಾಃ ಪೂರ್ವಂ ವನಾಂತರಂ ।
ಕುರ್ವಂತ್ಯಃ ಪುಷ್ಪಾಪಚಯಂ ರಾಜಪುತ್ರ್ಯರ್ಥಮಾಕುಲಾಃ ॥ ೨ ॥
ವೃಕ್ಷಮೂಲೇ ಸಮಾಸೀನಾಸ್ತತ್ರ ಪಶ್ಯಾಮ ಪೂರುಷಂ ।
ಇಂದ್ರನೀಲಮಣಿಶ್ಯಾಮಮಿಂದಿರಾಮಂದಿರೋರಸಂ ॥ ೩ ॥
ಈಷತ್ಸ್ಮಿತಮುಖಂ ಚಾರುಪೀನದೀರ್ಘಭುಜದ್ವಯಂ ।
ಶುಭ್ರಪೀತಾಂಬರಂ ಹೇಮಬಾಣಬಾಣಾಸನೋಜ್ಜ್ವಲಂ ॥ ೪ ॥

---

### ಕನ್ನಡದ ಅನುವಾದ

ಬಕುಳಮಾಲಿಕೆಗೆ ಸಖಿಯರು ಪದ್ಮಾವತಿಯ ಚರಿತ್ರೆಯನ್ನು ತಿಳಿಸಿದುದು — ವಿಷ್ಣುಭಕ್ತರ ಲಕ್ಷಣವರ್ಣನ

೧. ಸ್ತ್ರೀಯರು ಹೇಳುತ್ತಾರೆ:—"ಅಮ್ಮಾ! ನಾವೆಲ್ಲರೂ ಆಕಾಶರಾಜನ ಅರಮನೆಯ ಅಂತಃಪುರದಲ್ಲಿರುವ ಸಖಿಯರು; ಆ ಮಹಾರಾಜನ ಮಗಳಾದ ಪದ್ಮಾವತೀ ದೇವಿಗೆ ಸಹಚರಿಯರಾಗಿರುವೆವು.

೨. ಮುನ್ನೊಮ್ಮೆ ನಾವು ಆ ರಾಜಕುವರಿಯೊಡಗೂಡಿ ಆಕೆಗಾಗಿ ಆತುರಗೊಂಡು ಹೂವುಗಳನ್ನು ಕೊಯ್ಯುವುದಕ್ಕಾಗಿ ಒಂದಾನೊಂದು ಅರಣ್ಯವನ್ನು ಸೇರಿದೆವು.

೩. ಅಲ್ಲಿ ಮರದಡಿಯಲ್ಲಿ ಕುಳಿತು ವಿಶ್ರಮಿಸಿಕೊಳ್ಳುತ್ತಿರಲು ಒಬ್ಬಾನೊಬ್ಬ ಪುರುಷನನ್ನು ನೋಡಿದೆವು. ಆತನು ಇಂದ್ರನೀಲಮಣಿಯಂತೆ ಶ್ಯಾಮಲ ವರ್ಣನಾಗಿ ಲಕ್ಷ್ಮಿಗೆ ನಿವಾಸವಾದ ವಿಶಾಲ ವಕ್ಷಸ್ಥಳವುಳ್ಳವನಾಗಿದ್ದನು.

೪. ಮುಖವು ಮಂದಸ್ಮಿತದಿಂದ ಕೂಡಿದ್ದಿತು. ಎರಡು ಭುಜಗಳೂ ಸುಂದರವಾಗಿಯೂ, ದುಂಡಾಗಿಯೂ, ದೀರ್ಘವಾಗಿಯೂ ಇದ್ದುವು. ಆತನು ಶುಭ್ರ ಪೀತಾಂಬರವನ್ನುಟ್ಟು, ಚಿನ್ನದ ಬಿಲ್ಲುಬಾಣಗಳನ್ನು ಧರಿಸಿ ಮೆರೆಯುತ್ತಿದ್ದನು.

ಸುವರ್ಣಮುಕುಟಂ ಹಾರಕೇಯೂರಾದಿವಿಭೂಷಿತಂ ।
ತಂ ತು ಪದ್ಮಾಲಯಾ ದೃಷ್ಟ್ವಾ ಸಖೀ ಕಮಲಲೋಚನಾ ॥ ೫ ॥
ದ್ರುತಹೇಮನಿಭಾಕಾರಾ ಪಶ್ಯ ಪಶ್ಯೇತಿ ಸಾಬ್ರವೀತ್ ।
ಪಶ್ಯಂತೀನಾಂ ತದಾಸ್ಮಾಕಂ ಗತೋಽಂತರ್ಧಾನಮಾಶು ಸಃ ॥ ೬ ॥
ಸಾ ಸಖೀ ಮೂರ್ಛಿತಾಸ್ಮಾಭಿರ್ನೀತಾ ರಾಜಗೃಹಂ ತತಃ ॥ ೭ ॥
ದೃಷ್ಟ್ವಾಽಸ್ವಸ್ಥಾಂ ನೃಪಃ ಪುತ್ರೀಮಪೃಚ್ಛದ್ದೈವಚಿಂತಕಂ ।
ವದ ವಿಪ್ರೇಂದ್ರ ಪುತ್ರ್ಯಾ ಮೇ ಗ್ರಹಚಾರಫಲಂ ಮುನೇ ॥ ೮ ॥
ಬೃಹಸ್ಪತಿಸಮೋ ವಿಪ್ರೋ ವಿಚಾರ್ಯಾತ್ಮನಿ ಖೇಚರಾನ್ ।
ಅನುಕೂಲಾ ಗ್ರಹಾಸ್ಸರ್ವೇ ತವ ಪುತ್ರ್ಯಾ ನೃಪೋತ್ತಮ ॥ ೯ ॥
ಕಿಂ ತು ನಿತ್ಯಂ ಗ್ರಹಫಲಂ ಕಿಂಚಿದ್ಭ್ರಾಂತಿಕರಂ ನೃಪ ।
ತಮುವಾಚ ಪುನರ್ಧೀಮಾನ್ಪ್ರಶ್ನಕಾಲಂ ವಿಚಾರ್ಯ ಚ ॥ ೧೦ ॥
ಛಾಯಾಂ ಗುಣಿತ್ವಾ ಲಗ್ನಂ ಚ ತತ್ಫಲಾನಿ ವಿಚಾರ್ಯ ಚ ।
ಲಗ್ನೇ ಲಗ್ನಾಧಿಪಶ್ಚಂದ್ರಃ ಕೇಂದ್ರೇ ಚೈವ ಬೃಹಸ್ಪತಿಃ ॥ ೧೧ ॥

---

೫–೭. ಚಿನ್ನದ ಕಿರೀಟದಿಂದಲೂ, ಹಾರ, ಭಾಪುರಿಗಳೇ ಮೊದಲಾದ ಆಭರಣಗಳಿಂದಲೂ ಅಲಂಕೃತನಾಗಿದ್ದನು. ಆತನನ್ನು ಕಂಡು ಕಮಲ ನೇತ್ರೆಯೂ, ಪುಟವಿಟ್ಟ ಚಿನ್ನದಂತೆ ಮಿರುಗುವ ಮೈಯುಳ್ಳವಳೂ ಆದ ಪದ್ಮಾವತೀದೇವಿಯು "ಅಲ್ಲಿ ನೋಡಿ, ನೋಡಿ!" ಎಂಬುದಾಗಿ ಹೇಳಿದಳು. ನಾವು ನೋಡುತ್ತಿರುವಂತೆಯೇ ಆತನು ಕ್ಷಣಮಾತ್ರದಲ್ಲಿ ಅಂತರ್ಧಾನವನ್ನು ಹೊಂದಿದನು. ನಮ್ಮ ಸಖಿಯೂ ಮೂರ್ಛೆಯನ್ನು ಹೊಂದಲು ಆಕೆಯನ್ನು ಹಾಗೆಯೇ ರಾಜಮಂದಿರಕ್ಕೆ ಕರೆದುಕೊಂಡು ಬಂದೆವು.

೮. ಆಗ ಮಹಾರಾಜನು ಮಗಳು ಅಸ್ವಸ್ಥಳಾಗಿರುವುದನ್ನು ಕಂಡು ಜ್ಯೋತಿಷ್ಕನೊಬ್ಬನನ್ನು ಕರೆತರಿಸಿ, 'ಎಲೈ ಬ್ರಾಹ್ಮಣೋತ್ತಮನೆ! ನನ್ನ ಮಗಳಿಗೆ ಈಗಿನ ಗ್ರಹಚಾರದ ಫಲಗಳನ್ನು ಹೇಳು' ಎಂದು ಕೇಳಿದನು.

೯–೧೧. ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನನಾದ ಆ ಬ್ರಾಹ್ಮಣಶ್ರೇಷ್ಠನು ತನ್ನಲ್ಲಿಯೇ ಗ್ರಹಗಳ ಗತಿಗಳನ್ನೆಲ್ಲ ಕುರಿತು ಯೋಚಿಸಿ, "ಎಲೈ ರಾಜೋತ್ತ ಮನೆ! ನಿನ್ನ ಮಗಳಿಗೆ ಸಕಲ ಗ್ರಹಗಳೂ ಅನುಕೂಲಗಳಾಗಿರುವುವು. ಆದರೆ ಗ್ರಹಫಲವೆಂಬುದು ಯಾವಾಗಲೂ ಮನುಷ್ಯನಿಗೆ ಭ್ರಾಂತಿಯನ್ನುಂಟುಮಾಡು ವುದಾಗಿರುವುದು." ಇಂತೆಂದು ಮತ್ತೆ ಬುದ್ಧಿವಂತನಾದ ಆ ಬ್ರಾಹ್ಮಣನು ಪ್ರಶ್ನಾಕಾಲವನ್ನು ಚೆನ್ನಾಗಿ ವಿಚಾರಿಸಿಕೊಂಡು ಸೂರ್ಯಚ್ಛಾಯೆಯನ್ನು ಗುಣಿಸಿ ಗ್ರಹಸ್ಥಿತಿಗಳ ಫಲಗಳೆಲ್ಲವನ್ನೂ ಚೆನ್ನಾಗಿ ವಿಚಾರಮಾಡಿ ಇಂತೆಂದನು. "ಲಗ್ನ ದಲ್ಲಿ ರಾಶ್ಯಧಿಪತಿಯಾದ ಚಂದ್ರನಿರುವನು. ಕೇಂದ್ರದಲ್ಲಿ ಬೃಹಸ್ಪತಿಯಿರುವನು.

ನಿದ್ರಾತಿ ದಿನಪಕ್ಷೇ ತು ಪ್ರಶ್ನಪಕ್ಷೇ ತು ರಾಜ್ಯಗಃ ।
ಶೃಣು ರಾಜನ್ಫಲಂ ತಸ್ಯ ಸ್ವಾಸ್ಥ್ಯಮೇವ ಭವಿಷ್ಯತಿ ॥ ೧೨ ॥
ಉತ್ತಮಃ ಪುರುಷಃ ಕಶ್ಚಿದಾಗತಃ ಕನ್ಯಕಾಂ ಪ್ರತಿ ।
ತಂ ದೃಷ್ಟ್ವಾ ಮೂರ್ಛಿತಾ ಪುತ್ರೀ ತೇನ ಯೋಗಂ ಸಮೇಷ್ಯತಿ ॥ ೧೩ ॥
ತೇನೈವ ಪ್ರೇಷಿತಾ ಕಾಚಿದಾಗಮಿಷ್ಯತಿ ಕನ್ಯಕಾ ।
ಸಾ ತು ವಕ್ಷ್ಯತಿ ಯದ್ವಾಕ್ಯಂ ತದ್ಧಿತಂ ತೇ ಭವಿಷ್ಯತಿ ॥ ೧೪ ॥
ತತ್ಕುರುಷ್ವ ಮಹಾರಾಜ ಸತ್ಯಂ ಸತ್ಯಂ ವದಾಮ್ಯಹಂ ।
ಕಿಂ ಚ ಸರ್ವಾರ್ಥದಂ ಯತ್ತು ಸರ್ವವ್ಯಾಧಿವಿನಾಶನಂ ॥ ೧೫ ॥
ವಕ್ಷ್ಯಾಮಿ ತತ್ಕುರುಷ್ವಾದ್ಯ ಪುತ್ರ್ಯಾಸ್ತವ ಸುಖಾವಹಂ ।
ಕಾರಯಾಗಸ್ತ್ಯಲಿಂಗಸ್ಯ ಬ್ರಾಹ್ಮಣೈರಭಿಷೇಚನಂ ॥ ೧೬ ॥
ಇತ್ಯುಕ್ತ್ವಾಽಥ ಗೃಹಂ ಯಾತೋ ರಾಜಾನಂ ದೈವಚಿಂತಕಃ ॥ ೧೭ ॥
ಆಕಾಶರಾಜೋಽಪಿ ತದಾ ವಿಪ್ರಾನಾಹೂಯ ವೈದಿಕಾನ್ ।
ಅಭ್ಯರ್ಚ್ಯಾರ್ಜ್ಞಾಪಯಾಮಾಸ ಗತ್ವಾ ದೇವಾಲಯಂ ದ್ವಿಜಾಃ ॥ ೧೮ ॥

---

೧೨. ಸೂರ್ಯನು ಮಂದಗಾಮಿಯಾಗಿರುವನು. ಪ್ರಶ್ನಾಧಿಪನು ರಾಜ್ಯ ಕಾರಕನಾಗಿರುವನು. ಎಲೈ ರಾಜನೆ! ಇವುಗಳ ಫಲವನ್ನು ಕೇಳು. ಖಂಡಿತ ವಾಗಿಯೂ ನಿನ್ನ ಪುತ್ರಿಗೆ ಆರೋಗ್ಯವುಂಟಾಗುವುದು.

೧೩. ಆ ಕನ್ಯೆಯ ಹತ್ತಿರಕ್ಕೆ ಉತ್ತಮನಾದ ಪುರುಷನೊಬ್ಬನು ಬಂದಿರ ಬೇಕು. ಆತನ ಸೌಂದರ್ಯವನ್ನು ಕಂಡು ನಿನ್ನ ಮಗಳು ಮೂರ್ಛೆಗೊಂಡಿರು ವಳಲ್ಲದೆ ಮುಂದೆ ಆತನ ಸಂಬಂಧವನ್ನೇ ಹೊಂದುವಳು.

೧೪. ಆತನಿಂದಲೇ ಕಳುಹಿಸಲ್ಪಟ್ಟ ಒಬ್ಬ ಕನ್ಯಕೆಯು ಇಲ್ಲಿಗೆ ಬರುವಳು. ಆಕೆಯು ಹೇಳುವ ಸಮಾಚಾರವೇ ನಿನಗೆ ಉತ್ತರೋತ್ತರ ಶ್ರೇಯಸ್ಸನ್ನುಂಟು ಮಾಡುವುದು.

೧೫–೧೬. ಎಲೈ ರಾಜನೆ! ಆಕೆಯು ಹೇಳಿದಂತೆಯೇ ಮಾಡು. ನಾನು ನಿನಗೆ ಸತ್ಯವನ್ನೇ ಹೇಳುತ್ತಿರುವೆನು. ಆದರೆ ಪ್ರಕೃತದಲ್ಲಿ ಸರ್ವಾರ್ಥಸಾಧಕವೂ, ಸಕಲರೋಗನಿವಾರಕವೂ, ನಿನ್ನ ಮಗಳಿಗೆ ಸುಖವನ್ನುಂಟುಮಾಡುವುದೂ ಆದ ಕಾರ್ಯವೊಂದನ್ನು ತಿಳಿಸುವೆನು, ಅದನ್ನು ಮಾಡಿಸು. ಬ್ರಾಹ್ಮಣಶ್ರೇಷ್ಠರಿಂದ ಆಗಸ್ತ್ಯೇಶ್ವರ ಲಿಂಗಕ್ಕೆ ಅಭಿಷೇಕಗಳನ್ನು ಮಾಡಿಸು.''

೧೭. ಇಂತೆಂದು ಮಹಾರಾಜನಿಗೆ ವಿಷಯಗಳನ್ನು ತಿಳಿಸಿ ಆ ದೈವಜ್ಞನು ತನ್ನ ಮನೆಗೆ ಹೊರಟುಹೋದನು.

೧೮–೨೦. ಆಕಾಶರಾಜನೂ ಕೂಡ ವೈದಿಕರಾದ ಅನೇಕ ಬ್ರಾಹ್ಮಣರನ್ನು ಬರಮಾಡಿಕೊಂಡು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ, "ಎಲೈ ಬ್ರಾಹ್ಮಣರಿರಾ!

ಮಹಾಭಿಷೇಕಂ ಶಂಭೋಶ್ಚ ಕುರುಧ್ವಂ ಮಂತ್ರಪೂರ್ವಕಂ ।
ಇತ್ಯುಕ್ತ್ವಾಜ್ಞಾಪ್ಯ ತಾನಸ್ಮಾನಾಹೂಯಾಭ್ಯವದಚ್ಛುಭೇ ॥ ೧೯ ॥
ಮಹಾಭಿಷೇಕಸಂಭಾರಾನ್ಸಂಪಾದಯತ ಕನ್ಯಕಾಃ ।
ಇತ್ಯಾಜ್ಞಪ್ತಾ ನೃಪೇಣೈವ ವಯಂ ದೇವಾಲಯಂ ಗತಾಃ ॥ ೨೦ ॥
ಬ್ರೂಹಿ ತ್ವಂ ಸುಭಗೇಽಸ್ಮಾಕಂ ತ್ವದಾಗಮನಮಂಜಸಾ ।
ಕುತೋಽಸಿ ಕಸ್ಯ ವಾರ್ಥೇನ ಕ್ವ ವಾ ಜಿಗಮಿಷಾ ಹಿ ತೇ ॥ ೨೧ ॥
ದಿವ್ಯಾಶ್ವಮಧಿರುಹ್ಯೇಮಂ ದೇವಲೋಕಾದಿವಾಗತಾ ॥ ೨೨ ॥

ಶ್ರೀ ವರಾಹ ಉವಾಚ :—

ಇತಿ ತಾಭಿಸ್ತದಾ ಪೃಷ್ಟಾ ಹೃಷ್ಟಾ ಬಕುಲಮಾಲಿಕಾ ।
ಪ್ರೋವಾಚ ವಾಚಂ ಮಧುರಾಂ ಹರ್ಷಯಂತೀವ ಬಾಲಿಕಾಃ ॥ ೨೩ ॥

ಬಕುಲಮಾಲಿಕೋವಾಚ :—

ಶ್ರೀ ವೇಂಕಟಾದ್ರೇಃ ಪ್ರಾಪ್ತಾಹಂ ನಾಮ್ನಾ ಬಕುಲಮಾಲಿಕಾ ।
ಧರಣೀಂ ದ್ರಷ್ಟುಕಾಮಾಹಮಾರುಹ್ಯೇಮಂ ತುರಂಗಮಂ ॥ ೨೪ ॥

---

ನೀವೆಲ್ಲರೂ ಅಗಸ್ತ್ಯೇಶ್ವರನ ದೇವಾಲಯಕ್ಕೆ ಹೋಗಿ ಮಹೇಶ್ವರನಿಗೆ ಮಂತ್ರ ಸಹಿತವಾದ ಮಹಾರುದ್ರಾಭಿಷೇಕವನ್ನು ಮಾಡಬೇಕು" ಎಂದು ಆಜ್ಞಾಪಿಸಿದನು. ನಮ್ಮೆಲ್ಲರನ್ನೂ ಕರೆದು "ಎಲೈ ಸಖಿಯರೆ! ರುದ್ರಾಭಿಷೇಕಗಳಿಗೆ ಬೇಕಾಗುವ ಸಂಭಾರಗಳನ್ನೆಲ್ಲ ಅಣಿಮಾಡಿಕೊಂಡು ಹೊರಡಿ" ಎಂಬುದಾಗಿ ಅಪ್ಪಣೆ ಮಾಡಿದನು. ಇಂತು ಮಹಾರಾಜನಿಂದ ಆಜ್ಞಪ್ತರಾದ ನಾವುಗಳು ಈ ದೇವಾಲಯಕ್ಕೆ ಬಂದಿರುವೆವು.

೨೧. ಎಲೌ ಮಂಗಳಾಂಗಿಯೆ! ನೀನು ಇಲ್ಲಿಗೆ ಬಂದ ಕಾರಣವನ್ನು ಈಗಲೇ ನಮಗೆ ತಿಳಿಸು. ಎಲ್ಲಿಂದ ಬರುತ್ತಿರುವೆ? ಯಾವ ಉದ್ದೇಶದಿಂದ ಹೊರಟಿರುವೆ? ಅಲ್ಲದೆ ಎಲ್ಲಿಗೆ ಹೊರಡಲನುವಾಗಿರುವೆ?

೨೨. ನೀನು ಉತ್ತಮವಾದ ಈ ಅಶ್ವವನ್ನೇರಿಕೊಂಡು ದೇವಲೋಕದಿಂದ ಇಳಿದುಬಂದಿರುವಂತೆ ತೋರುತ್ತಿರುವೆ."

೨೩. ವರಾಹಸ್ವಾಮಿಯು ಹೇಳುತ್ತಾನೆ:—ಇಂತೆಂದು ಆ ಸ್ತ್ರೀಯರಿಂದ ಕೇಳಲ್ಪಟ್ಟ ಬಕುಳಮಾಲಿಕೆಯು ಸಂತುಷ್ಟಾಂತರಂಗಳಾಗಿ ಅವರನ್ನು ಸಂತೋಷಗೊಳಿಸುವಂತೆ ಮಧುರಗಳಾದ ವಾಕ್ಯಗಳಿಂದ ಉತ್ತರವನ್ನು ಹೇಳತೊಡಗಿದಳು.

೨೪. ಬಕುಳಮಾಲಿಕೆಯು ಹೇಳುತ್ತಾಳೆ:—"ನಾನು ವೆಂಕಟಾಚಲದಿಂದ ಬಂದಿರುವೆನು. ನನ್ನ ಹೆಸರು ಬಕುಳಮಾಲಿಕೆ. ಈ ಕುದುರೆಯನ್ನು ಹತ್ತಿಕೊಂಡು ಧರಣೀದೇವಿಯನ್ನೇ ನೋಡಬೇಕೆಂಬ ಕುತೂಹಲದಿಂದ ಬರುತ್ತಿರುವೆನು.

ದ್ರಷ್ಟುಂ ಶಕ್ಯಾ ಭವೇದ್ದೇವೀ ಕಿಮು ತತ್ರ ನೃಪಾಲಯೇ ।
ಇತಿ ತಸ್ಯಾ ವಚಃ ಶ್ರುತ್ವಾ ತಾಃ ಪ್ರೋಚುರ್ನೃಪಕನ್ಯಕಾಃ ॥ ೨೫ ॥
ಅಸ್ಮಾಭಿಸ್ಸಹಿತಾ ತ್ವಂ ವೈ ದ್ರಕ್ಷ್ಯಸೇ ಧರಣೀಂ ಶುಭೇ ।
ಇತ್ಯುಕ್ತ್ವಾ ಸಾ ತತಸ್ತಾಭಿರಾಗತಾ ನೃಪಮಂದಿರಂ ॥ ೨೬ ॥
ಆಗಚ್ಛಂತೀಷು ತಾಸ್ವೇವಂ ಧರಣೀ ತು ಪುಲಿಂದಿನೀ ॥ ೨೭ ॥
ಆಯಾಂತೀಂ ವೀಥಿಕಾಯಾಂ ಸಾ ಸಗುಂಜಾಶಂಖಭೂಷಿತಾಂ ।
ಶಿಶುಂ ಸ್ತನಂಧಯಂ ಪೃಷ್ಠೇ ಬದ್ಧ್ವಾ ವಸ್ತ್ರಾಂಚಲೇನ ವೈ ॥ ೨೮ ॥
ವದಾಮಿ ಸತ್ಯಂ ಶ್ರುಣುತ ಭೂತಂ ಭವ್ಯಂ ಭವಿಷ್ಯಕಂ ।
ವದಂತೀ ವೀಥಿವೀಥೀಷು ತಾಮಾಹೂಯ ಶುಚಿಸ್ಮಿತಾ ॥ ೨೯ ॥
ಸ್ವರ್ಣಶೂರ್ಪಂ ಸಮಾದಾಯ ತಸ್ಮಿನ್ಮುಕ್ತಾ ನಿಧಾಯ ಚ ।
ತ್ರಿಪ್ರಸ್ಥಮಾತ್ರಾಂಸ್ತ್ರೀನ್ರಾಶೀನ್ಕೃತ್ವಾ ತಸ್ಯೈ ನಿಧಾಯ ಚ ॥ ೩೦ ॥
ವದ ಸತ್ಯಂ ಪುಲಿಂದೇ ತ್ವಮೇಷ್ಯದ್ವಾ ಭೂತಮೇವ ವಾ ।
ಇತ್ಯೇವಂ ಧರಣೀ ದೇವೀ ಪೃಚ್ಛಂತೀ ತಾಂ ಸ್ಥಿತಾ ಭವತ್ ॥ ೩೧ ॥

---

೨೫. ನಾರಾಯಣಪುರದ ಅರಮನೆಯಲ್ಲಿ ಆಕೆಯನ್ನು ನೋಡಲು ಸಾಧ್ಯವಾಗುವುದೇನು ?" ಇಂತೆಂದ ಆಕೆಯ ಪ್ರಶ್ನೆಯನ್ನು ಕೇಳಿ ರಾಜಾಂತಃಪುರದ ಸ್ತ್ರೀಯರು ಹೇಳಿದರು.

೨೬. "ಎಲೈ ಸೌಭಾಗ್ಯವತಿಯೆ ! ನಮ್ಮೊಡನೆ ನೀನು ಬಂದರೆ ಧರಣೀ ದೇವಿಯನ್ನು ನೋಡುವೆ." ಇಂತೆಂದ ಸಖಿಯರೊಡನೆ ಆಕೆಯು ಅರಮನೆಯನ್ನು ಕುರಿತು ಹೊರಟಳು.

೨೭. ಅವರು ಇಂತು ಪಟ್ಟಣಕ್ಕೆ ಹಿಂದಿರುಗುತ್ತಿರಲು ಇತ್ತ ನಾರಾಯಣಪುರದಲ್ಲಿ ಧರಣೀ ದೇವಿಯು ಒಬ್ಬಾನೊಬ್ಬ ಕೊರವಂಜಿಯನ್ನು ಕಂಡಳು.

೨೮. ಆಕೆಯು ಗುಲಗಂಜಿಗಳಿಂದಲೂ, ಶಂಖಗಳಿಂದಲೂ ಮಾಡಿದ ಸರಗಳನ್ನು ಧರಿಸಿ ಸ್ತನ್ಯಪಾನಮಾಡುವ ಎಳೆಯ ಮಗುವನ್ನು ಬೆನ್ನಿನಲ್ಲಿ ಸೆರಗಿನಿಂದ ಬಿಗಿದುಕೊಂಡು ಬೀದಿಯಲ್ಲಿ ಬರುತ್ತಿದ್ದಳು.

೨೯. "ಅಮ್ಮಂದಿರಾ! ನಾನು ಸತ್ಯವನ್ನೇ ನುಡಿಯುತ್ತೇನೆ. ಹಿಂದೆ ನಡೆದುದನ್ನೂ, ಈಗ ನಡೆಯುತ್ತಿರುವುದನ್ನೂ, ಮುಂದೆ ನಡೆಯುವುದನ್ನೂ ಕೇಳಿರಿ" ಎಂಬುದಾಗಿ ಕೂಗಿ ಹೇಳುತ್ತ ಬೀದಿ ಬೀದಿಗಳಲ್ಲಿಯೂ ಅಲೆಯುತ್ತಿರುವ ಆ ಕೊರವಂಜಿಯನ್ನು ಮಹಾರಾಣಿಯು ನಗೆಮೊಗವುಳ್ಳವಳಾಗಿ ಕರೆದಳು.

೩೦–೩೧. ಆಕೆಯು ಚಿನ್ನದ ಮೊರದಲ್ಲಿ ಮುತ್ತುಗಳನ್ನು ತುಂಬಿ ತಂದು ಮೂರು ಪ್ರಸ್ಥಗಳಷ್ಟನ್ನು ಮೂರು ರಾಶಿಗಳನ್ನಾಗಿ ಮಾಡಿ ಅವಳ ಮುಂದಿಟ್ಟು "ಎಲೆ ಕೊರವಂಜಿ! ನೀನು ಕಳೆದುದನ್ನೂ ಭವಿಷ್ಯವನ್ನೂ ಕುರಿತು ಸತ್ಯವನ್ನೇ

ಪೃಷ್ಟ್ವಾ ಸಾವದದಸ್ಯಾಸ್ತು ಮನಸಾ ಯದ್ವಿಚಿಂತಿತಂ ।
ಮಧ್ಯರಾಶೌ ಚಿಂತಿತಂ ತೇ ವದ ಕಲ್ಯಾಣಿ ನೋ ಋಜು ॥ ೩೨ ॥
ಓಮಿತ್ಯಾಹಾಥ ಧರಣೀ ಪುಲಿಂದಾಂ ರಾಜವಲ್ಲಭಂ ।
ರಾಶಿರುಕ್ತಃ ಫಲಂ ಬ್ರೂಹಿ ಧನರಾಶಿಂ ದದಾಮಿ ತೇ ॥ ೩೩ ॥

ಪುಲಿಂದೋವಾಚ :—

ಸತ್ಯಂ ವದಾಮಿ ತೇ ಸುಭ್ರು ಶಿಶೋರನ್ನಂ ಪ್ರಯಚ್ಛ ಮೇ ।
ಇತ್ಯುಕ್ತ್ವಾ ಸಾ ತು ಧರಣೀ ಸ್ವರ್ಣಪಾತ್ರೇಽನ್ನಮಾದದೇ ॥ ೩೪ ॥
ದತ್ತ್ವಾ ತಸ್ಯೈ ಪುಲಿಂದಿನ್ಯೈ ಸತ್ಯಂ ಬ್ರೂಹೀತಿ ಸಾವದತ್ ।
ಸಕ್ಷೀರಮನ್ನಮಾದಾಯ ದತ್ತ್ವಾ ಪುತ್ರಾಯ ಭಾಮಿನೀ ॥ ೩೫ ॥
ಸಾ ಸತ್ಯಮವದತ್ಸುಭ್ರೂರ್ದುಹಿತುರ್ದೇಹಶೋಷಣಂ ।
ಪುರುಷಾದಾಗತಂ ಭೀರು ತದ್ರೂಪಾದರ್ಶನಾದಿಯಂ ॥ ೩೬ ॥
ಅಂಗತಾಪಂ ಸಮಾಪನ್ನಾ ಹ್ಯನಂಗಶರಪೀಡಿತಾ ।
ಸ ತು ದೇವಾಧಿದೇವೋ ವೈ ವೈಕುಂಠಾದಗತಃ ಸ್ವಯಂ ॥ ೩೭ ॥

---

ಹೇಳಬೇಕು.'' ಇಂತೆಂದು ಧರಣೀದೇವಿಯು ಪ್ರಶ್ನೆಯನ್ನು ಕೇಳುವಳಾಗಿ ಆಕೆಯ ಮುಂದೆ ನಿಂತುಕೊಂಡಳು.

೩೨. ಹಾಗೆ ಕೇಳಿದಮಾತ್ರದಿಂದಲೇ ಆ ಕೊರವಂಜಿಯು ಆಕೆಯ ಮನಸ್ಸಿನಲ್ಲಿದ್ದುದನ್ನು ಹೇಳಿದಳು. ''ಎಲೌ ಮಹಾರಾಣಿಯೆ! ನೀನು ಮಧ್ಯದ ರಾಶಿಯನ್ನು ಕುರಿತು ಚಿಂತಿಸುತ್ತಿರುವೆಯಲ್ಲವೆ. ನಿಜವಾಗಿ ಹೇಳು'' ಎಂದಳು.

೩೩. ರಾಜಮಡದಿಯಾದ ಧರಣಿಯು ಕೊರವಂಜಿಯನ್ನು ಕುರಿತು ''ಅದು ಸರಿ; ರಾಶಿಯನ್ನೇನೋ ಸರಿಯಾಗಿ ಹೇಳಿರುವೆ; ಅದರ ಫಲವನ್ನು ಸರಿಯಾಗಿ ಹೇಳಿದರೆ ನಿನಗೆ ಧನದ ರಾಶಿಯನ್ನೇ ಕೊಡುವೆನು'' ಎಂದಳು.

೩೪. ಕೊರವಂಜಿಯು ಹೇಳುತ್ತಾಳೆ:—''ಎಲೌ ಸುಭ್ರುವೆ! ನಿನಗೆ ಸತ್ಯವನ್ನೇ ಹೇಳುವೆನು; ನನ್ನ ಮಗುವಿಗೆ ಇಷ್ಟು ಅನ್ನವನ್ನು ಕೊಡು.'' ಇಂತೆನ್ನಲು ಧರಣೀದೇವಿಯು ಚಿನ್ನದ ಪಾತ್ರೆಯಲ್ಲಿ ಅನ್ನವನ್ನು ತಂದುಕೊಟ್ಟಳು.

೩೫–೩೬. ಅನ್ನವನ್ನಿತ್ತು ಕೊರವಂಜಿಗೆ ನಿಜವನ್ನು ಹೇಳುವಂತೆ ಅಪ್ಪಣೆಯನ್ನು ಮಾಡಲು ಆ ಹೆಂಗಸು ಹಾಲಿನನ್ನವನ್ನು ತನ್ನ ಮಗುವಿಗೆ ತಿನ್ನಿಸಿ ಸಂಗತಿಯನ್ನು ಯಥಾವತ್ತಾಗಿ ಹೇಳತೊಡಗಿದಳು. ಎಲೌ ಭೀರುವೆ! ನೀನು ನಿನ್ನ ಮಗಳ ಶರೀರದ ತಾಪವನ್ನು ಕುರಿತು ಕೇಳುತ್ತಿರುವೆ. ಇದು ಒಬ್ಬಾನೊಬ್ಬ ಪುರುಷನಿಂದುಂಟಾಗಿರುವುದು. ಆತನ ರೂಪವನ್ನು ಕಾಣದೆ ಈಕೆಯು ಇಂತು ಪರಿತಪಿಸುತ್ತಿರುವಳು.

೩೭. ಮನ್ಮಥನ ಬಾಣಗಳಿಂದ ಪೀಡಿತಳಾಗಿ ಶರೀರದ ತಾಪವನ್ನು

ಶ್ರೀವೇಂಕಟಾದ್ರಿಶಿಖರೇ ಸ್ವಾಮಿಪುಷ್ಕರಿಣೀತಟೇ ।
ಮಾಯಾವೀ ಪರಮಾನಂದಃ ಶ್ರಿಯಾ ಸಹ ರಮಾಪತಿಃ ॥ ೩೮ ॥
ಕಾಮರೂಪೀ ವಿಹರತೇ ಭಕ್ತಾಭೀಷ್ಟಪ್ರದೋ ಹರಿಃ ।
ಸ ತುರಂಗಂ ಸಮಾರುಹ್ಯ ವಿಹರನ್ಕಾನನಾಂತರೇ ॥ ೩೯ ॥
ಆಗತ್ಯೋಪವನಂ ರಾಜ್ಞಿ ತವ ಕನ್ಯಾಂ ಸ ದೃಷ್ಟವಾನ್ ।
ರಮಾಸಮಾಮಿಮಾಂ ದೃಷ್ಟ್ವಾ ಸ್ವಯಂ ಕಾಮವಶಂ ಗತಃ ॥ ೪೦ ॥
ಸ್ವಸಖೀಂ ಲಲಿತಾಂ ದೇವಃ ಪ್ರೇಷಯಿಷ್ಯತಿ ತೇಽಂತಿಕಂ ।
ರಮೇವ ತಂ ಸಮೇತ್ಯೇಷಾ ರಮಿಷ್ಯತಿ ಸುಖಂ ಚಿರಂ ॥ ೪೧ ॥
ಏತತ್ಸತ್ಯಂ ಮಮ ವಚಃ ಪಶ್ಯಾದ್ಯೈವ ನೃಪಾತ್ಮಜೇ ।
ಪುತ್ರಸ್ಯಾನ್ನಂ ಪ್ರಯಚ್ಛೇತಿ ತೂಷ್ಣೀಮಾಸ ಪುಲಿಂದಿನೀ ॥ ೪೨ ॥
ಅನ್ನಂ ದತ್ವಾ ಪುನರ್ಭೂರಿ ತಸ್ಯೈ ತಾಂ ವಿಸಸರ್ಜ ಹ ।
ತಸ್ಯಾಂ ವಿನಿರ್ಗತಾಯಾಂ ತು ಪುಲಿಂದಿನ್ಯಾಮನಿಂದಿತಾ ॥ ೪೩ ॥
ಉತ್ಥಾಯ ಚಾಂಗಣಾತ್ತಸ್ಮಾದ್ವಿವೇಶಾಂತಃಪುರಂ ಶುಭಂ ।
ಯತ್ರ ಪದ್ಮಾಲಯಾ ಕನ್ಯಾ ಸಮಾಸ್ತೇ ಸ್ವಸಖೀವೃತಾ ॥ ೪೪ ॥

---

ಪಡೆದಿರುವಳು. ಆತನಾದರೋ ವೈಕುಂಠದಿಂದ ಭೂಲೋಕಕ್ಕೆ ಇಳಿದು ಬಂದಿರುವ ಶ್ರೀಮನ್ನಾರಾಯಣನೇ ಆಗಿರುವನು.

೩೮–೪೦. ಮಾಯಾವಿಯೂ ಆನಂದಸ್ವರೂಪನೂ ಆದ ಶ್ರೀಪತಿಯು ಲಕ್ಷ್ಮೀದೇವಿಯೊಡನೆ ವೇಂಕಟಾಚಲದ ಶಿಖರ ಪ್ರದೇಶದಲ್ಲಿ ಸ್ವಾಮಿ ಪುಷ್ಕರಿಣೀ ತೀರ್ಥದ ದಕ್ಷಿಣ ತೀರದಲ್ಲಿ ಭಕ್ತರ ಅಭೀಷ್ಟಗಳನ್ನು ನೆರವೇರಿಸಿಕೊಡುತ್ತ ಇಚ್ಛಾರೂಪಿಯಾಗಿ ವಿಹರಿಸುತ್ತಿರುವನು. ಆ ಮಹಾವಿಷ್ಣುವೇ ಕುದುರೆಯನ್ನೇರಿ ಕಾಡುಗಳಲ್ಲಿ ಮೃಗಯಾ ವಿಹಾರವನ್ನು ಮಾಡುತ್ತ ನಿಮ್ಮ ಉಪವನವನ್ನು ಸೇರಿ ನಿನ್ನ ಮಗಳನ್ನು ಕಂಡು ಲಕ್ಷ್ಮಿಗೆ ಸಮಾನಳಾದ ಆಕೆಯ ರೂಪಲಾವಣ್ಯಗಳಿಂದ ತಾನೇ ಕಾಮವಿಕಾರವನ್ನು ಹೊಂದಿದನು.

೪೧. ಆತನು ಸುಂದರಿಯಾದ ತನ್ನ ಸಖಿಯನ್ನು ನಿನ್ನ ಬಳಿಗೆ ಕಳುಹಿಸುವನು. ನಿನ್ನ ಮಗಳೂ ಆತನನ್ನೇ ಪತಿಯನ್ನಾಗಿ ಸ್ವೀಕರಿಸಿ ಬಹಳ ಕಾಲ ಸುಖವಾಗಿ ಜೀವಿಸಿರುವಳು.

೪೨. ಎಲೌ ರಾಜಕುಮಾರಿಯೆ! ನನ್ನ ಮಾತು ನಿಜವೆಂಬುದು ನಿನಗೆ ಇಷ್ಟರಲ್ಲಿಯೇ ಪ್ರತ್ಯಕ್ಷವಾಗುವುದು. ನನ್ನ ಮಗುವಿಗೆ ಮತ್ತಿಷ್ಟು ಆಹಾರವನ್ನು ಕೊಡು.'' ಇಂತು ನುಡಿದು ಆ ಕೊರವಂಜಿಯು ಸುಮ್ಮನಾದಳು.

೪೩–೪೪. ಆಗ ಧರಣೀ ದೇವಿಯು ಆಕೆಗೆ ಮತ್ತೆ ಬೇಕಾದಷ್ಟು ಅನ್ನವನ್ನು ಕೊಟ್ಟು ಬೀಳುಕೊಟ್ಟಳು. ಅತ್ತ ಕೊರವಂಜಿಯು ಹೊರಟುಹೋಗುತ್ತಲೆ ಇತ್ತ

ಗತ್ವಾ ಪುತ್ರೀಸಮೀಪಸ್ಥಾ ಕನ್ಯಾಂ ಕಾಮಾತುರಾಂ ಸುತಾಂ ।
ಪುತ್ರಿ ಕಿಂ ತೇ ಕರಿಷ್ಯಾಮಿ ವಸ್ತು ಕಿಂ ವಾ ಪ್ರಿಯಂ ಶುಭೇ ॥ ೪೫ ॥
ಇತಿ ಮಾತ್ರಾಭಿಪೃಷ್ಟಾ ಸಾ ಮಂದಮಾಹ ಮನಸ್ವಿನೀ ॥ ೪೬ ॥
ನೇತ್ರಾಭಿರಾಮಂ ಯಲ್ಲೋಕೇ ಸತಾಮಪಿ ಮನಃಪ್ರಿಯಂ ।
ಯದ್ದ್ರಷ್ಟುಕಾಮಾ ಬ್ರಹ್ಮಾದ್ಯಾ ಯತ್ತು ಸರ್ವಗತಂ ಮಹತ್ ॥ ೪೭ ॥
ತೇಜಸಾಮಪಿ ತೇಜಸ್ವಿ ದೇವಾನಾಮಪಿ ದೈವತಂ ।
ಭಕ್ತೈಸ್ಸದ್ಭಿರಿಹ ಪ್ರಾಪ್ಯಮಭಕ್ತೈರ್ನ ಕದಾಚನ ॥ ೪೮ ॥
ತಸ್ಮಿನ್ನೇವ ಮನೋ ಮೇಽಂಬ ವಸ್ತುನೀಹ ಪ್ರವರ್ತತೇ ।
ತದೇವಾನ್ವಿಷ್ಯತಾಂ ಮಾತರ್ಭಕ್ತಾನಾಂ ಸರ್ವಕಾಮದಂ ॥ ೪೯ ॥

ಶ್ರೀವರಾಹ ಉವಾಚ :—

ಏತಚ್ಛ್ರುತ್ವಾಥ ಧರಣೀ ತಾಮಪೃಚ್ಛತ್ಪುನಃ ಸುತಾಂ ।
ತದ್ಭಕ್ತಲಕ್ಷಣಂ ಬ್ರೂಹಿ ಯೈಃಪ್ರಾಪ್ಯಂ ತತ್ಸುಲೋಚನೇ ॥ ೫೦ ॥

---

ಧರಣೀದೇವಿಯು ಅಂಗಳದಿಂದೆದ್ದು ಶುಭ್ರವಾದ ಅಂತಃಪುರವನ್ನು ಹೊಕ್ಕಳು. ಅಲ್ಲಿ ಪದ್ಮಾವತೀ ದೇವಿಯು ತನ್ನ ಸಖಿಯರಿಂದ ಬಳಸಲ್ಪಟ್ಟು ಕುಳಿತಿದ್ದಳು.

೪೫–೪೬. ಧರಣೀ ದೇವಿಯು ಮಗಳ ಹತ್ತಿರಕ್ಕೆ ಹೋಗಿ ಕಾಮವಶಳಾದ ಆ ಕನ್ಯೆಯನ್ನು ಕಂಡು "ಮಗಳೆ! ನಿನಗಾಗಿ ಏನನ್ನು ಮಾಡಲಿ? ನಿನಗೆ ಪ್ರಿಯವಾದ ವಸ್ತುವಾವುದು?" ಎಂದು ಕೇಳಿದಳು. ಇಂತೆಂದ ತಾಯಿಯ ಪ್ರಶ್ನೆಯನ್ನು ಕೇಳಿ ಆ ತರುಣಿಯು ಮೆಲ್ಲಗೆ ಹೇಳತೊಡಗಿದಳು.

೪೭–೪೯. "ಯಾವುದು ಲೋಕದಲ್ಲೆಲ್ಲ ನೋಡಲು ಮನೋಹರವಾಗಿರುವುದೊ, ಸತ್ಪುರುಷರ ಮನಸ್ಸಿಗೆ ಯಾವುದು ಪ್ರಿಯವೊ, ಬ್ರಹ್ಮಾದಿಗಳೂ ಯಾವುದನ್ನು ನೋಡಲು ಕುತೂಹಲಪಡುತ್ತಿರುವರೊ, ಯಾವುದು ಮಹತ್ತರವಾಗಿ ಸರ್ವತ್ರದಲ್ಲಿಯೂ ವ್ಯಾಪ್ತವಾಗಿರುವುದೊ, ಯಾವುದು ಜ್ಯೋತಿಗಳಿಗೆಲ್ಲ ತೇಜೋದಾಯಕವಾಗಿರುವುದೊ, ದೇವತೆಗಳೆಲ್ಲರಿಗೂ ಉತ್ತಮ ದೈವವಾಗಿರುವುದೊ, ಯಾವುದು ಸತ್ಪುರುಷರಾದ ಭಕ್ತರಿಗೆ ಮಾತ್ರ ಲಭ್ಯವಾಗಿ ಭಕ್ತರಲ್ಲದವರಿಗೆ ಎಂದಿಗೂ ಸಿಕ್ಕಲಾರದೊ, ಆ ವಸ್ತುವಿನಲ್ಲಿಯೇ ನನ್ನ ಮನಸ್ಸು ಪ್ರವರ್ತಿಸುತ್ತಿರುವುದು. ತಾಯೆ! ಭಕ್ತರಿಗೆ ಸಕಲ ಇಷ್ಟಾರ್ಥಗಳನ್ನೂ ನೆರವೇರಿಸಿಕೊಡುವ ಆ ಬ್ರಹ್ಮವಸ್ತುವನ್ನೇ ನನಗಾಗಿ ಹುಡುಕಿ ಕೊಡು."

೫೦. ವರಾಹಸ್ವಾಮಿಯು ಹೇಳುತ್ತಾನೆ:—ಇದನ್ನು ಕೇಳಿ ಧರಣೀದೇವಿಯು ಮತ್ತೆ ಮಗಳನ್ನು, "ಎಲೌ ಸುನೇತ್ರೆಯೆ! ಈ ವಸ್ತುವು ಯಾರಿಗೆ ಲಭ್ಯವಾಗಿರುವುದೊ, ಅಂತಹ ಭಕ್ತರ ಲಕ್ಷಣಗಳನ್ನು ತಿಳಿಸು" ಎಂದು ಕೇಳಿದಳು.

ಪದ್ಮಾಲಯೋವಾಚ :—

ಭಕ್ತಾನಾಂ ಲಕ್ಷಣಂ ಮಾತಃ ಶ್ರುಣು ಗುಹ್ಯಂ ಸಮಾಹಿತಾ ।
ಶಂಖಚಕ್ರಾಂಕಿತಾ ನಿತ್ಯಂ ಭುಜಯುಗ್ಮೇ ವಸುಂಧರೇ ॥ ೫೧ ॥
ಊರ್ಧ್ವಪುಂಡ್ರಂ ಸಾಂತರಾಲಂ ತೇಷಾಮೇವ ವಿಶೇಷತಃ ।
ಪುಂಡ್ರಾನಿ ದ್ವಾದಶ ಪುನರ್ಧಾರಯಂತಿ ತಥಾಪರೇ ॥ ೫೨ ॥
ಲಲಾಟೋದರಹೃತ್ಕಂಠೇ ಜಠರೇ ಪಾರ್ಶ್ವಯೋರಪಿ ।
ಕೂರ್ಪರಯೋರ್ಭುಜದ್ವಂದ್ವೇ ಪೃಷ್ಠೇ ಚ ಗಲಪೃಷ್ಠಕೇ ॥ ೫೩ ॥
ಕೇಶವಾದೀನಿ ನಾಮಾನಿ ದ್ವಾದಶಾಂಗೇಷು ದ್ವಾದಶ ।
ವಾಸುದೇವೇತಿ ತನ್ಮೂರ್ಧ್ನಿ ಧಾರಯಂತಿ ನಮೋಽಸ್ತ್ವಿತಿ ॥ ೫೪ ॥
ತೇಷಾಂ ತು ನಿಯಮಾನ್ವಕ್ಷ್ಯೇ ಮಾತಃ ಶ್ರುಣು ಮನೋರಮಾನ್ ।
ವೇದಪಾರಾಯಣರತಾಃ ಕರ್ಮ ಕುರ್ವಂತಿ ವೈದಿಕಂ ॥ ೫೫ ॥
ಸತ್ಯಂ ವದಂತಿ ಯೇ ದೇವಿ ನಾಸೂಯಂತಿ ಪರಾನ್ಕ್ವಚಿತ್ ।
ಪರನಿಂದಾಂ ನ ಕುರ್ವಂತಿ ಪರಸ್ವಂ ನ ಹರಂತಿ ಚ ॥ ೫೬ ॥

---

೫೧–೫೨. ಪದ್ಮಾವತಿಯು ಹೇಳುತ್ತಾಳೆ:—"ತಾಯಿಯಾದ ಧರಣಿಯೆ! ವಿಷ್ಣುಭಕ್ತರ ಲಕ್ಷಣಗಳನ್ನು ಹೇಳುವೆನು. ಪರಮ ಗುಹ್ಯವಾದ ಈ ವಿಷಯವನ್ನು ಸಾವಧಾನ ಚಿತ್ತದಿಂದ ಕೇಳು. ವಿಷ್ಣುಭಕ್ತರು ಭುಜಗಳೆರಡರಲ್ಲಿಯೂ ಶಂಖ ಚಕ್ರಗಳ ಲಾಂಛನಗಳನ್ನು ಧರಿಸಿರುವರು. ಅವರಲ್ಲಿ ಕೆಲವರು ಲಲಾಟದಲ್ಲಿ ಮಾತ್ರ ವಿಶಾಲವಾದ ಊರ್ಧ್ವಪುಂಡ್ರವನ್ನು ಧರಿಸಿರುವರು. ಮತ್ತೆ ಕೆಲವರು ದೇಹದಲ್ಲಿ ದ್ವಾದಶಪುಂಡ್ರಗಳನ್ನು ಧರಿಸಿರುವರು.

೫೩. ಲಲಾಟ, ಎದೆಯಲ್ಲಿ ಹೃದಯ, ಕಂಠ, ಜಠರ, ಎರಡು ಪಕ್ಕೆಗಳು, ಎರಡು ಮೊಣಕೈಗಳು, ಎರಡು ಭುಜಗಳು, ಬೆನ್ನು ಮತ್ತು ಕತ್ತಿನ ಹಿಂಭಾಗಗಳೇ ಪುಂಡ್ರಗಳ ಸ್ಥಾನಗಳೆನಿಸಿರುವುವು.

೫೪. ಇವರು ಈ ದ್ವಾದಶಾಂಗಗಳಲ್ಲಿಯೂ ಪರಮಾತ್ಮನ ಕೇಶವಾದಿ ದ್ವಾದಶ ನಾಮಗಳನ್ನುಲ್ಲೇಖಿಸುವರು. "ವಾಸುದೇವಾಯ ನಮಃ" ಎಂಬ ಮಂತ್ರವನ್ನು ತಲೆಯ ಮೇಲೆ ಧರಿಸುವರು.

೫೫. ತಾಯೆ! ಮನೋಹರಗಳಾದ ಅವರ ಆಚಾರ ವ್ಯವಹಾರಗಳನ್ನು ಹೇಳುವೆನು ಕೇಳು. ಅವರು ಯಾವಾಗಲೂ ವೇದಾಭ್ಯಾಸವನ್ನು ಮಾಡುತ್ತ ವೈದಿಕ ಕರ್ಮಗಳಾದ ಯಜನಾದಿ ಷಟ್ಕರ್ಮಗಳಲ್ಲಿಯೇ ನಿರತರಾಗಿರುವರು.

೫೬. ಯಾವಾಗಲೂ ಸತ್ಯವನ್ನೇ ಹೇಳುವರು. ಇತರರಲ್ಲಿ ಎಂದಿಗೂ ಅಸೂಯೆಯನ್ನು ತೋರುವರಲ್ಲ. ಪರರ ನಿಂದೆಯನ್ನು ಮಾಡರು; ಪರರ ಸ್ವತ್ತನ್ನು ಅಪಹರಿಸರು.

**ನ ಸ್ಮರಂತಿ ನ ಪಶ್ಯಂತಿ ನ ಸ್ಪೃಶಂತಿ ಕದಾಚನ ।**
**ಪರದಾರಾನ್ಸುರೂಪಾಂಶ್ಚ ಯೇ ಚ ತಾನ್ವಿದ್ಧಿ ವೈಷ್ಣವಾನ್ ॥ ೫೭ ॥**
**ಸರ್ವಭೂತದಯಾವಂತಃ ಸರ್ವಭೂತಹಿತೇ ರತಾಃ ।**
**ಸದಾ ಗಾಯಂತಿ ದೇವೇಶಮೇತಾನ್ಭಕ್ತಾನವೇಹಿ ವೈ ॥ ೫೮ ॥**
**ಯೇನ ಕೇನ ಚ ಸಂತುಷ್ಟಾಃ ಸ್ವದಾರನಿರತಾಶ್ಚ ಯೇ ।**
**ವೀತರಾಗಭಯಕ್ರೋಧಾಸ್ತಾನ್ಭಕ್ತಾನ್ವಿದ್ಧಿ ವೈಷ್ಣವಾನ್ ॥ ೫೯ ॥**
**ಏವಂವಿಧೈರ್ಗುಣೈರ್ಯುಕ್ತಾಃ ಪಂಚಾಯುಧಧರಾ ಅಪಿ ।**
**ಪಿತ್ರಾ ಚಾಚಾರ್ಯರೂಪೇಣ ಶಿಷ್ಯೇನಾನ್ಯೇನ ವಾ ಪುನಃ ॥ ೬೦ ॥**
**ಸ್ವಗೃಹ್ಯೋಕ್ತವಿಧಾನೇನ ವಹ್ನಿಮಾದಾಯ ವೈ ಬುಧಃ ।**
**ಚಕ್ರಾದ್ಯಾಯುಧಮಂತ್ರೇಣ ಜುಹುಯಾತ್ಷೋಡಶಾಹುತೀಃ ॥ ೬೧ ॥**
**ಮೂಲಮಂತ್ರೇಣ ಸೂಕ್ತೇನ ಪೌರುಷೇಣ ತತಃ ಪರಂ ।**
**ಜಾತವೇದಃ ಸುಮಂತ್ರೇಣ ಪಶ್ಚಾದಷ್ಟೋತ್ತರಂ ಶತಂ ॥ ೬೨ ॥**

---

೫೭. ಪರಸ್ತ್ರೀಯರು ಎಷ್ಟೇ ಸುಂದರಿಯರಾಗಿದ್ದರೂ ಶುದ್ಧ ವೈಷ್ಣವರಾದವರು ಅವರನ್ನು ಸ್ಮರಿಸುವುದಿಲ್ಲ, ನೋಡುವುದಿಲ್ಲ, ಸ್ಪರ್ಶಿಸುವುದಂತೂ ಇಲ್ಲವೇ ಇಲ್ಲ. ಇಂತಹವರನ್ನೇ ವೈಷ್ಣವರೆಂದು ತಿಳಿಯಬೇಕು.

೫೮. ಸಕಲ ಪ್ರಾಣಿಗಳಲ್ಲಿಯೂ ದಯೆಯನ್ನು ತೋರುವವರೂ, ಸರ್ವಭೂತಗಳ ಹಿತವನ್ನೇ ಕೋರುವವರೂ, ನಿರಂತರವೂ ಪರಮಾತ್ಮನ ಗುಣಗಳ ಕಥನವನ್ನೇ ಮಾಡುತ್ತಿರುವವರೂ ಆದವರನ್ನೇ ಭಕ್ತರೆಂದು ತಿಳಿ.

೫೯. ಯದೃಚ್ಛಾಲಬ್ಧವಾದುದರಿಂದಲೇ ಸಂತುಷ್ಟರಾಗಿ, ತಮ್ಮ ಸ್ತ್ರೀಯರಲ್ಲಿಯೇ ಅನುರಕ್ತರಾಗಿ, ಕಾಮಕ್ರೋಧ ಭಯಗಳನ್ನು ತ್ಯಜಿಸಿದವರೇ ವಿಷ್ಣುಭಕ್ತರೆಂದು ತಿಳಿಯಬೇಕು.

೬೦–೬೧. ಈ ವಿಧವಾದ ಸದ್ಗುಣಗಳುಳ್ಳವರಾದರೂ ವೈಷ್ಣವರು ಪಂಚಾಯುಧಗಳ ಮುದ್ರೆಗಳನ್ನು ಧರಿಸಬೇಕು. ತಂದೆಯಿಂದಾಗಲಿ, ಆಚಾರ್ಯಸ್ಥಾನೀಯನಾದ ಯಾವನಾದರೂ ಶಿಷ್ಯನಿಂದಾಗಲಿ ತಮ್ಮ ಶಾಖೆಯ ಗೃಹ್ಯಸೂತ್ರಗಳಲ್ಲಿ ಹೇಳಿರುವ ವಿಧಾನದಿಂದ ಅಗ್ನಿಯನ್ನು ನಿರ್ಮಥಿಸಿ ಭಕ್ತನು ವೈಷ್ಣವಚಕ್ರಾದ್ಯಾಯುಧಗಳ ಮಂತ್ರಗಳಿಂದ ಹದಿನಾರು ಆಹುತಿಗಳನ್ನು ಹೋಮಮಾಡಬೇಕು.

೬೨. ಬಳಿಕ ಮೂಲಮಂತ್ರದಿಂದಲೂ, ಪುರುಷಸೂಕ್ತದ ಮಂತ್ರಗಳಿಂದಲೂ, "ಜಾತವೇದಸೇ" ಮುಂತಾದ ಮಂತ್ರದಿಂದ ನೂರೆಂಟು ಸಲವೂ ಹೋಮ ಮಾಡಬೇಕು.

ಹುತ್ವಾ ಮಹಾವ್ಯಾಹೃತಿಭಿಶ್ಚಕ್ರಾದೀಂಸ್ತತ್ರ ತಾಪಯೇತ್ ।
ಸಹ್ಯಾನ್ಸುತಪ್ತಾನ್ಗುರುಣಾ ಮಂತ್ರವದ್ಧಾರಯೇದ್ಬುಧಃ ॥ ೬೩ ॥
ಭುಜದ್ವಯೇ ಶಂಖಚಕ್ರೇ ಮೂರ್ಧ್ನಿ ಶಾರ್ಙ್ಗಶರೌ ತಥಾ ।
ಲಲಾಟೇ ತು ಗದಾ ಧಾರ್ಯಾ ಹೃದಯೇ ಖಡ್ಗಮೇವ ಚ ॥ ೬೪ ॥
ಏವಂ ಧಾರ್ಯಾಣಿ ಪಂಚೈವ ವಿಷ್ಣುಭಕ್ತೈರ್ಮುಮುಕ್ಷುಭಿಃ ।
ಅಥವಾ ಭುಜಯೋಶ್ಚಕ್ರಶಂಖೌ ಚೈವ ಸುಲಕ್ಷಣೌ ॥ ೬೫ ॥
ಏವಂ ಲಾಂಛನಯುಕ್ತಾ ಯೇ ಭಕ್ತಾಸ್ತೇ ವೈಷ್ಣವಾಃ ಸ್ಮೃತಾಃ ।
ತೈರೇವ ಲಭ್ಯಂ ತದ್ಬ್ರಹ್ಮ ಸದಾಚಾರಸಮನ್ವಿತೈಃ ॥ ೬೬ ॥
ತಸ್ಮಿನ್ನೇವ ಮಮ ಪ್ರೀತಿಸ್ತತ್ಪ್ರಾಪ್ತಿಂ ಕಾಂಕ್ಷತೇ ಮನಃ ।
ಮಾತರ್ವಿಷ್ಣುಂ ವಿನಾನ್ಯೇಷು ವಾಂಛಾ ಕಾಚಿನ್ನ ಜಾಯತೇ ॥ ೬೭ ॥
ಸ್ಮರಾಮಿ ಶ್ಯಾಮಲಂ ವಿಷ್ಣುಂ ವದಾಮಿ ಹರಿಮಚ್ಯುತಂ ।
ತೇನೈವ ಮಾತರ್ಜೀವಾಮಿ ತದ್ಯೋಗೇ ಚಿಂತ್ಯತಾಂ ವಿಧಿಃ ॥ ೬೮ ॥

---

೬೩. ಬಳಿಕ ಭೂರ್ಭುವಸ್ಸುವರಾದಿ ಮಹಾವ್ಯಾಹೃತಿಗಳಿಂದ ಹೋಮವನ್ನು ಮಾಡಿ ಚಕ್ರಾದಿ ಮುದ್ರೆಗಳನ್ನು ಅದರಲ್ಲಿ ಕಾಯಿಸಬೇಕು. ಮತ್ತು ಸಹಿಸುವಷ್ಟು ಶಾಖದಿಂದ ಕೂಡಿದ ಮುದ್ರೆಗಳನ್ನು ಮಂತ್ರಪೂರ್ವಕವಾಗಿ ಗುರುವಿನ ಕೈಯಿಂದ ಧರಿಸಬೇಕು.

೬೪–೬೫. ಭುಜಗಳಲ್ಲಿ ಶಂಖಚಕ್ರಗಳನ್ನೂ, ತಲೆಯಮೇಲೆ ಶಾರ್ಙ್ಗಬಾಣಗಳನ್ನೂ, ಹಣೆಯಲ್ಲಿ ಗದೆಯನ್ನೂ, ಹೃದಯದಲ್ಲಿ ಖಡ್ಗ ಚಿಹ್ನೆಯನ್ನೂ ಧರಿಸಬೇಕು. ಮೋಕ್ಷಾಭಿಲಾಷಿಗಳಾದ ವಿಷ್ಣುಭಕ್ತರು ಐದು ಚಿಹ್ನೆಗಳನ್ನು ದೇಹದಲ್ಲಿ ಧಾರಣೆಮಾಡಬೇಕು. ಅಥವಾ ಭುಜಗಳಲ್ಲಿ ಮಾತ್ರ ಲಕ್ಷಣಯುಕ್ತಗಳಾದ ಶಂಖ ಚಕ್ರಗಳ ಮುದ್ರೆಗಳನ್ನಾದರೂ ಖಂಡಿತವಾಗಿ ಧರಿಸಲೇ ಬೇಕು.

೬೬. ಯಾರು ಇಂತು ಲಾಂಛನಗಳನ್ನು ಧರಿಸಿರುವರೋ, ಅವರೇ ವಿಷ್ಣುಭಕ್ತರೆಂದು ಹೇಳಲ್ಪಟ್ಟಿರುವುದು. ಅವರೇ ಸದಾಚಾರ ಸಂಪನ್ನರಾದಲ್ಲಿ ಬ್ರಹ್ಮಪದವಿಯನ್ನು ಹೊಂದಿಯೇ ಹೊಂದುವರು.

೬೭. ಆ ಪರಮಾತ್ಮನಲ್ಲಿಯೇ ನನ್ನ ಅಭಿಲಾಷೆಯಿರುವುದು. ಆತನ ಲಾಭವನ್ನೇ ನನ್ನ ಮನಸ್ಸು ಆಶಿಸುತ್ತಿರುವುದು. ಅಮ್ಮಾ! ವಿಷ್ಣುವನ್ನು ಬಿಟ್ಟರೆ ಮತ್ತೆ ಯಾರಲ್ಲಿಯೂ ನನ್ನ ಮನಸ್ಸು ಆತುರವನ್ನು ತೋರಿಸುವುದಿಲ್ಲ.

೬೮. ಶ್ಯಾಮಸುಂದರನಾದ ಆ ವಿಷ್ಣುವನ್ನೇ ಸ್ಮರಿಸುತ್ತಿರುವೆನು. ನಾಶರಹಿತನಾದ ಆ ಹರಿಯನ್ನೇ ಕೊಂಡಾಡುತ್ತಿರುವೆನು. ತಾಯೆ! ಆತನಿಂದಲೇ ಜೀವನದಾಸೆಯನ್ನು ಸಹ ಹಿಡಿದಿರುವೆನು. ಆತನನ್ನು ನಾನು ಪಡೆಯುವ ಉಪಾಯವನ್ನು ಕುರಿತೇ ಯೋಚನೆ ಮಾಡಿರಿ.''

ಶ್ರೀ ವರಾಹ ಉವಾಚ:—

ಇತ್ಯುಕ್ತ್ವಾ ಮಾತರಂ ದೀನಾ ವಿರರಾಮಾಂಬುಜಾನನಾ ।
ತಚ್ಛ್ರುತ್ವಾ ಚಿಂತಯಾಮಾಸ ವಿಷ್ಣುಃ ಪ್ರೀತಃ ಕಥಂ ಭವೇತ್ ॥ ೬೯ ॥
ಏತಸ್ಮಿನ್ನಂತರೇ ಕನ್ಯಾ ಅಗಸ್ತ್ಯೇಶಂ ಸಮರ್ಚ್ಯ ಚ ।
ಆಗತಾ ಧರಣೀಂ ದ್ರಷ್ಟುಂ ಸಹೈವ ಬಕುಲಸ್ರಜಾ ॥ ೭೦ ॥
ಆಗತಾನ್ಬ್ರಾಹ್ಮಣಾನ್ಸಾಥ ಪೂಜಯಿತ್ವಾ ಸುಭೋಜನೈಃ ।
ದತ್ತ್ವಾಥ ದಕ್ಷಿಣಾಃ ಪೂರ್ಣಾ ವಸ್ತ್ರಾಲಂಕಾರಸಂಯುತಾಃ ॥ ೭೧ ॥
ಆಶಿಷೌ ವಾಚಯಿತ್ವಾಥ ವಾಂಛಿತಾರ್ಥಸ್ಯ ಸಿದ್ಧಯೇ ।
ವಿಸೃಜ್ಯ ಬ್ರಾಹ್ಮಣಾನ್ಸರ್ವಾನಥಾಪೃಚ್ಛತ್ಸ್ವಯೋಷಿತಃ ॥ ೭೨ ॥
ಪೂಜಯಿತ್ವಾ ಹ್ಯಗಸ್ತ್ಯೇಶಮಾಗತಾಸ್ತಾ ಮನಸ್ವಿನೀಃ ॥ ೭೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ "ಬಕುಲಮಾಲಿಕಾಂ ಪ್ರತಿ ಸಖೀವಿನಿವೇದಿತ ಪದ್ಮಾವತ್ಯುದಂತ ವಿಷ್ಣುಭಕ್ತ ಲಕ್ಷಣಾದಿವರ್ಣನಂ" ನಾಮ ಷಷ್ಠೋಽಧ್ಯಾಯಃ

---

೬೯. ವರಾಹಸ್ವಾಮಿಯು ಹೇಳುತ್ತಾನೆ:—ಇಂತು ಹೇಳಿ ಕಮಲಮುಖಿಯಾದ ಪದ್ಮಾವತಿಯು ದೀನಮನಸ್ಸಿನಿಂದ ಸುಮ್ಮನಾದಳು. ತಾಯಿಯೂ ಈ ಮಾತುಗಳನ್ನು ಕೇಳಿ "ಶ್ರೀಮನ್ನಾರಾಯಣನು ಹೇಗೆ ಸಂತೋಷವನ್ನು ಪಡೆಯುವನು?" ಎಂಬುದಾಗಿ ಚಿಂತಿಸತೊಡಗಿದಳು.

೭೦–೭೩. ಅಷ್ಟರಲ್ಲಿಯೇ ಅಗಸ್ತ್ಯೇಶ್ವರನ ಪೂಜೆಯನ್ನು ಮುಗಿಸಿಕೊಂಡು ಪದ್ಮಾವತಿಯ ಸಖಿಯರೆಲ್ಲರೂ ಬಕುಳಮಾಲಿಕೆಯೊಡನೆ ಧರಣೀದೇವಿಯನ್ನು ನೋಡಲು ಬಂದರು. ಧರಣೀದೇವಿಯು ಹಿಂದಿರುಗಿದ ಬ್ರಾಹ್ಮಣರನ್ನೆಲ್ಲ ಮೃಷ್ಟಾನ್ನಭೋಜನಗಳಿಂದ ತೃಪ್ತಿಪಡಿಸಿ, ವಸ್ತ್ರಾಲಂಕಾರಸಹಿತಗಳಾದ ಯಥೇಚ್ಛದಕ್ಷಿಣೆಗಳನ್ನು ಕೊಟ್ಟು, ತನ್ನ ಇಷ್ಟಾರ್ಥದ ನೆರವೇರಿಕೆಗಾಗಿ ಅವರಿಂದ ಅನೇಕ ಆಶೀರ್ವಾದಗಳನ್ನು ಹೇಳಿಸಿ, ಅವರನ್ನೆಲ್ಲ ಕಳುಹಿಸಿಕೊಟ್ಟು, ಆಗಸ್ತ್ಯೇಶ್ವರನನ್ನು ಪೂಜಿಸಿ ಹಿಂದಿರುಗಿದ ಮನಸ್ವಿನಿಯರಾದ ತನ್ನ ಅಂತಃಪುರ ಸ್ತ್ರೀಯರನ್ನು ಕೇಳತೊಡಗಿದಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೆಂಕಟಾಚಲ ಮಾಹಾತ್ಮ್ಯೆಯ ಧರಣೀ ವರಾಹ ಸಂವಾದದಲ್ಲಿ "ಬಕುಳಮಾಲಿಕೆಗೆ ಸಖಿಯರು ಪದ್ಮಾವತಿಯ ಚರಿತ್ರೆಯನ್ನು ತಿಳಿಸಿದುದು—ವಿಷ್ಣುಭಕ್ತರ ಲಕ್ಷಣವರ್ಣನ" ಎಂಬ ಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಮೋಽಧ್ಯಾಯಃ

### ಬಕುಲಮಾಲಿಕಾನಿವೇದಿತ ಶ್ರೀನಿವಾಸೋದಂತ ಕಮಲಾಲಯಾಕಲ್ಯಾಣ ವಿಧ್ಯಾದಿವೃತ್ತಾಂತವರ್ಣನಂ

ಧರಣ್ಯುವಾಚ :—

ಕೈಷಾ ಬ್ರೂತ ವರಾ ಕನ್ಯಾ ಯುಷ್ಮಾಭಿಃ ಸಂಗತಾ ಕುತಃ ।
ಕಿಮರ್ಥಮಾಗತಾ ಚೇಹ ಪೂಜ್ಯೇಷಾ ಪ್ರತಿಭಾತಿ ಮೇ ॥ ೧ ॥

ಕನ್ಯಕಾ ಊಚುಃ :—

ಏಷಾ ದಿವ್ಯಾಂಗನಾ ದೇವಿ ತ್ವಯಿ ಕಾರ್ಯಾರ್ಥಮಾಗತಾ ।
ದೇವಾಲಯೇ ಸಂಗತೇಯಮಸ್ಮಾಭಿಃ ಶಿವಸನ್ನಿಧೌ ॥ ೨ ॥
ಪೃಷ್ಟಾವದಚ್ಚ ಭವತೀಂ ದ್ರಷ್ಟುಮೇವಾಗತೇತಿ ವೈ ।
ಶಕ್ಯಾ ದ್ರಷ್ಟುಂ ರಾಜಗೃಹೇ ಮಯಾ ರಾಜ್ಞೀ ಸುಖೇನ ವಾ ॥ ೩ ॥
ಏವಂ ಪೃಷ್ಟಾಸ್ತತೋ ಬ್ರೂಮಃ ಸಹಾಸ್ಮಾಭಿಶ್ಚ ಗಮ್ಯತಾಂ ।
ವಯಂ ತು ಧರಣೀದಾಸ್ಯೋ ಗಮಿಷ್ಯಾಮೋ ನೃಪಾಲಯಂ ॥ ೪ ॥

---

## ಕನ್ನಡದ ಅನುವಾದ

### ಬಕುಳಮಾಲಿಕೆಯು ಶ್ರೀನಿವಾಸನ ವಿಷಯವನ್ನು ತಿಳಿಸುದುದು — ಪದ್ಮಾವತೀಪರಿಣಯದ ವಿಧಾನವರ್ಣನ

೧. ಧರಣೀದೇವಿಯು ಕೇಳುತ್ತಾಳೆ :—"ಎಲೌ ಚೇಟಿಯರೆ! ಈ ಉತ್ತಮ ಕನ್ಯೆಯು ಯಾರೆಂಬುದನ್ನು ಹೇಳಿರಿ. ನಿಮ್ಮೊಡನೆ ಇಲ್ಲಿಗೇಕೆ ಬಂದಿರುವಳು? ನಿಮಗೆ ಹೇಗೆ ದೊರೆತಳು? ಈಕೆಯು ಪೂಜೆಗೆ ಅರ್ಹಳಾದವಳಂತೆ ಕಾಣುತ್ತಿರುವಳು."

೨-೩. ಸಖಿಯರು ಹೇಳುತ್ತಾರೆ :— ಎಲೌ ದೇವಿಯೆ! ಈಕೆಯೊಬ್ಬ ದಿವ್ಯ ಸ್ತ್ರೀಯು. ನಿನ್ನಲ್ಲಿ ಒಂದು ಕಾರ್ಯವನ್ನು ಸಾಧಿಸುವುದಕ್ಕೆಂದು ಬಂದಿರುವಳು. ಈಕೆಯು ಅಗಸ್ತ್ಯೇಶ್ವರನ ದೇವಾಲಯದಲ್ಲಿ ದೇವರ ಸನ್ನಿಧಿಯಲ್ಲಿ ನಮ್ಮೊಡನೆ ಸೇರಿದಳು. ನಾವು ಕೇಳಲು ನಿನ್ನನ್ನೇ ನೋಡುವುದಕ್ಕಾಗಿ ಬರುತ್ತಿರುವೆನೆಂದು ಹೇಳಿದಳು. ಈಕೆಯು, "ಅಂತಃಪುರದಲ್ಲಿ ಮಹಾರಾಣಿಯನ್ನು ಸುಲಭವಾಗಿ ನೋಡಲು ಸಾಧ್ಯವಾಗುವುದೆ?" ಎಂಬುದಾಗಿ ನಮ್ಮನ್ನು ಕೇಳಿದಳು.

೪. ನಾವೂ ಆಕೆಯನ್ನು ಕುರಿತು "ನೀನೂ ನಮ್ಮೊಡನೆ ಬರುವಳಾಗು; ನಾವು ರಾಜಾಂತಃಪುರಕ್ಕೆ ಹೋಗುತ್ತಿರುವ ಧರಣೀದೇವಿಯ ದಾಸಿಯರು" ಎಂದೆವು.

ಇತ್ಯುಕ್ತ್ವಾಸ್ಮಾಭಿರಾಯಾತಾ ತ್ವತ್ಸಮೀಪಂ ವಸುಂಧರೇ ।
ಭವತ್ಯಾ ಪೃಚ್ಛ್ಯತಾಮೇಷಾ ಕಿಮಿತ್ಯಾಗಮನಂ ತವ ॥ ೫ ॥

ಶ್ರೀ ವರಾಹ ಉವಾಚ :—

ಇತಿ ತಾಸಾಂ ವಚಃ ಶ್ರುತ್ವಾ ತಾಮಪೃಚ್ಛದ್ವಸುಂಧರಾ ॥ ೬ ॥

ಧರಣ್ಯುವಾಚ :—

ಕುತಸ್ತ್ವಮಾಗತಾ ದೇವಿ ಕಿಂ ವಾ ಕಾರ್ಯಂ ಮಯಾ ತವ ।
ಬ್ರೂಹಿ ಸತ್ಯಂ ಕರಿಷ್ಯಾಮಿ ತ್ವದಾಗಮನಕಾರಣಂ ॥ ೭ ॥

ಬಕುಲಮಾಲಿಕೋವಾಚ :—

ವೇಂಕಟಾದ್ರೇಃ ಸಮಾಯಾತಾ ನಾಮ್ನಾ ಬಕುಲಮಾಲಿಕಾ ॥ ೮ ॥
ಸ್ವಾಮೀ ನಾರಾಯಣೋಽಸ್ಮಾಕಮಾಸ್ತೇ ಶ್ರೀವೇಂಕಟಾಚಲೇ ।
ಕದಾಚಿದ್ಧಯಮಾರುಹ್ಯ ಹಂಸಶುಕ್ಲಂ ಮನೋಜವಂ ॥ ೯ ॥
ಮೃಗಯಾರ್ಥಂ ಗತೋ ರಾಜ್ಞೋ ವೇಂಕಟಾದ್ರೇಃ ಸಮೀಪತಃ ।
ವನಾನಿ ವಿಚರನ್ಕಾಲೇ ಶೋಭನೇ ಕುಸುಮಾಕರೇ ॥ ೧೦ ॥

---

೫. ಇಂತು ನಾವು ಹೇಳಲು ನಮ್ಮ ಸಂಗಡ ಈಕೆಯು ನಿನ್ನ ಬಳಿಗೆ ಬಂದಿರುವಳು. ಈಕೆಯನ್ನು 'ನೀನು ಬಂದ ಕಾರಣವಾವುದು?' ಎಂಬುದಾಗಿ ನೀನೇ ಕೇಳುವವಳಾಗು."

೬. ವರಾಹಸ್ವಾಮಿಯು ಹೇಳುತ್ತಾನೆ:— ಇಂತೆಂದು ಹೇಳಿದ ಸಖಿಯರ ಮಾತುಗಳನ್ನು ಕೇಳಿ ಧರಣೀದೇವಿಯು ಆಕೆಯನ್ನು ಕೇಳಲು ಮೊದಲು ಮಾಡಿದಳು.

೭. ಧರಣೀದೇವಿಯು ಕೇಳುತ್ತಾಳೆ:— "ಎಲೌ ದೇವಿಯೆ! ನೀನು ಎಲ್ಲಿಂದ ಬರುತ್ತಿರುವೆ? ನನ್ನಿಂದ ನಿನಗೆ ಯಾವ ಕಾರ್ಯವಾಗಬೇಕಾಗಿರುವುದು? ನೀನು ಬಂದುದಕ್ಕೆ ಕಾರಣವನ್ನು ಮರೆಮಾಚದೆ ಹೇಳು. ನಿಜವಾಗಿಯೂ ನಡೆಸಿಕೊಡುವೆನು."

೮. ಬಕುಳಮಾಲಿಕೆಯು ಹೇಳುತ್ತಾಳೆ:— "ಮಹಾರಾಣಿ! ನಾನು ವೇಂಕಟಾಚಲದಿಂದ ಬಂದಿರುವೆನು. ನನ್ನ ಹೆಸರು ಬಕುಲಮಾಲಿಕೆ.

೯–೧೦. ನಮ್ಮ ಸ್ವಾಮಿಯಾದ ಶ್ರೀಮನ್ನಾರಾಯಣನು ವೇಂಕಟಾಚಲದಲ್ಲಿ ವಾಸಿಸುತ್ತಿರುವನು. ಆತನು ಒಮ್ಮೆ ಹಂಸದಂತೆ ಶುಭ್ರವಾದ ಮನೋವೇಗವುಳ್ಳ ಕುದರೆಯೊಂದನ್ನೇರಿ ವೇಂಕಟಾದ್ರಿಯ ಸಮೀಪದಲ್ಲಿ ರಾಜೋಚಿತವಾಗಿ ಬೇಟೆಯನ್ನಾಡಲು ಹೊರಟನು. ವಿವಿಧ ಪುಷ್ಪಗಳಿಂದ ಶೋಭಿಸುವ ವಸಂತಕಾಲದಲ್ಲಿ ಆತನು ಅನೇಕ ವನಗಳನ್ನು ಸಂಚರಿಸುತ್ತಿದ್ದನು.

ಪಶ್ಯನ್ಮೃಗಾನ್ಗಜಾನ್ಸಿಂಹಾನ್ಗವಯಾನ್ಶರಭಾನ್ರುರೂನ್ ।
ಶುಕಾನ್ಪಾರಾವತಾನ್ಹಂಸಾನ್ಪಕ್ಷಿಣೋಽನ್ಯಾನ್ವನಾಂತರೇ ॥ ೧೧ ॥
ಗಜರಾಜಂ ತತ್ರ ಕಂಚಿದ್ಯೂಥಪಂ ಮದವರ್ಷಿಣಂ ।
ಕರೇಣುಸಹಿತಂ ತುಂಗಮನ್ವಗಚ್ಛತ್ಸುರೋತ್ತಮಃ ॥ ೧೨ ॥
ವನಾದ್ವನಾಂತರಂ ಗತ್ವಾ ನೃಪಂ ಶಂಖಮುಪಾಗಮತ್ ।
ತಪಸ್ಯಂತಂ ಬೃಹಚ್ಛೈಲೇ ಪ್ರತಿಷ್ಠಾಪ್ಯ ಜನಾರ್ದನಂ ॥ ೧೩ ॥
ಶ್ರೀಭೂಮಿಸಹಿತಂ ನಿತ್ಯಮರ್ಚಯಂತಂ ಚ ಭಕ್ತಿತಃ ।
ಶಂಖನಾಗಬಿಲಂ ನಾಮ ಸರಃ ಪಾವನಮುತ್ತಮಂ ॥ ೧೪ ॥
ತತ್ಸರಸ್ತೀರಮಾಸಾದ್ಯ ತುರಂಗಾದವರುಹ್ಯ ಚ ।
ರಾಜವೇಷಂ ಸಮಾಸಾದ್ಯ ತಮಪೃಚ್ಛನ್ನೃಪೋತ್ತಮಂ ॥ ೧೫ ॥
ಕ್ರಿಯತೇ ಕಿಂ ನೃಪಶ್ರೇಷ್ಠ ಪಾದೇಽಸ್ಮಿನ್ಶೇಷಭೂಭೃತಃ ॥ ೧೬ ॥

ಶಂಖ ಉವಾಚ :—

ಅಹಂ ಹೈಹಯದೇಶೀಯಃ ಪುತ್ರಃ ಶ್ವೇತಸ್ಯ ಭೂಭೃತಃ ।
ಮಹಾವಿಷ್ಣೋಃ ಪ್ರೀತಯೇಽತ್ರ ಕೃತವಾನಖಿಲಾನ್ಕ್ರತೂನ್ ॥ ೧೭ ॥

---

೧೧. ಆ ಕಾಡುಗಳಲ್ಲಿ ಆನೆ, ಸಿಂಹ, ಗವಯ, ಶರಭ, ಜಿಂಕೆಗಳೇ ಮುಂತಾದ ಮೃಗಗಳನ್ನೂ, ಗಿಳಿ, ಪಾರಿವಾಳ, ಹಂಸವೇ ಮುಂತಾದ ಅನೇಕ ಪಕ್ಷಿಗಳನ್ನೂ ನೋಡುತ್ತ ಬರುತ್ತಿದ್ದನು.

೧೨. ಅಲ್ಲಿ ಹಿಂಡಿಗೆ ನಾಯಕನಾಗಿ ಹೆಣ್ಣಾನೆಗಳೊಡಗೂಡಿ ಮದಧಾರೆಗಳನ್ನು ಸುರಿಸುತ್ತಿದ್ದ ಎತ್ತರವಾದ ಗಜರಾಜನನ್ನು ಕಂಡು ಈ ದೇವದೇವನು ಅದನ್ನೇ ಹಿಂಬಾಲಿಸಿದನು.

೧೩. ಇಂತು ವನದಿಂದ ವನವನ್ನು ಸೇರುತ್ತ ಆತನು ಕೆಲವು ಕಾಲದ ಮೇಲೆ, ಮಹಾಶೈಲದಲ್ಲಿ ಜನಾರ್ದನ ಮೂರ್ತಿಯನ್ನು ಪ್ರತಿಷ್ಠಿಸಿ ತಪಸ್ಸನ್ನು ಮಾಡುತ್ತಿರುವ ಶಂಖನೆಂಬ ಮಹಾರಾಜನನ್ನು ಸಮೀಪಿಸಿದನು.

೧೪. ಆತನು ಶ್ರೀದೇವಿಭೂದೇವಿಯರೊಡನಿರುವ ಮಹಾವಿಷ್ಣುವನ್ನು ನಿತ್ಯದಲ್ಲಿಯೂ ಪೂಜಿಸುತ್ತಿದ್ದನು. ಸಮೀಪದಲ್ಲಿಯೇ ಪರಿಶುದ್ಧವಾದ ಶಂಖನಾಗಬಿಲವೆಂಬ ಉತ್ತಮವಾದ ಸರೋವರವಿದ್ದಿತು.

೧೫–೧೬. ಶ್ರೀನಿವಾಸನು ಆ ಸರೋವರದ ದಡವನ್ನು ಸೇರಿ ಕುದುರೆಯಿಂದಿಳಿದು ರಾಜನ ವೇಷವನ್ನು ತಾಳಿ ಆತನನ್ನು ಕುರಿತು, "ಎಲೈ ಮಹಾರಾಜನೆ! ಶೇಷಾಚಲದ ಬುಡದಲ್ಲಿ ನೀನು ಏನನ್ನು ಮಾಡುತ್ತಿರುವೆ?" ಎಂಬುದಾಗಿ ಪ್ರಶ್ನೆಮಾಡಿದನು.

೧೭. ಶಂಖನು ಹೇಳುತ್ತಾನೆ:—"ನಾನು ಹೈಹಯ ದೇಶದವನು. ಶ್ವೇತ

ಅದರ್ಶನಾನ್ಮಹಾವಿಷ್ಣೋರ್ನಿರ್ವಿಣ್ಣೋಽಹಂ ನೃಪಾತ್ಮಜ ।
ತದಾನೀಮವದದ್ದಿವ್ಯಾ ವಾಣೀ ಸರ್ವಾರ್ತಿನಾಶಿನೀ ॥ ೧೮ ॥
ರಾಜನ್ನಾತ್ರ ಭವಿಷ್ಯಾಮಿ ಪ್ರತ್ಯಕ್ಷಸ್ತೇ ವಚಃಶೃಣು ।
ಗಚ್ಛ ನಾರಾಯಣಾದ್ರಿಂ ತ್ವಂ ತಪಃ ಕುರ್ವಿತಿ ಮಾಂ ಸ್ಫುಟಂ ॥ ೧೯ ॥
ತತೋ ದೇಶಮಹಂ ತ್ಯಕ್ತ್ವಾ ತಪಸಾಽರಾಧಯಾಮ್ಯಹಂ ।
ಅತ್ರ ದೇವಂ ನೃಪಾಚಿಂತ್ಯಂ ಪ್ರತಿಷ್ಠಾಪ್ಯ ಶ್ರಿಯಃ ಪತಿಂ ॥ ೨೦ ॥
ಅಗಸ್ತ್ಯಾನುಗ್ರಹಾನ್ನಿತ್ಯಮರ್ಚಯಾಮಿ ವಿಧಾನತಃ ।
ಇತಿ ತಸ್ಯ ವಚಃ ಶ್ರುತ್ವಾ ಸೋಽತ್ಯಾಸಂ ಪ್ರಾಹ ತಂ ವಿಭುಃ ॥ ೨೧ ॥
ಗಚ್ಛ ನಾರಾಯಣಾದ್ರಿಂ ತ್ವಮಸ್ಯ ಪಾದೇ ಕಿಮಾಸ್ಯತೇ ।
ಆರುಹ್ಯಾನೇನ ಮಾರ್ಗೇಣ ಪಶ್ಚಿಮೇ ಶಿಖರೇ ಸ್ಥಿತಂ ॥ ೨೨ ॥
ಪ್ರಣಮ್ಯ ವಿಷ್ವಕ್ಸೇನಂ ತ್ವಂ ಬಾಲಂ ನ್ಯಗ್ರೋಧಮೂಲತಃ ।
ಸ್ವಾಮಿಪುಷ್ಕರಿಣೀಂ ಗತ್ವಾ ಸ್ನಾತ್ವಾ ತೀರೇಽಥ ಪಶ್ಚಿಮೇ ॥ ೨೩ ॥

---

ನೆಂಬ ಮಹಾರಾಜನ ಮಗನು. ಮಹಾವಿಷ್ಣುವನ್ನು ಸಂತೋಷಗೊಳಿಸಲು ಅಲ್ಲಿ ಅನೇಕ ಯಜ್ಞಗಳನ್ನು ಮಾಡಿದೆನು.

೧೮. ಎಲೈ ರಾಜಕುಮಾರನೆ! ಆ ನಾರಾಯಣನನ್ನು ಕಾಣಲಾರದೆ ಅತ್ಯಂತ ಖಿನ್ನಮನಸ್ಕನಾಗಿದ್ದೆನು. ಆಗ ದಿವ್ಯವಾದ ಅಶರೀರವಾಣಿಯು ನನ್ನ ಸಕಲ ದುಃಖವನ್ನೂ ಕಳೆಯುವುದಾಗಿ ನನಗೆ ಹೇಳಿತು.

೧೯. 'ರಾಜನೆ! ನಿನಗೆ ಇಲ್ಲಿ ನಾನು ಪ್ರತ್ಯಕ್ಷದರ್ಶನವನ್ನು ಕೊಡುವುದಿಲ್ಲ. ನನ್ನ ಮಾತನ್ನು ಕೇಳು. ನಾರಾಯಣಾಚಲಕ್ಕೆ ಹೋಗಿ ಅಲ್ಲಿ ತಪಸ್ಸನ್ನು ಮಾಡು.' ಇಂತೆಂದು ಆಕಾಶವಾಣಿಯು ನನಗೆ ಅಪ್ಪಣೆಮಾಡಿತು.

೨೦. ಬಳಿಕ ನಾನು ಆ ಪ್ರದೇಶವನ್ನು ಬಿಟ್ಟು ಇಲ್ಲಿಗೆ ಬಂದು ಅಚಿಂತ್ಯ ಮಹಿಮನಾದ ಆ ಲಕ್ಷ್ಮೀರಮಣನನ್ನು ಪ್ರತಿಷ್ಠಿಸಿ ತಪಸ್ಸಿನಿಂದ ಪೂಜೆಮಾಡುತ್ತಿರುವೆನು.

೨೧. ಅಗಸ್ತ್ಯಮುನಿಗಳ ಪರಮಾನುಗ್ರಹದಿಂದ ಸ್ವಾಮಿಯನ್ನು ನಿತ್ಯವೂ ವಿಧ್ಯುಕ್ತರೀತಿಯಿಂದ ಅರ್ಚಿಸುತ್ತಿರುವೆನು." ಇಂತೆಂದ ಶಂಖಮಹಾರಾಜನ ಮಾತುಗಳನ್ನು ಕೇಳಿ ಶ್ರೀನಿವಾಸನು ಮಂದಹಾಸವದನನಾಗಿ ಆತನಿಗೆ ಹೇಳಿದನು.

೨೨–೨೪. "ನೀನು ನಾರಾಯಣಾಚಲಕ್ಕೆ ಹೊರಡು. ಈ ಪರ್ವತದ ಬುಡದಲ್ಲೇಕೆ ಕುಳಿತಿರುವೆ? ಈ ಮಾರ್ಗದಿಂದಲೇ ಬೆಟ್ಟವನ್ನೇರಿ, ಪಶ್ಚಿಮ ಶಿಖರದಲ್ಲಿ ನೆಲಸಿರುವ ಬಾಲರೂಪಿಯಾದ ವಿಷ್ವಕ್ಸೇನನನ್ನು ಕಂಡು, ಆಲದಮರದ ಬುಡದಲ್ಲಿರುವ ಆತನಿಗೆ ನಮಸ್ಕರಿಸಿ, ಸ್ವಾಮಿ ಪುಷ್ಕರಿಣೀ ತೀರ್ಥವನ್ನು ಸೇರಿ, ಅದರಲ್ಲಿ

ಅಶ್ವತ್ಥಂ ತತ್ರ ವಲ್ಮೀಕಂ ದ್ರಕ್ಷ್ಯಸೇ ನೃಪನಂದನ ।
ತಯೋರ್ಮಧ್ಯಂ ಸಮಾಸಾದ್ಯ ತಪಃ ಕುರ್ವಿತ್ಯಚೋದಯತ್ ॥ ೨೪ ॥
ಕಶ್ಚಿಚ್ಛ್ವೇತೋ ವರಾಹೋಽಸ್ಮಿನ್ವಲ್ಮೀಕೇ ಚರತಿ ಧ್ರುವಂ ।
ಸ ತು ಪುಣ್ಯವತಾಮೇವ ದರ್ಶನಂ ಯಾತಿ ಭೂಪತೇ ॥ ೨೫ ॥

ಶ್ರೀ ವರಾಹ ಉವಾಚ :—

ಇತ್ಯಾದಿಶ್ಯ ಹಯಾರೂಢೋ ಜಗಾಮ ಮೃಗಯಾಂ ವಿಭುಃ ।
ಚರನ್ವನಾದ್ವನಂ ಸುಭ್ರೂಃ ಸಮಾಸಾದ್ಯಾರಣೀಂ ನದೀಂ ॥ ೨೬ ॥
ಅವರುಹ್ಯ ಹಯಾತ್ತತ್ರ ವಿಚಚಾರ ತಟೇ ಶುಭೇ ।
ವನಾಂತಾದಾಗತೋ ವಾಯುಃ ಪದ್ಮಕಲ್ಹಾರಶೀತಲಃ ।
ಶ್ರಮಾಪನಯನೋ ಮಂದಂ ಸಿಷೇವೇ ಪುರುಷೋತ್ತಮಂ ॥ ೨೭ ॥
ತರವಃ ಪುಷ್ಪವರ್ಷಾಣಿ ವಿಕಿರಂತಃ ಸಿಷೇವಿರೇ ।
ಏವಂ ಸ ವಿಚರನ್ದೇವಃ ಪುಷ್ಪಭಾರಾನತಾಂಸ್ತರೂನ್ ॥ ೨೮ ॥
ವಿಚಿನ್ವನ್ಗಜರಾಜಂ ತಂ ಪುಷ್ಪಲಾವೀರ್ದದರ್ಶ ಹ ।
ಕನ್ಯಾಃ ಸುವೇಷಾ ರುಚಿರಾ ಮೇಘೇಷ್ವಿವ ಶತಹ್ರದಾಃ ॥ ೨೯ ॥

---

ಮಿಂದು, ಅದರ ಪಶ್ಚಿಮ ತೀರದಲ್ಲಿರುವ ಅಶ್ವತ್ಥ ವೃಕ್ಷವನ್ನು ನೋಡುವೆ. ಅಲ್ಲಿಯೇ ಹುತ್ತವೊಂದಿರುವುದು. ಎಲೈ ರಾಜಪುತ್ರನೆ! ಆ ಎರಡರ ಮಧ್ಯ ದಲ್ಲಿರುವ ಪವಿತ್ರ ಪ್ರದೇಶದಲ್ಲಿ ನೀನು ತಪಸ್ಸನ್ನು ಮಾಡು." ಇಂತೆಂದು ಶ್ರೀನಿವಾಸನು ಶಂಖನನ್ನು ಕೊಟ್ಟುಕಳುಹಿಸಿದನು.

೨೫. "ಆ ಹುತ್ತದಲ್ಲಿ ಬಿಳಿಯದಾದ ವರಾಹವೊಂದು ಯಾವಾಗಲೂ ಸಂಚರಿಸುತ್ತಿರುವುದು; ಆದರೆ ಅದು ಪುಣ್ಯವಂತರಿಗೆ ಮಾತ್ರ ದೃಗ್ಗೋಚರ ವಾಗುವುದು" ಎಂದೂ ತಿಳಿಸಿದನು.

೨೬. ವರಾಹಸ್ವಾಮಿಯು ಹೇಳುತ್ತಾನೆ:—"ಇಂತೆಂದು ಅಪ್ಪಣೆಮಾಡಿ ಶ್ರೀನಿವಾಸನು ಮತ್ತೆ ಕುದುರೆಯನ್ನೇರಿಕೊಂಡು ಬೇಟೆಯಾಡಲು ಹೊರಟನು. ವನದಿಂದ ವನಕ್ಕೆ ಸುತ್ತಾಡುತ್ತ ಅರಣೀ ನದಿಯ ಸಮೀಪಕ್ಕೆ ಬಂದನು.

೨೭. ಅಲ್ಲಿ ಕುದುರೆಯಿಂದಿಳಿದು ಅದರ ಶುಭ್ರವಾದ ದಡಗಳಲ್ಲಿ ಸಂಚರಿಸು ತ್ತಿದ್ದನು. ವನಮಧ್ಯದಿಂದ ವಾಯುವು ಬೀಸುತ್ತ ಪದ್ಮ ಕಲ್ಹಾರಾದಿ ಪುಷ್ಪ ಗಳ ಗಂಧದಿಂದ ಶೀತಲವಾಗಿ ಆ ಪುರುಷೋತ್ತಮನ ಮಾರ್ಗಶ್ರಮವನ್ನು ಕಳೆದು ಸೇವಿಸುತ್ತಲಿದ್ದಿತು.

೨೮-೨೯. ವೃಕ್ಷಗಳೆಲ್ಲವೂ ಹೂ ಮಳೆಯನ್ನು ಸುರಿಸುತ್ತ. ಆತನನ್ನು ಸೇವಿಸಿದುವು. ಇಂತು ಪುಷ್ಪಗಳ ಭಾರದಿಂದ ತಲೆಬಾಗಿದ ಮರಗಳ ಮಧ್ಯ ದಿಂದ ಸುತ್ತಾಡುತ್ತ ಆ ಮದ್ದಾನೆಯನ್ನು ಹುಡುಕುತ್ತಿರಲು ಹೂವುಗಳನ್ನು

ತಾಸಾಂ ಮಧ್ಯಗತಾಂ ತನ್ವೀಂ ದದರ್ಶಾತಿಮನೋಹರಾಂ ।
ಲಕ್ಷ್ಮೀಸಮಾಂ ಹೇಮವರ್ಣಾಂ ತಸ್ಯಾಂ ಸಕ್ತಮನಾ ಅಭೂತ್ ॥ ೩೦ ॥
ತಾಂ ಗೃಧ್ನುರಾಹ ತಾಃ ಕನ್ಯಾಃ ಕೇಯಮಿತ್ಯೇವ ಪೂರುಷಃ ।
ಉಕ್ತಸ್ತಾಭಿರಿಯಂ ಕನ್ಯಾ ವಿಯದ್ರಾಜ್ಞೋ ಮಹಾಬಲ ॥ ೩೧ ॥
ಇದಂ ಶ್ರುತ್ವಾ ವಚಸ್ತಾಸಾಂ ಹಯಮಾರುಹ್ಯ ವೇಗವಾನ್ ।
ಆಜಗಾಮಾಶು ಭಗವಾನ್ಸ್ವಾಲಯಂ ರುಚಿರಂ ಗಿರಿಂ ॥ ೩೨ ॥
ತತ್ರ ಸ್ವಾಲಯಮಾಸಾದ್ಯ ಸ್ವಾಮಿಪುಷ್ಕರಿಣೀತಟೇ ।
ಮಾಮಾಹೂಯಾವದದ್ದೇವೋ ಹಲಾ ಬಕುಲಮಾಲಿಕೇ ॥ ೩೩ ॥
ವಿಯದ್ರಾಜಪುರಂ ಗತ್ವಾ ಪ್ರವಿಶ್ಯಾಂತಃಪುರಂ ಸಖಿ ।
ತತ್ಪತ್ನೀಂ ಧರಣೀಂ ಪ್ರಾಪ್ಯ ಪೃಷ್ಟ್ವಾ ಕುಶಲಮೇವ ಚ ॥ ೩೪ ॥
ಯಾಚಸ್ವ ತನಯಾಂ ತಸ್ಯಾ ರುಚಿರಾಂ ಕಮಲಾಲಯಾಂ ।
ರಾಜ್ಞೋಽಭಿಮತಮಾಜ್ಞಾಯ ಶೀಘ್ರಮಾಗಚ್ಛ ಭಾಮಿನಿ ॥ ೩೫ ॥

---

ಕೊಯ್ಯುತ್ತಿದ್ದ ಕೆಲವು ಸ್ತ್ರೀಯರನ್ನು ಕಂಡನು. ಅವರು ತಮ್ಮ ವೇಷಭೂಷಣಗಳಿಂದ ಮನೋಹರವಾಗಿ, ವೃಕ್ಷಷಂಡಗಳಲ್ಲಿ ತಿರುಗಾಡುತ್ತ ಮೇಘಮಂಡಲದ ಮಧ್ಯದಲ್ಲಿ ಮಿರುಗುವ ಮಿಂಚಿನ ಬಳ್ಳಿಗಳಂತೆ ಕಾಣುತ್ತಿದ್ದರು.

೩೦. ಅವರ ಮಧ್ಯದಲ್ಲಿ ಅತಿಸುಂದರಿಯೂ, ಲಕ್ಷ್ಮೀ ಸಮಾನಳೂ, ಚಿನ್ನದ ಬಣ್ಣದ ಮೈಕಟ್ಟುಳ್ಳವಳೂ ಆದ ಯುವತಿಯೊಬ್ಬಳನ್ನು ಕಂಡು ವೇಂಕಟೇಶನು ಆಕೆಯಲ್ಲಿಯೇ ನೆಟ್ಟಮನಸ್ಸುಳ್ಳವನಾದನು.

೩೧. ಆಕೆಯನ್ನು ಹೊಂದಲೆಳಸಿ ಆ ಪುರುಷೋತ್ತಮನು ಸಖಿಯರನ್ನು ಕುರಿತು "ಈಕೆಯು ಯಾರು?" ಎಂದು ಕೇಳಲು, ಅವರು "ಈಕೆಯು ಆಕಾಶರಾಜನ ಪುತ್ರಿ" ಎಂದು ಉತ್ತರ ಕೊಟ್ಟರು.

೩೨. ಸಖಿಯರ ಮಾತುಗಳನ್ನು ಕೇಳಿ ಭಗವಂತನು ಕುದುರೆಯನ್ನು ಹತ್ತಿಕೊಂಡು ವೇಗದಿಂದ ತನ್ನ ನಿವಾಸಸ್ಥಾನವಾದ ವೇಂಕಟಾಚಲಕ್ಕೆ ಹಿಂದಿರುಗಿ ಬಂದನು.

೩೩–೩೫. ಅಲ್ಲಿ ಸ್ವಾಮಿ ಪುಷ್ಕರಿಣಿಯ ದಡದಲ್ಲಿದ್ದ ತನ್ನ ಮನೆಗೆ ಬಂದು ನನ್ನನ್ನು ಕರೆದು, "ಸಖಿ, ಬಕುಳಮಾಲಿಕೆ! ನೀನು ಆಕಾಶರಾಜನ ಪಟ್ಟಣವಾದ ನಾರಾಯಣಪುರಕ್ಕೆ ಹೊರಟು ರಾಜಾಂತಃಪುರವನ್ನು ಸೇರಿ ಮಹಾರಾಣಿಯಾದ ಧರಣೀದೇವಿಯನ್ನು ಕಂಡು ಕುಶಲಪ್ರಶ್ನೆಯನ್ನು ಮಾಡಿ ಮನೋಹರೆಯಾದ ಪದ್ಮಾವತಿಯೆಂಬ ಆಕೆಯ ಮಗಳನ್ನು ನನಗಾಗಿ ಯಾಚಿಸು; ರಾಜನ ಅಭಿಪ್ರಾಯವನ್ನು ತಿಳಿದುಕೊಂಡು ಬೇಗನೆ ಹಿಂದಿರುಗಿ ಬಾ" ಎಂಬುದಾಗಿ ಅಪ್ಪಣೆಮಾಡಿದನು.

ಇತ್ಥಂ ದೇವೇನ ಚಾಜ್ಞಪ್ತಾ ದೇವಿ ತ್ವದ್ಗೃಹಮಾಗತಾ ।
ಯಥೋಚಿತಂ ಕುರುಷ್ವೇಹ ರಾಜ್ಞಾ ಮಂತ್ರಿಯುತೇನ ಚ ॥ ೩೬ ॥
ಕನ್ಯಯಾ ಚ ವಿಚಾರ್ಯೈವ ಪ್ರೋಚ್ಯತಾಮುತ್ತರಂ ವಚಃ ॥ ೩೭ ॥

ಶ್ರೀ ವರಾಹ ಉವಾಚ :—

ಅಥ ತಸ್ಯಾ ವಚಃ ಶ್ರುತ್ವಾ ಪ್ರೀತಾ ರಾಜ್ಞೀ ಬಭೂವಹ ।
ಆಹೂಯಾಕಾಶರಾಜಂ ತಮುಪೇತ್ಯ ಕಮಲಾಲಯಾಂ ॥ ೩೮ ॥
ಮಂತ್ರಿಮಧ್ಯೇಽವದದ್ದೇವೀ ವಚನಂ ಬಕುಲಸ್ರಜಃ ।
ಶ್ರುತ್ವಾ ಪ್ರೀತೋಽನದದ್ರಾಜಾ ಮಂತ್ರಿಣಃ ಸಪುರೋಹಿತಾನ್ ॥ ೩೯ ॥

ಆಕಾಶರಾಜ ಉವಾಚ :—

ಕನ್ಯಾ ತ್ವಯೋನಿಜಾ ದಿವ್ಯಾ ಸುಭಗಾ ಕಮಲಾಲಯಾ ।
ಅರ್ಥಿತಾ ದೇವದೇವೇನ ವೆಂಕಟಾದ್ರಿನಿವಾಸಿನಾ ॥ ೪೦ ॥
ಪೂರ್ಣೋ ಮನೋರಥೋ ಮೇಽದ್ಯ ಬ್ರೂತ ಕಿಂ ಸಮ್ಮತಂ ತು ವಃ ।
ಶ್ರುತ್ವಾ ಮಂತ್ರಿಗಣಾಸ್ಸರ್ವೇ ರಾಜ್ಞೋ ವಚನಮುತ್ತಮಂ ॥ ೪೧ ॥

---

೩೬–೩೭. ಎಲೌ ದೇವಿಯೆ! ಇಂತೆಂದ ಆತನ ಆಜ್ಞೆಯನ್ನು ತಲೆಯಲ್ಲಿ ಹೊತ್ತು ನಿನ್ನ ಮನೆಗೆ ಬಂದಿರುವೆನು. ಮಂತ್ರಿಗಳೊಡನೆಯೂ ರಾಜನೊಡನೆಯೂ ಯೋಚಿಸಿ ಉಚಿತವಾದ ಮುಂದಣ ಕಾರ್ಯವನ್ನು ಮಾಡುವವಳಾಗು. ಅಲ್ಲದೆ ಕನ್ಯೆಯೊಡನೆಯೂ ಯೋಚನೆ ಮಾಡಿ ನನಗೆ ಉತ್ತರವನ್ನು ತಿಳಿಸು.''

೩೮–೩೯. ವರಾಹಸ್ವಾಮಿಯು ಹೇಳುತ್ತಾನೆ:— ಇಂತೆಂದ ದೂತಿಯ ಮಾತುಗಳನ್ನು ಕೇಳಿ ಮಹಾರಾಣಿಯು ಅತ್ಯಂತ ಸಂತೋಷಗೊಂಡಳು. ಆಕೆಯು ಆಕಾಶರಾಜನನ್ನು ಕರೆದು, ಪದ್ಮಾವತಿಯೊಡಗೂಡಿ ಮಂತ್ರಿಗಳ ಮಧ್ಯದಲ್ಲಿ ಬಕುಳಮಾಲಿಕೆಯು ಹೇಳಿದುದೆಲ್ಲವನ್ನೂ ವಿಸ್ತಾರವಾಗಿ ತಿಳಿಸಿದಳು. ಎಲ್ಲವನ್ನೂ ಕೇಳಿದ ಬಳಿಕ ಮಹಾರಾಜನು ಪುರೋಹಿತರೊಡನಿದ್ದ ಮಂತ್ರಿಗಳನ್ನು ಕುರಿತು ಹೇಳಿದನು.

೪೦. ಆಕಾಶರಾಜನು ಹೇಳುತ್ತಾನೆ:— ''ಈ ಕನ್ಯೆಯು ದೇವಾಂಶಸಂಭೂತಳೂ, ಸೌಭಾಗ್ಯವತಿಯೂ, ಕಮಲವಾಸಿನಿಯೂ ಆಗಿರುವಳೇ ಹೊರತು ಗರ್ಭದಿಂದ ಬಂದವಳಲ್ಲ. ಈಗ ವೇಂಕಟಾಚಲದಲ್ಲಿ ನೆಲಸಿರುವ ಶ್ರೀನಿವಾಸನು ಈಕೆಯನ್ನು ಯಾಚಿಸಿರುವನು.

೪೧–೪೩. ಇಂದು ನನ್ನ ಮನಸ್ಸಿನ ಬಯಕೆಯು ನೆರವೇರಿದಂತಾಯಿತು. ನಿಮಗೆ ಈ ಸಂಬಂಧವು ಸಮ್ಮತವೆ? ಹೇಳಿರಿ.'' ಇಂತೆಂದ ಮಹಾರಾಜನ ಉತ್ತಮ ವಾಕ್ಯವನ್ನು ಕೇಳಿ ಮಂತ್ರಿಗಳೆಲ್ಲರೂ ಅಪರಿಮಿತಾನಂದದಿಂದ ತುಂಬಿದ ಮನಸ್ಸುಳ್ಳವರಾಗಿ ಆಕಾಶರಾಜನನ್ನು ಕುರಿತು ಹೇಳತೊಡಗಿದರು. ''ಎಲೈ

ಪ್ರೋಚುಃ ಸುಪ್ರೀತಮನಸೋ ವಿಯಂದ್ರಾಜಂ ಮಹೀಪತಿಂ ।
ವಯಂ ಕೃತಾರ್ಥಾ ರಾಜೇಂದ್ರ ಕುಲಂ ಸರ್ವೋನ್ನತಂ ಭವೇತ್ ॥ ೪೨ ॥
ಭವತ್ಕನ್ಯೇಯಮತುಲಾ ಶ್ರಿಯಾ ಸಹ ರಮಿಷ್ಯತಿ ।
ದೀಯತಾಂ ದೇವದೇವಾಯ ಶಾರ್ಙ್ಗಿಣೇ ಪರಮಾತ್ಮನೇ ॥ ೪೩ ॥
ಅಯಂ ವಸಂತಃ ಶ್ರೀಮಾಂಶ್ಚ ಶುಭಂ ಶೀಘ್ರಂ ವಿಧೀಯತಾಂ ॥ ೪೪ ॥
ಆಹೂಯ ಧಿಷಣಂ ಲಗ್ನಂ ವಿವಾಹಾರ್ಥಂ ವಿಧೀಯತಾಂ ॥ ೪೫ ॥
ತಥಾಸ್ತ್ವಿತ್ಯಾಹ್ವಯಾಮಾಸ ಸುರಲೋಕಾದ್ಬೃಹಸ್ಪತಿಂ ।
ಪಪ್ರಚ್ಛ ಕನ್ಯಾವರಯೋರ್ವಿವಾಹಾರ್ಥಂ ನರೇಶ್ವರಃ ॥ ೪೬ ॥

ರಾಜೋವಾಚ :—

ಕನ್ಯಾಯಾ ಜನ್ಮನಕ್ಷತ್ರಂ ಮೃಗಶೀರ್ಷಮಿತಿಸ್ಮೃತಂ ।
ದೇವಸ್ಯ ಶ್ರವಣರ್ಕ್ಷಂತು ತಯೋರ್ಯೋಗೋ ವಿಚಾರ್ಯತಾಂ ॥ ೪೭ ॥
ಶ್ರುತ್ವಾಬ್ರವೀತ್ಸ ಧಿಷಣಸ್ತಯೋರುತ್ತರಫಲ್ಗುನೀ ।
ಸಮ್ಮತಾ ಸುಖವೃದ್ಧ್ಯರ್ಥಂ ಪ್ರೋಚ್ಯತೇ ದೈವಚಿಂತಕೈಃ ॥ ೪೮ ॥

---

ರಾಜೇಂದ್ರನೆ! ನಾವು ಕೃತಾರ್ಥರಾದೆವು. ನಿನ್ನ ಕುಲವೂ ಸರ್ವೋತ್ಕೃಷ್ಟವೆನಿಸುವುದು. ಅಸಮಾನಳಾದ ನಿನ್ನ ಈ ಪುತ್ರಿಯು ಸಾಕ್ಷಾತ್‌ಲಕ್ಷ್ಮಿಯೊಡನೆ ಸಮಸಮವಾಗಿ ಸುಖಿಸುವಳು. ಶಾರ್ಙ್ಗಧನುರ್ಧಾರಿಯೂ ಪರಮಾತ್ಮನೂ ಆದ ಶ್ರೀನಿವಾಸನಿಗೆ ನಿನ್ನ ಮಗಳನ್ನು ಖಂಡಿತವಾಗಿಯೂ ಕೊಡು.

೪೪. ಈಗಲೇ ಸಂಪತ್ಪ್ರದವಾದ ವಸಂತಕಾಲವು ಪ್ರಾಪ್ತವಾಗಿರುವುದು. ಶುಭಕಾರ್ಯವು ಶೀಘ್ರವಾಗಿಯೇ ನೆರವೇರಲಿ.

೪೫. ಬೃಹಸ್ಪತಿಯನ್ನು ಈಗಲೆ ಕರೆಸಿಕೊಂಡು ಮದುವೆಗಾಗಿ ಲಗ್ನವನ್ನು ನಿಷ್ಕರ್ಷೆ ಮಾಡುವ ಪ್ರಯತ್ನವನ್ನು ಮಾಡು.''

೪೬. ಆ ಮಹಾರಾಜನು ಹಾಗೆಯೇ ಆಗಲೆಂದು ಅಂಗೀಕರಿಸಿ ದೇವಲೋಕದಿಂದ ಆ ಕ್ಷಣದಲ್ಲಿಯೇ ಬೃಹಸ್ಪತಿಯನ್ನು ಕರೆಸಿಕೊಂಡು ವಧೂವರರ ವಿವಾಹದ ವಿಚಾರವಾಗಿ ಪ್ರಶ್ನೆ ಮಾಡತೊಡಗಿದನು.

೪೭. ರಾಜನು ಹೇಳುತ್ತಾನೆ:—'' ಕನ್ಯೆಯ ನಕ್ಷತ್ರವು ಮೃಗಶಿರೆಯೆಂದು ಹೇಳಲ್ಪಟ್ಟಿರುವುದು. ಶ್ರೀನಿವಾಸನ ನಕ್ಷತ್ರವು ಶ್ರವಣವು. ಎರಡು ನಕ್ಷತ್ರಗಳ ವೈವಾಹಿಕ ಕೂಟಗಳ ಬಲಾಬಲಗಳನ್ನು ವಿಚಾರಮಾಡುವವನಾಗು.''

೪೮. ಇಂತೆಂದ ಆ ದೊರೆಯ ಮಾತನ್ನು ಕೇಳಿ ಬೃಹಸ್ಪತಿಯು ಹೇಳಿದನು. ''ಅವರಿಬ್ಬರ ಸೌಖ್ಯದ ಉತ್ತರೋತ್ತರಾಭಿವೃದ್ಧಿಗೆ ಉತ್ತರ ಫಲ್ಗುನೀ ನಕ್ಷತ್ರವೇ ಉತ್ತಮವೆಂದು ಜ್ಯೋತಿಶ್ಶಾಸ್ತ್ರಜ್ಞರಿಂದ ಹೇಳಲ್ಪಟ್ಟಿರುವುದು. ಇದೇ ನನಗೆ ಸಮ್ಮತವು.

ತಯೋರುತ್ತರ ಫಲ್ಗುನ್ಯಾಂ ವಿವಾಹಃ ಕ್ರಿಯತಾಮಿತಿ ।
ವೈಶಾಖಮಾಸೇ ವಿಧಿವತ್ಕ್ರಿಯತಾಮಿತಿ ಸೋಽಬ್ರವೀತ್ ॥ ೪೯ ॥
ಶ್ರೀ ವರಾಹ ಉವಾಚ:—
ರಾಜಾ ತು ಧಿಷಣಂ ತತ್ರ ಸಂಪೂಜ್ಯಾಥ ವಿಸೃಜ್ಯ ಚ ।
ದೇವಸ್ಯ ದೂತಿಕಾಮಾಹ ಗಚ್ಛ ದೇವಾಲಯಂ ಶುಭೇ ॥ ೫೦ ॥
ವೈಶಾಖೇ ದೇವದೇವಾಯ ಕಲ್ಯಾಣಂ ವದ ಸುವ್ರತೇ ।
ವೈವಾಹಿಕವಿಧಾನಂ ತು ಕೃತ್ವಾ ಚಾಗಮ್ಯತಾಮಿತಿ ॥ ೫೧ ॥
ತತೋ ದೇವ್ಯಾಃ ಪ್ರಿಯಕರಂ ಶುಕಂ ದೂತಂ ತಯಾ ಸಹ ।
ವಿಸೃಜ್ಯ ವಾಯುಂ ಸ್ವಸುತಮಿಂದ್ರಾದ್ಯಾನಯನೇಽಸೃಜತ್ ॥ ೫೨ ॥
ಆಹೂಯ ವಿಶ್ವಕರ್ಮಾಣಂ ಪುರಾಲಂಕಾರಕರ್ಮಣಿ ।
ನಿಯೋಜಯಾಮಾಸ ಸೋಽಪಿ ನಿರ್ಮಮೇ ನಿಮಿಷಾಂತರಾತ್ ॥ ೫೩ ॥
ಇಂದ್ರೋಽಸೃಜತ್ಪುಷ್ಪವೃಷ್ಟಿಂ ನನೃತುಶ್ಚಾಪ್ಸರೋಗಣಾಃ ।
ಧನದೋ ಧನಧಾನ್ಯಾದ್ಯೈಃ ಪೂರಯಾಮಾಸ ವೇಶ್ಮ ತತ್ ॥ ೫೪ ॥

---

೪೯. ಆದುದರಿಂದ ಅವರಿಗೆ ಆ ನಕ್ಷತ್ರದಲ್ಲಿಯೇ ವಿವಾಹಕಾರ್ಯವನ್ನು ನಡೆಸುವನಾಗು. ಇದೇ ವಸಂತಕಾಲದ ವೈಶಾಖಮಾಸದಲ್ಲಿಯೇ ವಿವಾಹ ಕಾರ್ಯವು ವಿಧ್ಯುಕ್ತರೀತಿಯಿಂದ ನಡೆಯಲಿ.''

೫೦. ವರಾಹಸ್ವಾಮಿಯು ಹೇಳುತ್ತಾನೆ:— ಬಳಿಕ ಮಹಾರಾಜನು ಬೃಹಸ್ಪತಿಗೆ ಅತಿಥಿ ಪೂಜೆಯನ್ನೆಸಗಿ ಬೀಳ್ಕೊಟ್ಟು ಪರಮಾತ್ಮನ ದೂತಿಕೆಯಾದ ಬಕುಳಮಾಲಿಕೆಯನ್ನು ಕುರಿತು ಹೇಳಿದನು. ''ಮಂಗಳಾಂಗಿಯೆ! ನೀನು ಅಗಸ್ತ್ಯೇಶ್ವರನ ದೇವಾಲಯಕ್ಕೆ ಹೊರಡು.

೫೧. ವೈಶಾಖಮಾಸದಲ್ಲಿ ಪರಮಾತ್ಮನಿಗೆ ಲಗ್ನವು ನಿಶ್ಚಯವಾಗಿರುವ ಅಂಶವನ್ನು ತಿಳಿಸು. ಎಲೌ ಮಹಾಭಾಗೇ! ವಿವಾಹಕ್ಕೆ ಬೇಕಾದ ಸನ್ನಾಹಗಳೆಲ್ಲ ವನ್ನೂ ಮಾಡಿಕೊಂಡು ಇಲ್ಲಿಗೆ ದಯಮಾಡಿಸುವಂತೆ ಹೇಳು.''

೫೨. ಬಳಿಕ ಪದ್ಮಾವತೀದೇವಿಗೆ ಅತ್ಯಂತ ಪ್ರಿಯನಾದ ಶುಕನೆಂಬ ದೂತ ನೊಬ್ಬನನ್ನು ಆಕೆಯೊಡನೆ ಕಳುಹಿಸಿಕೊಟ್ಟು, ವಾಯುದೇವನೊಡನೆ ತನ್ನ ಮಗ ನಾದ ವಸುದಾನನನ್ನು ಇಂದ್ರಾದಿ ದೇವತೆಗಳನ್ನು ಕರೆತರಲು ಕಳುಹಿಸಿದನು.

೫೩. ಅಲ್ಲದೆ ವಿಶ್ವಕರ್ಮನನ್ನು ಕರೆದು ಪಟ್ಟಣವನ್ನು ಅಲಂಕರಿಸುವ ಕೆಲಸದಲ್ಲಿ ಆತನನ್ನು ನಿಯೋಜಿಸಿದನು. ಆತನೂ ಕ್ಷಣಮಾತ್ರದಲ್ಲಿಯೇ ತನಗೆ ವಹಿಸಿದ್ದ ಪುರಶೃಂಗಾರದ ಕೆಲಸವನ್ನು ಪೂರೈಸಿದನು.

೫೪. ಆಗ ಇಂದ್ರನು ನಗರದಲ್ಲಿ ಪುಷ್ಪವೃಷ್ಟಿಯನ್ನು ಸುರಿಸಿದನು. ಅಪ್ಸರ

ಯಮಸ್ತು ರೋಗರಹಿತಾಂಶ್ಚಕಾರ ಮನುಜಾನ್ಭುವಿ ।
ವರುಣೋ ರತ್ನಜಾಲಾನಿ ಮೌಕ್ತಿಕಾದೀನ್ಯಪೂರಯತ್ ॥ ೫೫ ॥
ಏವಂ ಸಂಪಾದ್ಯ ಸರ್ವಾಣಿ ಯಯುರ್ದೇವಾ ವೃಷಾಚಲಂ ॥ ೫೬ ॥
ಶ್ರೀ ವರಾಹ ಉವಾಚ:—
ತತಃ ಸಾ ಹಯಮಾರುಹ್ಯ ಶುಕೇನ ಸಹಿತಾ ಯಯೌ ।
ಶ್ರೀ ವೇಂಕಟಾದ್ರಿಮಾಸಾದ್ಯ ದೇವಾಲಯಸಮೀಪತಃ ॥ ೫೭ ॥
ಅವರುಹ್ಯ ತುರಂಗಾತ್ಸಾ ಪಶುಕಾಭ್ಯಂತರಂ ಯಯೌ ।
ದೃಷ್ಟ್ವಾ ದೇವಂ ರತ್ನಪೀಠೇ ಶ್ರಿಯಾ ಸಹ ಸುಲೋಚನಂ ॥ ೫೮ ॥
ಪ್ರಣಮ್ಯ ಹ್ಯವದತ್ಪ್ರೀತಾ ಕೃತ್ಯಂ ತತ್ರ ಕೃತಂ ವಿಭೋ ।
ಮಾಂಗಲ್ಯವಾರ್ತಾಂ ವಕ್ತುಂ ವೈ ಶುಕ ಏಷ ಸಮಾಗತಃ ॥ ೫೯ ॥
ವದೇತಿ ದೇವೇನಾಜ್ಞಪ್ತಃ ಶುಕೋ ನತ್ವಾ ತಮಬ್ರವೀತ್ ।
ಶುಕ ಉವಾಚ:—
ತ್ವಾಂ ಪ್ರತ್ಯಾಹ ಸುತಾ ಭೂಮೇರ್ಮಾಮಂಗೀಕುರು ಮಾಧವ ॥ ೬೦ ॥

---

ಸ್ತ್ರೀಯರು ನರ್ತನಗಳನ್ನು ಮಾಡಿದರು. ಕುಬೇರನು ಧನಧಾನ್ಯಗಳಿಂದ ಮಹಾರಾಜನ ಅರಮನೆಯನ್ನು ತುಂಬಿಸಿದನು.

೫೫. ಯಮಧರ್ಮರಾಯನು ಭೂಲೋಕದ ಜನರೆಲ್ಲ ಆರೋಗ ದೃಢ ಕಾಯರಾಗುವಂತೆ ಮಾಡಿದನು. ವರುಣನು ಮಹಾರಾಜನ ಅರಮನೆಯಲ್ಲಿ ನವರತ್ನಗಳ ರಾಶಿಗಳನ್ನೂ ಮುತ್ತುಗಳೇ ಮೊದಲಾದ ಅಮೂಲ್ಯವಸ್ತುಗಳನ್ನೂ ಸಮೃದ್ಧಿಗೊಳಿಸಿದನು.

೫೬. ಇಂತು ಸಕಲ ದೇವತೆಗಳೂ ಆಕಾಶಮಹಾರಾಜನಿಗೆ ಸಮಸ್ತ ಸಂಭಾರಗಳನ್ನೂ ಒದಗಿಸಿಕೊಟ್ಟಬಳಿಕ ವೃಷಭಾಚಲವನ್ನು ಕುರಿತು ಹೊರಟರು.

೫೭–೫೯. ವರಾಹಸ್ವಾಮಿಯು ಹೇಳುತ್ತಾನೆ:—ಬಳಿಕ ಆ ಬಕುಳ ಮಾಲಿಕೆಯು ಕುದುರೆಯನ್ನೇರಿ ಶುಕನೊಡನೆ ಹೊರಟು ವೇಂಕಟಾಚಲದ ಸಮೀಪದಲ್ಲಿ ಅಗಸ್ತ್ಯೇಶ್ವರನ ದೇವಾಲಯವನ್ನು ಸೇರಿ ಅಲ್ಲಿ ಕುದುರೆಯಿಂದಿಳಿದು ದೂತನೊಡನೆ ಪರಮಾತ್ಮನ ಏಕಾಂತಗೃಹವನ್ನು ಸೇರಿದಳು. ಪದ್ಮಲೋಚನ ನಾದ ಆ ಸ್ವಾಮಿಯು ಶ್ರೀ ದೇವಿಯೊಡನೆ ರತ್ನಪೀಠದಲ್ಲಿ ಕುಳಿತಿರುವುದನ್ನು ಕಂಡು ನಮಸ್ಕರಿಸಿ ಪ್ರೀತಿಯಿಂದ "ಸ್ವಾಮಿಯೆ! ನಾರಾಯಣಪುರಿಯಲ್ಲಿ ಮಾಡಬೇಕಾದ ಕಾರ್ಯವು ಸಾಂಗವಾಗಿ ನೆರವೇರಿತು; ಶುಭಸಮಾಚಾರ ವನ್ನು ಹೇಳಲು ಈ ಶುಕನೆಂಬ ದೂತನು ಅಲ್ಲಿಂದ ಬಂದಿರುವನು" ಎಂಬುದಾಗಿ ಬಿನ್ನವಿಸಿದಳು.

೬೦. ಬಳಿಕ ದೇವದೇವನು ಹೇಳೆಂದು ಅಪ್ಪಣೆಮಾಡಲು ಶುಕನು

ವದಾಮಿ ತವ ನಾಮಾನಿ ಸ್ಮರಾಮಿ ತ್ವದ್ವಪುಸ್ತದಾ ।
ಧ್ರಿಯಂತೇ ತವ ಚಿಹ್ನಾನಿ ಭುಜಾದ್ಯಂಗ್ಯೈ ರಮಾಪತೇ ॥ ೬೧ ॥
ತ್ವದ್ಭಕ್ತಾನರ್ಚಯಾಮೀಹ ಪಂಚಸಂಸ್ಕಾರಸಂಯುತಾನ್ ।
ತ್ವತ್ಪ್ರೀತಯೇ ಹಿ ಕರ್ಮಾಣಿ ಕರೋಮಿ ಮಧುಸೂದನ ॥ ೬೨ ॥
ಏವಂ ಸದೈವಾಚರಂತ್ಯಾಃ ಪಿತ್ರೋರನುಮತೇ ಮಮ ।
ಕುರು ಪ್ರಸಾದಂ ದೇವೇಶ ಮಾಮಂಗೀಕುರು ಮಾಧವ ॥ ೬೩ ॥
ಇತಿ ವಿಜ್ಞಾಪಯಾಮಾಸ ಕಮಲಸ್ಥಾ ಧರಾಸುತಾ ।
ಶುಕಸ್ಯ ವಚನಂ ಶ್ರುತ್ವಾ ಸುಪ್ರಿಯಂ ತ್ವಾತ್ಮನೋ ಹರಿಃ ॥ ೬೪ ॥

ಶ್ರೀ ಭಗವಾನುವಾಚ :—

ಕರ್ತುಂ ಕಲ್ಯಾಣಮುದ್ವಾಹಮಾಗಮಿಷ್ಯಾಮಿ ಚಾಮರೈಃ ।
ಶುಕ ಗಚ್ಛ ವದೈವಂ ತಮಿತ್ಥಂ ದೇವೋಽಬ್ರವೀದಿತಿ ॥ ೬೫ ॥

---

ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಹೇಳತೊಡಗಿದನು. ಶುಕನು ಹೇಳುತ್ತಾನೆ:—"ದೇವಾ! ಭೂಮಿಜೆಯು ನಿನಗೆ ಹೇಳಿಕಳುಹಿಸಿರುವುದನ್ನು ತಿಳಿಸುವೆನು. 'ಓ ಲಕ್ಷ್ಮೀರಮಣನೆ! ನನ್ನನ್ನು ಸ್ವೀಕರಿಸು.

೬೧. ನಾನು ನಿನ್ನ ಅನಂತ ನಾಮಗಳನ್ನೇ ಜಪಿಸುತ್ತಿರುವೆನು. ನಿನ್ನ ಸುಂದರ ವಿಗ್ರಹವನ್ನೇ ನಿರಂತರವೂ ಸ್ಮರಿಸುತ್ತಿರುವೆನು. ರಮಾಪತಿಯೆ! ನಿನ್ನ ಆಯುಧಗಳ ಚಿಹ್ನೆಗಳನ್ನೇ ಭುಜಗಳೇ ಮೊದಲಾದ ಅಂಗಗಳಲ್ಲಿ ಧರಿಸಿರುವೆನು.

೬೨. ತಾಪ, ಪುಂಡ್ರ, ಮುಂತಾದ ಪಂಚಸಂಸ್ಕಾರಗಳಿಂದ ಪುನೀತರಾದ ನಿನ್ನ ಭಕ್ತರನ್ನೇ ಇಲ್ಲಿ ಪೂಜಿಸುತ್ತಿರುವೆನು. ಮಧುಮರ್ದನನೆ! ನನ್ನ ಸಕಲ ಕರ್ಮಗಳೂ ನಿನ್ನನ್ನೊಲಿಸುವುದಕ್ಕಾಗಿಯೇ ಮಾಡಲ್ಪಟ್ಟಿರುವುವು.

೬೩. ದೇವತಾಸಾರ್ವಭೌಮನಾದ ನಾರಾಯಣನೆ! ಇಂತು ತಾಯಿ ತಂದೆಗಳ ಅಧೀನದಲ್ಲಿದ್ದುಕೊಂಡು ನಿತ್ಯವೂ ವ್ರತವನ್ನಾಚರಿಸುತ್ತಿರುವ ನನ್ನಲ್ಲಿ ಪ್ರಸನ್ನನಾಗಿ ನನ್ನನ್ನು ಅಂಗೀಕರಿಸು.'

೬೪. ಇಂತೆಂದು ಭೂಪುತ್ರಿಯಾದ ಪದ್ಮಾವತಿಯು ನಿನ್ನಲ್ಲಿ ವಿಜ್ಞಾಪಿಸಿಕೊಂಡಿರುವಳು." ಹರಿಯು ಶುಕನಾಡಿದ ಮಾತುಗಳನ್ನು ಕೇಳಿ ತನ್ನಲ್ಲಿಯೇ ಅತ್ಯಂತವಾಗಿ ಸಂತೋಷಗೊಂಡನು.

೬೫. ಭಗವಂತನು ಹೇಳುತ್ತಾನೆ:—"ಮದುವೆಯ ಶುಭಕಾರ್ಯವನ್ನು ನೆರವೇರಿಸುವುದಕ್ಕಾಗಿ ಸಕಲ ದೇವತೆಗಳೊಡನೆ ನಾನು ಅಲ್ಲಿಗೆ ಬರುತ್ತೇನೆ. ಎಲೈ ಶುಕನೆ! ನೀನು ಹೊರಟು 'ಪರಮಾತ್ಮನು ಹೀಗೆ ಹೇಳಿದನು' ಎಂಬುದನ್ನು ನಿಮ್ಮ ಮಹಾರಾಜನಿಗೆ ಹೇಳು.

ಶುಕಃ ಶ್ರುತ್ವಾ ದೇವವಾಕ್ಯಮಾದಾಯ ವನಮಾಲಿಕಾಂ ।
ದೇವದತ್ತಾಂ ಯಯೌ ಶೀಘ್ರಂ ವಿಯದ್ರಾಜಸುತಾಂ ಪ್ರತಿ ॥ ೬೬ ॥
ತುಲಸೀಮಾಲಿಕಾಂ ದತ್ವಾ ಮೃಗನಾಭಿಸುಗಂಧಿನೀಂ ।
ಪ್ರಣಮ್ಯ ದೇವೀಮವದಚ್ಛುಕೋ ದೇವವಚಃ ಶುಭಂ ॥ ೬೭ ॥
ಶ್ರುತ್ವಾ ತನ್ಮಾಲಿಕಾಂ ಗೃಹ್ಯ ಭೂಮಿಜಾ ಶಿರಸಾ ದಧೌ ।
ಚಕ್ರೇಽಲಂಕಾರಮುಚಿತಂ ದೇವಾಗಮನಕಾಂಕ್ಷಿಣೀ ॥ ೬೮ ॥
ವಿಯದ್ರಾಜೋಽಪಿ ಸಾನಂದಮಿಂದುಮಾಹೂಯ ಸಾದರಂ ।
ಅನ್ನಂ ವಿಧೀಯತಾಂ ರಾಜನ್ನಿವಿಧಂ ರಸಸಂಯುತಂ ॥ ೬೯ ॥
ವಿಷ್ಣೋರ್ನೈವೇದ್ಯಯೋಗ್ಯಂ ಯತ್ಪರಮಾನ್ನಂ ವಿಧೀಯತಾಂ ।
ದೇವಾನಾಂ ಚ ಋಷೀಣಾಂಚ ನರಾಣಾಮಪಿ ಸಮ್ಮತಂ ॥ ೭೦ ॥
ಚತುರ್ವಿಧಂ ಸುಗಂಧಾಢ್ಯಮಮೃತಾಂಶೈಃ ಸುಧಾಕರ ।
ಏವಂ ಕೃತ್ವಾ ಸಂವಿಧಾನಂ ಪ್ರತೀಕ್ಷ್ಯಾಗಮನಂ ವಿಭೋಃ ॥ ೭೧ ॥

---

೬೬. ದೇವದೇವನ ವಾಕ್ಯವನ್ನು ಕೇಳಿ ಶುಕನು ಪರಮಾತ್ಮನು ಕೊಟ್ಟ ತುಲಸೀಹಾರವೊಂದನ್ನು ಸ್ವೀಕರಿಸಿ ಆಕಾಶರಾಜನ ಪುತ್ರಿಯ ಸಮಿಾಪಕ್ಕೆ ವೇಗವಾಗಿ ಹೊರಟುಬಂದನು.

೬೭. ಕಸ್ತೂರಿಯ ಸುಗಂಧದಿಂದ ಘಮಘಮಿಸುತ್ತಿರುವ ತುಲಸೀಹಾರವನ್ನು ಆಕೆಗೆ ಒಪ್ಪಿಸಿ ಸಾಷ್ಟಾಂಗ ಪ್ರಣಾಮವನ್ನು ಮಾಡಿ ಆ ಶುಕನು ಪರಮಾತ್ಮನು ಹೇಳಿಕಳುಹಿಸಿದ ಶುಭವಾರ್ತೆಯನ್ನು ತಿಳಿಸಿದನು.

೬೮. ಆ ಸಂದೇಶವನ್ನು ಕೇಳಿ ಪದ್ಮಾವತಿಯು ಹಾರವನ್ನು ತೆಗೆದುಕೊಂಡು ಮುಡಿಗೆ ಸುತ್ತಿ ಪರಮಾತ್ಮನ ಆಗಮನವನ್ನೇ ನಿರೀಕ್ಷಿಸುತ್ತ ಆತನಿಗೆ ಸಂತೋಷವನ್ನುಂಟುಮಾಡಲು ಉಚಿತವಾದ ಅಲಂಕಾರವನ್ನು ಮಾಡಿಕೊಂಡಳು.

೬೯. ಆಕಾಶರಾಜನೂ ಕೂಡ ಆನಂದದಿಂದ ಚಂದ್ರನನ್ನು ಬರೆಮಾಡಿಕೊಂಡು ಆದರದಿಂದ ಸತ್ಕರಿಸಿ ಇಂತೆಂದನು. "ಸುಧಾಕರನೆ! ಷಡ್ರಸಭರಿತವಾಗಿ ವಿವಿಧವಾದ ಅನ್ನವನ್ನುಂಟುಮಾಡು.

೭೦–೭೧. ಮಹಾವಿಷ್ಣುವಿನ ಆರೋಗಣೆಗೆ ಉಚಿತವಾದ ಪರಮಾನ್ನವೂ ನಿರ್ಮಿಸಲ್ಪಡಲಿ. ದೇವತೆಗಳಿಗೂ, ಮಹರ್ಷಿಗಳಿಗೂ, ಮನುಷ್ಯರಿಗೂ ಸಮ್ಮತವೆನಿಸಿ ಸುಗಂಧಯುಕ್ತವೂ ಅಮೃತಾಂಶದಿಂದೊಡಗೂಡಿದುದೂ ಆದ ಚತುರ್ವಿಧವಾದ ಅನ್ನವನ್ನು ಪಾಕಮಾಡಿ ಸಿದ್ಧಗೊಳಿಸು.'' ಇಂತೆಂದು ಸಕಲ ಸನ್ನಾಹಗಳನ್ನೂ ಮಾಡಿಕೊಂಡು ಮಗಳಿಗೆ ಸರ್ವಾಭರಣಗಳನ್ನೂ ತೊಡಿಸಿ ಆಕಾಶರಾಜನು ಧರಣೀದೇವಿಯೊಡನೆಯೂ ಮಂತ್ರಿಶ್ರೇಷ್ಠರೊಡನೆಯೂ

ಸಭಾಯಾಂ ಮಂತ್ರಿಸಹಿತಃ ಸಮಾಸ್ತೇ ಪ್ರೀತಮಾನಸಃ ।
ಪುತ್ರೀಮಲಂಕೃತಾಂ ಕೃತ್ವಾ ಧರಣೀಸಹಿತೋ ನೃಪಃ ॥ ೭೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀ ವೆಂಕಟಾಚಲಮಾಹಾತ್ಮ್ಯೇ ಧರಣೀ ವರಾಹ ಸಂವಾದೇ ಧರಣೀದೇವ್ಯೈ "ಬಕುಲಮಾಲಿಕಾನಿವೇದಿತ ಶ್ರೀನಿವಾಸೋದಂತ ಕಮಲಾಲಯಾಕಲ್ಯಾಣ ವಿಧ್ಯಾದಿವೃತ್ತಾಂತವರ್ಣನಂ" ನಾಮ ಸಪ್ತಮೋಽಧ್ಯಾಯಃ

---

ಸಂತೋಷಯುಕ್ತವಾದ ಮನಸ್ಸಿನಿಂದ ಸಭಾಮಂಟಪವನ್ನಲಂಕರಿಸಿ ಪರಮಾತ್ಮನ ಆಗಮನವನ್ನೇ ನಿರೀಕ್ಷಿಸುತ್ತಿದ್ದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ವೈಷ್ಣವಖಂಡದ ಎರಡನೆಯ ಶ್ರೀ ವೆಂಕಟಾಚಲ ಮಾಹಾತ್ಮ್ಯೆಯ ಧರಣೀ ವರಾಹ ಸಂವಾದದಲ್ಲಿ "ಬಕುಳಮಾಲಿಕೆಯು ಶ್ರೀನಿವಾಸನ ವಿಷಯವನ್ನು ತಿಳಿಸಿದುದು — ಪದ್ಮಾವತೀಪರಿಣಯ ವಿಧಾನವರ್ಣನ" ಎಂಬ ಏಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಅಷ್ಟಮೋಽಧ್ಯಾಯಃ

### ಬ್ರಹ್ಮಾದಿಭಿಃ ಸಾಕಂ ಶ್ರೀನಿವಾಸಸ್ಯವಿಯದ್ರಾಜಪುರಗಮನ ಕಮಲಾಲಯಾಪರಿಣಯಾದಿವರ್ಣನಂ

ಶ್ರೀ ವರಾಹ ಉವಾಚ :—

ತತೋ ದೇವಾಧಿದೇವೋಽಪಿ ಲಕ್ಷ್ಮೀಮಾಹೂಯ ಭಾಮಿನೀಂ ।
ಕಿಂ ಕಾರ್ಯಂ ವದ ಕಲ್ಯಾಣಿ ವಿವಾಹಾರ್ಥಂ ಸುಲೋಚನೇ ॥ ೧ ॥
ಆಜ್ಞಾಪಯಸ್ವ ಸ್ವಸಖೀಂ ರಮೇ ಕಾರ್ಯಂ ಕುರು ಪ್ರಿಯಂ ।
ಶ್ರೀಸ್ತು ಕೃಷ್ಣವಚಃ ಶ್ರುತ್ವಾ ಸಖೀರಾಹೂಯ ಚೋದಯತ್ ॥ ೨ ॥
ಶ್ರಿಯಾಜ್ಞಪ್ತಾ ತತಃ ಪ್ರೀತಿಃ ಸುಗಂಧಂ ತೈಲಮಾದದೌ ।
ಶ್ರುತಿಃ ಕ್ಷೌಮಂ ಸಮಾದಾಯ ತಸ್ಥೌ ದೇವಸ್ಯ ಸನ್ನಿಧೌ ॥ ೩ ॥
ಭೂಷಣಾನಿ ಸಮಾದಾಯ ಸ್ಮೃತಿರಪ್ಯಾಯಯೌ ಮುದಾ ।
ಧೃತಿರಾದರ್ಶಮಾಧತ್ತ ಶಾಂತಿರ್ಮೃಗಮದಂ ದಧೌ ॥ ೪ ॥

---

## ಕನ್ನಡದ ಅನುವಾದ

### ಬ್ರಹ್ಮಾದಿಗಳೊಡನೆ ಶ್ರೀನಿವಾಸನು ಆಕಾಶರಾಜನ ಪಟ್ಟಣಕ್ಕೈತಂದುದು — ಪದ್ಮಾವತೀಪರಿಣಯ ವರ್ಣನ

೧. ವರಾಹಸ್ವಾಮಿಯು ಹೇಳುತ್ತಾನೆ:—ಬಳಿಕ ದೇವೇಶ್ವರನಾದ ಶ್ರೀನಿವಾಸನು ಪತ್ನಿಯಾದ ಲಕ್ಷ್ಮಿಯನ್ನು ಕರೆದು ಇಂತೆಂದನು. ಎಲೌ "ಕಲ್ಯಾಣಿಯೆ! ವಿಶಾಲ ನೇತ್ರೆಯಾದ ನೀನು ವಿವಾಹಕ್ಕಾಗಿ ಈಗ ಮಾಡಬೇಕಾದ ಕೆಲಸವೇನೆಂಬುದನ್ನು ಹೇಳು.

೨. ಓ ಲಕ್ಷ್ಮಿಯೆ! ನಿನ್ನ ಸಖಿಯರಿಗೆ ಅಪ್ಪಣೆಮಾಡಿ ನನಗೆ ಪ್ರಿಯವಾದ ಈ ಕಾರ್ಯವು ನೆರವೇರುವಂತೆ ಉದ್ಯೋಗಿಸು." ಇಂತೆಂದ ಶ್ರೀಕೃಷ್ಣನ ಮಾತುಗಳನ್ನು ಕೇಳಿ ಮಹಾಲಕ್ಷ್ಮಿಯು ತನ್ನ ಸಖಿಯರನ್ನು ಕರೆದು ಅವರನ್ನು ಅನೇಕ ಕೆಲಸಗಳಲ್ಲಿ ನಿಯೋಜಿಸಿದಳು.

೩. ಆಕೆಯ ಅಪ್ಪಣೆಯ ಮೇರೆಗೆ ಪ್ರೀತಿಯು ಸುವಾಸನೆಯುಳ್ಳ ತೈಲವನ್ನು ತಂದಳು. ಶ್ರುತಿಯು ಶುಭ್ರವಾದ ರೇಷ್ಮೆಯ ಪೀತಾಂಬರವನ್ನು ತಂದು ದೇವದೇವನ ಸನ್ನಿಧಿಯಲ್ಲಿ ನಿಂತಳು.

೪. ಸ್ಮೃತಿಯೂ ಸಹ ಸಂತೋಷದಿಂದ ಅನೇಕ ಆಭರಣಗಳನ್ನು ತಂದು ನಿಂತಳು. ಧೃತಿಯು ಕನ್ನಡಿಯನ್ನೂ, ಶಾಂತಿಯು ಕಸ್ತೂರಿಯನ್ನೂ ಸಿದ್ಧಗೊಳಿಸಿದರು.

ಯಕ್ಷಕರ್ದಮಮಾದಾಯ ಹ್ರೀಃ ಸ್ಥಿತಾ ಪುರತೋ ಹರೇಃ ।
ಕೀರ್ತಿಃ ಕನಕಪಟ್ಟಂ ಚ ಸರತ್ನಂ ಮುಕುಟಂ ದಧೌ ॥ ೫ ॥
ಛತ್ರಂ ದಧೌ ತದೇಂದ್ರಾಣೀ ಚಾಮರಂ ತು ಸರಸ್ವತೀ ।
ದ್ವಿತೀಯಂ ಚಾಮರಂ ಗೌರೀ ವ್ಯಜನೇ ವಿಜಯಾಜಯೇ ॥ ೬ ॥
ಆಗತಾಸ್ತಾಃ ಸಮಾಲೋಕ್ಯ ಶ್ರೀರುತ್ಥಾಯಾಥ ಸತ್ವರಾ ।
ಸುಗಂಧಂ ತೈಲಮಾದಾಯ ದೇವಮಭ್ಯರ್ಚ್ಯ ಶೀರ್ಷತಃ ॥ ೭ ॥
ಉದ್ವರ್ತಿತಂ ಗಂಧಚೂರ್ಣೈರ್ದೇವಾಂಗಂ ಪರಿಮೃಜ್ಯ ಚ ।
ಆನೀತಾನ್ಕರಿಭಿಸ್ತೋಯಕಲಶಾನ್ಕಾಂಚನಾನ್ಶತಂ ॥ ೮ ॥
ವಿಯದ್ಗಂಗಾದಿ ತೀರ್ಥೇಭ್ಯಃ ಕರ್ಪೂರಾದಿಸುವಾಸಿತಾನ್ ।
ಏಕಮೇಕಂ ಸಮಾದಾಯ ತ್ವಭ್ಯಷಿಂಚದ್ರಮಾ ಹರಿಂ ॥ ೯ ॥
ಸಂಧೂಪ್ಯ ಕೇಶಾನ್ಧೂಪೇನ ತಾನಾಶ್ಯಾಮಾನ್ಬಬಂಧ ಚ ।
ಸುಗಂಧೇನಾನುಲಿಪ್ಯಾಂಗಂ ಸ್ವರ್ಣವರ್ಣೇನ ತದ್ವಿಭೋಃ ॥ ೧೦ ॥

---

೫. ಕರ್ಪೂರಾದಿ ದ್ರವ್ಯಗಳಿಂದ ಕೂಡಿದ ಯಕ್ಷಕರ್ದಮವೆಂಬ ಪರಿಮಳ ದ್ರವ್ಯವನ್ನು ಲಜ್ಜೆಯು ತಂದು ಹರಿಯ ಮುಂದೆ ನಿಂತಳು. ಕೀರ್ತಿಯು ಜರತಾರಿಯ ಉತ್ತರೀಯವನ್ನೂ ನವರತ್ನಮಯವಾದ ಕಿರೀಟವನ್ನೂ ಕೈಯಲ್ಲಿ ಹಿಡಿದಿದ್ದಳು.

೬. ಶಚೀದೇವಿಯು ಶ್ವೇತಚ್ಛತ್ರವನ್ನು ಹಿಡಿದಳು. ಸರಸ್ವತಿಯು ಒಂದು ಚಾಮರವನ್ನೂ, ಪಾರ್ವತಿಯು ಮತ್ತೊಂದನ್ನೂ ಹಿಡಿದಿದ್ದರು. ಜಯೆ, ವಿಜಯೆಯರು ಎರಡು ಬೀಸಣಿಗೆಗಳಿಂದ ಗಾಳಿಯನ್ನು ಹಾಕುತ್ತಿದ್ದರು.

೭. ಇಂತು ಸಖಿಯರೆಲ್ಲರೂ ಸನ್ನದ್ಧರಾಗಿ ಬಂದುದನ್ನು ಕಂಡು ಲಕ್ಷ್ಮಿಯು ಪಡಗರದಿಂದೆದ್ದು ಸುಗಂಧಯುಕ್ತವಾದ ತೈಲವನ್ನು ಪರಮಾತ್ಮನ ಮೈಗೆ ಹಚ್ಚಿ ಅಭ್ಯಂಜನವನ್ನು ಮಾಡಿಸಿದಳು.

೮–೯. ತೈಲಮರ್ದಿತವಾದ ಪರಮಾತ್ಮನ ಶರೀರವನ್ನು ಗಂಧಚೂರ್ಣಗಳಿಂದ ಉಜ್ಜಿ ಆಕಾಶಗಂಗಾದಿ ತೀರ್ಥಗಳಿಂದ ಸಂಗ್ರಹಿಸಿ ತಂದಿದ್ದ ಕರ್ಪೂರಾದಿ ದ್ರವ್ಯಗಳಿಂದ ಸುವಾಸಿತಗಳಾದ ತೀರ್ಥೋದಕಗಳನ್ನು ಅಷ್ಟದಿಗ್ಗಜಗಳು ಕೊಂಡುತರಲು, ನೂರಾರು ಚಿನ್ನದ ಕಳಶಗಳಲ್ಲಿರುವ ಆ ನೀರನ್ನು ಒಂದೊಂದು ಕೊಡವಾಗಿ ತೆಗೆದುಕೊಂಡು ರಮಾದೇವಿಯು ಪರಮಾತ್ಮನಿಗೆ ನೀರೆರೆದಳು.

೧೦–೧೧. ಅಗುರು ಧೂಪಗಳಿಂದ ತಲೆಗೂದಲನ್ನು ಒಣಗಿಸಿ ಉದ್ದವಾಗಿ ನೀಲವರ್ಣ ವಿಶಿಷ್ಟಗಳಾದ ಅವುಗಳನ್ನೆಲ್ಲ ಮುಡಿಯನ್ನಾಗಿ ಸೇರಿಸಿ ಕಟ್ಟಿದಳು. ಚಿನ್ನದ ಬಣ್ಣದ ಸುಗಂಧದ್ರವ್ಯಗಳಿಂದ ಲೋಕನಾಯಕನ ಶರೀರವನ್ನು ಲೇಪಿಸಿ ನಡುವಿನಲ್ಲಿ ನಡುಕಟ್ಟನೊಡನೆ ಪೀತಾಂಬರವನ್ನುಡಿಸಿ ಆ ಲಕ್ಷ್ಮಿಯು

ಪೀತಕೌಶೇಯಕಂ ಬದ್ಧ್ವಾ ಕಟ್ಯಾಂ ಕಾಂಚನಮನ್ವಿತಂ ।
ಮುಕುಟಾದಿವಿಭೂಷಾಭಿರ್ಭೂಷಯಾಮಾಸ ಚೇಂದಿರಾ ॥ ೧೧ ॥
ಅಂಗುಲೀಯಕರತ್ನಾನಿ ಸರ್ವಾಸ್ವೇವಾಂಗುಲೀಷು ಚ ।
ಆದರ್ಶಂ ದರ್ಶಯಾಮಾಸ ಧೃತಿರ್ದೇವಸ್ಯ ಸನ್ನಿಧೌ ॥ ೧೨ ॥
ದೃಷ್ಟ್ವಾದರ್ಶಂ ದೇವದೇವೋ ಹ್ಯೂರ್ಧ್ವಪುಂಡ್ರಂ ಸ್ವಯಂ ದಧೌ ।
ಆರುಹ್ಯ ಗರುಡಂ ಪಶ್ಚಾತ್ಸ್ವಯಂ ಲಕ್ಷ್ಮೀಸಮನ್ವಿತಃ ॥ ೧೩ ॥
ಬ್ರಹ್ಮೇಶವಜ್ರಿವರುಣಯಮಯಕ್ಷೇಶಸೇವಿತಃ ।
ವಸಿಷ್ಠಾದ್ಯೈರ್ಮುನೀಂದ್ರೈಶ್ಚ ಸನಕಾದ್ಯೈಶ್ಚ ಯೋಗಿಭಿಃ ॥ ೧೪ ॥
ಭಕ್ತೈರ್ಭಾಗವತೈರ್ಯುಕ್ತೋ ನಾರಾಯಣಪುರೀಂ ಯಯೌ ।
ಜಗುರ್ಗಂಧರ್ವಪತಯೋ ನನೃತುಶ್ಚಾಪ್ಸರೋಗಣಾಃ ॥ ೧೫ ॥
ದೇವದುಂದುಭಯೋ ನೇದುಸ್ತದಾ ದೇವಸ್ಯ ಸನ್ನಿಧೌ ।
ಜಪಂತಃ ಸ್ವಸ್ತಿ ಸೂಕ್ತಾನಿ ಮುನಯಸ್ತಂ ಸಮನ್ವಯುಃ ॥ ೧೬ ॥
ದೇವೋ ದೇವಗಣೈರ್ಯುಕ್ತೋ ವಿಷ್ವಕ್ಸೇನಾದಿಪಾರ್ಷದೈಃ ।
ಸಖೀಭಿಸ್ಸ್ಯಂದನಸ್ಥಾಭಿರ್ಬಕುಲಾದ್ಯಾಭಿರನ್ವಿತಃ ।
ಆಕಾಶರಾಜಸ್ಯ ಪುರಮಾಸಸಾದ ಸ್ವಲಂಕೃತಂ ॥ ೧೭ ॥

---

ಕಿರೀಟವೇ ಮೊದಲಾದ ಸಕಲಾಭರಣಗಳನ್ನೂ ಶ್ರೀನಿವಾಸನ ಶರೀರಕ್ಕೆ ಅಲಂಕರಿಸಿದಳು.

೧೨. ಆಗ ಧೃತಿಯು ಪರಮಾತ್ಮನ ಕೈಬೆರಳುಗಳಿಗೆಲ್ಲ ರತ್ನಖಚಿತಗಳಾದ ಉಂಗುರಗಳನ್ನು ತೊಡಿಸಿ ಆತನ ಮುಂದೆ ಕೈಗನ್ನಡಿಯನ್ನು ಹಿಡಿದು ನಿಂತಳು.

೧೩–೧೫. ಆಗ ದೇವದೇವನು ಕನ್ನಡಿಯನ್ನು ನೋಡಿಕೊಂಡು ಹಣೆಯಲ್ಲಿ ತಾನೇ ಊರ್ಧ್ವಪುಂಡ್ರವನ್ನು ತಿದ್ದಿಕೊಂಡನು. ಬಳಿಕ ಲಕ್ಷ್ಮೀಸಮೇತನಾಗಿ ಗರುಡವಾಹನವನ್ನೇರಿ ಬ್ರಹ್ಮ, ರುದ್ರ, ಮಹೇಂದ್ರ, ವರುಣ, ಯಮ, ಕುಬೇರಾದಿ ದೇವತೆಗಳ ಗಡಣದಿಂದಲೂ, ವಸಿಷ್ಠಾದಿ ಮುನಿವರ್ಯರಿಂದಲೂ, ಸನಕಾದಿ ಯೋಗಿಗಳಿಂದಲೂ, ಭಕ್ತರಿಂದಲೂ, ಭಾಗವತರಿಂದಲೂ ಪರಿವೃತ ನಾಗಿ ನಾರಾಯಣಪುರಿಯನ್ನು ಕುರಿತು ಹೊರಟನು. ಗಂಧರ್ವನಾಯಕರು ಗಾನಗಳನ್ನು ಹಾಡುತ್ತಿದ್ದರು. ಅಪ್ಸರಸ್ತ್ರೀ ಸಮೂಹಗಳು ನರ್ತಿಸುತ್ತಿದ್ದವು.

೧೬. ಶ್ರೀನಿವಾಸನ ಮುಂದುಗಡೆಯಲ್ಲಿ ದೇವದುಂದುಭಿಗಳೇ ಮೊದಲಾದ ಮಂಗಳವಾದ್ಯಗಳು ಭೋರ್ಗರೆಯುತ್ತಿದ್ದುವು. ಮುನಿಗಳು ಸ್ವಸ್ತಿಮಂತ್ರ ಗಳನ್ನುಚ್ಚರಿಸುತ್ತ ಪರಮಾತ್ಮನನ್ನು ಹಿಂಬಾಲಿಸಿದರು.

೧೭. ಇಂತು ಆ ದೇವದೇವನು ಸಕಲ ದೇವತೆಗಳಿಂದಲೂ, ವಿಷ್ವಕ್ಸೇನನೇ ಮೊದಲಾದ ಪಾರ್ಷದಗಣದಿಂದಲೂ, ರಥಗಳಲ್ಲಿ ಕುಳಿತು ಅನುಸರಿಸುತ್ತಿರುವ

ದೇವಮಾಗತಮಾಲೋಕ್ಯ ಕನ್ಯಾಮೈರಾವತಸ್ಥಿತಾಂ ।
ಪುರೀಂ ಪ್ರದಕ್ಷಿಣೀಕೃತ್ಯ ಗೋಪುರದ್ವಾರಮಾಗತಾಂ ॥ ೧೮ ॥
ಆಲೋಕ್ಯಾಕಾಶರಾಜೋऽಪಿ ಸಮಾನೀಯ ವಧೂವರೌ ।
ಬಂಧುಭಿಃ ಸಹಿತಸ್ತಸ್ಥೌ ದೇವಮಾಲೋಕ್ಯ ಕೇಶವಂ ॥ ೧೯ ॥
ವಿಷ್ಣುರ್ಮಾಲಾಂ ಸ್ವಕಂಠಸ್ಥಾಂ ಹಸ್ತೇನಾದಾಯ ಸಸ್ಮಿತಃ ।
ಕಮಲಾಯಾಃ ಸ್ಕಂಧದೇಶೇ ಮುಮೋಚ ಸುಮನಶ್ಚಿತಾಂ ॥ ೨೦ ॥
ಆದಾಯ ಮಲ್ಲಿಕಾಮಾಲಾಂ ಸಾಸ್ಯ ಕಂಠೇ ಸಮರ್ಪಯತ್ ।
ಏವಂ ತ್ರಿವಾರಂ ತೌ ಕೃತ್ವಾ ವಾಹನಾದವರುಹ್ಯ ಚ ॥ ೨೧ ॥
ಸ್ಥಿತ್ವಾ ಪೀಠೇ ಕ್ಷಣಂ ಪಶ್ಚಾದ್ಗೃಹಂ ವಿವಿಶತುಃ ಶುಭಂ ।
ಬ್ರಹ್ಮಾದಿದೇವಯೂಥೈಶ್ಚ ಸಹಿತೌ ಭೂಮಿಜಾಹರೀ ॥ ೨೨ ॥
ಮಾಂಗಲ್ಯಸೂತ್ರಬಂಧಾದಿ ಸಾಂಕುರಾರ್ಪಣಮುಬ್ಜಜಃ ।
ವೈವಾಹಿಕಂ ಕಾರಯಿತ್ವಾ ಲಾಜಹೋಮಾಂತಮೇವ ಚ ॥ ೨೩ ॥

---

ಬಕುಳಮಾಲಿಕೆಯೇ ಮೊದಲಾದ ಸಖಿಯರಿಂದಲೂ ಪರಿವೃತನಾಗಿ ಹೊರಟು ಬಗೆ ಬಗೆಯ ಅಲಂಕಾರಗಳಿಂದ ತುಂಬಿರುವ ಆಕಾಶರಾಜನ ರಾಜಧಾನಿಯಾದ ನಾರಾಯಣಪುರವನ್ನು ಸೇರಿದನು.

೧೮-೧೯. ಇಂತು ದೇವನು ಬಂದುದನ್ನೂ ಐರಾವತದಂತೆ ಉನ್ನತವಾದ ಆನೆಯನ್ನೇರಿ ಪುರಪ್ರದಕ್ಷಿಣೆಯನ್ನು ಮಾಡಿಕೊಂಡು ಹೆಬ್ಬಾಗಿಲಿಗೆ ಬಂದು ನಿಂತ ತನ್ನ ಪುತ್ರಿಯನ್ನೂ ಕಂಡು ಪರಿವಾರಸಮೇತನಾದ ಆಕಾಶರಾಜನು ವಧೂವರರನ್ನು ಪರಿಚಯ ಮಾಡಿಸಿಕೊಟ್ಟು ಪರಮಾತ್ಮನ ಮುಖವನ್ನೇ ನೋಡುತ್ತ ನಿಂತುಕೊಂಡನು.

೨೦. ಆಗ ಮಹಾವಿಷ್ಣುವು ತನ್ನ ಕಂಠದಲ್ಲಿದ್ದ ಪುಷ್ಪಮಾಲೆಯನ್ನು ಕೈಗಳಿಂದ ತೆಗೆದು ಮುಗುಳ್ನಗೆಯನ್ನು ಬೀರುತ್ತ ಪದ್ಮಾವತೀ ದೇವಿಯ ಕೊರಳಿಗೆ ಹಾಕಿದನು.

೨೧. ಆಕೆಯೂ ಕೂಡ ತಾನು ಧರಿಸಿದ್ದ ಮಲ್ಲಿಗೆಯ ಹಾರವನ್ನು ಆತನ ಕೊರಳಲ್ಲಿ ಒಪ್ಪಿಸಿದಳು. ಇಂತು ಮೂರು ಬಾರಿ ಹಾರಗಳ ವಿನಿಮಯವಾಗಲು ಇಬ್ಬರೂ ತಮ್ಮ ವಾಹನಗಳಿಂದಿಳಿದರು.

೨೨. ಒಂದು ಕ್ಷಣಕಾಲ ಏಕಾಸನದಲ್ಲಿ ಕುಳಿತಿದ್ದು ಬಳಿಕ ಅವರೀರ್ವರೂ ಮಂಗಳಾನ್ವಿತವಾದ ವಿವಾಹಮಂಟಪವನ್ನು ಪ್ರವೇಶಿಸಿದರು. ಬ್ರಹ್ಮಾದಿ ಸಕಲ ದೇವತಾಸಮೂಹವೂ ಪದ್ಮಾವತೀ ಶ್ರೀನಿವಾಸರನ್ನು ಹಿಂಬಾಲಿಸಿತು.

೨೩. ಬ್ರಹ್ಮದೇವನೇ ಪುರೋಹಿತನಾಗಿ ಕುಳಿತುಕೊಂಡು ಅಂಕುರಾರ್ಪಣವೇ ಮೊದಲಾಗಿ ಮಾಂಗಲ್ಯ ಸೂತ್ರಬಂಧಾದಿ ಸಕಲ ಕಾರ್ಯಗಳನ್ನೂ

ವ್ರತಾದೇಶಂ ಸಮಾಜ್ಞಾಯ ಶಯಿತೌ ಕಮಲಾಹರೀ ।
ಚತುರ್ಥೇ ದಿವಸೇ ಸರ್ವಂ ಸಮಾಪಯ್ಯ ಚತುರ್ಮುಖಃ ॥ ೨೪ ॥
ಅನುಜ್ಞಾಪ್ಯ ವಿಯದ್ರಾಜಮಾರೋಪ್ಯ ಗರುಡೇ ಹರಿಂ ।
ದೇವೀಭ್ಯಾಂ ಸಹಿತಂ ದೇವಂ ದೇವೈರ್ಗಂತುಂ ಪ್ರಚಕ್ರಮೇ ॥ ೨೫ ॥
ದಿವ್ಯದುಂದುಭಿನಿರ್ಘೋಷೈಃ ಸಂಪ್ರಾಪ್ಯ ವೃಷಭಾಚಲಂ ।
ತುಷ್ಟುವುರ್ದೇವದೇವೇಶಂ ಬ್ರಹ್ಮಾದ್ಯಾ ದೇವತಾಗಣಾಃ । ॥ ೨೬ ॥
ಶುಕಾದಯೋ ಮುನಿಗಣಾಸ್ತುಷ್ಟುವುಃ ಪುರುಷೋತ್ತಮಂ ।
ಸ್ತೂಯಮಾನೋಽಥ ದೇವೋಽಪಿ ವಿವೇಶ ಮಣಿಮಂಡಪಂ ॥ ೨೭ ॥
ರಮಾಧರಣಿಜಾಭ್ಯಾಂ ಚ ತತ್ರ ಸಿಂಹಾಸನಂ ಯಯೌ ॥ ೨೮ ॥
ಆಕಾಶರಾಜೋಽಪಿ ತದಾ ಮಹೇಂದ್ರಾದಿಸುರೈಃ ಸಹ ।
ಪುತ್ರೀ ವಿಷ್ಣೋಃ ಪ್ರಿಯಾರ್ಥಂತು ಪ್ರಾಭೃತಂ ಕರ್ತುಮುದ್ಯತಃ ॥ ೨೯ ॥
ಸಾವರ್ಣೇಷು ಕಟಾಹೇಷು ತಂಡುಲಾನ್ಪಾಲಿಸಂಭವಾನ್ ।
ಮುದ್ಗಪಾತ್ರಾಣ್ಯನೇಕಾನಿ ಘೃತಕುಂಭಶತಾನಿ ಚ ॥ ೩೦ ॥

---

ಸಾಂಗವಾಗಿ ನೆರವೇರಿಸಿ ವಿವಾಹದ ಕೊನೆಯ ಕರ್ಮವಾದ ಲಾಜಾಹೋಮವನ್ನೂ ಮಾಡಿಸಿದನು.

೨೪–೨೫. ಬಳಿಕ ವ್ರತದ ನಿಯಮವನ್ನು ಪಾಲಿಸಿ ವಧೂವರರಿಬ್ಬರೂ ಮಲಗಿಕೊಂಡರು. ಬ್ರಹ್ಮದೇವನು ನಾಲ್ಕನೆಯ ದಿನ ವಿವಾಹದ ಸಕಲ ಕಾರ್ಯಗಳನ್ನೂ ಸಂಪೂರ್ಣಗೊಳಿಸಿದನು. ತರುವಾಯ ಆಕಾಶರಾಜನ ಅಪ್ಪಣೆಯನ್ನು ಪಡೆದು ದೇವಿಯರೀರ್ವರೊಡನೆ ಶ್ರೀನಿವಾಸನನ್ನು ಗರುಡನಮೇಲೆ ಕುಳ್ಳಿರಿಸಿ ಸಮಸ್ತ ದೇವತೆಗಳೊಡನೆ ಹೊರಡಲು ಸಿದ್ಧನಾದನು.

೨೬–೨೯. ದೇವದುಂದುಭಿಗಳು ಮೊಳಗುತ್ತಿರಲು ಬ್ರಹ್ಮಾದಿ ದೇವತಾ ಸಮೂಹಗಳೆಲ್ಲವೂ ವೃಷಭಾಚಲವನ್ನು ಸೇರಿ ದೇವದೇವನಾದ ಶ್ರೀನಿವಾಸನನ್ನು ಸ್ತೋತ್ರಮಾಡಿದುವು. ಶುಕನೇ ಮೊದಲಾದ ಮಹರ್ಷಿಗಳ ಗಡಣವು ಆ ಪುರುಷೋತ್ತಮನನ್ನು ಹೊಗಳುತ್ತಿದ್ದಿತು. ಇಂತು ಹೊಗಳಿಸಿಕೊಳ್ಳುತ್ತ ಶ್ರೀನಿವಾಸನು ತನ್ನ ರತ್ನಮಂಟಪವನ್ನು ಪ್ರವೇಶಿಸಿ ಶ್ರೀದೇವಿ, ಪದ್ಮಾವತಿಯರೊಡನೆ ಸಿಂಹಾಸನವನ್ನಲಂಕರಿಸಿದನು. ಮಹೇಂದ್ರಾದಿ ದೇವತೆಗಳೊಡನೆ ಪ್ರಾಪ್ತನಾದ ಆಕಾಶರಾಜನೂ ಸಹ ಮಗಳು, ಅಳಿಯಂದಿರಿಗೆ ಪ್ರಿಯವನ್ನುಂಟು ಮಾಡುವವನಾಗಿ ಬಳುವಳಿಯನ್ನು ಕೊಡಲು ಮನಸ್ಸುಮಾಡಿದನು.

೩೦–೩೩. ಚಿನ್ನದ ಕಡಾಯಿಗಳಲ್ಲಿ ಉತ್ತಮವಾದ ಭತ್ತದಿಂದ ಮಾಡಿದ ಅಕ್ಕಿಯನ್ನೂ, ಅನೇಕ ಹೆಸರುಕಾಳಿನ ಪಾತ್ರೆಗಳನ್ನೂ, ನೂರಾರು ತುಪ್ಪದ ಬಿಂದಿಗೆಗಳನ್ನೂ, ಸಾವಿರಾರು ಹಾಲಿನ ಗಡಿಗೆಗಳನ್ನೂ, ಲೆಕ್ಕವಿಲ್ಲದ ಮೊಸರಿನ

ಪಯೋಘಟಸಹಸ್ರಾಣಿ ದಧಿಭಾಂಡಾನ್ಯನೇಕಶಃ ।
ದಿವ್ಯಾನಿ ಚೂತಕದಲೀ ನಾರಿಕೇಳಫಲಾನಿ ಚ ॥ ೩೧ ॥
ಧಾತ್ರೀ ಫಲಾನಿ ಕೂಷ್ಮಾಂಡರಾಜರಂಭಾಫಲಾನಿಚ ।
ಪನಸಾನ್ಮಾತುಲಂಗಾಂಶ್ಚ ಶರ್ಕರಾಪೂರಿತಾನ್ಘಟಾನ್ ॥ ೩೨ ॥
ಸುವರ್ಣಮಣಿಮುಕ್ತಾಶ್ಚ ಕ್ಷೌಮಕೋಟ್ಯಂಬರಾಣಿ ಚ ।
ದಾಸೀ ದಾಸಸಹಸ್ರಾಣಿ ಕೋಟಿಶೋ ಗಾಸ್ತಥೈವ ಚ ॥ ೩೩ ॥
ಹಂಸೇಂದುಶುಕ್ಲವರ್ಣಾನಾಂ ಹಯಾನಾಮಯುತಂ ದದೌ ।
ತುಂಗಾನಾಂ ನಿತ್ಯಮತ್ತಾನಾಂ ಗಜಾನಾಮಧಿಕಂ ಶತಾತ್ ॥ ೩೪ ॥
ಅಂತಃಪುರಚರಾ ನಾರೀರ್ನೃತ್ತಗೀತವಿಶಾರದಾಃ ।
ದದೌ ಚತುಸ್ಸಹಸ್ರಾಣಿ ಶ್ರೀನಿವಾಸಾಯ ವಿಷ್ಣವೇ ।
ದತ್ವಾ ಚೈತಾನಿ ಸರ್ವಾಣಿ ತಸ್ಥೌ ದೇವಪುರೋ ವಿಭುಃ ॥ ೩೫ ॥
ದೃಷ್ಟ್ವಾ ದೇವೋಽಪಿ ತತ್ಸರ್ವಂ ದೇವೀಭ್ಯಾಂ ಸಹಿತೋ ಹರಿಃ ॥ ೩೬ ॥
ಸುಪ್ರೀತಃ ಪ್ರಾಹ ರಾಜಾನಂ ಶ್ವಶುರಂ ವೇಂಕಟೇಶ್ವರಃ ।
ವರಂ ವೃಣೀಷ್ವ ಹೇ ರಾಜನ್ಗುರೋ ಮತ್ತೋ ಯದಿಚ್ಛಸಿ ॥ ೩೭ ॥

---

ಭಾಂಡಗಳನ್ನೂ, ರಸಭರಿತಗಳಾದ ಮಾವು, ಬಾಳೆ, ತೆಂಗು, ನೆಲ್ಲಿ, ಕುಂಬಳ, ರಾಜಬಾಳೆ, ಹಲಸು, ಮಾದಳ ಮುಂತಾದ ನಾನಾವಿಧ ಫಲಗಳನ್ನೂ, ಸಕ್ಕರೆ ಯಿಂದ ತುಂಬಿದ ಪಾತ್ರೆಗಳನ್ನೂ, ಚಿನ್ನ, ನವರತ್ನಗಳು, ಮುತ್ತುಗಳನ್ನೂ, ಹಗುರವಾದ ರೇಷ್ಮೆಯ ವಸ್ತ್ರಗಳನ್ನೂ, ಸಾವಿರಾರು ದಾಸದಾಸಿಯರನ್ನೂ, ಕೋಟಿಗಟ್ಟಲೆ ಗೋವುಗಳನ್ನೂ ಸಮರ್ಪಿಸಿದನು.

೩೪. ಹಂಸದಂತೆಯೂ, ಚಂದ್ರನಂತೆಯೂ ಶುಭ್ರವರ್ಣವುಳ್ಳ ಹತ್ತು ಸಾವಿರ ಕುದುರೆಗಳನ್ನೂ, ಎತ್ತರವಾಗಿ ನಿತ್ಯವೂ ಮದೋದಕವನ್ನು ಸುರಿಸು ತ್ತಿರುವ ನೂರಾರು ಆನೆಗಳನ್ನೂ ಒಪ್ಪಿಸಿದನು.

೩೫–೩೬. ಅಲ್ಲದೆ ಮಹಾವಿಷ್ಣುವಿನ ಅವತಾರವಾದ ಶ್ರೀನಿವಾಸನಿಗೆ ನೃತ್ಯಗೀತಗಳಲ್ಲಿ ಪ್ರವೀಣರಾಗಿ ಅಂತಃಪುರದಲ್ಲಿ ಸೇವೆಗೈಯುತ್ತಿರುವ ನಾಲ್ಕು ಸಾವಿರ ಪರಿಚಾರಿಕೆಯರನ್ನೂ ಕೊಟ್ಟನು. ಇವುಗಳೆಲ್ಲವನ್ನೂ ಬಳುವಳಿಯಾಗಿ ಕೊಟ್ಟು ಆಕಾಶರಾಜನು ದೇವದೇವನ ಸನ್ನಿಧಿಯಲ್ಲಿ ನಿಂತುಕೊಂಡಿರಲು, ಆತನೂ ದೇವಿಯರಿಂದೊಡಗೂಡಿ ಇದೆಲ್ಲವನ್ನೂ ಕಂಡನು.

೩೭. ಆಗ ಶ್ರೀ ವೇಂಕಟೇಶ್ವರನು ಅತ್ಯಂತ ಸಂತೋಷಗೊಂಡು ಮಾವ ನಾದ ಆಕಾಶರಾಜನನ್ನು ಕುರಿತು "ರಾಜಶ್ರೇಷ್ಠನೆ! ನೀನು ನನಗೆ ಗುರುಸ್ಥಾನ ದಲ್ಲಿರುವೆ. ನನ್ನಿಂದ ನಿನಗೆ ಆಗಬೇಕಾದ ಯಾವುದನ್ನಾದರೂ ವರವಾಗಿ ಕೇಳು" ಎಂದು ಹೇಳಿದನು.

ಇತಿ ಶ್ರೀಶವಚಃ ಶ್ರುತ್ವಾ ವಿಯದ್ರಾಜೋಽವದದ್ವಿಭುಂ ।
ತ್ವತ್ಸೇವೈವೇಹ ದೇವೈವಂ ಭೂಯಾದವ್ಯಭಿಚಾರಿಣೀ ॥ ೩೮ ॥
ಮನಸ್ತ್ವತ್ಪಾದಕಮಲೇ ತ್ವಯಿ ಭಕ್ತಿರ್ಮಮಾಸ್ತು ವೈ ॥ ೩೯ ॥

ಶ್ರೀ ಭಗವಾನುವಾಚ :—

ತ್ವಯಾ ಯದುಕ್ತಂ ರಾಜೇಂದ್ರ ಸರ್ವಮೇತದ್ಭವಿಷ್ಯತಿ ।
ಇತಿ ದತ್ವಾ ವರಂ ತಸ್ಮೈ ಸಂಮಾನ್ಯೈವ ಯಥೋಚಿತಂ ॥ ೪೦ ॥
ಬ್ರಹ್ಮೇಶಾದಿ ಸುರಾನ್ಸರ್ವಾನ್ಸಮಭ್ಯರ್ಚ್ಯ ಯಥೋಚಿತಂ ।
ಸ್ವರ್ಲೋಕಗಮನಾಯೈವಮನುಮೇನೇ ಮುದಾ ಹರಿಃ ॥ ೪೧ ॥
ಗತೇಷು ತೇಷು ಸರ್ವೇಷು ಶ್ರಿಯಾ ಭೂಮಿಜಯಾ ಯುತಃ ।
ವಿಹರನ್ಸ ಯಥಾಪೂರ್ವಂ ಸ್ವಾಮಿಪುಷ್ಕರಿಣೀತಟೇ ।
ಆಸ್ತೇ ದಿವ್ಯಾಲಯೇ ದೇವೋಽಪ್ಯರ್ಚ್ಯಮಾನೋ ಗುಹೇನ ವೈ ॥ ೪೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀ ವೇಂಕಟಾಚಲಮಾಹಾತ್ಮ್ಯೇ ಧರಣೀ ವರಾಹಸಂವಾದೇ "ಬ್ರಹ್ಮಾದಿಭಿಃ ಸಾಕಂ ಶ್ರೀನಿವಾಸಸ್ಯ ವಿಯದ್ರಾಜಪುರಗಮನ ಕಮಲಾಲಯಾಪರಿಣಯಾದಿ ವರ್ಣನಂ" ನಾಮಾಷ್ಟಮೋಽಧ್ಯಾಯಃ

---

೩೮–೩೯. ಇಂತೆಂದ ಪರಮಾತ್ಮನ ಮಾತನ್ನು ಕೇಳಿ ಆ ಸರ್ವವ್ಯಾಪಿಯನ್ನು ಕುರಿತು ಆಕಾಶರಾಜನು, "ದೇವೋತ್ತಮನೆ! ನಿನ್ನ ಸೇವೆಯೇ ನನಗೆ ನಿರಂತರವೂ ಲಭಿಸಲಿ; ನನ್ನ ಮನಸ್ಸು ನಿನ್ನ ಪಾದಕಮಲಗಳಲ್ಲಿಯೇ ಸ್ಥಿರವಾಗಿ ನಿಲ್ಲಲಿ; ನನಗೆ ನಿನ್ನಲ್ಲಿಯೇ ದೃಢವಾದ ಭಕ್ತಿಯುಂಟಾಗಲಿ" ಎಂಬುದಾಗಿ ಬೇಡಿಕೊಂಡನು.

೪೦–೪೧. ಭಗವಂತನು ಹೇಳುತ್ತಾನೆ:—'ಎಲೈ ರಾಜೇಂದ್ರನೆ! ನೀನು ಕೇಳಿದುದೆಲ್ಲವೂ ಖಂಡಿತವಾಗಿ ನಡೆಯುವುದು.' ಇಂತೆಂದು ಆತನಿಗೆ ವರವನ್ನು ಕೊಟ್ಟು ಉಚಿತವಾದ ಮರ್ಯಾದೆಯನ್ನು ಮಾಡಿ ಬೀಳ್ಕೊಟ್ಟು, ಬ್ರಹ್ಮ ರುದ್ರರೇ ಮೊದಲಾದ ಸಕಲ ದೇವತೆಗಳಿಗೂ ಉಚಿತೋಪಚಾರಗಳಿಂದ ಪೂಜೆ ಯನ್ನು ಮಾಡಿ ಸ್ವರ್ಗಲೋಕಕ್ಕೆ ಹಿಂದಿರುಗಲು ಶ್ರೀನಿವಾಸನು ಅವರಿಗೆಲ್ಲ ಸಂತೋಷದಿಂದ ಅನುಮತಿಯನ್ನು ಕೊಟ್ಟನು.

೪೨. ಅವರೆಲ್ಲರೂ ಹೊರಟುಹೋಗಲು ಶ್ರೀದೇವಿಯಿಂದಲೂ, ಪದ್ಮಾವತಿ ಯಿಂದಲೂ ಕೂಡಿದವನಾಗಿ ಮೊದಲಿನಂತೆಯೇ ಸ್ವಾಮಿಪುಷ್ಕರಿಣಿಯ ತೀರ ದಲ್ಲಿ ವಿಹಾರವನ್ನು ಮಾಡುತ್ತ, ಷಣ್ಮುಖಸ್ವಾಮಿಯಿಂದ ಪೂಜೆಯನ್ನು ಕೈಕೊಂಡು ಶ್ರೀನಿವಾಸನು ತನ್ನ ದಿವ್ಯಮಂಟಪದಲ್ಲಿ ಸುಖವಾಗಿ ನೆಲಸಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ವೈಷ್ಣವಖಂಡದ ಎರಡನೆಯ ಶ್ರೀ ವೆಂಕಟಾಚಲ ಮಾಹಾತ್ಮ್ಯೆಯ ಧರಣೀ ವರಾಹ ಸಂವಾದದಲ್ಲಿ "ಬ್ರಹ್ಮಾದಿಗಳೊಡನೆ ಶ್ರೀನಿವಾಸನು ಆಕಾಶರಾಜನ ಪಟ್ಟಣಕ್ಕೈತಂದುದು — ಪದ್ಮಾವತೀ ಪರಿಣಯ ವರ್ಣನ" ಎಂಬ ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ನವಮೋಽಧ್ಯಾಯಃ

### ವಸುನಾಮಕ ನಿಷಾದವೃತ್ತಾಂತ ಪದ್ಮಸರೋಮಾಹಾತ್ಮ್ಯಾದಿವರ್ಣನಂ

ಧರುಣ್ಯುವಾಚ :—

ಕಲೌ ಯುಗೇ ಭೂಮಿಧರ ಕೇನ ತ್ವಂ ದ್ರಕ್ಷ್ಯಸೇ ಪ್ರಿಯ ।
ವಿಮಾನಂ ಕೇನ ತೇ ದೇವ ಕಾರ್ಯತೇಽಸ್ಮಿನ್ಮಹೀಧರೇ ॥ ೧ ॥
ಶ್ರೀನಿವಾಸೋಪಿ ಕೇನೈವ ದ್ರಕ್ಷ್ಯತೇ ಸುಭಗಾಕೃತಿಃ ।
ಏತದ್ಬ್ರೂಹಿ ಮಮ ಪ್ರೀತ್ಯಾ ಶ್ರೋತುಂ ಕೌತೂಹಲಂ ವಿಭೋ ॥ ೨ ॥

ಶ್ರೀ ವರಾಹ ಉವಾಚ :—

ವಕ್ಷ್ಯಾಮಿ ಶೃಣು ಹೇ ದೇವಿ ಭವಿಷ್ಯದ್ಯದ್ವದಾಮಿ ತೇ ।
ಅಸ್ಮಿನ್ಮಹೀಧರೇ ಪುಣ್ಯೇ ನಿಷಾದೋ ವಸುನಾಮಕಃ ॥ ೩ ॥
ಶ್ಯಾಮಾಕವನಪಾಲೋಽಭೂದ್ಭಕ್ತಿಮಾನ್ಪುರುಷೋತ್ತಮೇ ।
ಶ್ಯಾಮಾಕತಂಡುಲಾನ್ಪಕ್ತ್ವಾ ಮಧುನಾಪರಿಷಿಚ್ಯ ಚ ॥ ೪ ॥
ನಿವೇದ್ಯ ದೇವದೇವಾಯ ಶ್ರೀಭೂಮಿಸಹಿತಾಯ ಚ ।
ಏವಂ ಭಕ್ತಿಮತಸ್ತಸ್ಯ ಭಾರ್ಯಾ ಚಿತ್ರವತೀ ಶುಭಾ ॥ ೫ ॥

---

## ಕನ್ನಡದ ಅನುವಾದ

### ವಸುನಾಮಕ ನಿಷಾದವೃತ್ತಾಂತ — ಪದ್ಮಸರೋಮಾಹಾತ್ಮ್ಯಾದಿವರ್ಣನ

೧–೨. ಭೂದೇವಿಯು ಕೇಳುತ್ತಾಳೆ:—"ಭೂಮಿಯನ್ನುದ್ಧರಿಸಿದ ವರಾಹ ಮೂರ್ತಿಯೆ! ನೀನು ಕಲಿಯುಗದಲ್ಲಿ ಯಾರಿಗೆ ಪ್ರತ್ಯಕ್ಷ ದರ್ಶನವನ್ನು ದಯೆ ಪಾಲಿಸುವೆ? ಈ ಪರ್ವತದಲ್ಲಿ ನಿನಗೆ ಮಂಟಪವನ್ನು ಯಾರು ನಿರ್ಮಾಣ ಮಾಡುವರು? ಅಲ್ಲದೆ, ದಿವ್ಯಮಂಗಳ ವಿಗ್ರಹನಾದ ಶ್ರೀನಿವಾಸನು ಯಾರಿಂದ ನೋಡಲ್ಪಡುವನು? ಎಲೈ ಸ್ವಾಮಿಯೆ! ಇದನ್ನು ಕೇಳಲು ನನಗೆ ಬಹಳ ಕುತೂಹಲವಾಗಿರುವುದು. ನನ್ನಲ್ಲಿ ಪ್ರೀತಿಯಿಟ್ಟು ತಿಳಿಸುವವನಾಗು."

೩–೫. ವರಾಹಸ್ವಾಮಿಯು ಹೇಳುತ್ತಾನೆ:—"ದೇವೀ! ಮುಂದೆ ನಡೆಯುವುದನ್ನೆಲ್ಲ ವಿಸ್ತಾರವಾಗಿ ಹೇಳುವೆನು, ಕೇಳು. ಪುಣ್ಯಪ್ರದೇಶವಾದ ಈ ಪರ್ವತದಲ್ಲಿ ವಸುವೆಂಬ ಹೆಸರಿನ ಬೇಡನೊಬ್ಬನು ಪರಮಾತ್ಮನ ಉತ್ತಮ ಭಕ್ತನಾಗಿ ಸಾಮೆಯ ಪೈರಿನ ಹೊಲವನ್ನು ಕಾಯುತ್ತಲಿದ್ದನು. ಆ ಸಾಮೆ ಯಕ್ಕಿಯನ್ನು ಪಾಕಮಾಡಿ ಜೇನುತುಪ್ಪದಿಂದ ಕಲಿಸಿ ಶ್ರೀದೇವಿ ಭೂದೇವಿಯ

ಅಸೂತ ತನಯಂ ಬಾಲಾ ವೀರನಾಮಾನಮುತ್ತಮಂ ।
ವಸುಃ ಪುತ್ರೇಣ ಸಹಿತೋ ಭಾರ್ಯಯಾ ಪತಿಭಕ್ತಯಾ ॥ ೬ ॥
ಕಸ್ಮಿಂಶ್ಚಿದ್ದಿವಸೇ ಪುತ್ರಂ ಶ್ಯಾಮಾಕಂ ಪಾಲಯೇತಿ ಚ ।
ವಿಸೃಜ್ಯ ಪತ್ನ್ಯಾ ಸಹಿತೋ ಮಧ್ವನ್ವೇಷಣತತ್ಪರಃ ॥ ೭ ॥
ಗತೋ ವನಾಂತರಂ ಶೀಘ್ರಂ ಮಧುಚ್ಛತ್ರದಿದೃಕ್ಷಯಾ ।
ಬಾಲಃ ಶ್ಯಾಮಾಕಪಕ್ವಾನಿ ಗೃಹೀತ್ವಾಗ್ನೌ ನಿಧಾಯ ಚ ॥ ೮ ॥
ಪಿಷ್ಟ್ವಾ ನಿವೇದಯಾಮಾಸ ವೃಕ್ಷಮೂಲೇ ಶ್ರಿಯಃ ಪತೇಃ ।
ನೈವೇದ್ಯಂ ಭಕ್ಷಯಿತ್ವೈವ ವೀರಸ್ತ್ವಾಸ ಸುಖೇನ ವೈ ॥ ೯ ॥
ತದಂತರೇ ವಸುಶ್ಚಾಪಿ ಮಧ್ವಾದಾಯ ಸಮಾಗತಃ ।
ಶ್ಯಾಮಾಕಾನ್ಭಕ್ಷಿತಾನ್ದೃಷ್ಟ್ವಾ ಸಂತರ್ಜ್ಯ ಸುತಮಾತ್ಮನಃ ॥ ೧೦ ॥
ಖಡ್ಗಮಾದಾಯ ತಂ ಹಂತುಂ ತ್ವರಯಾ ಹಸ್ತಮುದ್ದಧೌ ॥ ೧೧ ॥
ತದ್ವೃಕ್ಷಸ್ಥಸ್ತದಾ ವಿಷ್ಣುಃ ಖಡ್ಗಂ ಜಗ್ರಾಹ ಪಾಣಿನಾ ।
ಖಡ್ಗೋ ಗೃಹೀತಃ ಕೇನೇತೀ ಪಶ್ಯನ್ವೃಕ್ಷಂ ದದರ್ಶ ಸಃ ॥ ೧೨ ॥

---

ರೊಡನಿರುವ ಶ್ರೀನಿವಾಸನಿಗೆ ನೈವೇದ್ಯವನ್ನರ್ಪಿಸುತ್ತಿದ್ದನು. ಇಂತಹ ಪರಮ ಭಕ್ತನಾದ ಆತನಿಗೆ ಚಿತ್ರವತಿಯೆಂಬ ಮಂಗಳಾಂಗಿಯು ಪತ್ನಿಯಾಗಿದ್ದಳು.

೬. ಯುವತಿಯಾದ ಆಕೆಯು ಕಾಲಕ್ರಮದಲ್ಲಿ ವೀರನೆಂಬ ಹೆಸರಿನ ಉತ್ತಮ ಪುತ್ರನನ್ನು ಪಡೆದಳು. ಆ ವಸುವು ಪುತ್ರನೊಡನೆಯೂ ಪತಿವ್ರತೆಯಾದ ಹೆಂಡತಿಯೊಡನೆಯೂ ಸುಖವಾಗಿ ಕಾಲವನ್ನು ಕಳೆಯುತ್ತಿದ್ದನು.

೭. ಒಂದಾನೊಂದು ದಿನ ಸಾಮೆಯನ್ನವನ್ನು ಕಾಯುವಂತೆ ಮಗನಿಗೆ ಹೇಳಿ ವಸುವು ತನ್ನ ಹೆಂಡತಿಯೊಡನೆ ಜೇನುತುಪ್ಪವನ್ನು ಹುಡುಕಿಕೊಂಡು ಕಾಡಿಗೆ ಹೊರಟನು.

೮-೯. ಜೇನಿನ ಗೂಡುಗಳನ್ನು ನೋಡುವುದಕ್ಕಾಗಿ ವನದಿಂದ ವನವನ್ನು ಸೇರುತ್ತಿದ್ದನು. ಅಷ್ಟರಲ್ಲಿ ಬಾಲಕನಾದ ಆ ವೀರನು ಸಾಮೆಯನ್ನು ಅಕ್ಕಿಯನ್ನಾಗಿಮಾಡಿ ಬೆಂಕಿಯಲ್ಲಿ ಹುರಿದು ಹಿಟ್ಟನ್ನು ಮಾಡಿ ವೃಕ್ಷಮೂಲದಲ್ಲಿರುವ ಶ್ರೀನಿವಾಸನಿಗೆ ನೈವೇದ್ಯವನ್ನು ಮಾಡಿದನು. ಮತ್ತು ಆ ನೈವೇದ್ಯವನ್ನೆಲ್ಲ ತಾನೇ ಸ್ವೀಕರಿಸಿ ಸುಖದಿಂದಿದ್ದನು.

೧೦-೧೧. ಬಳಿಕ ವಸುವು ಜೇನುತುಪ್ಪವನ್ನು ಸಂಗ್ರಹಿಸಿಕೊಂಡು ಅಲ್ಲಿಗೆ ಬಂದನು. ಅವನು ಬರಿಯ ಸಾಮೆಯನ್ನೇ ನಿವೇದನೆಮಾಡಿದ ಮಗನನ್ನು ಕಂಡು ಬಹುವಾಗಿ ನಿಂದಿಸಿ ಕತ್ತಿಯನ್ನು ಹಿರಿದು ಅವನನ್ನು ಕೊಲ್ಲುವುದಕ್ಕೆ ಕೈಯನ್ನೆತ್ತಿದನು.

೧೨. ಆಗ ಆ ವೃಕ್ಷದೊಳಗಿನಿಂದ ಶ್ರೀಮನ್ನಾರಾಯಣನು ಉದ್ಭೂತನಾಗಿ

ಶಂಖಚಕ್ರಗದಾಪಾಣಿಂ ವೃಕ್ಷಾರೂಢಾರ್ಧವಿಗ್ರಹಂ ।
ನುಕ್ತ್ವಾ ವಸುಶ್ಚ ತಂ ಖಡ್ಗಂ ಪ್ರಣಮ್ಯೋವಾಚ ಕೇಶವಂ ॥ ೧೩ ॥
ಕಿಮಿದಂ ದೇವದೇವೇಶ ಚೇಷ್ಟಿತಂ ಕ್ರಿಯತೇ ತ್ವಯಾ ॥ ೧೪ ॥

ಶ್ರೀ ಭಗವಾನುವಾಚ:—

ವಸೋ ಶ್ರುಣು ವಚೋ ಮೇ ತ್ವಂ ಪುತ್ರಸ್ತೇ ಭಕ್ತಿಮಾನ್ಮಯಿ ।
ತ್ವತ್ತೋಽಪಿ ಮೇ ಪ್ರಿಯತಮಸ್ತಸ್ಮಾತ್ಪ್ರತ್ಯಕ್ಷಮಾಗತಃ ॥ ೧೫ ॥
ಅಸ್ಯ ಸರ್ವತ್ರ ತಿಷ್ಠಾಮಿ ತವ ಸ್ವಾಮಿಸರಸ್ತಟೇ ।
ಇತಿ ದೇವವಚಃ ಶ್ರುತ್ವಾ ಪ್ರೀತಿಮಾನಭವದ್ವಸುಃ ॥ ೧೬ ॥
ಏತಸ್ಮಿನ್ನೇವ ಕಾಲೇತು ಪಾಂಡ್ಯದೇಶಾತ್ಸಮಾಗತಃ ।
ಬಾಲ್ಯಾತ್ಪ್ರಭೃತಿ ಶೂದ್ರೋಽಪಿ ವಿಷ್ಣುಭಕ್ತಿಸಮನ್ವಿತಃ ॥ ೧೭ ॥
ನಾರಾಯಣಪುರೀಂ ಪ್ರಾಪ್ಯ ಶ್ರೀವರಾಹಂ ಪ್ರಣಮ್ಯ ಚ ।
ತತ್ರ ಶ್ರುತ್ವಾ ಶ್ರೀನಿವಾಸಂ ವೇಂಕಟಾದ್ರಿನಿವಾಸಿನಂ ॥ ೧೮ ॥

---

ಎತ್ತಿದ ಕತ್ತಿಯನ್ನು ತನ್ನ ಕೈಯಲ್ಲಿ ಹಿಡಿದನು. ಖಡ್ಗವನ್ನು ಹಿಡಿದವರು ಯಾರೆಂದು ವಸುವು ಹಿಂದಿರುಗಲು ವೃಕ್ಷವು ಕಂಡಿತು.

೧೩–೧೪. ಆದರಿಂದ ಅರ್ಧಶರೀರವು ಕಾಣುವಂತೆ ಶಂಖಚಕ್ರಗದಾಪಾಣಿಯಾಗಿ ನಿಂತ ಪರಮಾತ್ಮನನ್ನು ಕಂಡು ವಸುವು ಕತ್ತಿಯನ್ನು ಬಿಟ್ಟು ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಸ್ವಾಮಿಯನ್ನು ಕುರಿತು, "ದೇವಾಧಿದೇವನೆ! ಈ ನಿನ್ನ ವಿಚಿತ್ರ ವ್ಯಾಪಾರವೇನು?" ಎಂಬುದಾಗಿ ಪ್ರಶ್ನೆ ಮಾಡಿದನು.

೧೫. ಭಗವಂತನು ಹೇಳುತ್ತಾನೆ:—"ಎಲೈ ವಸುವೆ! ನನ್ನ ಮಾತನ್ನು ಕೇಳು. ನಿನ್ನ ಮಗನು ನನ್ನಲ್ಲಿ ಭಕ್ತಿಯುಕ್ತನಾಗಿರುವನು. ಅವನೇ ನಿನಗಿಂತಲೂ ನನಗೆ ಪ್ರೀತಿಪಾತ್ರನು. ಆದುದರಿಂದಲೇ ನಾನು ನಿನಗೆ ಪ್ರತ್ಯಕ್ಷನಾಗಿರುವೆನು.

೧೬. ಇಂದಿನಿಂದ ನಿನಗಾಗಿ ಈ ಸ್ವಾಮಿಪುಷ್ಕರಿಣಿಯ ದಡದಲ್ಲಿ ನಿಂತಿರುವೆನು." ಇಂತೆಂದ ಪರಮಾತ್ಮನ ಮಾತುಗಳನ್ನು ಕೇಳಿ ವಸುವು ಸಂತುಷ್ಟಾಂತರಂಗನಾದನು.

೧೭. ಇದೇ ಸಮಯದಲ್ಲಿಯೇ ಪಾಂಡ್ಯದೇಶದಿಂದ ಒಬ್ಬ ಪುರುಷನು ಬಂದನು. ಆತನು ಶೂದ್ರನಾದರೂ ಬಾಲ್ಯದಿಂದಲೂ ವಿಷ್ಣುಭಕ್ತಿಯಿಂದ ಕೂಡಿದವನಾಗಿದ್ದನು.

೧೮–೨೧. ಆತನು ನಾರಾಯಣಪುರಿಯನ್ನು ಸೇರಿ ಭೂವರಾಹಸ್ವಾಮಿಯನ್ನು ನಮಸ್ಕರಿಸಿ ವೇಂಕಟಾಚಲದಲ್ಲಿ ಶ್ರೀನಿವಾಸನು ನೆಲಸಿರುವುದನ್ನು ಕೇಳಿ ಜನ್ಮರಹಿತನೂ ದೇವಾಧಿದೇವ ಪೂಜಿತನೂ ಆದ ಆ ಸ್ವಾಮಿಯನ್ನು ನೋಡಲು

ಸ್ವಯಂಭುವಂ ದೇವದೇವ ಸೇವಿತಂ ಪ್ರಯಯೌ ತತಃ ।
ಸುವರ್ಣಮುಖರೀಂ ಪ್ರಾಪ್ಯ ಸ್ನಾತ್ವಾ ಚೋತ್ತೀರ್ಯ ತತ್ತಟೇ ॥ ೧೯ ॥
ಕಮಲಾಖ್ಯೇ ಸರಸಿ ಚ ಸ್ನಾತ್ವಾ ಪುಣ್ಯಪ್ರದಾಯಿನಿ ।
ತತ್ತೀರವಾಸಿನಂ ದೇವಂ ಕೃಷ್ಣಂ ರಾಮೇಣ ಸಂಯುತಂ ॥ ೨೦ ॥
ನಮಸ್ಕೃತ್ಯ ತತಃ ಪ್ರಾಯಾದ್ವನಂ ಗಜಘಟಾಯುತಂ ।
ಶನೈಃ ಸಂಪ್ರಾಪ್ಯ ಶೇಷಾದ್ರಿಂ ನಿರ್ಝರಂ ಸಂದದರ್ಶ ಹಿ ॥ ೨೧ ॥
ತತ್ಸಮೀಪಂ ಸಮಾಸಾದ್ಯ ಕಪಿಲಾಪೂಜಿತಂ ಶಿವಂ ।
ತತ್ಪುರಶ್ಚಕ್ರತೀರ್ಥಂ ತದಗಾಧಂ ಪಾಪನಾಶನಂ ॥ ೨೨ ॥
ತತ್ರ ಸ್ನಾತ್ವಾ ತತೋಽಗಚ್ಛದ್ವೇಂಕಟಾದ್ರಿಂ ಶನೈಃ ಶನೈಃ ।
ಆರಾದ್ಧುಂ ಗಚ್ಛತಾ ಮಾರ್ಗೇ ಯುಕ್ತೋ ವೈಖಾನಸೇನ ಚ ॥ ೨೩ ॥
ರಂಗದಾಸಸ್ತ್ವರುರೋಹ ಬಾಲೋ ದ್ವಾದಶವಾರ್ಷಿಕಃ ।
ಸ್ವಾಮಿಪುಷ್ಕರಿಣೀಂ ಪ್ರಾಪ್ಯ ಸ್ನಾತ್ವಾ ಭಕ್ತಿಸಮನ್ವಿತಃ । ॥ ೨೪ ॥
ವೈಖಾನಸೇನ ಮುನಿನಾ ಗೋಪೀನಾಥೇನ ಪೂಜಿತಂ ।
ವನಮಧ್ಯೇ ತರೋರ್ಮೂಲೇ ಸ್ವಾಮಿಪುಷ್ಕರಿಣೀ ತಟೇ ॥ ೨೫ ॥

---

ಹೊರಟನು. ಸುವರ್ಣಮುಖರೀ ನದಿಯನ್ನು ಸೇರಿ ಅದರಲ್ಲಿ ಸ್ನಾನವನ್ನು ಮಾಡಿಕೊಂಡು ಮೇಲಕ್ಕೆ ಬಂದು ಅದರ ದಡದಲ್ಲಿಯೇ ಇದ್ದ ಕಮಲಾ ಸರೋವರದಲ್ಲಿಯೂ ಸ್ನಾನಮಾಡಿ ತೀರದಲ್ಲಿ ಬಲರಾಮನೊಡನೆ ನೆಲಸಿರುವ ಶ್ರೀಕೃಷ್ಣನನ್ನು ಕಂಡು ನಮಸ್ಕರಿಸಿ ಮತ್ತಗಜಗಳಿಂದ ನಿಬಿಡವಾದ ಅರಣ್ಯದಲ್ಲಿ ಹೊರಟನು. ಮತ್ತು ಮೆಲ್ಲಗೆ ಶೇಷಾಚಲವನ್ನು ಸಮೀಪಿಸಿ ಅಲ್ಲಿ ಒಂದು ತೊರೆಯನ್ನು ಕಂಡನು.

೨೨. ಅದನ್ನು ಸಮೀಪಿಸಿ ಕಪಿಲಮಹರ್ಷಿಯಿಂದ ಪೂಜಿತವಾದ ಶಿವಲಿಂಗವನ್ನೂ ಅದರ ಎದುರಿನಲ್ಲಿಯೇ ಅಗಾಧವಾದುದೂ ಸಕಲ ಪಾಪಾಪನೋದಕವಾದುದೂ ಆದ ಚಕ್ರತೀರ್ಥವನ್ನೂ ಕಂಡನು.

೨೩. ಅದರಲ್ಲಿ ಸ್ನಾನವನ್ನು ಮಾಡಿಕೊಂಡು ಮತ್ತೆ ಮೆಲ್ಲಗೆ ವೇಂಕಟಾಚಲಕ್ಕೆ ಹೊರಟನು. ವೇಂಕಟೇಶ್ವರನನ್ನು ಪೂಜಿಸಲು ಹೊರಟ ಆತನಿಗೆ ದಾರಿಯಲ್ಲಿ ಒಬ್ಬ ಸನ್ಯಾಸಿಯು ಸಹಚಾರಿಯಾದನು.

೨೪–೨೫. ರಂಗದಾಸನು ಕೇವಲ ಹನ್ನೆರಡು ವರ್ಷದ ಹುಡುಗನಾದುದರಿಂದ ವೇಂಕಟಗಿರಿಯನ್ನು ಬೇಗ ಹತ್ತಿ ಭಕ್ತಿಭಾವಭರಿತನಾಗಿ ಸ್ವಾಮಿಪುಷ್ಕರಿಣಿಯಲ್ಲಿ ಮಿಂದು ಗೋಪೀನಾಥನೆಂಬ ಆ ಸನ್ಯಾಸಿ ಮುನಿಯಿಂದ ಸತ್ಕಾರವನ್ನು ಕೈಕೊಳ್ಳುತ್ತ ತೀರ್ಥದ ದಡದ ಹುಣಿಸೆಯ ಮರದಡಿಯಲ್ಲಿ ನೆಲಸಿರುವ ಶ್ರೀನಿವಾಸನನ್ನು ಕಂಡನು.

ತಿಷ್ಠಂತಂ ಪುಂಡರೀಕಾಕ್ಷಂ ಶ್ರೀ ಭೂಮಿಸಹಿತಂ ಹರಿಂ ।
ಆಕಾಶಸ್ಥಂ ಸಂದದರ್ಶ ಪ್ರೀತನೀಲಾಕೃತಿಂ ಶುಭಂ ॥ ೨೬ ॥
ಪಾರ್ಶ್ವಸ್ಥಶಂಖಚಕ್ರಾಭ್ಯಾಂ ಗದಾಸಿಭ್ಯಾಂ ನಿಷೇವಿತಂ ।
ಪಕ್ಷೌ ವಿಸ್ತಾರ್ಯ ಚಾಕಾಶೇ ದೇವಮೂರ್ಧ್ನಿ ವಿತಾನವತ್ ॥ ೨೭ ॥
ಸ್ಥಿತಂ ಚ ಗರುಡೇಶಾನಂ ಪಶ್ಚಾಚ್ಚಾರ್ಙ್ಗಂ ಶರಂ ತಥಾ ॥ ೨೮ ॥
ಏವಂ ದೃಷ್ಟ್ವಾ ಶ್ರೀನಿವಾಸಂ ವಿಸ್ಮಿತೋ ರಂಗದಾಸಕಃ ।
ಅಸ್ಯ ದೇವಸ್ಯ ಚಾರಾಮಂ ಕಾರಯಾಮೀತ್ಯಚಿಂತಯತ್ ॥ ೨೯ ॥
ನಿಶ್ಚಿತ್ಯ ಮನಸಾ ಸರ್ವಂ ತರುಮೂಲೇಽವಸತ್ಸುಧೀಃ ।
ಕೃತ್ವಾ ವೈಖಾನಸಾದ್ವಿಷ್ಣೋರ್ನೈವೇದ್ಯಂ ಚ ದಿನೇ ದಿನೇ ॥ ೩೦ ॥
ಶನೈಶ್ಛಿತ್ವಾ ವನಂ ಘೋರಂ ವೃಕ್ಷಾಂಶ್ಚಿಚ್ಛೇದ ಪಾರ್ಶ್ವಗಾನ್ ।
ಆಸ್ಥಾನಚಿಂಚಾಂ ದೇವಸ್ಯ ರಮಾಯಾಶ್ಚಂಪಕಂ ತರುಂ ॥ ೩೧ ॥
ದೇವಾಜ್ಞಪ್ತೋ ವರ್ಜಯಿತ್ವಾ ತಾವುಭೌ ದೇವಸೇವಿತೌ ।
ದೇವಸ್ಯ ಪರಿತೋ ಭೂಮೌ ಶಿಲಾಕುಂಡಂ ತದಾಕರೋತ್ ॥ ೩೨ ॥

---

೨೬. ಕಮಲಲೋಚನನಾದ ಆತನು ಶ್ರೀಭೂದೇವಿಯರೊಡನೆ ಕೂಡಿದವನಾಗಿದ್ದನು. ಮತ್ತು ನೀಲಮೇಘಶ್ಯಾಮನೂ, ಪೀತಾಂಬರಧಾರಿಯೂ ಆಗಿ ಭಕ್ತರಿಗೆ ಮಂಗಳಗಳನ್ನು ನೀಡುತ್ತ ಆಕಾಶದಲ್ಲಿ ನಿಂತಿದ್ದ ಶ್ರೀಹರಿಯನ್ನು ಆ ರಂಗದಾಸನು ಕಂಡನು.

೨೭–೨೮. ಆತನ ಎರಡು ಪಕ್ಕಗಳಲ್ಲಿಯೂ ಶಂಖಚಕ್ರಗಳೂ ಗದಾಖಡ್ಗಗಳೂ ಸೇವಿಸುತ್ತಿದ್ದುವು. ಗರುಡದೇವನು ತನ್ನ ಎರಡು ರೆಕ್ಕೆಗಳನ್ನೂ ದೇವನ ತಲೆಯಮೇಲೆ ಹರಡಿಕೊಂಡು ಛತ್ರದಂತೆ ಕಾಣುತ್ತಿದ್ದನು. ಪರಮಾತ್ಮನ ಹಿಂದುಗಡೆಯಲ್ಲಿ ಶಾರ್ಙ್ಗವೆಂಬ ಧನುಸ್ಸೂ, ಬಾಣವೂ ಕಂಗೊಳಿಸುತ್ತಿದ್ದುವು.

೨೯. ಇಂತಹ ವೈಭವದಿಂದೊಡಗೂಡಿದ ಶ್ರೀನಿವಾಸನನ್ನು ಕಂಡು ರಂಗದಾಸನು ಆಶ್ಚರ್ಯಪಡುತ್ತ ಆ ಸ್ವಾಮಿಯ ಸೇವೆಗೆ ತಕ್ಕ ಪುಷ್ಪೋದ್ಯಾನವನ್ನು ಮಾಡಿಸಬೇಕೆಂಬ ಸಂಕಲ್ಪವನ್ನು ಮಾಡಿಕೊಂಡನು.

೩೦. ಇಂತು ಮನಸ್ಸಿನಲ್ಲಿ ನಿಶ್ಚಯವನ್ನು ಮಾಡಿಕೊಂಡು ಅಂದಿನ ದಿನದಿಂದ ಆ ಮರದಡಿಯಲ್ಲಿಯೇ ವಾಸಮಾಡಿಕೊಂಡಿದ್ದನು. ಮತ್ತು ಪ್ರತಿದಿನದಲ್ಲಿಯೂ ಗೋಪೀನಾಥನ ಕೈಗಳಿಂದ ನೈವೇದ್ಯವನ್ನು ಮಾಡಿಸುತ್ತಿದ್ದನು.

೩೧–೩೪. ಮೆಲ್ಲಮೆಲ್ಲಗೆ ಭಯಂಕರವಾದ ವನವೆಲ್ಲವನ್ನೂ ಕಡಿದುಹಾಕಿ ಸುತ್ತುಮುತ್ತಲಿನ ವೃಕ್ಷಗಳನ್ನೂ ಕೆಡವಿದನು. ಆದರೆ ಪರಮಾತ್ಮನ ಅಪ್ಪಣೆಯ ಮೇರೆಗೆ ಆತನ ನಿವಾಸವಾದ ಹುಣಸೆಯ ಮರವನ್ನೂ, ಲಕ್ಷ್ಮಿಯ ನಿವಾಸವಾದ ಸಂಪಗೆಯ ಮರವನ್ನೂ ಹಾಗೆಯೇ ಉಳಿಸಿದನು. ದೇವಸಹಿತಗಳಾದ ಅವೆರಡನ್ನು

ತತ್ಕುಂಡಸ್ಯೈವ ಪರಿತಃ ಪುಷ್ಪಾರಾಮಾಂಶ್ಚಕಾರ ಹ ।
ಮಲ್ಲಿಕಾಕರವೀರಾಬ್ಜ ಕುಂದಮಂದಾರಮಾಲತೀಃ ॥ ೩೩ ॥
ತುಲಸೀಚಂಪಕಾನಾಂ ತು ವನಾನ್ಯೇವ ಚಕಾರ ಹ ।
ಖನಿತ್ವಾ ತತ್ರ ಕೂಪಂ ತು ವರ್ಧಯಂಸ್ತಜ್ಜಲೈರ್ವನಂ । ॥ ೩೪ ॥
ಆರಾಮಪುಷ್ಪಾಣ್ಯಾದಾಯ ಸ್ವಯಂ ದಾಮಾನ್ಯಥಾಕರೋತ್ ।
ವಿಚಿತ್ರಾಣಿ ತದಾ ಬದ್ಧ್ವಾ ಪೂಜಕಸ್ಯ ಕರೇ ದದೌ ॥ ೩೫ ॥
ಆದಾಯ ಪೂಜಕಸ್ತಾನಿ ಸ್ಕಂಧೇ ಮೂರ್ಧ್ನಿ ಬಬಂಧ ಚ ।
ಶ್ರೀನಿವಾಸಸ್ಯ ದೇವಸ್ಯ ಶ್ರೀಭೂಮಿಸಹಿತಸ್ಯ ಚ ॥ ೩೬ ॥
ಏವಂ ದೇವಸ್ಯ ಕೈಂಕರ್ಯಂ ಕುರ್ವಂಸ್ತಸ್ಥಾವುದಾರಧೀಃ ।
ತಸ್ಯೈವಂ ವರ್ತಮಾನಸ್ಯ ಸಮಾಸ್ತ್ವಸಪ್ತತೇರ್ಗತಾಃ ॥ ೩೭ ॥
ಕುರ್ವಾಣೇ ಪುಷ್ಪಾಪಚಯಂ ರಂಗದಾಸೇ ಮಹಾತ್ಮನಿ ॥ ೩೮ ॥
ಆರಾಮೇ ಸರಸಿ ಸ್ನಾತುಂ ಗಂಧರ್ವಃ ಕಶ್ಚಿದಾಯಯೌ ।
ಗಂಧರ್ವರಾಜಕನ್ಯಾಭಿಸ್ತರುಣೀಭಿಃ ಸಮನ್ವಿತಃ ॥ ೩೯ ॥

---

ಮಾತ್ರ ನಿಲ್ಲಿಸಿ ಅವುಗಳ ಸುತ್ತಲೂ ಕಲ್ಲುಗಳ ಕುಂಡವೊಂದನ್ನು ಭೂಮಿಯಲ್ಲಿ ನಿರ್ಮಿಸಿದನು. ಆ ಕೊಳದ ಸುತ್ತಲೂ ಹೂದೋಟಗಳನ್ನು ಮಾಡಿದನು. ಮಲ್ಲಿಗೆ, ಕರವೀರ, ಕಮಲ, ಕುಂದ, ಮಂದಾರ, ಮಾಲತಿ, ತುಲಸಿ, ಸಂಪಗೆ ಮುಂತಾದ ಅನೇಕ ಪುಷ್ಪಗಳ ತರುಲತೆಗಳನ್ನು ಆ ವನದಲ್ಲಿ ನೆಟ್ಟನು. ಅಲ್ಲಿಯೇ ಬಾವಿಯೊಂದನ್ನು ಬಗೆದು ಅದರ ಜಲದಿಂದಲೇ ಆ ವನವನ್ನೆಲ್ಲ ವೃದ್ಧಿಗೊಳಿಸುತ್ತಿದ್ದನು.

೩೫. ಪ್ರತಿನಿತ್ಯವೂ ವನದ ಪುಷ್ಪಗಳನ್ನೆಲ್ಲ ಶೇಖರಿಸಿ ತಾನೇ ಹಾರಗಳನ್ನು ಕಟ್ಟಿ ನಾನಾ ವಿಧಗಳಾದ ಆ ಹಾರಗಳನ್ನು ಅರ್ಚಕನಿಗೆ ಕೊಡುತ್ತಿದ್ದನು.

೩೬. ಗೋಪೀನಾಥನು ಅವುಗಳನ್ನು ಸ್ವೀಕರಿಸಿ ಶ್ರೀಭೂಮಿಸಹಿತನಾದ ಶ್ರೀನಿವಾಸದೇವನ ಕಂಠದಲ್ಲಿಯೂ, ಶಿರಸ್ಸಿನಲ್ಲಿಯೂ ಅಲಂಕಾರ ಮಾಡುತ್ತಿದ್ದನು.

೩೭–೩೮. ಇಂತು ದೇವದೇವನ ಸೇವೆಯನ್ನೇ ಮಾಡುತ್ತ ಉದಾರಬುದ್ಧಿಯಾದ ಆತನು ಅಲ್ಲಿಯೇ ನಿಂತನು. ಮಹಾತ್ಮನಾದ ರಂಗದಾಸನು ಹೂವುಗಳನ್ನು ಕೊಯ್ದು ಹಾರಗಳನ್ನು ನಿತ್ಯವೂ ಅರ್ಪಿಸುತ್ತಿರುವಂತೆಯೇ ಆತನಿಗೆ ಎಪ್ಪತ್ತು ವರ್ಷಗಳ ವಯಸ್ಸು ಆಯಿತು.

೩೯. ಒಂದಾನೊಂದು ದಿನ ಒಬ್ಬ ಗಂಧರ್ವನು ಯೌವನವತಿಯರಾದ ಗಂಧರ್ವಸ್ತ್ರೀಯರ ಪರಿವಾರದಿಂದ ಕೂಡಿ ಆ ಸರೋವರದಲ್ಲಿ ಸ್ನಾನಮಾಡಲು ಉದ್ಯಾನವನಕ್ಕೆ ಬಂದನು.

ಜಲಕ್ರೀಡಾಂ ಕರೋತಿ ಸ್ಮ ದಿವಿ ಸ್ಥಾಪ್ಯ ವಿಮಾನಕಂ ।
ಸುರೂಪಾಭಿಶ್ಚ ಸಹಿತಂ ಕ್ರೀಡಂತಂ ಕಮಲಾಕರೇ ॥ ೪೦ ॥
ಪಶ್ಯಂಚ್ಛ್ರೀರಂಗದಾಸೋಽಯಂ ವ್ಯಸ್ಮರನ್ಮಾಲ್ಯಸಂಚಯಂ ।
ಜಿತೇಂದ್ರಿಯೋಽಪಿ ತತ್ಕ್ರೀಡಾಂ ಪಶ್ಯನ್ರೇತಃ ಸಸರ್ಜ ಚ ॥ ೪೧ ॥
ಪಶ್ಯತಸ್ತಸ್ಯ ಸರಸಃ ಸಮುತ್ತೀರ್ಯ ಮನೋಹರಂ ।
ದಿವ್ಯವಸ್ತ್ರಾಣಿ ಚಾಚ್ಛಾದ್ಯ ಕಾಂತಾಭಿಃ ಸಹ ಸಸ್ಮಿತಂ ॥ ೪೨ ॥
ಅಧಿರುಹ್ಯ ವಿಮಾನಂ ತು ಯಯೌ ಸ ಧನದಾಲಯಂ ।
ಗತೇ ಗಂಧರ್ವರಾಜೇ ತು ರಂಗದಾಸೋ ವಿಮೋಹಿತಃ ॥ ೪೩ ॥
ತ್ಯಕ್ತ್ವಾ ಚ ತಾನಿ ಮಾಲ್ಯಾನಿ ಸ್ನಾತ್ವಾ ಸರಸಿ ಲಜ್ಜಿತಃ ।
ಪುನರಾಹೃತ್ಯ ಪುಷ್ಪಾಣಿ ಶನೈರ್ದೇವಾಲಯಂ ಯಯೌ ॥ ೪೪ ॥
ವೈಖಾನಸಸ್ತು ತಂ ದೃಷ್ಟ್ವಾ ಪೂಜಾಕಾಲಮತೀತ್ಯ ಚ ।
ಆಗತಂ ಕಿಮಿತಿ ಪ್ರಾಹ ಸಖೇಽತಿಕ್ರಮ್ಯ ಚಾಗತಃ ॥ ೪೫ ॥
ನ ಬದ್ಧಾ ಮಾಲಿಕಾಶ್ಚಾಪಿ ತ್ವಯಾರಾಮೇ ಚ ಕಿಂ ಕೃತಂ ॥ ೪೬ ॥

---

೪೦–೪೧. ಅವನು ಆಕಾಶದಲ್ಲಿಯೇ ತನ್ನ ವಿಮಾನವನ್ನು ನಿಲ್ಲಿಸಿ ಜಲಕ್ರೀಡೆಯಲ್ಲಿ ನಿರತನಾದನು. ಸುಂದರಿಯರಾದ ಗಂಧರ್ವಸ್ತ್ರೀಯರೊಡನೆ ಸರೋವರದಲ್ಲಿ ಕ್ರೀಡಿಸುತ್ತಿರುವ ಆತನನ್ನು ನೋಡುತ್ತ ರಂಗದಾಸನು ಹೂವುಗಳನ್ನು ಕಟ್ಟುವ ಕೆಲಸವನ್ನೇ ಮರೆತುಬಿಟ್ಟನು. ಆ ಸ್ತ್ರೀಯರ ಅವಯವಗಳನ್ನೂ, ಕ್ರೀಡೆಗಳನ್ನೂ ನೋಡಿ ಜಿತೇಂದ್ರಿಯನೆನಿಸಿದ ಅವನಿಗೂ ಕೂಡ ರೇತಸ್ಸ್ಖಲನವಾಯಿತು.

೪೨–೪೩. ಆತನು ನೋಡುತ್ತಿರುವಂತೆಯೇ ಅವರೆಲ್ಲರೂ ನೀರಿನಿಂದ ಮೇಲಕ್ಕೆ ಬಂದು ದಿವ್ಯವಸ್ತ್ರಗಳನ್ನುಟ್ಟುಕೊಂಡರು. ಆ ಗಂಧರ್ವನು ಸಂತೋಷದಿಂದ ನಗುತ್ತ ಮನೋಹರವಾದ ವಿಮಾನವನ್ನೇರಿ ತನ್ನ ಯಜಮಾನನಾದ ಕುಬೇರನ ರಾಜಧಾನಿಯಾದ ಅಲಕಾಪುರಿಗೆ ಹೊರಟುಹೋದನು. ಆ ಗಂಧರ್ವನಾಯಕನು ಹೊರಟುಹೋಗಲು ರಂಗದಾಸನಿಗೆ ಮನಸ್ಸಿನ ವ್ಯಾಮೋಹವು ಕಳೆದುಹೋಯಿತು.

೪೪. ಆತನು ಆ ಹೂವುಗಳನ್ನೆಲ್ಲ ಬಿಸುಟು ನಾಚಿಕೆಗೊಂಡವನಾಗಿ ಮತ್ತೆ ಸರೋವರದಲ್ಲಿ ಸ್ನಾನಮಾಡಿಕೊಂಡು ಬೇರೆ ಹೂವುಗಳನ್ನು ಕೊಯ್ದುಕೊಂಡು ಮೆಲ್ಲಮೆಲ್ಲಗೆ ದೇವಾಲಯವನ್ನು ಸಮೀಪಿಸಿದನು.

೪೫–೪೬. ಅರ್ಚಕನಾದ ಸನ್ಯಾಸಿಯು ಪೂಜಾಸಮಯವು ಕಳೆದುಹೋಗಲು ರಂಗದಾಸನು ಮೆಲ್ಲಗೆ ಬರುತ್ತಿರುವುದನ್ನು ಕಂಡು "ಸ್ನೇಹಿತನೆ! ಏತಕ್ಕಾಗಿ ಇಷ್ಟು ತಡವಾಗಿ ಬಂದೆ? ಪುಷ್ಪಮಾಲಿಕೆಗಳನ್ನೂ ಕಟ್ಟಿಲ್ಲವಲ್ಲ.

ಶ್ರೀ ವರಾಹ ಉವಾಹ:—
ಇತ್ಥಂ ಪೃಷ್ಟೋ ರಂಗದಾಸೋ ನಾವದಲ್ಲಜ್ಜಯಾ ತತಃ ।
ಲಜ್ಜಿತಂ ರಂಗದಾಸಂ ತಂ ಪ್ರೋವಾಚ ಮಧುಸೂದನಃ ॥ ೪೭ ॥
ಶ್ರೀ ಭಗವಾನುವಾಚ:
ಲಜ್ಜಯಾ ಕಿಂ ರಂಗದಾಸ ಮಯಾ ತ್ವಂ ಮೋಹಿತೋ ಹ್ಯಸಿ ।
ತ್ವಂ ತಾವಜ್ಜಿತಕಾಮೋಽಸಿ ಧೀರೋ ಭವ ಮಹಾಮತೇ ॥ ೪೮ ॥
ಗಂಧರ್ವರಾಜವದ್ರಾಜಾ ಭವಿತಾಸಿ ಮಹೀತಲೇ ।
ತತ್ರ ಭುಕ್ತ್ವಾ ಮಹಾಭೋಗಾನ್ಭಕ್ತಿಮಾನ್ಮಯಿ ಸರ್ವದಾ ॥ ೪೯ ॥
ಪ್ರಾಕಾರಂ ಚ ವಿಮಾನಂ ಚ ಕಾರಯಿಷ್ಯಸಿ ಮೇ ತದಾ ।
ತತ್ರ ಮುಕ್ತಿಂ ಪ್ರದಾಸ್ಯಾಮಿ ಪ್ರೀತ್ಯಾ ಪರಮಯಾ ಯುತಃ ॥ ೫೦ ॥
ಅತ್ರೈವ ಕುರು ಸೇವಾಂ ತ್ವಮಾಶರೀರವಿಮೋಕ್ಷಣಾತ್ ।
ಮದ್ಭಕ್ತಾನಾಂ ಸಕಾಮಾನಾಮೇವಂ ಮುಕ್ತಿರ್ಭವಿಷ್ಯತಿ ॥ ೫೧ ॥
ಇತ್ಯುಕ್ತ್ವಾ ಭಗವಾನ್ವಿಷ್ಣುಃ ಪುನರ್ನೋವಾಚ ಕಿಂಚನ ।
ಶ್ರುತ್ವಾ ತದ್ರಂಗದಾಸೋಽಪಿ ಚಕಾರಾರಾಮಮುತ್ತಮಂ ॥ ೫೨ ॥

---

ಹೂದೋಟದಲ್ಲಿ ಇಷ್ಟುಕಾಲ ಏನನ್ನು ಮಾಡುತ್ತಿದ್ದೆ?'' ಎಂಬುದಾಗಿ ಪ್ರಶ್ನೆ ಮಾಡಿದನು.

೪೭. ವರಾಹಸ್ವಾಮಿಯು ಹೇಳುತ್ತಾನೆ:—ಇಂತೆಂದು ಕೇಳಲು ರಂಗದಾಸನು ಲಜ್ಜೆಯಿಂದ ಏನನ್ನೂ ಹೇಳಲಾರದಾದನು. ಆಗ ನಾಚಿಕೆಗೊಂಡ ರಂಗದಾಸನನ್ನು ಕುರಿತು ಶ್ರೀನಿವಾಸನೇ ಪ್ರತ್ಯಕ್ಷನಾಗಿ ಹೇಳತೊಡಗಿದನು.

೪೮. ಭಗವಂತನು ಹೇಳುತ್ತಾನೆ:—''ರಂಗದಾಸ! ನೀನೇಕೆ ನಾಚಿಕೆ ಪಡುವೆ? ನಾನೇ ನಿನ್ನನ್ನು ಮೋಹಗೊಳ್ಳುವಂತೆ ಮಾಡಿರುವೆನು. ಆದರೂ ನೀನು ಕಾಮಾದಿಗಳನ್ನು ಗೆದ್ದಿರುವೆ. ನೀನು ಮಹಾಪ್ರಾಜ್ಞನು; ಧೈರ್ಯಗೆಡಬೇಡ.

೪೯–೫೦. ನೀನೂ ಕೂಡ ಕಾಲಾಂತರದಲ್ಲಿ ಭೂಲೋಕದಲ್ಲಿ ಗಂಧರ್ವರಾಜನಂತೆಯೇ ರಾಜನಾಗಿ ಜನಿಸುವೆ. ಆ ಜನ್ಮದಲ್ಲಿಯೂ ನನ್ನಲ್ಲಿ ನಿರಂತರವೂ ಭಕ್ತಿಯುಳ್ಳವನಾಗಿ ಅನೇಕ ಭೋಗಭಾಗ್ಯಗಳನ್ನನುಭವಿಸಿ ನನಗೆ ಪ್ರಾಕಾರವನ್ನೂ ಮಂಟಪವನ್ನೂ ಮಾಡಿಸುವೆ. ಆಗ ನಿನ್ನ ಭಕ್ತಿಯಿಂದ ಅತ್ಯಂತ ಪ್ರೀತಿಯನ್ನು ಹೊಂದಿದವನಾಗಿ ನಿನಗೆ ಮೋಕ್ಷವನ್ನು ಕೊಡುವೆನು.

೫೧. ಈ ಶರೀರದ ಪಾತವಾಗುವವರೆಗೂ ಇಲ್ಲಿಯೇ ಸೇವೆಯನ್ನು ಮಾಡಿಕೊಂಡು ವಾಸಿಸುತ್ತಿರು. ಭೋಗಾಭಿಲಾಷೆಯುಳ್ಳ ನನ್ನ ಭಕ್ತರಿಗೆಲ್ಲ ಈ ವಿಧದಲ್ಲಿಯೇ ಮೋಕ್ಷವು ಲಭಿಸುವುದು.''

೫೨. ಇಂತೆಂದು ಮಹಾವಿಷ್ಣುವು ಸುಮ್ಮನಾಗಲು ರಂಗದಾಸನು ಎಂದಿ

ಸಾಗ್ರಂ ಶತಾಬ್ದಂ ಸೇವಿತ್ವಾ ಗತಃ ಸ್ವರ್ಗಮಮುಂದಧೀಃ ।
ಜಾತಃ ಸೋಮಕುಲೇ ತುಂಗೇ ತೊಂಡಮಾನಿತಿವಿಶ್ರುತಃ ॥ ೫೩ ॥
ಸುವೀರತನಯೋ ವೀರೋ ನಂದಿನೀಗರ್ಭಸಂಭವಃ ।
ಸ ಪಂಚವರ್ಷಾದುದ್ಭೂತವಿಷ್ಣುಭಕ್ತಿಃ ಸ್ವಯಂ ಸುಧೀಃ ।
ಸೌಶೀಲ್ಯ ಶೌರ್ಯವೀರ್ಯಾದಿಗುಣಾನಾಮಾಕರೋ ಮಹಾನ್ ॥ ೫೪ ॥
ಪಾಂಡ್ಯಸ್ಯ ತನಯಾಂ ಪದ್ಮಾಮುಪಯೇಮೇ ಮನೋಹರಾಂ ।
ತತೋ ರಾಜಾ ಶತಂ ಕನ್ಯಾ ನಾನಾದೇಶ್ಯಾಃ ಸ್ವಯಂವರಾಃ ॥ ೫೫ ॥
ರೇಮೇ ದೇವೇಂದ್ರವದ್ಭೂಮೌ ನಾರಾಯಣಪುರೇ ವಸನ್ ।
ಅನುಜ್ಞಾಂ ಪ್ರಾಪ್ಯ ಪಿತೃತಃ ಪುತ್ರಃ ಪಂಚಾಸ್ಯವಿಕ್ರಮಃ ॥ ೫೬ ॥
ಉದ್ದಿಶ್ಯ ಮೃಗಯಾಂ ವೀರೋ ವೇಂಕಟಾದ್ರೇಃ ಸಮೀಪತಃ ॥ ೫೭ ॥
ಪಾದಚಾರೇಣ ವಿಚರನ್ಪರಿವಾರೈಃ ಸಮನ್ವಿತಃ ।
ಮದಧಾರಾಂ ವಿಮುಂಚಂತಂ ದದರ್ಶ ಗಜಯೂಥಪಂ ॥ ೫೮ ॥

---

ನಂತೆಯೇ ಪುಷ್ಪೋಪವನದ ಆರೈಕೆಯಲ್ಲಿ ನಿರತನಾಗಿ ಅದನ್ನು ಅಭಿವೃದ್ಧಿ ಗೊಳಿಸುತ್ತಿದ್ದನು.

೫೩–೫೪. ಇಂತು ಒಂದು ನೂರು ವರ್ಷಗಳು ಕಳೆಯುವವರೆಗೂ ಸೇವೆಯನ್ನು ಮಾಡಿ ಪ್ರಾಜ್ಞನಾದ ಆತನು ಸ್ವರ್ಗವಾಸಿಯಾದನು. ತರುವಾಯ ಅವನು ಉತ್ತಮವಾದ ಚಂದ್ರವಂಶದಲ್ಲಿ ತೊಂಡಮಾನನೆಂಬ ಉಪನಾಮಧೇಯವುಳ್ಳವನಾಗಿ ಹುಟ್ಟಿದನು. ಸುವೀರಮಹಾರಾಜನಿಗೆ ಪತ್ನಿಯಾದ ನಂದಿನಿಯೆಂಬ ಪಟ್ಟಮಹಿಷಿಯ ಗರ್ಭದಲ್ಲಿ ಜನನವನ್ನು ಪಡೆದನು. ಆತನು ಐದುವರ್ಷದ ಬಾಲ್ಯದಿಂದಲೇ ವಿಷ್ಣುಭಕ್ತಿಯುಳ್ಳವನೂ, ಮಹಾ ಬುದ್ಧಿಶಾಲಿಯೂ, ಸೌಶೀಲ್ಯ, ಔದಾರ್ಯ, ಶೌರ್ಯ, ಪರಾಕ್ರಮಾದಿ ಸದ್ಗುಣಗಳ ನಿಧಿಯೂ ಆಗಿದ್ದನು.

೫೫. ಮೊದಲು ಪಾಂಡ್ಯರಾಜನ ಮಗಳೂ, ಮನೋಹರೆಯೂ ಆದ ಪದ್ಮೆಯೆಂಬುವಳನ್ನು ಮದುವೆಯಾದನು. ಬಳಿಕ ಅನೇಕ ದೇಶಗಳಿಂದ ಸ್ವಯಂವರಗಳ ಮೂಲಕವಾಗಿ ಒಂದು ನೂರು ಕನ್ಯೆಯರನ್ನು ಪಾಣಿಗ್ರಹಣ ಮಾಡಿಕೊಂಡನು.

೫೬–೫೮. ಭೂಲೋಕದ ಮಹೇಂದ್ರನೆನಿಸಿಕೊಂಡು ನಾರಾಯಣಪುರಿಯಲ್ಲಿ ವಾಸಿಸುತ್ತ ಸಕಲ ಭೋಗಗಳನ್ನೂ ಅನುಭವಿಸುತ್ತಿದ್ದನು. ಒಂದಾನೊಂದು ದಿನ ಸಿಂಹವಿಕ್ರಮಿಯಾದ ಆತನು ತಂದೆಯಿಂದ ಅಪ್ಪಣೆಯನ್ನು ಪಡೆದು ಬೇಟೆಯಾಡುವ ಅಭಿಲಾಷೆಯಿಂದ ವೇಂಕಟಾಚಲದ ಸಮೀಪದಲ್ಲಿ ತನ್ನ ಅನುಚರರೊಡನೆ ಪಾದಚಾರಿಯಾಗಿಯೇ ಸುತ್ತುತ್ತ ಮದೋದಕವನ್ನು ಧಾರೆಧಾರೆಗಳಾಗಿ ಸುರಿಸುತ್ತ ಹೋಗುತ್ತಿದ್ದ ಒಂದು ಸಲಗನನ್ನು ಕಂಡನು.

ತಂ ದೃಷ್ಟ್ವಾ ವಿಸ್ಮಿತೋ ಭೂತ್ವಾ ಗ್ರಹೀತುಂ ತಮನುದ್ರುತಃ ।
ಸುವರ್ಣಮುಖರೀಂ ತೀರ್ತ್ವಾ ಬ್ರಹ್ಮರ್ಷಿಂ ಶುಕಮುತ್ತಮಂ ॥ ೫೯ ॥
ನಮಸ್ಕೃತ್ಯಾಭ್ಯನುಜ್ಞಾತಃ ತತೋಽಗಚ್ಛದ್ವನಾದ್ವನಂ ।
ದದರ್ಶ ರೇಣುಕಾಂ ದೇವೀಂ ವಲ್ಮೀಕಾಕಾರಸಂಸ್ಥಿತಾಂ ॥ ೬೦ ॥
ಇಷ್ಟದಾಮಿಷ್ಟಭಕ್ತಾನಾಂ ದಿವ್ಯಾರಾಮನಿವಾಸಿನೀಂ ।
ಪರಿವಾರೈಃ ಸದೋಪೇತಾಂ ಪೂಜಿತಾಂ ತ್ರಿದಶೈರಪಿ ॥ ೬೧ ॥
ತೊಂಡಮಾನಪಿ ತಾಂ ನತ್ವಾ ತತಃ ಪಶ್ಚಾನ್ಮುಖೋ ಯಯೌ ॥ ೬೨ ॥
ಪಂಚವರ್ಣಂ ಶುಕಂ ದೃಷ್ಟ್ವಾ ತಂ ಜಿಘೃಕ್ಷುರನುದ್ರುತಃ ।
ಸ ವದನ್ಶ್ರೀನಿವಾಸೇತಿ ಗಿರಿಂ ಶೀಘ್ರತರಂ ಯಯೌ ॥ ೬೩ ॥
ಅನುದ್ರವನ್ಸ ರಾಜಾಪಿ ಗಿರಿರಾಜಂ ಸಮಾರುಹತ್ ।
ದರೀಶ್ಚ ವಿವಿಧಾಃ ಪಶ್ಯನ್ಶಿಖರಾಣಿ ಸಮಂತತಃ ॥ ೬೪ ॥
ಶುಕಮನ್ವೇಷಮಾಣೋಽಸೌ ಶ್ಯಾಮಾಕವನಮೇಯಿವಾನ್ ।
ತಮದೃಷ್ಟ್ವಾ ಶುಕವರಂ ವನಪಾಲಂ ದದರ್ಶಹ ॥ ೬೫ ॥

---

೫೯–೬೧. ಅದನ್ನು ಕಂಡು ವಿಸ್ಮಯಗೊಂಡು ಅದನ್ನು ಹಿಡಿಯಬೇಕೆಂದು ಅದರ ಹಿಂದೆಯೇ ಓಡಿದನು. ಸುವರ್ಣಮುಖರೀ ನದಿಯನ್ನು ದಾಟಿ ಬ್ರಹ್ಮರ್ಷಿಯಾದ ಶ್ರೀ ಶುಕನನ್ನು ಕಂಡು ನಮಸ್ಕರಿಸಿ ಉತ್ತಮನಾದ ಆತನ ಅನುಜ್ಞೆಯನ್ನು ಪಡೆದು ವನದಿಂದ ವನಕ್ಕೆ ಸಂಚರಿಸುತ್ತಿದ್ದನು. ಆಗಲವನು ಹುತ್ತದ ರೂಪದಿಂದ ನಿಂತಿದ್ದ ರೇಣುಕಾದೇವಿಯನ್ನೂ ಕಂಡನು. ಆಕೆಯು ಪ್ರೀತಿಪಾತ್ರರಾದ ಭಕ್ತರಿಗೆ ಸಮಸ್ತ ಇಷ್ಟಾರ್ಥಗಳನ್ನು ಕೊಡುವವಳು. ದಿವ್ಯವಾದ ತೋಟದಲ್ಲಿ ವಾಸಿಸುವಳು. ನಿತ್ಯವೂ ಅನುಚರರಿಂದ ಸೇವಿತಳಾಗಿರುವಳು. ಇಂದ್ರಾದಿ ದೇವತೆಗಳೂ ಕೂಡ ಆಕೆಯನ್ನು ಪೂಜಿಸುತ್ತಿರುವರು.

೬೨. ತೊಂಡಮಾನ ಮಹಾರಾಜನೂ ಕೂಡ ಆಕೆಗೆ ನಮಸ್ಕರಿಸಿ ಬಳಿಕ ಪಶ್ಚಿಮಾಭಿಮುಖನಾಗಿ ಹೊರಟನು.

೬೩–೬೪. ದಾರಿಯಲ್ಲಿ ಪಂಚವರ್ಣದ ಗಿಳಿಯೊಂದನ್ನು ಕಂಡು ಅದನ್ನು ಹಿಡಿಯಬೇಕೆಂಬ ಬಯಕೆಯಿಂದ ಅದನ್ನೇ ಹಿಂಬಾಲಿಸಿದನು. ಆದರೆ ಅದು ಶ್ರೀನಿವಾಸನ ಹೆಸರನ್ನು ಕೂಗುತ್ತ ಬಹಳ ವೇಗವಾಗಿ ವೇಂಕಟಗಿರಿಯ ಕಡೆಗೆ ಹಾರಿಹೋಯಿತು. ಆ ರಾಜನೂ ಅದನ್ನೇ ಹಿಂಬಾಲಿಸಿ ದಾರಿಯಲ್ಲಿ ವಿಧವಿಧಗಳಾದ ಕಣಿವೆಗಳನ್ನೂ ಸುತ್ತಲೂ ಇರುವ ಪರ್ವತ ಶಿಖರಗಳನ್ನೂ ನೋಡುತ್ತ ಆ ಪರ್ವತೋತ್ತಮವನ್ನೇ ಏರಿದನು.

೬೫. ಆ ಗಿಳಿಯನ್ನೇ ಹುಡುಕಿಕೊಂಡು ಹೋಗುತ್ತಿರಲು ತೊಂಡಮಾನನು ಒಂದಾನೊಂದು ಸಾಮೆಯ ಹೊಲದ ಬಳಿಗೆ ಬಂದನು. ಉತ್ತಮವಾದ ಶುಕ

ತಂತು ರಾಜಾನಮಾಯಾಂತಂ ಪ್ರತ್ಯುದ್ಗಚ್ಛನ್ಸ ಸತ್ವರಃ ।
ಪ್ರಣಮ್ಯ ವಿನಯೋಪೇತಃ ಕೃತಾಂಜಲಿಪುಟಃ ಸ್ಥಿತಃ ॥ ೬೬ ॥
ತೊಂಡಮಾನಪಿ ಸಂಪೂಜ್ಯ ತಂ ಪಪ್ರಚ್ಛ ವನೇಚರಂ ।
ಪಂಚವರ್ಣಃ ಶುಕಃ ಕಶ್ಚಿದ್ದೃಷ್ಟಶ್ಚಾತ್ರಾಗತಸ್ತ್ವಯಾ ॥ ೬೭ ॥
ಶ್ರೀನಿವಾಸೇತಿ ಚ ವದನ್ಕ್ವ ಗತೋಽಸೌ ವನೇಚರ ॥ ೬೮ ॥

ವನೇಚರ ಉವಾಚ:—

ಸ ಪಂಚವರ್ಣೋ ರಾಜೇಂದ್ರ ಶ್ರೀನಿವಾಸಪ್ರಿಯಃ ಸದಾ ।
ಪಾರ್ಶ್ವವರ್ತೀ ಸದಾ ತಸ್ಯ ಶ್ರೀಭೂಮಿಭ್ಯಾಂ ವಿವರ್ಧಿತಃ ॥ ೬೯ ॥
ಸ್ವಾಮಿಪುಷ್ಕರಿಣೀತೀರೇ ಸದಾಸ್ತೇ ದೇವಸನ್ನಿಧೌ ।
ಗ್ರಹೀತುಂ ಸ ಶುಕಃ ಶ್ರೀಮಾನ್ನ ತು ಕೇನಾಪಿ ಶಕ್ಯತೇ ॥ ೭೦ ॥
ವಿಹೃತ್ಯ ಸ್ವೇಚ್ಛಯಾ ನಿತ್ಯಮಸ್ಮಿನ್ಗಿರಿವರೇ ಶುಭೇ ।
ದಿನಾಂತೇ ದೇವಮಾಸಾದ್ಯ ತತ್ಸಮೀಪೇ ವಸತ್ಯಯಂ ॥ ೭೧ ॥

---

ವನ್ನು ಕಾಣದೆ ಸುತ್ತಾಡುತ್ತ ಹೊಲವನ್ನು ಕಾಯುತ್ತಿದ್ದ ಬೇಡನೊಬ್ಬನನ್ನು ಕಂಡನು.

೬೬. ಆ ಬೇಡನು ಎದುರಿಗೆ ಬರುತ್ತಿರುವ ಮಹಾರಾಜನನ್ನು ಕಂಡು ಸಂಭ್ರಮದಿಂದ ಎದ್ದು ಸಮೀಪಿಸಿ ವಿನೀತಭಾವದಿಂದ ನಮಸ್ಕಾರವನ್ನು ಮಾಡಿ ಕೈಗಳನ್ನು ಜೋಡಿಸಿಕೊಂಡು ನಿಂತನು.

೬೭–೬೮. ತೊಂಡಮಾನನೂ ಆ ವನೇಚರನನ್ನು ಸತ್ಕರಿಸಿ "ಇಲ್ಲಿ ಪಂಚವರ್ಣದ ಗಿಳಿಯೊಂದು ಶ್ರೀನಿವಾಸನ ಹೆಸರನ್ನು ಕೂಗುತ್ತ ಹಾರಿಬಂದಿತು; ಎಲೈ ಬೇಡನೆ! ನೀನೇನಾದರೂ ಅದನ್ನು ಕಂಡೆಯ? ಅದು ಎಲ್ಲಿಗೆ ಹೋಯಿತು?" ಎಂಬುದಾಗಿ ಪ್ರಶ್ನೆಮಾಡಿದನು.

೬೯. ಬೇಡನು ಹೇಳುತ್ತಾನೆ:—"ಎಲೈ ಮಹಾರಾಜನೆ! ಆ ಪಂಚವರ್ಣದ ಗಿಳಿಯು ಶ್ರೀನಿವಾಸನಿಗೆ ಯಾವಾಗಲೂ ಅತ್ಯಂತ ಪ್ರಿಯವಾದುದು. ಆತನ ಪಾರ್ಶ್ವದಲ್ಲಿಯೇ ಯಾವಾಗಲೂ ಇದ್ದುಕೊಂಡು ಶ್ರೀದೇವಿ, ಭೂದೇವಿಯರಿಂದ ಪೋಷಿಸಲ್ಪಡುತ್ತಿರುವುದು.

೭೦. ಅದು ಯಾವಾಗಲೂ ಸ್ವಾಮಿಪುಷ್ಕರಿಣೀ ತೀರ್ಥದ ಸಮೀಪದಲ್ಲಿಯೇ ದೇವರ ಸನ್ನಿಧಿಯಲ್ಲಿರುವುದು. ಸರ್ವಲಕ್ಷಣಲಕ್ಷಿತವಾದ ಆ ಪಕ್ಷಿಯು ಯಾವಾಗಲೂ ಯಾರಿಂದಲೂ ಹಿಡಿಯಲ್ಪಡತಕ್ಕುದಲ್ಲ.

೭೧. ಅದು ನಿತ್ಯವೂ ಪಾವನವಾದ ಈ ಪರ್ವತ ಪ್ರದೇಶದಲ್ಲಿ ಮನಬಂದಂತೆ ವಿಹರಿಸುತ್ತ ಸಾಯಂಕಾಲವಾಗುತ್ತಲೆ ಶ್ರೀನಿವಾಸನನ್ನು ಸೇರಿ ಆತನ ಸಮೀಪದಲ್ಲಿಯೇ ವಾಸಮಾಡುತ್ತಿರುವುದು.

ತಂ ದೇವಮಾರಾಧಯಿತುಂ ಗಮಿಷ್ಯಾಮಿ ನೃಪಾತ್ಮಜ ।
ವಿಶ್ರಮ್ಯತಾಂ ವೃಕ್ಷಮೂಲೇ ಯಾವದಾಗಮನಂ ಮಮ ॥ ೭೨ ॥
ಪುತ್ರೇಣಾನೇನ ಸಹಿತೋ ವಿಹರ ತ್ವಂ ಯಥಾಸುಖಂ ॥ ೭೩ ॥

ರಾಜೋವಾಚ :—

ತ್ವಯಾ ಸಹಾಗಮಿಷ್ಯಾಮಿ ದ್ರಷ್ಟುಂ ದೇವಂ ಜನಾರ್ದನಂ ।
ತ್ವಂ ಮೇ ದರ್ಶಯ ದೇವೇಶಂ ವೇಂಕಟಾದ್ರಿನಿವಾಸಿನಂ ॥ ೭೪ ॥
ತಸ್ಯ ರಾಜ್ಞೋ ವಚಃ ಶ್ರುತ್ವಾ ಶ್ಯಾಮಾಕಂ ಮಧುಮಿಶ್ರಿತಂ ।
ಚೂತಪತ್ರಪುಟೇ ಕ್ಷಿಪ್ತ್ವಾ ರಾಜ್ಞಾ ಸಹ ಯಯೌ ಹರಿಂ ॥ ೭೫ ॥
ಗತ್ವಾ ಸುದೂರಮಧ್ವಾನಂ ಪಶ್ಯಂತೌ ತೌ ಶಿಲಾತಲಂ ।
ಮುಹೂರ್ತಾದೇವ ಸಂಪ್ರಾಪ್ತೌ ಸ್ವಾಮಿಪುಷ್ಕರಿಣೀಂ ಶುಭಾಂ ॥ ೭೬ ॥
ಸ್ನಾತ್ವಾ ತತ್ರ ವಿಧಾನೇನ ರಾಜ್ಞಾ ಸಹ ನಿಷಾದಪಃ ।
ದರ್ಶಯಾಮಾಸ ದೇವೇಶಂ ರಾಜ್ಞಸ್ತಸ್ಯ ಮಹಾತ್ಮನಃ ॥ ೭೭ ॥
ಸ್ವಾಮಿಪುಷ್ಕರಿಣೀತೀರೇ ಸ್ಥಿತಂ ಶ್ರೀವೃಕ್ಷಮೂಲಕೇ ।
ಅತಸೀಪುಷ್ಪಸಂಕಾಶಮಂಬುಜಾಯತಲೋಚನಂ ॥ ೭೮ ॥

---

೭೨–೭೩. ಎಲೈ ರಾಜಕುಮಾರನೆ! ಈಗ ನಾನು ಆ ದೇವತಾ ಸಾರ್ವಭೌಮನನ್ನೇ ಪೂಜಿಸಲು ಹೊರಡುತ್ತಿರುವೆನು. ನಾನು ಹಿಂದಿರುಗುವವರೆಗೂ ನೀನು ಈ ಮರದ ಬುಡದಲ್ಲಿಯೇ ಸ್ವಲ್ಪ ವಿಶ್ರಾಂತಿಯನ್ನು ತೆಗೆದುಕೊ. ಈ ನಿನ್ನ ಮಗನೊಡನೆ ನೀನು ಯಥೇಚ್ಛವಾಗಿ ವಿಹರಿಸುತ್ತಿರು."

೭೪. ರಾಜನು ಹೇಳುತ್ತಾನೆ:—"ನಾನು ನಿನ್ನೊಡನೆಯೇ ದೇವದೇವನಾದ ಮಹಾವಿಷ್ಣುವನ್ನು ನೋಡಲು ಬರುವೆನು. ನೀನೇ ವೇಂಕಟಾಚಲ ನಿವಾಸಿಯಾದ ಆ ದೇವೋತ್ತಮನನ್ನು ನನಗೆ ತೋರಿಸು."

೭೫–೭೬. ಇಂತೆಂದ ಮಹಾರಾಜನ ಮಾತುಗಳನ್ನು ಕೇಳಿ ಆ ಬೇಡನು ಸಾಮೆಯ ಅನ್ನವನ್ನು ಜೇನುತುಪ್ಪದೊಡನೆ ಬೆರಸಿ ಮಾವಿನ ಎಲೆಗಳ ಪಾತ್ರೆಯೊಂದರಲ್ಲಿ ತೆಗೆದುಕೊಂಡು ರಾಜನೊಡನೆ ಶ್ರೀ ಹರಿಯ ಸಮೀಪಕ್ಕೆ ಹೊರಟನು. ಬಹಳ ದೂರವಾದ ದಾರಿಯನ್ನು ನಡೆದು ಅವರಿಬ್ಬರೂ ಆ ಕಲ್ಲುಬಂಡೆಯನ್ನು ಕಂಡರು. ಬಳಿಕ ಮೂಹರ್ತದಲ್ಲಿಯೇ ಪಾವನವಾದ ಸ್ವಾಮಿ ಪುಷ್ಕರಿಣೀ ತೀರ್ಥವನ್ನು ಸಮೀಪಿಸಿದರು.

೭೭. ಆ ಬೇಡನು ರಾಜನೊಡನೆ ವಿಧ್ಯುಕ್ತರೀತಿಯಿಂದ ಅಲ್ಲಿ ಸ್ನಾನವನ್ನು ಮಾಡಿ ಮಹಾತ್ಮನಾದ ಆತನಿಗೆ ಸ್ವಾಮಿಯ ದರ್ಶನವನ್ನು ಮಾಡಿಸಿದನು.

೭೮. ವೇಂಕಟೇಶ್ವರನು ಸ್ವಾಮಿಪುಷ್ಕರಿಣಿಯ ತೀರದಲ್ಲಿರುವ ತಿಂತ್ರಿಣೀ

ಚತುರ್ಭುಜಮುದಾರಾಂಗವಿಶಾಷತ್ಸ್ಮಿತಮುಖಾಂಬುಜಂ ।
ದಿವ್ಯಪೀತಾಂಬರಧರಂ ಕಿರೀಟಕಟಕೋಜ್ಜ್ವಲಂ ॥ ೭೯ ॥
ಪಾರ್ಶ್ವಸ್ಥಾಭ್ಯಾಂ ಸುರೂಪಾಭ್ಯಾಂ ಶ್ರೀಭೂಮಿಭ್ಯಾಂ ಸಮನ್ವಿತಂ ।
ಪರಿತಃ ಶಂಖಚಕ್ರಾಸಿಗದಾಶಾರ್ಙ್ಗೇಷುಸೇವಿತಂ ॥ ೮೦ ॥
ಅನ್ಯೈರ್ದಿವ್ಯಾಯುಧೈಶ್ಚಾಪಿ ದಿವ್ಯಮಾಲ್ಯೈರ್ನಿಷೇವಿತಂ ।
ಸ್ಕಂದೇನಾರಾಧ್ಯಮಾನಂ ತಂ ತ್ರಿಸಂಧ್ಯಂ ಪುರುಷೋತ್ತಮಂ ॥ ೮೧ ॥
ವಲ್ಮೀಕಗೂಢಪಾದಾಬ್ಜಮಾಜಾನುಪುರುಷೋತ್ತಮಂ ।
ತತೋ ದೃಷ್ಟ್ವಾ ಮುದಾ ದೇವಂ ಪ್ರಣೇಮತುರುಭೌ ತದಾ ॥ ೮೨ ॥
ರಾಜಾ ತು ಪ್ರಾಂಜಲಿರ್ಭೂತ್ವಾ ವಿಸ್ಮಯೋತ್ಫುಲ್ಲಲೋಚನಃ ।
ಆನಂದಲಹರೀಂ ಪ್ರಾಪ್ಯ ನ ಪ್ರಾಜ್ಞಾಯತ ಕಿಂಚನ ॥ ೮೩ ॥
ನಿಷಾದೋಽಪಿ ನಿವೇದ್ಯೈವ ಶ್ಯಾಮಾಕಂ ಮಧುಮಿಶ್ರಿತಂ ।
ರಾಜ್ಞೇ ತದರ್ಧಂ ದತ್ತ್ವೈವ ಶಿಷ್ಟಾರ್ಧಂ ಭಕ್ತವಾನ್ಸ್ವಯಂ ॥ ೮೪ ॥

---

ವೃಕ್ಷದ ಬುಡದಲ್ಲಿ ನೆಲಸಿ ಅಗಸೆಯ ಹೂವಿನ ಮೈಬಣ್ಣದಿಂದಲೂ ಕಮಲಗಳಂತೆ ವಿಶಾಲಗಳಾದ ನೇತ್ರಗಳಿಂದಲೂ ಒಪ್ಪುತ್ತಿದ್ದನು.

೭೯. ನಾಲ್ಕು ಕೈಗಳುಳ್ಳವನಾಗಿ ದೀರ್ಘವಾದ ಬಾಹುಗಳಿಂದಲೂ, ಮುಗುಳ್ನಗೆಯಿಂದ ಕೂಡಿದ ಮುಖಪದ್ಮದಿಂದಲೂ ಕೂಡಿ ನಾರಾಯಣನು ದಿವ್ಯವಾದ ಪೀತಾಂಬರವನ್ನುಟ್ಟು ಕಿರೀಟ, ಕಟಕಗಳ ಕಾಂತಿಯಿಂದ ಶೋಭಿಸುತ್ತಿದ್ದನು.

೮೦. ಎರಡು ಕಡೆಗಳಲ್ಲಿಯೂ ಸರ್ವಾಂಗಸುಂದರಿಯರಾದ ಶ್ರೀಭೂದೇವಿಯರು ಸೇವಿಸುತ್ತಿರಲು, ಸುತ್ತಲೂ ಶಂಖ, ಚಕ್ರ, ಗದಾ, ಶಾರ್ಙ್ಗ, ಚಾಪಗಳೆಂಬ ಆಯುಧಗಳು ಸೇವೆಗೈಯುತ್ತಿದ್ದುವು.

೮೧. ಇತರ ದಿವ್ಯ ಆಯುಧಗಳಿಂದಲೂ, ದೇವಲೋಕದ ಪೂಮಾಲೆಗಳಿಂದಲೂ ವಿರಾಜಮಾನನಾದ ಪುರುಷೋತ್ತಮನು ಮೂರು ಸಂಧ್ಯಾಕಾಲಗಳಲ್ಲಿಯೂ ಷಣ್ಮುಖಸ್ವಾಮಿಯಿಂದ ಪೂಜಿಸಲ್ಪಡುತ್ತಿದ್ದನು.

೮೨. ಆತನ ಕಾಲುಗಳು ಹುತ್ತದಲ್ಲಿ ಹುದುಗಿಕೊಂಡಿದ್ದುವು. ಹಸ್ತಗಳು ಮೊಣಕಾಲುಗಳನ್ನು ಮುಟ್ಟುತ್ತಿದ್ದುವು. ಇಂತಹ ದೇವನನ್ನು ಕಂಡು ಸಂತೋಷದಿಂದ ಅವರಿಬ್ಬರೂ ಮತ್ತೆ ಮತ್ತೆ ನಮಸ್ಕರಿಸಿದರು.

೮೩. ರಾಜನಾದರೋ ಕೈಗಳನ್ನು ಜೋಡಿಸಿಕೊಂಡು ಆಶ್ಚರ್ಯದಿಂದ ಅರಳಿದ ಕಣ್ಣುಗಳುಳ್ಳವನಾಗಿ ಸಂತೋಷವೆಂಬ ಸಮುದ್ರದಲ್ಲಿ ಮುಳುಗುತ್ತ ಬಾಹ್ಯಪ್ರಪಂಚವನ್ನೇ ಅರಿಯಲಾರದಾಗಿದ್ದನು.

೮೪. ಆ ಬೇಡನು ತಾನು ತಂದಿದ್ದ ಸಾಮೆಯನ್ನವನ್ನು ಪರಮಾತ್ಮನಿಗೆ

ಪೀತ್ವಾ ಪುಷ್ಕರಿಣೀತೋಯಂ ತೇನ ರಾಜ್ಞಾ ಸಮನ್ವಿತಃ ।
ಸ ಪುನಃ ಶ್ಯಾಮಕವನೇ ಪುಣ್ಯಾಂ ಪರ್ಣಕುಟೀಂ ಯಯೌ ॥ ೮೫ ॥
ಉಷಿತ್ವಾ ಚೈಕರಾತ್ರಂ ತು ಪ್ರಾತರುತ್ಥಾಯ ಭೂಮಿಪಃ ।
ಸ್ವಸೈನ್ಯೇನ ಸಮಾಯುಕ್ತೋ ನಿವೃತ್ತಃ ಸ್ವಪುರಂ ಯಯೌ ॥ ೮೬ ॥
ಪುನರ್ದೇವೀವನಂ ಗತ್ವಾ ಹಯಾದವತತಾರ ಹ ।
ಚೈತ್ರಶುದ್ಧನವಮ್ಯಾಂ ತು ಪೂಜಯಾಮಾಸ ರೇಣುಕಾಂ ॥ ೮೭ ॥
ಹವಿಷ್ಯಂ ಪರಮಾನ್ನಂ ಚ ಸೋಪಸ್ಕರಮನೇಕಶಃ ।
ಪಶೂಪಹಾರಸಹಿತಂ ಧೂಪದೀಪಸಮನ್ವಿತಂ ॥ ೮೮ ॥
ಸುರಾಘಟೀಶತಂ ದತ್ವಾ ಜಾತೀಕೇಸರವಾಸಿತಂ ।
ಏವಂ ಸಂಪೂಜಿತಾ ದೇವೀ ಪ್ರೀತಾ ರಾಜ್ಞೇ ವರಂ ದದೌ ॥ ೮೯ ॥
ಆವಿಷ್ಟಃ ಪುರುಷಃ ಕಶ್ಚಿದವದನ್ನೃಪಸತ್ತಮಂ ।
ಶೃಣು ರಾಜನ್ಭವಿಷ್ಯಂ ತೇ ರಾಜ್ಯಂ ನಿಹತಕಂಟಕಂ ॥ ೯೦ ॥

---

ನಿವೇದನಮಾಡಿ ಅರ್ಧವನ್ನು ತೊಂಡುಮಾನರಾಜನಿಗೆ ಕೊಟ್ಟು ಉಳಿದರ್ಧವನ್ನು ತಾನೇ ಸೇವಿಸಿದನು.

೮೫. ಬಳಿಕ ಸ್ವಾಮಿಪುಷ್ಕರಿಣಿಯ ನೀರನ್ನು ಕುಡಿದು ರಾಜನೊಡನೆ ಕೂಡಿ ಮತ್ತೆ ಸಾಮೆಯ ಹೊಲದಲ್ಲಿದ್ದ ಪುಣ್ಯತಮವಾದ ಪರ್ಣಕುಟೀರವನ್ನು ಸೇರಿದನು.

೮೬. ಅಲ್ಲಿ ಮಹಾರಾಜನು ಒಂದು ರಾತ್ರಿ ಮಲಗಿದ್ದು ಪ್ರಾತಃಕಾಲದಲ್ಲಿ ಎಚ್ಚತ್ತು ತನ್ನ ಸೈನ್ಯವನ್ನು ಸೇರಿ ರಾಜಧಾನಿಗೆ ಹಿಂದಿರುಗಿದನು.

೮೭. ಮತ್ತೊಂದು ಸಲ ದೇವೀವನವನ್ನು ಸೇರಿ ಕುದುರೆಯಿಂದಿಳಿದು ರೇಣುಕಾದೇವಿಯನ್ನು ಚೈತ್ರ ಶುದ್ಧ ನವಮಿಯ ದಿವಸ ಪೂಜಿಸಿದನು.

೮೮–೮೯. ಅನೇಕ ವಿಧಗಳಾದ ಪರಿಕರಗಳಿಂದ ಕೂಡಿದ ಪರಮಾನ್ನವನ್ನೇ ಹೋಮದ್ರವ್ಯವನ್ನಾಗಿ ಮಾಡಿ ಪಶುಬಲಿಯೊಡನೆ ಧೂಪದೀಪಗಳನ್ನು ನಿವೇದಿಸಿ ಜಾತೀ ಕೇಸರಗಳಿಂದ ಸುವಾಸನೆಯನ್ನೊಡಗೊಂಡ ಒಂದು ನೂರು ಸುರಾಭಾಂಡ ಗಳನ್ನರ್ಪಿಸಿದನು. ಇಂತು ಪೂಜೆಯನ್ನು ಸ್ವೀಕರಿಸಿದ ದೇವಿಯು ಸಂತೋಷ ದಿಂದ ಮಹಾರಾಜನಿಗೆ ವರವನ್ನು ಕೊಟ್ಟಳು.

೯೦. ದೇವಿಯ ಆವೇಶನವನ್ನು ಹೊಂದಿದ ಪುರುಷನೊಬ್ಬನು ಮಹಾ ರಾಜನನ್ನು ಕುರಿತು ಇಂತೆಂದನು. "ಎಲೈ ರಾಜನೆ! ನಿನಗೆ ಮುಂದೆ ನಡೆಯುವ ಶುಭಗಳನ್ನು ತಿಳಿಸುವೆನು, ಕೇಳು. ನಿನ್ನ ರಾಜ್ಯವು ಈತಿಬಾಧೆಗಳಿಂದ ವರ್ಜಿತ ವಾಗಿರುವುದು.

ರಾಜಂಸ್ತ್ವನ್ನೈವ ನಾಮ್ನಾತ್ರ ರಾಜಧಾನೀ ಭವಿಷ್ಯತಿ ।
ಮತ್ಸನ್ನಿಧೌ ಮಹಾರಾಜ ಚಿರಂ ರಾಜ್ಯಂ ಕರಿಷ್ಯಸಿ ॥ ೯೧ ॥
ದೇವದೇವಪ್ರಸಾದಶ್ಚ ಭವಿಷ್ಯತಿ ತವಾನಘ ।
ಇತಿ ದತ್ವಾ ವರಂ ತಸ್ಮೈ ಆವಿಷ್ಟಃ ಪ್ರಕೃತಿಂ ಯಯೌ ॥ ೯೨ ॥
ತತೋ ಲಬ್ಧವರೋ ರಾಜಾ ಯಯೌ ಶುಕಮುನಿಂ ಪುನಃ ॥ ೯೩ ॥
ಅಭಿವಾದ್ಯ ಮುನಿಂ ತೇನ ಪೂಜಿತೋ ಮುದಿತೋಽಭವತ್ ।
ಮಾಹಾತ್ಮ್ಯಂ ಸರಸೋ ಬ್ರೂಹಿ ಕಮಲಾಖ್ಯಸ್ಯ ಮೇ ಮುನೇ ॥ ೯೪ ॥

ಶ್ರೀ ಶುಕ ಉವಾಚ :—

ಪುರಾ ದುರ್ವಾಸಸಃ ಶಾಪಾದವತೀರ್ಣಾ ಸುರಾಲಯಾತ್ ।
ಪದ್ಮಾ ಪದ್ಮಾಕ್ಷದಯಿತಾ ವಿಷ್ಣುನಾ ಸಹಿತಾ ನೃಪ ॥ ೯೫ ॥
ಸರಃ ಕಾಂಚನಪದ್ಮಾಢ್ಯಮಿದಂ ಪ್ರಾಪ್ಯ ಮಹೇಶ್ವರೀ ।
ತಪಶ್ಚಕಾರ ವರ್ಷಾಣಾಂ ದಿವ್ಯಾನಾಮಯುತಂ ರಮಾ ॥ ೯೬ ॥
ತತೋ ದೇವಾ ವಿಚಿನ್ವಂತಃ ಶ್ರಿಯಂ ವಿಷ್ಣುಸಮನ್ವಿತಾಂ ।
ಪುರಂದರೇಣ ಸಂಯುಕ್ತಾ ರಾಜನ್ನಸ್ಮಿನ್ಸರೋವರೇ ॥ ೯೭ ॥

---

೯೧. ನಿನ್ನ ಹೆಸರಿನಿಂದಲೇ ಇಲ್ಲಿ ಒಂದು ರಾಜಧಾನಿಯು ನಿರ್ಮಿತವಾಗುವುದು. ಮಹಾರಾಜ! ನೀನು ನನ್ನ ಸನ್ನಿಧಿಯಲ್ಲಿಯೇ ಬಹಳಕಾಲ ರಾಜ್ಯಭಾರವನ್ನು ನಡೆಸುತ್ತಿರುವೆ.

೯೨. ಎಲೈ ಪಾಪರಹಿತನೆ! ನಿನಗೆ ಪರಮಾತ್ಮನಾದ ಶ್ರೀ ಶ್ರೀನಿವಾಸನ ಅನುಗ್ರಹವೂ ಲಭಿಸುವುದು.'' ಇಂತೆಂದು ಮಹಾರಾಜನಿಗೆ ವರವನ್ನು ಕೊಟ್ಟು ಆವಿಷ್ಟನಾದ ಪುರುಷನು ಮತ್ತೆ ಮೊದಲಿನಂತೆಯೇ ಸ್ವಸ್ಥನಾದನು.

೯೩–೯೪. ರಾಜನೂ ವರಗಳನ್ನು ಪಡೆದು ಪುನಃ ಶುಕಮುನಿಯ ಹತ್ತಿರಕ್ಕೆ ಬಂದನು. ಆ ಮಹರ್ಷಿಗೆ ನಮಸ್ಕರಿಸಿ ಆತನಿಂದ ಸತ್ಕಾರವನ್ನು ಹೊಂದಿ ಸಂತೋಷಗೊಂಡು ''ಮುನಿಶ್ರೇಷ್ಠನೆ! ಈ ಕಮಲಾ ಸರೋವರದ ಮಾಹಾತ್ಮ್ಯೆವನ್ನು ನನಗೆ ತಿಳಿಸು'' ಎಂದು ಬೆಸಗೊಂಡನು.

೯೫–೯೬. ಶ್ರೀ ಶುಕನು ಹೇಳುತ್ತಾನೆ:— ಪೂರ್ವದಲ್ಲಿ ದುರ್ವಾಸಮಹರ್ಷಿಯ ಶಾಪದಿಂದ ಮಹಾಲಕ್ಷ್ಮಿಯು ತನ್ನ ಪತಿಯಾದ ಮಹಾವಿಷ್ಣುವಿನೊಡನೆ ದೇವಲೋಕದಿಂದ ಭೂಮಿಗಿಳಿದು ಬಂದಳು. ಕೆಂದಾವರೆಗಳಿಂದ ತುಂಬಿದ ಈ ಸರೋವರವನ್ನು ಕಂಡು ಲೋಕೇಶ್ವರಿಯಾದ ಆ ರಮಾದೇವಿಯು ಒಂದು ಸಾವಿರ ದಿವ್ಯ ವರ್ಷಗಳಕಾಲ ಇಲ್ಲಿಯೇ ತಪಸ್ಸನ್ನು ಮಾಡಿದಳು.

೯೭. ಆಗ ಮಹೇಂದ್ರನಿಂದೊಡಗೂಡಿದ ಸಕಲ ದೇವತೆಗಳೂ ನಾರಾಯಣ ಸಹಿತೆಯಾದ ಆಕೆಯನ್ನು ಹುಡುಕುತ್ತ ಈ ಸರೋವರದ ಸಮೀಪಕ್ಕೆ ಬಂದರು.

ಸ್ಥಿತಾಂ ಸುವರ್ಣಕಮಲೇ ಪುಂಡರೀಕಾಕ್ಷಸಂಯುತಾಂ ।
ದೃಷ್ಟ್ವಾ ಪ್ರೀತಿಸಮಾಯುಕ್ತಾಃ ಪ್ರಣಮ್ಯಾಂಬುಜಧಾರಿಣೀಂ ।
ಕೃತಾಂಜಲಿಪುಟಾಃ ಸೇಂದ್ರಾಸ್ತುಷ್ಟುವುರ್ಲೋಕಮಾತರಂ ॥ ೯೮ ॥

ದೇವಾ ಊಚುಃ :–

ನಮಃ ಶ್ರಿಯೈ ಲೋಕಧಾತ್ರ್ಯೈ ಬ್ರಹ್ಮಮಾತ್ರೇ ನಮೋನಮಃ ।
ನಮಸ್ತೇ ಪದ್ಮನೇತ್ರಾಯೈ ಪದ್ಮಮುಖ್ಯೈ ನಮೋನಮಃ ॥ ೯೯ ॥
ಪ್ರಸನ್ನಮುಖಪದ್ಮಾಯೈ ಪದ್ಮಕಾಂತ್ಯೈ ನಮೋನಮಃ ।
ನಮೋ ಬಿಲ್ವವನಸ್ಥಾಯೈ ವಿಷ್ಣುಪತ್ನ್ಯೈ ನಮೋನಮಃ ॥ ೧೦೦ ॥
ವಿಚಿತ್ರಕ್ಷೌಮಧಾರಿಣ್ಯೈ ಪೃಥುಶ್ರೋಣ್ಯೈ ನಮೋನಮಃ ।
ಪಕ್ವಬಿಲ್ವಫಲಾಪೀನತುಂಗಸ್ತನ್ಯೈ ನಮೋನಮಃ ॥ ೧೦೧ ॥
ಸುರಕ್ತಪದ್ಮಪತ್ರಾಭಕರಪಾದತಲೇ ಶುಭೇ ।
ಸುರತ್ನಾಂಗದಕೇಯೂರಕಾಂಚೀನೂಪುರಶೋಭಿತೇ ।
ಯಕ್ಷಕರ್ದಮಸಂಲಿಪ್ತಸರ್ವಾಂಗೇ ಕಟಕೋಜ್ವಲೇ ॥ ೧೦೨ ॥

---

೯೮. ಇಲ್ಲಿ ಹೊಂಬಣ್ಣದ ಕಮಲದಲ್ಲಿ ಶ್ರೀಮನ್ನಾರಾಯಣನೊಡನೆ ನೆಲಸಿ ಕಮಲಹಸ್ತೆಯಾಗಿದ್ದ ಲೋಕಮಾತೆಯನ್ನು ಕಂಡು ಇಂದ್ರಾದಿ ದೇವತೆಗಳು ಪರಮಾನಂದಭರಿತರಾಗಿ ಆಕೆಯನ್ನು ಸ್ತೋತ್ರಮಾಡತೊಡಗಿದರು.

೯೯. ದೇವತೆಗಳು ಸ್ತುತಿಸುತ್ತಾರೆ:— "ಲೋಕಮಾತೆಯೂ, ಬ್ರಹ್ಮನ ತಾಯಿಯೂ ಆದ ಓ ಶ್ರೀದೇವಿ! ನಿನಗೆ ನಮಸ್ಕಾರವು! ಪದ್ಮಗಳಂತೆ ವಿಶಾಲಗಳಾದ ನೇತ್ರಗಳೂ, ಕಮಲದಂತೆ ದುಂಡಾದ ಮುಖವೂ ಉಳ್ಳ ನಿನಗೆ ನಮಸ್ಕಾರವು!

೧೦೦. ಪ್ರಸನ್ನವಾದ ಮುಖಭಾವವುಳ್ಳವಳೂ, ಕಮಲವರ್ಣದ ಮೈಯುಳ್ಳವಳೂ, ಬಿಲ್ವಾರಣ್ಯದಲ್ಲಿ ವಾಸಿಸುವವಳೂ, ಮಹಾವಿಷ್ಣುವಿನ ಸತಿಯೂ ಆದ ನಿನಗೆ ನಮಸ್ಕರಿಸುವೆವು!

೧೦೧. ವಿಚಿತ್ರವಾದ ಪೀತಾಂಬರವನ್ನುಟ್ಟು ಪೀನಜಘನಗಳಿಂದಲೂ, ಪಕ್ವ ಬಿಲ್ವ ಫಲಗಳಂತೆ ಪೀನೋನ್ನತಗಳಾದ ಸ್ತನಗಳಿಂದಲೂ ಶೋಭಿಸುತ್ತಿರುವ ದೇವಿಗೆ ನಮಸ್ಕಾರವು!

೧೦೨. ಕೆಂಪಾದ ಪದ್ಮಪತ್ರಗಳನ್ನು ಹೋಲುವ ಅಂಗೈ, ಅಂಗಾಲುಗಳನ್ನುಳ್ಳ ಮಂಗಳಾಂಗಿಯೆ! ನವರತ್ನ ಖಚಿತಗಳಾದ ಅಂಗದ, ಕೇಯೂರ, ಕಾಂಚೀ, ನೂಪುರಾದಿ ಭೂಷಣಗಳಿಂದಲಂಕೃತಳಾದವಳೆ! ಯಕ್ಷಕರ್ದಮವೆಂಬ ಸುಗಂಧದ್ರವ್ಯದಿಂದ ಲೇಪಿತವಾದ ಶರೀರವುಳ್ಳವಳೆ! ಕೈಕಡಗಗಳಿಂದ ಶೋಭಿಸುವವಳೆ! ನಿನಗೆ ನಮೋ ನಮಃ !!

ಮಾಂಗಲ್ಯಾಭರಣೈಶ್ಚಿತ್ರೈರ್ಮುಕ್ತಾಹಾರೈರ್ವಿಭೂಷಿತೇ ।
ತಾಟಂಕೈರವತಂಸೈಶ್ಚ ಶೋಭಮಾನಮುಖಾಂಬುಜೇ ॥ ೧೦೩ ॥
ಪದ್ಮಹಸ್ತೇ ನಮಸ್ತುಭ್ಯಂ ಪ್ರಸೀದ ಹರಿವಲ್ಲಭೇ ।
ಋಗ್ಯಜುಃಸಾಮರೂಪಾಯೈ ವಿದ್ಯಾಯೈ ತೇ ನಮೋನಮಃ ॥ ೧೦೪ ॥
ಪ್ರಸೀದಾಸ್ಮಾನ್ಕೃಪಾದೃಷ್ಟಿಪಾತೈರಾಲೋಕಯಾಬ್ಧಿಜೇ ।
ಯೇ ದೃಷ್ಟಾಸ್ತೇ ತ್ವಯಾ ಬ್ರಹ್ಮರುದ್ರೇಂದ್ರತ್ವಂ ಸಮಾಪ್ನುಯುಃ ॥೧೦೫॥

ಶ್ರೀಶುಕ ಉವಾಚ :—

ಇತಿ ಸ್ತುತಾ ತದಾ ದೇವೈರ್ವಿಷ್ಣುವಕ್ಷಃಸ್ಥಲಾಲಯಾ ।
ವಿಷ್ಣುನಾ ಸಹ ಸಂದೃಶ್ಯಾ ರಮಾ ಪ್ರೀತಾವದತ್ಸುರಾನ್ ॥ ೧೦೬ ॥

ಶ್ರೀರುವಾಚ :—

ಸುರಾರೀನ್ಸಹಸಾ ಹತ್ವಾ ಸ್ವಪದಾನಿ ಗಮಿಷ್ಯಥ ।
ಯೇ ಸ್ಥಾನಹೀನಾಃ ಸ್ವಸ್ಥಾನಾದ್ಭ್ರಂಶಿತಾ ಯೇ ನರಾ ಭುವಿ ॥ ೧೦೭ ॥
ತೇ ಮಾಮನೇನ ಸ್ತೋತ್ರೇಣ ಸ್ತುತ್ವಾ ಸ್ಥಾನಮವಾಪ್ನುಯುಃ ।
ಅಖಂಡೈರ್ಬಿಲ್ವಪತ್ರೈರ್ಮಾಮರ್ಚಯಂತಿ ನರಾ ಭುವಿ ॥ ೧೦೮ ॥

---

೧೦೩. ನಾನಾವಿಧಗಳಾದ ಮಾಂಗಲ್ಯಭೂಷಣಗಳಿಂದಲೂ ಮುತ್ತಿನಹಾರಗಳಿಂದಲೂ ವಿಭೂಷಿತೆಯಾಗಿ ಕಿವಿಯೋಲೆಗಳಿಂದಲೂ ಅವತಂಸಗಳಿಂದಲೂ ಶೋಭಿತವಾದ ಮುಖಪದ್ಮವುಳ್ಳವಳೆ! ನಿನಗೆ ನಮಸ್ಕಾರವು!

೧೦೪. ಪದ್ಮಹಸ್ತೆಯಾದ ವಿಷ್ಣುಪ್ರಿಯೆಯೆ! ನಿನಗೆ ನಮಸ್ಕರಿಸುವೆವು. ನಮ್ಮಲ್ಲಿ ಪ್ರಸನ್ನಳಾಗು. ಋಗ್ಯಜುಸ್ಸಾಮಗಳೆಂಬ ಮೂರು ವೇದಗಳಲ್ಲಿರುವ ವಿದ್ಯೆಯೇ ಸ್ವರೂಪವಾಗಿರುವ ನಿನಗೆ ನಮಸ್ಕಾರವು.

೧೦೫. ಸಮುದ್ರದಲ್ಲಿ ಹುಟ್ಟಿದವಳೆ! ನಮ್ಮಲ್ಲಿ ಪ್ರಸಾದವನ್ನು ಮಾಡು. ನಿನ್ನ ಕೃಪಾಪೂರಿತಗಳಾದ ದೃಷ್ಟಿಪಾತಗಳಿಂದ ನಮ್ಮನ್ನು ನೋಡುವವಳಾಗು. ನಿನ್ನ ಕೃಪಾಕಟಾಕ್ಷಕ್ಕೆ ಪಾತ್ರರಾದವರೆಲ್ಲರೂ ಬ್ರಹ್ಮ, ರುದ್ರ, ಮಹೇಂದ್ರಾದಿಗಳ ಸ್ಥಾನಗಳನ್ನೂ ಪಡೆಯುವರು.''

೧೦೬. ಶ್ರೀ ಶುಕನು ಹೇಳುತ್ತಾನೆ:—ಇಂತೆಂದು ದೇವತೆಗಳಿಂದ ಸ್ತುತಿಸಲ್ಪಟ್ಟ ವಿಷ್ಣುವಕ್ಷೋನಿವಾಸಿನಿಯಾದ ಆ ದೇವಿಯು ಸಂತೋಷಗೊಂಡು ಮಹಾವಿಷ್ಣುವಿನೊಡನೆ ಪ್ರತ್ಯಕ್ಷಳಾಗಿ ದೇವತೆಗಳನ್ನು ಕುರಿತು ಹೇಳತೊಡಗಿದಳು.

೧೦೭–೧೦೯. ಲಕ್ಷ್ಮೀದೇವಿಯು ಹೇಳುತ್ತಾಳೆ:—'' ನೀವೆಲ್ಲರೂ ಅಸುರರಾದ ಶತ್ರುಗಳನ್ನು ನಿಗ್ರಹಿಸಿ ಶೀಘ್ರವಾಗಿಯೇ ನಿಮ್ಮ ನಿಮ್ಮ ಸ್ಥಾನಗಳನ್ನು ಪಡೆಯುವಿರಿ. ಯಾವ ಮನುಷ್ಯರು ಭೂಲೋಕದಲ್ಲಿ ನಿಕೃಷ್ಟರಾಗಿರುವರೊ, ಯಾರು ಸ್ವಸ್ಥಾನಗಳಿಂದ ಚ್ಯುತರಾಗಿರುವರೊ, ಅವರೆಲ್ಲರೂ ನನ್ನನ್ನು ಈ

ಸ್ತೋತ್ರೇಣಾನೇನ ಯೇ ದೇವಾ ನರಾ ಯುಷ್ಮತ್ಕೃತೇನ ವೈ ।
ಧರ್ಮಾರ್ಥಕಾಮಮೋಕ್ಷಾಣಾಮಾಕರಾಸ್ತೇ ಭವಂತಿ ವೈ ॥ ೧೦೯ ॥
ಇದಂ ಪದ್ಮಸರೋ ದೇವಾ ಯೇ ಕೇಚನ ನರಾ ಭುವಿ ।
ಪ್ರಾಪ್ಯ ಸ್ನಾನಂ ಕರಿಷ್ಯಂತಿ ಮಾಂ ಸ್ತುತ್ವಾ ವಿಷ್ಣುವಲ್ಲಭಾಂ ॥ ೧೧೦ ॥
ತೇಽಪಿ ಶ್ರಿಯಂ ದೀರ್ಘಮಾಯುರ್ವಿದ್ಯಾಂ ಪುತ್ರಾನ್ಸುವರ್ಚಸಃ ।
ಲಬ್ಧ್ವಾ ಭೋಗಾಂಶ್ಚ ಭುಕ್ತ್ವಾಂತೇ ನರಾ ಮೋಕ್ಷಮವಾಪ್ನುಯುಃ ॥
ಇತಿ ದತ್ವಾ ವರಂ ದೇವೀ ದೇವೇನ ಸಹ ವಿಷ್ಣುನಾ ।
ಆರುಹ್ಯ ಗರುಡೇಶಾನಂ ವೈಕುಂಠಸ್ಥಾನಮಾಯಯೌ ॥ ೧೧೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ
"ವಸುನಾಮಕ ನಿಷಾದವೃತ್ತಾಂತ–ಪದ್ಮಸರೋಮಾಹಾತ್ಮ್ಯಾದಿವರ್ಣನಂ"
ನಾಮ ನವಮೋಽಧ್ಯಾಯಃ

---

ಸ್ತೋತ್ರದಿಂದ ಸ್ತುತಿಸಲು ಉತ್ತಮಸ್ಥಾನಗಳನ್ನು ಹೊಂದುವರು. ಎಲೈ ದೇವತೆಗಳಿರಾ! ನಿಮ್ಮಿಂದ ಉಕ್ತವಾದ ಈ ಸ್ತವದಿಂದ ಭೂಲೋಕದ ಜನರು ನನ್ನನ್ನು ಅಖಂಡಗಳಾದ ಬಿಲ್ವದಳಗಳಿಂದ ಪೂಜಿಸಲು ಅವರು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳಿಗೂ ನೆಲೆಮನೆಗಳಾಗಿರುವರು.

೧೧೦–೧೧೧. ಭೂಲೋಕವಾಸಿಗಳಾದ ಯಾವ ಮನುಷ್ಯರಾದರೂ ಈ ಪದ್ಮಸರೋವರವನ್ನು ಸೇರಿ ವಿಷ್ಣುಪತ್ನಿಯಾದ ನನ್ನನ್ನು ಸ್ತುತಿಸುತ್ತ ಇದರಲ್ಲಿ ಸ್ನಾನವನ್ನು ಮಾಡುವರೊ, ಅವರೂ ಕೂಡ ಐಶ್ವರ್ಯವನ್ನೂ, ದೀರ್ಘಾಯುಸ್ಸನ್ನೂ, ತೇಜಸ್ವಿಗಳಾದ ಪುತ್ರರನ್ನೂ, ಇತರ ಮಾನುಷಭೋಗಗಳನ್ನೂ ಪಡೆದು ಕೊನೆಯಲ್ಲಿ ಮೋಕ್ಷಪದವಿಯನ್ನು ಹೊಂದುವರು."

೧೧೨. ಇಂತೆಂದು ದೇವತೆಗಳಿಗೆ ವರವನ್ನಿತ್ತು ಮಹಾಲಕ್ಷ್ಮಿಯು ಶ್ರೀಮನ್ನಾರಾಯಣನೊಡನೆ ಗರುಡವಾಹನವನ್ನೇರಿ ವೈಕುಂಠವನ್ನು ಕುರಿತು ಪ್ರಯಾಣಮಾಡಿದಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೆಂಕಟಾಚಲ
ಮಾಹಾತ್ಮ್ಯೆಯ ಧರಣೀ ವರಾಹ ಸಂವಾದದಲ್ಲಿ "ವಸುನಾಮಕ ನಿಷಾದವೃತ್ತಾಂತ–
ಪದ್ಮಸರೋಮಾಹಾತ್ಮ್ಯಾದಿವರ್ಣನ"ವೆಂಬ
ಒಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದಶಮೋಽಧ್ಯಾಯಃ

### ಭವಿಷ್ಯದ್ವರ್ಣನೇ ತೊಂಡಮಾಂಶ್ಚಕ್ರವರ್ತಿವೃತ್ತವರ್ಣನಂ

ಶ್ರೀ ಶುಕ ಉವಾಚ :—

ಇದಂ ಪದ್ಮಸರೋ ನಾಮ ರಾಜನ್ಪಾಪಪ್ರಣಾಶನಂ ।
ಕೀರ್ತನಾತ್ಸ್ಮರಣಾನ್ನೃಣಾಂ ನೂನಂ ಲಕ್ಷ್ಮೀಪ್ರದಂ ಭುವಿ ।
ಕೃತ್ವಾ ಸ್ನಾನಂ ತ್ವಮಪ್ಯಸ್ಮಿನ್ವ್ರಜ ಸ್ವಪಿತುರಂತಿಕಂ ॥ ೧ ॥

ಶ್ರೀ ವರಾಹ ಉವಾಚ :—

ಏತಚ್ಛುಕವಚಃ ಶ್ರುತ್ವಾ ಸ್ನಾತ್ವಾ ಪದ್ಮಸರೋವರೇ ।
ತಂ ನತ್ವಾ ಹಯಮಾರುಹ್ಯ ತೊಂಡಮಾನ್ಸ್ವಪುರಂ ಯಯೌ ॥ ೨ ॥
ತಂ ಪಿತಾ ಯುವರಾಜಾನಂ ಕೃತ್ವಾ ತ್ರೀನ್ವತ್ಸರಾನಥ ।
ರಂಜಕತ್ವಂ ಚ ಸಾಮರ್ಥ್ಯಂ ಶೌರ್ಯಂ ವೀರ್ಯಂ ಸುಶೀಲತಾಂ ॥ ೩ ॥
ಭಕ್ತಿಂ ವಿಪ್ರೇಷು ಪುತ್ರಸ್ಯ ವೀಕ್ಷ್ಯ ರಾಜಾ ಸ್ವಮಂತ್ರಿಭಿಃ ।
ಸ್ವಪದೇ ಸ್ಥಾಪಯಾಮಾಸ ಸ್ವಭಿಷಿಚ್ಯ ವಿಧಾನತಃ ॥ ೪ ॥
ಅನುಜ್ಞಾಪ್ಯ ಸುತಂ ಪತ್ನ್ಯಾ ಸಾರ್ಧಂ ರಾಜಾ ವನಂ ಯಯೌ ॥ ೫ ॥

---

## ಕನ್ನಡದ ಅನುವಾದ

### ಭವಿಷ್ಯದ್ವರ್ಣನ — ತೊಂಡಮಾನ ಚಕ್ರವರ್ತಿ ವೃತ್ತಾಂತವರ್ಣನ

೧. ಶುಕಮಹರ್ಷಿಯು ಹೇಳುತ್ತಾನೆ:—"ತೊಂಡಮಾನರಾಜನೆ! ಈ ಪದ್ಮಸರೋವರವು ಸಕಲ ಪಾಪಗಳನ್ನೂ ನಾಶಗೊಳಿಸುವುದು. ಈ ಲೋಕದಲ್ಲಿರುವ ಮನುಷ್ಯರಿಗೆ ಸ್ತೋತ್ರದಿಂದಲೂ ಸ್ಮರಣೆಯಿಂದಲೂ ಸಕಲೈಶ್ವರ್ಯಗಳನ್ನು ಕೊಡುವುದು. ನೀನೂ ಸಹ ಇಲ್ಲಿ ಸ್ನಾನವನ್ನು ಮಾಡಿಕೊಂಡು ತಂದೆಯ ಸಮೀಪವನ್ನು ಸೇರುವವನಾಗು."

೨. ವರಾಹಸ್ವಾಮಿಯು ಹೇಳುತ್ತಾನೆ:—ಇಂತೆಂದ ಶುಕಬ್ರಹ್ಮನ ಮಾತುಗಳನ್ನು ಕೇಳಿ ತೊಂಡಮಾನನು ಪದ್ಮಸರೋವರದಲ್ಲಿ ಸ್ನಾನವನ್ನು ಮಾಡಿಕೊಂಡು ಶುಕನಿಗೆ ನಮಸ್ಕರಿಸಿ ತನ್ನ ಕುದುರೆಯನ್ನೇರಿ ರಾಜಧಾನಿಗೆ ಹಿಂದಿರುಗಿದನು.

೩–೫. ಆತನ ತಂದೆಯು ಕಾಲಕ್ರಮದಲ್ಲಿ ಆತನಿಗೆ ಯೌವರಾಜ್ಯಾಭಿಷೇಕವನ್ನು ಮಾಡಿದನು. ತರುವಾಯ ಮೂರು ವರ್ಷಗಳಕಾಲ ಆತನ ಜನರಂಜನೆಯನ್ನೂ, ಸಾಮರ್ಥ್ಯವನ್ನೂ, ಶೌರ್ಯವೀರ್ಯಗಳನ್ನೂ, ಸೌಶೀಲ್ಯವನ್ನೂ, ಬ್ರಾಹ್ಮಣರಲ್ಲಿರುವ ಭಕ್ತಿಯನ್ನೂ ಕಂಡು ಸಂತುಷ್ಟನಾಗಿ ಮಂತ್ರಿಗಳೊಡನೆ ಕೂಡಿ ವಿಧ್ಯುಕ್ತರೀತಿಯಿಂದ ಅಭಿಷೇಕವನ್ನು ಮಾಡಿಸಿ ತನ್ನ ಸಿಂಹಾಸನದಲ್ಲಿ

ತೊಂಡಮಾನಪಿ ಸಾಮ್ರಾಜ್ಯಂ ಲಬ್ಧ್ವಾ ರಾಜ್ಯಂ ಚಕಾರ ಹ ।
ನಿಷಾದಸ್ಯ ವನೇ ದೇವೋ ವಾರಾಹಂ ರೂಪಮಾಸ್ಥಿತಃ ॥ ೬ ॥
ಶ್ಯಾಮಾಕಪಕ್ವಂ ಭಕ್ಷಿತ್ವಾ ರಾತ್ರೌ ರಾತ್ರೌ ಚಚಾರ ಹ ।
ಪದಾನಿ ಸ ವರಾಹಸ್ಯ ಚಾನ್ವಿಯೇಽಷ ದಿವಾ ದಿವಾ ॥ ೭ ॥
ಅದೃಷ್ಟ್ವಾತು ತಂ ವರಾಹಂ ಸ ರಾತ್ರೌ ಜಾಗ್ರದ್ಧನುರ್ಧರಃ ।
ಸ್ಥಿತೋಽಪಶ್ಯಚ್ಚರಂತಂ ತಂ ಚಂದ್ರಕೋಟಿಸಮಪ್ರಭಂ ॥ ೮ ॥
ವರಾಹಂ ಸುಭಗಾಕಾರಂ ಶ್ಯಾಮಾಕವನಮಧ್ಯತಃ ।
ತಂ ದೃಷ್ಟ್ವಾತು ಧನುರಾದಾಯ ಸಿಂಹನಾದಂ ಚಕಾರ ಹ ॥ ೯ ॥
ವರಾಹಸ್ತದ್ಧ್ವನಿಂ ಶ್ರುತ್ವಾ ವನಾನ್ನಿಷ್ಕ್ರಮ್ಯ ಸತ್ವರಂ ।
ಯಯೌ ತಂ ಚಾಪ್ಯನುಯಯೌ ವರಾಹಂ ಸ ನಿಷಾದಪಃ ॥ ೧೦ ॥
ರಾತ್ರಿಶೇಷಮನುದ್ರುತ್ಯ ವನೇ ಚಂದ್ರಸಮಪ್ರಭಂ ।
ವಲ್ಮೀಕಂ ಪ್ರವಿಶಂತಂ ಚ ದದರ್ಶ ಸ ನಿಷಾದಪಃ ॥ ೧೧ ॥

---

ಕುಳ್ಳಿರಿಸಿದನು. ಮತ್ತು ಮಗನಿಗೆ ಅನುಜ್ಞೆಯನ್ನು ಕೊಟ್ಟು ತಾನು ಪತ್ನಿಯೊಡನೆ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದನು.

೬–೮. ತೊಂಡಮಾನನೂ ತಂದೆಯ ಸಾಮ್ರಾಜ್ಯವನ್ನು ಪಡೆದು ಧರ್ಮ ದಿಂದ ರಾಜ್ಯಭಾರವನ್ನು ಮಾಡುತ್ತಿದ್ದನು. ವೇಂಕಟಶೈಲದಲ್ಲಿ ಪರಮಾತ್ಮನು ವರಾಹರೂಪವನ್ನು ಧರಿಸಿಕೊಂಡು ವಸುವೆಂಬ ನಿಷಾದನ ಹೊಲದಲ್ಲಿ ಪಕ್ವವಾದ ಸಾಮೆಯ ತೆನೆಗಳನ್ನೆಲ್ಲ ಭಕ್ಷಿಸುತ್ತ ಪ್ರತಿ ರಾತ್ರಿಯಲ್ಲಿಯೂ ಸಂಚರಿಸುತ್ತಿದ್ದನು. ಅವನು ಪ್ರತಿದಿವಸವೂ ಆ ವರಾಹದ ಹೆಜ್ಜೆಗಳ ಗುರುತನ್ನು ಹಿಡಿದು ಅದಕ್ಕಾಗಿ ಹುಡುಕುತ್ತಿದ್ದನು. ಬಹಳ ದಿವಸಗಳು ಆ ವರಾಹವನ್ನು ಕಾಣದೆ ಹೋಗಲು ಒಂದಾನೊಂದು ರಾತ್ರಿಯಲ್ಲಿ ಬಿಲ್ಲನ್ನು ಸಜ್ಜುಗೊಳಿಸಿ ಜಾಗ್ರತೆಯಾಗಿ ಹೊಂಚು ಹಾಕುತ್ತಿದ್ದನು. ಆಗ ಕೋಟಿಚಂದ್ರರಿಗೆ ಸಮಾನವಾದ ಕಾಂತಿಯಿಂದ ಹೊಳೆಯುತ್ತಿದ್ದ ಹಂದಿಯೊಂದು ಓಡಾಡುತ್ತಿದ್ದುದನ್ನು ಕಂಡನು.

೯. ಮನೋಹರವಾದ ರೂಪವುಳ್ಳ ಆ ವರಾಹವು ಸಾಮೆಯ ಹೊಲದ ಮಧ್ಯದಲ್ಲಿದ್ದುದನ್ನು ಕಂಡು ನಿಷಾದನು ತನ್ನ ಧನುಸ್ಸನ್ನು ತೆಗೆದುಕೊಂಡು ಸಿಂಹ ನಾದವನ್ನು ಮಾಡಿದನು.

೧೦. ವರಾಹವು ಆ ಶಬ್ದವನ್ನು ಕೇಳಿ ತಕ್ಷಣವೇ ಅಲ್ಲಿಂದ ಹೊರಕ್ಕೆ ಬಂದು ಓಡತೊಡಗಿತು. ಆ ಬೇಡನೂ ಅದನ್ನು ಹಿಂಬಾಲಿಸಿ ಓಡುತ್ತಿದ್ದನು.

೧೧. ಇಂತು ಉಳಿದ ರಾತ್ರಿಯನ್ನೆಲ್ಲ ಕಳೆದು ಮುಂಜಾನೆಯ ಹೊತ್ತಿಗೆ ಚಂದ್ರಸಮಾನವಾಗಿ ಹೊಳೆಯುತ್ತಿರುವ ಹುತ್ತದೊಳಗೆ ವರಾಹವು ಸೇರಿಕೊಂಡುದನ್ನು ಆ ನಿಷಾದನು ಕಂಡನು.

ಗಚ್ಛಂತಂ ಪೂರ್ಣಿಮಾಚಂದ್ರಮಸ್ತಂ ಗಿರಿವರಂ ಯಥಾ ।
ವಿಸ್ಮಿತೋಽಖಾನಯತ್ಕೋಪಾದ್ವಲ್ಮೀಕಂ ಸ ನಿಷಾದಪಃ ॥ ೧೨ ॥
ಧರಾವರಾಹೋ ದದೃಶೇ ಮೂರ್ಛಿತೋಽಯಂ ಪಪಾತ ಹ ।
ಪಿತರಂ ಮೂರ್ಛಿತಂ ದೃಷ್ಟ್ವಾ ತತ್ಪುತ್ರೋ ಭಕ್ತಿಮಾಂಸ್ತದಾ ॥ ೧೩ ॥
ವರಾಹದೇವಂ ತುಷ್ಟಾವ ತೇನ ಪ್ರೀತೋಽಭವದ್ಧರಿಃ ।
ಆವಿಶ್ಯ ಪಿತರಂ ತಸ್ಯ ಪ್ರೋವಾಚ ಮಧುಸೂದನಃ ॥ ೧೪ ॥

ಶ್ರೀ ಭಗವಾನುವಾಚ :—

ಅಹಂ ವರಾಹದೇವೇಶೋ ನಿತ್ಯಮಸ್ಮಿನ್ನಸಾಮ್ಯಹಂ ।
ರಾಜ್ಞೇ ತ್ವಮುಕ್ತ್ವಾ ಮಾಮತ್ರ ಪ್ರತಿಷ್ಠಾಪ್ಯೈವ ಪೂಜಯ ॥ ೧೫ ॥
ವಲ್ಮೀಕಂ ಕೃಷ್ಣಗೋಕ್ಷೀರೈಃ ಕ್ಷಾಲಯಿತ್ವಾ ತದುತ್ಥಿತೇ ।
ಶಿಲಾತಲೇ ಚ ವಾರಾಹಮುದ್ಧೃತ್ಯ ಧರಣೀಸ್ಥಿತಂ ॥ ೧೬ ॥
ಕಾರಯಿತ್ವಾ ಪ್ರತಿಷ್ಠಾಪ್ಯ ವಿಪ್ರೈರ್ವೈಖಾನಸೈಶ್ಚ ಮಾಂ ।
ಪೂಜಯೇದ್ವಿವಿಧೈರ್ಭೋಗೈಸ್ತೊಂಡಮಾನ್ರಾಜಸತ್ತಮಃ ॥ ೧೭ ॥

---

೧೨. ಹುಣ್ಣಿಮೆಯ ಚಂದ್ರನು ಪಶ್ಚಿಮ ಗಿರಿಯಲ್ಲಿ ಮುಳುಗಿದಂತೆ ಆ ವರಾಹವು ವಲ್ಮೀಕದಲ್ಲಿ ಅದೃಶ್ಯವಾಗಲು ಬೇಡನು ವಿಸ್ಮಯಗೊಂಡರೂ ತನಗೆ ಕ್ಲೇಶವನ್ನುಂಟುಮಾಡಿದ ವರಾಹದ ಮೇಲಿನ ಕೋಪದಿಂದ ಹುತ್ತವನ್ನು ಅಗೆಯತೊಡಗಿದನು.

೧೩–೧೪. ಅದರಲ್ಲಿ ಕಂಡ ಭೂವರಾಹಮೂರ್ತಿಯ ಸ್ವರೂಪವನ್ನು ಕಂಡು ಆ ನಿಷಾದನು ಮೂರ್ಛಿತನಾಗಿ ನೆಲದಲ್ಲಿ ಬಿದ್ದನು. ತಂದೆಯು ನಿಶ್ಚೇಷ್ಟನಾದು ದನ್ನು ಕಂಡು ಮಗನು ಭಕ್ತಿಯಿಂದ ವರಾಹಸ್ವಾಮಿಯನ್ನು ಸ್ತೋತ್ರಮಾಡಲು ಆತನು ಆ ಸ್ತೋತ್ರದಿಂದ ಸಂತುಷ್ಟನಾದನು. ಮತ್ತು ಭಗವಂತನು ತಂದೆ ಯಾದ ವಸುವಿನ ದೇಹದಲ್ಲಿ ಆವೇಶವನ್ನು ಮಾಡಿ ಹೇಳತೊಡಗಿದನು.

೧೫. ಭಗವಂತನು ಹೇಳುತ್ತಾನೆ:— "ನಾನೇ ವರಾಹಸ್ವಾಮಿಯು. ದೇವತೆಗಳಿಗೆ ಒಡೆಯನು. ನಿತ್ಯದಲ್ಲಿಯೂ ಇಲ್ಲಿ ವಾಸಿಸುತ್ತಿರುವೆನು. ಈ ವಿಷಯ ವನ್ನು ರಾಜನಿಗೆ ತಿಳಿಸಿ ನನ್ನ ಮೂರ್ತಿಯನ್ನು ಇಲ್ಲಿಯೇ ಪ್ರತಿಷ್ಠೆಮಾಡಿಸಿ ಪೂಜಿಸುತ್ತಿರು.

೧೬–೧೭. ಈ ಹುತ್ತವನ್ನು ಕರಿಯ ಆಕಳಿನ ಹಾಲಿನಿಂದ ತೊಳೆದು ಕರಗಿಸಿ ಅದರಲ್ಲಿ ಸಿಕ್ಕುವ ಕಲ್ಲಿನೊಳಗೆ ಭೂಸಹಿತನಾದ ವರಾಹಮೂರ್ತಿಯನ್ನು ಕೆತ್ತಿಸಿ ಬ್ರಾಹ್ಮಣರಿಂದಲೂ ಮಹರ್ಷಿಗಳಿಂದಲೂ ನನ್ನನ್ನು ಪ್ರತಿಷ್ಠೆಗೊಳಿಸಿ ಚಕ್ರವರ್ತಿ ಯಾದ ತೊಂಡಮಾನನು ನಾನಾವಿಧ ಸೇವೆಗಳಿಂದ ಪೂಜಿಸಬೇಕು."

ಇತ್ಯುಕ್ತ್ವಾ ತಂ ಜಹೌ ದೇವಃ ಸ ಚ ಸ್ವಸ್ಥೋ ಬಭೂವ ಹ ।
ಸುಖಾಸೀನಂ ತು ಪಿತರಂ ನಮಸ್ಕೃತ್ಯ ನಿಷಾದಜಃ ॥ ೧೮ ॥
ನ್ಯವೇದಯದ್ದೇವವಚಃ ಪಿತ್ರೇ ಸರ್ವಂ ಯಥಾತಥಂ ।
ಸ ಶ್ರುತ್ವಾ ವಿಸ್ಮಿತೋ ಭೂತ್ವಾ ಕೃತ್ಸ್ನಂ ಪುತ್ರವಚಃ ಶುಭಂ ॥ ೧೯ ॥
ರಾಜ್ಞೇ ವಕ್ತುಂ ಯಯೌ ಶೀಘ್ರಂ ನಿಷಾದಃ ಸ್ವಾನುಗೈಃ ಸಹ ।
ವಸುರ್ನಿಷಾದಾಧಿಪತೀ ರಾಜದ್ವಾರಮುಪಾಗಮತ್ ॥ ೨೦ ॥
ನಿಷಾದಾಧಿಪಮಾಜ್ಞಾಯ ದ್ವಾರಪಾಲೈರ್ನೃಪೋತ್ತಮಃ ।
ಆಹೂಯ ತಂ ನಿಷಾದೇಶಂ ಸಭಾಯಾಂ ಮಂತ್ರಿಭಿಸ್ಸಹ ॥ ೨೧ ॥
ಸತ್ಕೃತ್ಯ ತಂ ವಸುಂ ರಾಜಾ ಸಪುತ್ರಂ ಸಪರಿಚ್ಛದಂ ।
ಪಪ್ರಚ್ಛ ಪ್ರೀತಿಮಾನ್ರಾಜಾ ವಸುಂ ತಂ ವನಗೋಚರಂ ।
ಕಿಮಾಗಮನಕೃತ್ಯಂ ತೇ ವದ ತ್ವಂ ವನಗೋಚರ ॥ ೨೨ ॥

ವಸುರುವಾಚ:—

ರಾಜನ್ಮಯಾ ವನೇ ದೃಷ್ಟಮಾಶ್ಚರ್ಯಂ ಶ್ರುಣು ಭೂಪತೇ ॥ ೨೩ ॥
ಕಶ್ಚಿಚ್ಛ್ವೇತವರಾಹಸ್ತು ಶ್ಯಾಮಾಕಮಚರನ್ನಿಶಿ ।
ತಂ ವರಾಹಂ ಧನುಷ್ಪಾಣಿರನ್ವಧಾವಮಹಂ ನೃಪ ॥ ೨೪ ॥

---

೧೮–೨೦. ಇಂತೆಂದು ಅಪ್ಪಣೆಯನ್ನು ಮಾಡಿ ಸ್ವಾಮಿಯು ಆತನ ದೇಹವನ್ನು ಬಿಡಲು ನಿಷಾದಾಧಿಪತಿಯು ಮುನ್ನಿನಂತೆಯೇ ಜಾಗ್ರತನಾದನು. ಬಳಿಕ ಸುಖಾಸೀನನಾಗಿದ್ದ ತಂದೆಗೆ ನಮಸ್ಕರಿಸಿ ಮಗನು ನಡೆದುದೆಲ್ಲವನ್ನೂ ಭಗವದಾಜ್ಞಾಸಹಿತವಾಗಿ ತಿಳಿಸಿದನು. ಆತನೂ ಮಗನ ಮಂಗಳಕರಗಳಾದ ಆ ಮಾತುಗಳೆಲ್ಲವನ್ನೂ ಕೇಳಿ ವಿಸ್ಮಯವನ್ನು ಹೊಂದಿ ತನ್ನ ಅನುಚರರೊಡನೆ ಹೊರಟು ರಾಜನಿಗೆ ಎಲ್ಲವನ್ನೂ ಹೇಳಲು ನಿಶ್ಚಯಿಸಿದನು. ಮತ್ತು ನಿಷಾದನಾಯಕನಾದ ವಸುವು ಮಹಾರಾಜನ ಅರಮನೆಯ ಬಾಗಿಲಿನಲ್ಲಿ ಬಂದು ನಿಂತನು.

೨೧–೨೨. ಆ ಮಹಾರಾಜನು ದ್ವಾರಪಾಲಕರಿಂದ ಬೇಡರೊಡೆಯನು ಬಂದಿರುವುದನ್ನು ತಿಳಿದು ಮಂತ್ರಿಗಳೊಡನೆ ಕೂಡಿದ ಸಭಾಮಂಟಪಕ್ಕೆ ಆತನನ್ನು ಕರೆಸಿಕೊಂಡು ಪುತ್ರಪರಿವಾರ ಸಮೇತನಾದ ಆತನಿಗೆ ಉಚಿತಸತ್ಕಾರವನ್ನು ಮಾಡಿ ಕುಳ್ಳಿರಿಸಿ ''ಎಲೈ ವನನಾಯಕನೆ! ನೀನು ಇಲ್ಲಿಗೆ ಬಂದ ಕಾರಣವೇನು? ತಿಳಿಸು'' ಎಂದು ಪ್ರೀತಿಯಿಂದ ಕೇಳಿದನು.

೨೩. ವಸುವು ಹೇಳುತ್ತಾನೆ:—''ಎಲೈ ಮಹಾರಾಜನೆ! ನನಗೆ ಅರಣ್ಯದಲ್ಲಿ ಹಿರಿದಾದ ಆಶ್ಚರ್ಯವೊಂದು ಕಾಣಿಸಿತು, ಕೇಳುವವನಾಗು.

೨೪. ಒಂದಾನೊಂದು ಬಿಳಿಯ ಕಾಡುಹಂದಿಯು ಪ್ರತಿ ರಾತ್ರಿಯಲ್ಲಿಯೂ

ಅನುದ್ರುತೋ ವಾಯುವೇಗೋ ಗತ್ವಾ ವಲ್ಮೀಕಮಾವಿಶತ್ ।
ಸ್ವಾಮಿಪುಷ್ಕರಿಣೀತೀರೇ ಪಶ್ಯತೋ ಮಮ ಭೂಪತೇ ॥ ೨೫ ॥
ವಲ್ಮೀಕಮುಖನಂ ಕ್ರೋಧಾನ್ಮೂರ್ಛಿತೋ ನ್ಯಪತಂ ಭುವಿ ।
ಮತ್ಪುತ್ರೋಽಯಂ ಸಮಾಗತ್ಯ ಮಾಂ ದೃಷ್ಟ್ವಾ ಮೂರ್ಛಿತಂ ಭುವಿ ॥
ಶುಚಿರ್ಭೂತ್ವಾ ದೇವದೇವಂ ತುಷ್ಟಾವ ಮಧುಸೂದನಂ ।
ತತೋ ಮಯಿ ಸಮಾವಿಶ್ಯ ವರಾಹೋಽಭ್ಯವದತ್ಸುತಂ ॥ ೨೭ ॥
ರಾಜ್ಞೇ ನಿವೇದಯ ಕ್ಷಿಪ್ರಂ ಮಚ್ಚರಿತ್ರಂ ನಿಷಾದಪ ।
ಕೃಷ್ಣಗೋಕ್ಷೀರಸೇಕೇನ ವಲ್ಮೀಕಂ ಕ್ಷಾಲಯೇನ್ನೃಪಃ ॥ ೨೮ ॥
ದೃಶ್ಯತೇ ಚ ಶಿಲಾ ಕಾಚಿದ್ವಲ್ಮೀಕಸ್ಥಾ ಸುಶೋಭನಾ ।
ವಾಮಾಂಕಸ್ಥಭುವಂ ಮಾಂ ಚ ವರಾಹವದನಂ ಸ್ಥಿತಂ ॥ ೨೯ ॥
ಕಾರಯಿತ್ವಾ ಶಿಲ್ಪಿನಾಥ ಪ್ರತಿಷ್ಠಾಪ್ಯ ಮುನೀಶ್ವರೈಃ ।
ವೈಖಾನಸೈರ್ಮುನಿವರೈರರ್ಚಯೇತ್ತೊಂಡಮಾನಪಿ ॥ ೩೦ ॥

---

ನನ್ನ ಸಾಮೆಯ ತೆನೆಗಳನ್ನು ಭಕ್ಷಿಸುತ್ತಿದ್ದಿತು. ಒಂದು ದಿನ ನಾನು ಬಿಲ್ಲನ್ನು ಕೈಯಲ್ಲಿ ಹಿಡಿದು ಅದನ್ನು ಹಿಂಬಾಲಿಸಿ ಓಡಿದೆನು.

೨೫. ಎಲೈ ಭೂಪತಿಯೆ! ನನ್ನಿಂದ ಓಡಿಸಲ್ಪಟ್ಟ ಆ ಮೃಗವು ವಾಯು ವೇಗದಿಂದ ಹೋಗುತ್ತ ನಾನು ನೋಡುತ್ತಿರುವಂತೆಯೇ ಸ್ವಾಮಿಪುಷ್ಕರಿಣಿಯ ತೀರದಲ್ಲಿರುವ ಒಂದು ಹುತ್ತವನ್ನು ಪ್ರವೇಶಿಸಿತು.

೨೬–೨೭. ನಾನು ಕೋಪದಿಂದ ಆ ಹುತ್ತವನ್ನು ಬಗೆಯಲು ಹೊರಟು ಮೂರ್ಛಿತನಾಗಿ ನೆಲದಲ್ಲಿ ಬಿದ್ದೆನು. ಈ ನನ್ನ ಪುತ್ರನು ಅಲ್ಲಿಗೆ ಬಂದು ನಾನು ನಿಶ್ಚೇಷ್ಟನಾಗಿ ಭೂಮಿಯಲ್ಲಿ ಬಿದ್ದಿರುವುದನ್ನು ಕಂಡು ಶುಚಿರ್ಭೂತನಾಗಿ ದೇವ ದೇವನಾದ ಮಧುಸೂದನನನ್ನು ಸ್ತೋತ್ರ ಮಾಡತೊಡಗಿದನು. ಆಗ ವರಾಹ ಸ್ವಾಮಿಯು ನನ್ನ ದೇಹದಲ್ಲಿ ಆವಿಷ್ಟನಾಗಿ ಮಗನನ್ನು ಕುರಿತು ಹೇಳಿದನು.

೨೮. 'ಎಲೈ ನಿಷಾದಪತಿಯೆ! ನನ್ನ ಚರಿತ್ರೆಯನ್ನೆಲ್ಲ ರಾಜನಿಗೆ ಶೀಘ್ರ ನಾಗಿ ತಿಳಿಸು. ಆತನು ಈ ಹುತ್ತವನ್ನು ಕರಿಯಾಕಳಿನ ಹಾಲಿನಿಂದ ತೊಳೆಯ ಬೇಕು.

೨೯–೩೦. ಅದರಲ್ಲಿ ಮಂಗಳಕರವಾದ ಕಲ್ಲಿನ ಚೂರು ಕಾಣಿಸುವುದು. ಆ ಶಿಲೆಯಲ್ಲಿ ಎಡತೊಡೆಯಲ್ಲಿ ಭೂದೇವಿಯನ್ನು ಕೂಡಿಸಿಕೊಂಡಿರುವ ವರಾಹ ಮುಖನಾದ ನನ್ನ ಮೂರ್ತಿಯನ್ನು ಶಿಲ್ಪಿಯ ಕೈಯಿಂದ ಕೆತ್ತಿಸಿ ಮುನೀಶ್ವರರ ಮತ್ತು ವಾನಪ್ರಸ್ಥರ ಸಹಾಯದಿಂದ ಪ್ರತಿಷ್ಠೆಯನ್ನು ಮಾಡಿಸಿ ತೊಂಡಮಾನನು ನನ್ನನ್ನು ಪೂಜಿಸಬೇಕು.

ಅಥ ಗತ್ವಾ ಶ್ರೀನಿವಾಸಂ ವಲ್ಮೀಕಾವೃತಪದ್ದ್ವಯಂ ।
ಕಪಿಲಾಕೃಷ್ಣಗೋಕ್ಷೀರಸೇಚನೈಃ ಕ್ಷಾಲಯೇಚ್ಛನೈಃ ॥ ೩೧ ॥
ಆಪಾದಪೀಠಪರ್ಯಂತಂ ಕ್ಷಾಲಯಿತ್ವಾ ದಿನೇ ದಿನೇ ।
ಕುರ್ಯಾತ್ಪ್ರಾಕಾರಮುಭಯೋರುತ್ತರೇ ದಕ್ಷಿಣೇ ತಥಾ ॥ ೩೨ ॥
ಇತ್ಯುಕ್ತ್ವಾ ಚೈವ ಮಾಽಮುಂಚದ್ದೇವಃ ಸ್ವಸ್ಥೋಽಭವಂ ನೃಪ ।
ಇದಂ ತೇ ವಕ್ತುಮಾಯಾತೋ ದೇವದೇವಚಿಕೀರ್ಷಿತಂ ॥ ೩೩ ॥

ಶ್ರೀ ವರಾಹ ಉವಾಚ :—

ತೊಂಡಮಾನಪಿ ತಚ್ಛ್ರುತ್ವಾ ಸುಪ್ರೀತೋ ವಿಸ್ಮಿತೋಽಭವತ್ ।
ತತಃ ಕಾರ್ಯಂ ವಿನಿಶ್ಚಿತ್ಯ ಮಂತ್ರಿಭಿಃ ಪುಷ್ಕರಾದಿಭಿಃ ॥ ೩೪ ॥
ವೇಂಕಟಾದ್ರಿಂ ಜಿಗಮಿಷುರ್ಗೋಪಾನಾಹೂಯ ಸರ್ವಶಃ ।
ಕೃಷ್ಣಾಶ್ಚ ಕಪಿಲಾ ಗಾವೋ ಯಾಃ ಕಾಶ್ಚಿತ್ಸಂತಿ ಮಾಮಿಕಾಃ ॥ ೩೫ ॥

---

೩೧. ಬಳಿಕ ಹುತ್ತದಲ್ಲಡಗಿರುವ ಪಾದಪದ್ಮಗಳುಳ್ಳ ಶ್ರೀನಿವಾಸನನ್ನು ಸೇರಿ ಕಪಿಲೆ ಮತ್ತು ಕೃಷ್ಣ ಗೋವುಗಳ ಹಾಲಿನಿಂದ ಮೆಲ್ಲಗೆ ವಿಗ್ರಹವನ್ನು ತೊಳೆಯಬೇಕು.

೩೨. ಇಂತು ಪ್ರತಿನಿತ್ಯದಲ್ಲಿಯೂ ಪಾದಪೀಠದವರೆಗೂ ಕ್ಷಾಲನ ಮಾಡುತ್ತ ಎರಡು ಮೂರ್ತಿಗಳ ಉತ್ತರ ದಕ್ಷಿಣ ದಿಕ್ಕುಗಳಲ್ಲಿ ಪ್ರಾಕಾರವನ್ನು ನಿರ್ಮಿಸಬೇಕು.'

೩೩. ಇಂತೆಂದು ಹೇಳಿ ದೇವನು ನನ್ನನ್ನು ಬಿಡಲು ನಾನು ಪುನಃ ಪ್ರಕೃತಿಸ್ಥನಾದೆನು. ಎಲೈ ರಾಜನೆ! ಈ ವಿಚಾರವನ್ನೂ ದೇವದೇವನಿಗೆ ನೀನು ಮಾಡಬೇಕಾಗಿರುವ ಕಾರ್ಯವನ್ನೂ ಕುರಿತು ನಿನಗೆ ಬಿನ್ನವಿಸಲು ನಿನ್ನಲ್ಲಿಗೆ ಬಂದಿರುವೆನು."

೩೪. ಶ್ರೀವರಾಹಸ್ವಾಮಿಯು ಹೇಳುತ್ತಾನೆ:— ಆ ತೊಂಡಮಾನನೂ ಅದನ್ನು ಕೇಳಿ ಸುಪ್ರೀತನೂ ವಿಸ್ಮಯಗೊಂಡವನೂ ಆದನು. ಮತ್ತು ಪುಷ್ಕರನೇ ಮೊದಲಾದ ಮಂತ್ರಿವರ್ಯರೊಡನೆ ಸಮಾಲೋಚನೆಯನ್ನು ನಡೆಸಿ ಮುಂದಿನ ಕಾರ್ಯವನ್ನು ನಿಶ್ಚಯಿಸಿದನು.

೩೫–೩೭. ಮತ್ತು ವೇಂಕಟಾದ್ರಿಗೆ ಪ್ರಯಾಣವನ್ನು ಮಾಡುವನಾಗಿ ಸಕಲ ದಿಕ್ಕುಗಳಿಂದಲೂ ತನ್ನ ಗೋಪಾಲಕರನ್ನು ಕರೆಸಿಕೊಂಡು "ನನ್ನಲ್ಲಿ ಎಷ್ಟು ಕರಿಯ ಮತ್ತು ಕಪಿಲವರ್ಣದ ಹಸುಗಳಿರುವುವೋ ಅವುಗಳನ್ನೆಲ್ಲ ಕರುಗಳೊಡನೆ ವೇಂಕಟಾಚಲದ ಸಮೀಪಕ್ಕೆ ಕರೆದುಕೊಂಡು ಬರಬೇಕು" ಎಂಬುದಾಗಿ ಅಪ್ಪಣೆಯನ್ನು ಮಾಡಿ ಮಂತ್ರಿಗಳನ್ನು ಕುರಿತು "ನಾಳೆ ಯಾತ್ರೆಯನ್ನು ಮಾಡುವೆವು" ಎಂಬುದಾಗಿ ತಿಳಿಸಿ ಸಮಸ್ತ ಸಭಾಸದರನ್ನೂ

ತಾಃ ಸವತ್ಸಾ ಆನಯಧ್ವಂ ವೇಂಕಟಾದ್ರಿಸಮೀಪತಃ ।
ಇತ್ಯಾಜ್ಞಾಪ್ಯ ನೃಪೋ ಗೋಪಾನ್ಶ್ವೋ ಯಾತ್ರೇತಿ ಚ ಮಂತ್ರಿಣಃ ॥ ೩೬ ॥
ವಿಸೃಜ್ಯ ಪ್ರಕೃತೀಃ ಸರ್ವಾ ವಿವೇಶಾಂತಃಪುರಂ ವಶೀ ।
ಉಕ್ತ್ವಾ ಕಥಾಂ ತಾಂ ಪತ್ನೀಭ್ಯಃ ಸುಷ್ವಾಪ ನಿಶಿ ಪಾರ್ಥಿವಃ ॥ ೩೭ ॥
ತಂ ಸ್ವಪ್ನೇ ಶ್ರೀನಿವಾಸೋಽಪಿ ಬಿಲಮಾರ್ಗಂ ಹ್ಯದರ್ಶಯತ್ ।
ಸ್ವಪುರಾದಾಬಿಲಂ ಮಾರ್ಗೇ ಪಲ್ಲವಾನಸೃಜದ್ಧರಿಃ ॥ ೩೮ ॥
ಏವಂ ಸ್ವಪ್ನಂ ನೃಪೋ ದೃಷ್ಟ್ವಾ ಪ್ರಾತರುತ್ಥಾಯ ಸತ್ವರಃ ।
ಆಹೂಯ ಮಂತ್ರಿಣಃ ಸರ್ವಾನ್ಪ್ರಕೃತೀರ್ಬ್ರಾಹ್ಮಣಾನಪಿ ॥ ೩೯ ॥
ಸ್ವಪ್ನಂ ತಥಾವಿಧಂ ಚೋಕ್ತ್ವಾಪಶ್ಯದ್ದ್ವಾರೇಽಥ ಪಲ್ಲವಾನ್ ।
ಯುಕ್ತೇ ಮುಹೂರ್ತೇ ಪ್ರಯಯೌ ಹಯಮಾರುಹ್ಯ ತೊಂಡಮಾನ್ ॥
ಪಶ್ಯನ್ಪಲ್ಲವಭಂಗಾಂಶ್ಚ ಶನೈಃ ಪ್ರೀತೋ ಯಯೌ ಬಿಲಂ ।
ದೃಷ್ಟ್ವಾ ವಿಸ್ಮಯಮಾಪನ್ನೋ ನಿರ್ಮಮೇ ತತ್ರ ಪತ್ತನಂ ॥ ೪೧ ॥
ಬಿಲಮಂತಃಪುರೇ ಕೃತ್ವಾ ಪ್ರಾಕಾರಂ ಚಾಪ್ಯಕಾರಯತ್ ।
ವಸಂಸ್ತತ್ರ ನೃಪೇಂದ್ರೋಽಸೌ ನಿರ್ಜಿತ್ಯ ಪೃಥಿವೀಮಿಮಾಂ ॥ ೪೨ ॥

---

ಬೀಳ್ಕೊಟ್ಟು ಜಿತೇಂದ್ರಿಯನಾದ ಮಹಾರಾಜನು ಅಂತಃಪುರವನ್ನು ಹೊಕ್ಕನು. ನಡೆದ ವಿಚಾರವನ್ನೆಲ್ಲ ಪತ್ನಿಯರಿಗೆ ವಿಸ್ತಾರವಾಗಿ ತಿಳಿಸಿ ರಾತ್ರಿಯಲ್ಲಿ ನಿದ್ದೆ ಮಾಡುತ್ತಿದ್ದನು.

೩೮. ಶ್ರೀನಿವಾಸದೇವನು ಆತನಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ಪರ್ವತಕ್ಕೆ ಹೋಗಲು ಗುಪ್ತವಾದ ಸುರಂಗ ಮಾರ್ಗವನ್ನು ತೋರಿಸಿಕೊಟ್ಟನು. ಮತ್ತು ರಾಜಧಾನಿಯಿಂದ ಸುರಂಗದವರೆವಿಗೂ ಹೂವುಗಳನ್ನು ಚೆಲ್ಲಿದ್ದನು.

೩೯-೪೦. ಇಂತಹ ಸ್ವಪ್ನವನ್ನು ಕಂಡು ಪ್ರಾತಃಕಾಲದಲ್ಲಿ ಸಂಭ್ರಮದಿಂದೆದ್ದು ತೊಂಡಮಾನನು ಮಂತ್ರಿಗಳನ್ನೂ, ಬ್ರಾಹ್ಮಣರನ್ನೂ ಸಕಲ ಪೌರ ಜಾನಪದರನ್ನೂ ಕರೆಸಿಕೊಂಡು ತನಗಾದ ಸ್ವಪ್ನದ ವೃತ್ತಾಂತವನ್ನು ತಿಳಿಸಿ ರಾಜದ್ವಾರದಿಂದ ಹೂವುಗಳು ಚೆಲ್ಲಿಕೊಂಡು ಹೋಗಿರುವುದನ್ನು ಕಂಡನು. ಮತ್ತು ಸುಮುಹೂರ್ತದಲ್ಲಿ ಕುದುರೆಯನ್ನೇರಿ ಪ್ರಯಾಣವನ್ನು ಬೆಳಸಿದನು.

೪೧. ಚೆಲ್ಲಿದ್ದ ಹೂವುಗಳನ್ನೇ ನೋಡುತ್ತ ಮೆಲ್ಲಗೆ ಬಿಲದ್ವಾರವನ್ನು ಸಮೀಪಿಸಿದನು. ಅದನ್ನು ಕಂಡು ವಿಸ್ಮಯಗೊಂಡು ಅಲ್ಲಿಯೇ ರಾಜಧಾನಿಯನ್ನು ಕಟ್ಟಿಕೊಂಡನು.

೪೨. ಆ ಬಿಲದ ದ್ವಾರವು ಅಂತಃಪುರದಲ್ಲಿ ಸೇರುವಂತೆ ಮಾಡಿ ಸುತ್ತಲೂ ಪ್ರಾಕಾರವನ್ನು ಕಟ್ಟಿಸಿದನು. ಇಂತು ಪಟ್ಟಣದಲ್ಲಿ ವಾಸಮಾಡುತ್ತ ಸಕಲ ಭೂಮಂಡಲವನ್ನೂ ತೊಂಡಮಾನ ಮಹಾರಾಜನು ಜಯಿಸಿದನು.

ಯಥೋಕ್ತಂ ದೇವದೇವೇನ ಕ್ಷೀರಪ್ರಕ್ಷಾಲನಾದಿಕಂ ।
ಕೃತ್ವಾ ಪ್ರಾಕಾರನಿರ್ಮಾಣಂ ಕರ್ತುಮುದ್ಯೋಗಮಾಯಯೌ ॥ ೪೩ ॥
ತದಾನೀಂ ದೇವದೇವೇನ ಸ್ವಯಮಾಜ್ಞಾಪಿತೋ ನೃಪಃ ।
ತಿಂತ್ರಿಣೀಂ ಚಂಪಕಂ ಚೋಭೌ ಪಾಲಯೈತೌ ನಗೋತ್ತಮೌ ॥ ೪೪ ॥
ಮಮ ಚಾಸ್ಥಾನಿಕೀ ಚಿಂಚಾ ಲಕ್ಷ್ಮ್ಯಾಃ ಸ್ಥಾನಂ ಚ ಚಂಪಕಃ ।
ನಮಸ್ಕಾರ್ಯೌ ನೃಪೈಸ್ತೌ ಹಿ ಋಷಿದೇವನರೈಃ ಸದಾ ॥ ೪೫ ॥
ಸಂಸ್ಥಾಪ್ಯೈತೌ ನೃಪಶ್ರೇಷ್ಠ ಛೇದಯಾಸ್ಯಾನ್ನಗೋತ್ತಮಾನ್ ।
ಪ್ರಾಕಾರಮಾತ್ರಂ ಕುರು ಮೇ ದ್ವಾರಗೋಪುರಸಂಯುತಂ ॥ ೪೬ ॥
ವಿಮಾನಂ ತುಂ ಭವದ್ವಂಶ್ಯೋ ನಾಮ್ನಾ ನಾರಾಯಣೋ ನೃಪಃ ।
ಕಾರಯಿಷ್ಯತಿ ಮದ್ಭಕ್ತಃ ಸ್ವರ್ಣೇನಾಲಂಕರಿಷ್ಯತಿ ॥ ೪೭ ॥

ಶ್ರೀ ವರಾಹ ಉವಾಚ :—

ಏವಮುಕ್ತ್ವಾ ತೊಂಡಮಾನಂ ವಿರರಾಮ ಶ್ರಿಯಃಪತಿಃ ॥ ೪೮ ॥

---

೪೩. ಮತ್ತು ಪರಮಾತ್ಮನು ಹೇಳಿದ ರೀತಿಯಲ್ಲಿಯೇ ಹುತ್ತಗಳಿಗೆ ಹಾಲಿನ ಪ್ರಕ್ಷಾಲನಾದಿಗಳನ್ನು ಮಾಡಿ ವರಾಹಸ್ವಾಮಿ, ಶ್ರೀನಿವಾಸರ ಸುತ್ತಲೂ ಪ್ರಾಕಾರವನ್ನು ಕಟ್ಟಿಸಲು ಪ್ರಯತ್ನಪಟ್ಟನು.

೪೪. ಆಗ ಶ್ರೀನಿವಾಸನು ತಾನೇ ಮಹಾರಾಜನಿಗೆ ಇಂತೆಂದು ಅಪ್ಪಣೆಯನ್ನು ಮಾಡಿದನು. 'ಈ ಹುಣಸೆಯ ಮರವನ್ನೂ ಸಂಪಗೆಯ ಮರವನ್ನೂ ನೀನು ಸರ್ವಪ್ರಕಾರದಿಂದಲೂ ರಕ್ಷಿಸಬೇಕು.

೪೫. ಹುಣಸೆಯ ಮರವು ನನ್ನ ನಿವಾಸಸ್ಥಾನವು. ಸಂಪಗೆಯ ಮರದಲ್ಲಿ ಲಕ್ಷ್ಮಿಯು ವಾಸಿಸುತ್ತಿರುವಳು. ಆದುದರಿಂದ ಈ ಎರಡು ವೃಕ್ಷಗಳನ್ನು ಯಾವಾಗಲೂ ರಾಜರೂ, ಮಹರ್ಷಿಗಳೂ, ದೇವತೆಗಳೂ, ಮನುಷ್ಯರೂ ನಮಸ್ಕರಿಸಬೇಕು.

೪೬. ಎಲೈ ರಾಜರಾಜನೆ! ಈ ಎರಡು ವೃಕ್ಷಗಳನ್ನು ನಿಲ್ಲಿಸಿ ಉಳಿದ ಗಿಡಗಳೆಲ್ಲವನ್ನೂ ಕಡಿದುಹಾಕು. ಮತ್ತು ಮಹಾದ್ವಾರ ಗೋಪುರಗಳಿಂದೊಡಗೂಡಿದ ಪ್ರಾಕಾರವನ್ನು ಮಾತ್ರ ನೀನು ನಿರ್ಮಿಸು.

೪೭. ಮುಂದಕ್ಕೆ ನಿನ್ನ ವಂಶದಲ್ಲಿಯೇ ನನ್ನ ಭಕ್ತೋತ್ತಮನಾದ ನಾರಾಯಣನೆಂಬ ಮಹಾರಾಜನು ಅವತರಿಸಿ ವಿಮಾನಮಂಟಪವನ್ನು ಕಟ್ಟಿಸಿ ಅದನ್ನು ಚಿನ್ನದಿಂದಲಂಕರಿಸುವನು.'

೪೮. ವರಾಹಸ್ವಾಮಿಯು ಹೇಳುತ್ತಾನೆ:— ಇಂತೆಂದು ತೊಂಡಮಾನನಿಗೆ ಹೇಳಿ ಶ್ರೀಹರಿಯು ಸುಮ್ಮನಾದನು.

ಏವಂ ದೇವವಚಃ ಶ್ರುತ್ವಾ ಕೃತ್ವಾ ಪ್ರಾಕಾರಮೇವ ಚ ।
ಪೂಜಯಾಮಾಸ ಮುನಿಭಿರ್ವೈಖಾನಸಕುಲೋದ್ಭವೈಃ ॥ ೪೯ ॥
ನಿತ್ಯಂ ಬಿಲೇನ ಚಾಗತ್ಯ ದೇವಂ ನತ್ವಾ ನೃಪೋತ್ತಮಃ ।
ರಾಜ್ಯಂ ಚಕಾರ ಧರ್ಮೇಣ ಭುಂಜಾನೋ ಭೋಗಮುತ್ತಮಂ ॥ ೫೦ ॥
ಏತಸ್ಮಿನ್ನೇವ ಕಾಲೇ ತು ದಾಕ್ಷಿಣಾತ್ಯೋ ದ್ವಿಜೋತ್ತಮಃ ।
ಗಂಗಾಸ್ನಾನಾಯ ಗಚ್ಛನ್ವೈ ಸದಾರಃ ಪ್ರಯಯೌ ಪುರಾತ್ ॥ ೫೧ ॥
ಮಾರ್ಗೇಽಥ ಗರ್ಭಿಣೀ ಜಾತಾ ಬ್ರಾಹ್ಮಣೀ ಬ್ರಾಹ್ಮಣಃ ಸ ಚ ॥ ೫೨ ॥
ತಾಂ ತು ಗರ್ಭವತೀಂ ದೃಷ್ಟ್ವಾ ಸ್ವಾತ್ಮಾನುಗಮನೇಽಕ್ಷಮಾಂ ।
ರಾಜಾನಂ ದ್ರಷ್ಟುಕಾಮೋಽಸೌ ರಾಜದ್ವಾರಮುಪಾಗಮತ್ ॥ ೫೩ ॥
ದ್ವಾಃಸ್ಥೇನಾಜ್ಞಾಪಿತೋ ರಾಜಾ ತಮಾಹೂಯ ದ್ವಿಜೋತ್ತಮಂ ।
ಪೂಜಯಿತ್ವಾ ತು ವಿಧಿವತ್ಪಪ್ರಚ್ಛ ಕುಶಲಂ ದ್ವಿಜಂ ॥ ೫೪ ॥

ರಾಜೋವಾಚ :—

ಕಿಮಾಗಮನಕೃತ್ಯಂ ತೇ ಕಿಂ ಕರಿಷ್ಯಾಮ್ಯಹಂ ದ್ವಿಜ ।

ಬ್ರಾಹ್ಮಣ ಉವಾಚ :—

ವಾಸಿಷ್ಠೋ ವೀರಶರ್ಮಾಹಂ ಸಾಮವೇದೀ ನೃಪೋತ್ತಮ ॥ ೫೫ ॥

---

೪೯–೫೦. ಈ ತೆರನಾದ ದೇವರ ಅಪ್ಪಣೆಯನ್ನು ಕೇಳಿ ಮಹಾರಾಜನು ಪ್ರಾಕಾರವನ್ನು ಮಾಡಿಸಿ ಅರಣ್ಯವಾಸಿಗಳ ಕುಲಗಳಲ್ಲಿ ಹುಟ್ಟಿದ ಮುನಿಗಳಿಂದಲೇ ಪೂಜೆಯನ್ನು ಮಾಡಿಸುತ್ತಿದ್ದನು. ಆತನು ಪ್ರತಿದಿನವೂ ಬಿಲದ ಮಾರ್ಗವಾಗಿ ಬಂದು ದೇವನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಅನೇಕ ಭೋಗಗಳನ್ನು ಅನುಭವಿಸುತ್ತ ಧರ್ಮದಿಂದ ರಾಜ್ಯಭಾರವನ್ನು ಮಾಡುತ್ತಿದ್ದನು.

೫೧. ಈ ಸಮಯದಲ್ಲಿಯೇ ದಕ್ಷಿಣದೇಶದ ಒಬ್ಬ ಬ್ರಾಹ್ಮಣೋತ್ತಮನು ಗಂಗಾಸ್ನಾನವನ್ನು ಮಾಡಬೇಕೆಂಬ ಇಚ್ಛೆಯಿಂದ ಪತ್ನೀಸಹಿತನಾಗಿ ತನ್ನ ಊರನ್ನು ಬಿಟ್ಟು ಬರುತ್ತಿದ್ದನು.

೫೨–೫೩. ಮಾರ್ಗದಲ್ಲಿ ಆ ಬ್ರಾಹ್ಮಣಸ್ತ್ರೀಯು ಗರ್ಭವನ್ನು ಧರಿಸಿದಳು. ಬ್ರಾಹ್ಮಣನಾದರೋ ಪತ್ನಿಯು ಗರ್ಭವತಿಯಾಗಿ ತನ್ನನ್ನು ಹಿಂಬಾಲಿಸಿ ನಡೆಯಲು ಅಶಕ್ತಳಾಗಿರುವುದನ್ನು ಕಂಡು ಮಹಾರಾಜನನ್ನು ನೋಡುವ ಅಪೇಕ್ಷೆಯುಳ್ಳವನಾಗಿ ರಾಜದ್ವಾರವನ್ನು ಸೇರಿದನು.

೫೪. ತೊಂಡಮಾನನು ದ್ವಾರಪಾಲಕರಿಂದ ಬ್ರಾಹ್ಮಣನ ಬರವನ್ನು ತಿಳಿದು ಆತನನ್ನು ಕರೆಸಿಕೊಂಡು ವಿಧಿವತ್ತಾಗಿ ಅರ್ಘ್ಯಪಾದ್ಯಾದಿಗಳಿಂದ ಪೂಜೆಯನ್ನು ಮಾಡಿ ಕುಶಲಪ್ರಶ್ನೆಯನ್ನು ಮಾಡತೊಡಗಿದನು.

೫೫. ರಾಜನು ಕೇಳುತ್ತಾನೆ:—ಎಲೈ ಬ್ರಾಹ್ಮಣೋತ್ತಮನೆ! ನೀನು

ಸದಾರೋ ನಿರ್ಗತೋ ರಾಜನ್ಗಂಗಾಸ್ನಾನಾಯ ಸಾದರಃ ।
ಮಾರ್ಗೇ ಚ ಗರ್ಭಿಣೀ ಚೇಯಂ ಕೌಶಿಕೀ ಪುಣ್ಯಶಾಲಿನೀ ॥ ೫೬ ॥
ನಾಮ್ನಾ ಲಕ್ಷ್ಮೀರಿತಿ ಖ್ಯಾತಾ ಸುಶೀಲಾ ಚ ಪತಿವ್ರತಾ ।
ಸಂಸ್ಥಾಪ್ಯೈನಾಂ ತವ ಗೃಹೇ ವ್ರತಂ ನಿರ್ವರ್ತಯಾಮ್ಯಹಂ ॥ ೫೭ ॥
ತಸ್ಮಾದ್ರಾಜನ್ಪ್ರಯಚ್ಛಾಸ್ಯೈ ಯಥೇಷ್ಟಂ ಭಕ್ತವೇತನೇ ।
ತಾವಚ್ಚ ರಕ್ಷ್ಯತಾಂ ಲಕ್ಷ್ಮೀರ್ಯಾವದಾಗಮನಂ ಮಮ ॥ ೫೮ ॥

ಶ್ರೀ ವರಾಹ ಉವಾಚ:—

ರಾಜಾ ತಸ್ಯ ವಚಃ ಶ್ರುತ್ವಾ ತಂಡುಲಾನಿ ಧನಾನ್ಯಪಿ ।
ದತ್ವಾ ಷಣ್ಮಾಸಪರ್ಯಂತಂ ಗೃಹಮಂತಃಪುರೇ ದದೌ ॥ ೫೯ ॥
ತಾಂ ನ್ಯಸ್ಯ ಬ್ರಾಹ್ಮಣಃ ಪ್ರೀತೋ ಗಂಗಾಸ್ನಾನಾಯ ನಿರ್ಯಯೌ ।
ಗತ್ವಾ ಭಾಗೀರಥೀಂ ಗಂಗಾಂ ಪ್ರಯಾಗೇ ಕ್ಷೇತ್ರ ಉತ್ತಮೇ ॥ ೬೦ ॥

---

ಇಲ್ಲಿಗೆ ಬಂದ ಕಾರಣವೇನು? ನಿನಗಾಗಿ ಯಾವ ಕೆಲಸವನ್ನು ಮಾಡಲಿ? ಬ್ರಾಹ್ಮಣನು ಹೇಳುತ್ತಾನೆ:—ಮಹಾರಾಜನೆ! ನಾನು ವಸಿಷ್ಠಗೋತ್ರದ ಸಾಮಶಾಖಾಧ್ಯಾಯಿಯು. ನನ್ನನ್ನು ವೀರಶರ್ಮನೆಂದು ಕರೆಯುವರು.

೫೬. ನಾನು ಪತ್ನೀಸಹಿತನಾಗಿ ಗಂಗಾಸ್ನಾನವನ್ನು ಮಾಡಬೇಕೆಂಬ ಕುತೂಹಲದಿಂದ ಹೊರಟೆನು. ಕೌಶಿಕ ಗೋತ್ರೋದ್ಭವೆಯಾದ ಈ ಪುಣ್ಯವತಿಯು ದಾರಿಯಲ್ಲಿ ಗರ್ಭಿಣಿಯಾಗಿರುವಳು.

೫೭. ಈಕೆಯ ಹೆಸರು ಲಕ್ಷ್ಮಿಯು. ಈಕೆಯು ಸೌಶೀಲ್ಯದಿಂದಲೂ ಪಾತಿವ್ರತ್ಯದಿಂದಲೂ ಪ್ರಖ್ಯಾತಿಯನ್ನು ಪಡೆದಿರುವಳು. ಈಕೆಯನ್ನು ನಿನ್ನ ಮನೆಯಲ್ಲಿ ಬಿಟ್ಟು ನನ್ನ ಗಂಗಾಸ್ನಾನದ ವ್ರತವನ್ನು ಪೂರೈಸಿಕೊಂಡು ಬರುವೆನು.

೫೮. ಎಲೈ ರಾಜನೆ! ಆದುದರಿಂದ ಇವಳಿಗೆ ಬೇಕಾಗುವ ಸಾಮಗ್ರೀ ಸಹಾಯಗಳನ್ನು ಕೊಡುವವನಾಗು. ಮತ್ತು ನಾನು ಹಿಂದುರಿಗಿ ಬರುವವರೆಗೂ ಈ ಲಕ್ಷ್ಮಿಯನ್ನು ಪೋಷಿಸುತ್ತಿರಬೇಕು.

೫೯. ವರಾಹಸ್ವಾಮಿಯು ಹೇಳುತ್ತಾನೆ:— ಆ ಬ್ರಾಹ್ಮಣನ ಮಾತುಗಳನ್ನು ಕೇಳಿ ಮಹಾರಾಜನು ಅಕ್ಕಿಯನ್ನೂ ಇತರ ಧಾನ್ಯಗಳನ್ನೂ ಆರು ತಿಂಗಳಿಗೆ ಬೇಕಾಗುವಷ್ಟು ಒದಗಿಸಿ ಬ್ರಾಹ್ಮಣಸ್ತ್ರೀಯು ವಾಸಮಾಡಲು ತನ್ನ ಅಂತಃಪುರದಲ್ಲಿ ಒಂದು ಮನೆಯನ್ನು ಬಿಟ್ಟುಕೊಟ್ಟನು.

೬೦–೬೧. ಬ್ರಾಹ್ಮಣನು ತನ್ನ ಪತ್ನಿಯನ್ನು ಅಲ್ಲಿ ಸಂತೋಷದಿಂದ ಬಿಡಾರಮಾಡಿಸಿ ಗಂಗಾಸ್ನಾನವನ್ನು ಮಾಡಲು ಹೊರಟನು. ಆತನು ಪರಮ ಪವಿತ್ರವಾದ ಪ್ರಯಾಗಕ್ಷೇತ್ರದಲ್ಲಿ ಗಂಗಾಭಾಗೀರಥಿಯನ್ನು ಸೇವಿಸಿ ಸ್ನಾನ

ಸ್ನಾತ್ವಾ ಕಾಶೀಂ ತತೋ ಗತ್ವಾ ತತ್ರೋಷಿತ್ವಾ ದಿನತ್ರಯಂ ।
ಗಯಾಂ ಪ್ರಾಪ್ಯ ಪಿತೃಶ್ರಾದ್ಧಮಕರೋದ್ಬ್ರಾಹ್ಮಣೋತ್ತಮಃ ॥ ೬೧ ॥
ಗತ್ವಾಯೋಧ್ಯಾಮಪಿ ಪುರೀಂ ಪ್ರಯಯೌ ಬದರೀವನಂ ।
ಸಾಲಗ್ರಾಮಂ ತತೋ ಗತ್ವಾ ಸ್ವದೇಶಂ ಪ್ರತಿ ನಿರ್ಯಯೌ ॥ ೬೨ ॥
ಸಂವತ್ಸರದ್ವಯೇಽತೀತೇ ಚೈತ್ರೇ ಮಾಸಿ ಶುಭೇ ದಿನೇ ।
ನಿವೃತ್ತೋಽಸೌ ದ್ವಿಜಶ್ರೇಷ್ಠಃ ಶನೈರಾಗತ್ಯ ಮಾಧವೇ ॥ ೬೩ ॥
ಏಕಾದಶ್ಯಾಂ ಶುಕ್ಲಪಕ್ಷೇ ಪುನಾ ರಾಜಾನಮಾಯಯೌ ।
ರಾಜಾ ತು ವಿಸ್ಮೃತ್ಯ ತದಾ ಬ್ರಾಹ್ಮಣೀಂ ನಾಸ್ಮರನ್ನೃಪಃ ॥ ೬೪ ॥
ಬ್ರಾಹ್ಮಣೀ ಮಾನಿನೀ ಗೇಹೇ ಮೃತಾ ಶುಷ್ಕಾ ಬಭೂವ ಹ ।
ವೀರಶರ್ಮಾ ತತೋ ವಿಪ್ರೋ ಗಂಗಾತೋಯಕರಂಡಕಂ ॥ ೬೫ ॥
ವಿಮುಚ್ಯ ಬಂಧನಂ ತ್ವೇಕಂ ಗಂಗಾಂಭಃಕರಕಂ ಶುಭಂ ।
ಪ್ರದಾಯ ರಾಜ್ಞೇ ಪಪ್ರಚ್ಛ ಪತ್ನೀ ಕುಶಲಿನೀತಿ ಮೇ ॥ ೬೬ ॥

---

ವನ್ನು ಮಾಡಿಕೊಂಡು, ಕಾಶೀಕ್ಷೇತ್ರವನ್ನು ಸೇರಿ ಅಲ್ಲಿ ಮೂರು ದಿನಗಳಿದ್ದು ಸೇವೆಗಳನ್ನು ನೆರವೇರಿಸಿ, ಬಳಿಕ ಗಯಾ ಕ್ಷೇತ್ರವನ್ನು ಸೇರಿ ವಿಧ್ಯುಕ್ತಗಳಾದ ಪಿತೃಶ್ರಾದ್ಧಗಳೆಲ್ಲವನ್ನೂ ಸಾಂಗವಾಗಿ ಮಾಡಿದನು.

೬೨. ಬಳಿಕ ಬ್ರಾಹ್ಮಣೋತ್ತಮನು ಅಯೋಧ್ಯಾಪಟ್ಟಣವನ್ನು ನೋಡಿಕೊಂಡು ಬದರೀಕ್ಷೇತ್ರಕ್ಕೆ ಹೊರಟನು. ಮತ್ತು ಸಾಲಗ್ರಾಮಕ್ಷೇತ್ರವ ದರ್ಶನವನ್ನು ಮಾಡಿಕೊಂಡು ತನ್ನ ದೇಶದ ಕಡೆ ಹಿಂದಿರುಗಿದನು.

೬೩–೬೪. ಇಂತು ಎರಡು ವರ್ಷಗಳು ಕಳೆದು ಹೋಗಲು ಆ ಭೂಸುರನು ಮೆಲ್ಲಗೆ ಹಿಂದಿರುಗಿ ಬರುತ್ತ ಒಂದಾನೊಂದು ವಸಂತಕಾಲದ ವೈಶಾಖಮಾಸದ ಶುಕ್ಲಪಕ್ಷದ ಏಕಾದಶಿಯ ಶುಭದಿವಸದಲ್ಲಿ ಮತ್ತೆ ತೊಂಡಮಾನ ಮಹಾರಾಜನನ್ನು ನೋಡಲು ಪ್ರಾಪ್ತನಾದನು. ಅಷ್ಟರಲ್ಲಿ ಮಹಾರಾಜನು ಆ ಬ್ರಾಹ್ಮಣ ಸ್ತ್ರೀಯನ್ನು ಮರೆತುಬಿಟ್ಟು ಬಹಳಕಾಲ ಆಕೆಯನ್ನು ಸ್ಮರಿಸಿಕೊಳ್ಳದೆಯೇ ಕಾಲವನ್ನು ಕಳೆದನು.

೬೫–೬೬. ಆಕೆಯೂ ಕೂಡ ಅಭಿಮಾನವುಳ್ಳವಳಾದುದರಿಂದ ದವಸವು ಮುಗಿದಮೇಲೆ ಮತ್ತೆ ರಾಜನನ್ನು ಕೇಳಲಾರದೆ ಹಸಿವಿನಿಂದಲೇ ಮೃತಳಾದಳು. ಮತ್ತು ಆಕೆಯ ಶರೀರವೂ ಒಣಗಿಹೋಯಿತು. ಬ್ರಾಹ್ಮಣನಾದ ವೀರಶರ್ಮನು ಮಹಾರಾಜನಲ್ಲಿಗೆ ಬಂದು ತಾನು ತಂದಿದ್ದ ಗಂಗೋದಕದ ಕರಂಡದ ಒಂದು ಗಂಟನ್ನು ಬಿಚ್ಚಿ ತೀರ್ಥದ ಒಂದು ಸ್ಥಾಲಿಯನ್ನು ಆತನಿಗೆ ಒಪ್ಪಿಸಿ "ನನ್ನ ಪತ್ನಿಯು ಕ್ಷೇಮದಿಂದಿರುವಳೆ?" ಎಂಬುದಾಗಿ ಪ್ರಶ್ನೆಮಾಡಿದನು.

ಸ್ಮೃತ್ವಾಥ ರಾಜಾ ವಿಪ್ರಂ ತಂ ಸ್ತ್ರೀಯುತಾವಿತಿ ಚಾಬ್ರವೀತ್ ।
ಅಂತಃಪುರಂ ತತೋ ಗತ್ವಾ ತಾಮಪಶ್ಯನ್ಮೃತಾಂ ಗೃಹೇ ॥ ೬೭ ॥
ಅನುಕ್ತ್ವಾ ಬ್ರಹ್ಮಣೇ ತಸ್ಮೈ ಪ್ರವಿಶ್ಯ ಬಿಲಮುತ್ತಮಂ ।
ಶ್ರೀನೃಸಿಂಹಂ ನಮಸ್ಕೃತ್ಯ ಪುನಃ ಪ್ರಾಪ್ಯ ಬಿಲೋತ್ತಮಂ ॥ ೬೮ ॥
ಶ್ರೀನಿವಾಸಂ ಯಯೌ ದ್ರಷ್ಟುಂ ಶ್ರೀಭೂಮಿಸಹಿತಂ ಪರಂ ।
ತಂ ದೃಷ್ಟ್ವಾ ಸಹಸಾಯಾಂತಂ ಜುಗೂಹಾತೇ ಧರಾರಮೇ ॥ ೬೯ ॥
ಪ್ರಣಮಂತಮಪೋಚತ್ತಂ ಕಿಮಕಾಲೇ ನೃಪಾಗತಃ ।
ನೃಪೋಽವದತ್ಪ್ರಣಮ್ಯೇಶಂ ಭೀತೋಽಥ ಬ್ರಾಹ್ಮಣೀಂ ಮೃತಾಂ ॥ ೭೦ ॥
ತಚ್ಛ್ರುತ್ವಾ ದೇವದೇವೋಽಪಿ ಮಾಭೈ ರಾಜನ್ದ್ವಿಜೋತ್ತಮಾತ್ ।
ಆಂದೋಲಿಕಾಂ ತಾಮಾರೋಪ್ಯ ಸ್ತ್ರೀಭಿಃ ಸ್ವಾಭಿಃ ಸಮನ್ವಿತಾಂ ॥ ೭೧ ॥
ಮದಾಲಯಾತ್ಪೂರ್ವಭಾಗೇ ದ್ವಾದಶ್ಯಾಂ ಸ್ನಾಪಯ ಪ್ರಭೋ ।
ಅಸ್ಥಿನಾಮ್ನಿ ಸರಸ್ಯಸ್ಮಿನ್ನಪಮೃತ್ಯುನಿವಾರಣೇ ॥ ೭೨ ॥

---

೬೭. ಆಗ ಮಹಾರಾಜನಿಗೆ ಬ್ರಾಹ್ಮಣಸ್ತ್ರೀಯ ಜ್ಞಾಪಕವುಂಟಾಗಲು ಆತನನ್ನು ಅಲ್ಲಿಯೇ ನಿಂತಿರಹೇಳಿ ಅಂತಃಪುರವನ್ನು ಪ್ರವೇಶಿಸಿ ಆಕೆಯು ಮೃತಳಾಗಿ ಬಿದ್ದಿದ್ದುದನ್ನು ನೋಡಿದನು.

೬೮–೬೯. ಈ ವಿಚಾರವನ್ನು ಬ್ರಾಹ್ಮಣನಿಗೆ ತಿಳಿಸದೆಯೇ ಸುರಂಗದ ಮಾರ್ಗದಲ್ಲಿ ಹೊರಟು ನೃಸಿಂಹಸ್ವಾಮಿಗೆ ನಮಸ್ಕರಿಸಿ ಮತ್ತೆ ಬಿಲವನ್ನು ಹೊಕ್ಕು ಶ್ರೀಭೂದೇವಿಯರೊಡನಿರುವ ಪರಾತ್ಪರನಾದ ಶ್ರೀನಿವಾಸನನ್ನು ನೋಡಲು ಪ್ರಾಪ್ತನಾದನು. ಅಕಾಲದಲ್ಲಿ ಬಂದ ಮಹಾರಾಜನನ್ನು ಕಂಡು ಸ್ವಾಮಿಯೊಡನೆ ಏಕಾಂತದಲ್ಲಿದ್ದ ಶ್ರೀದೇವಿ, ಭೂದೇವಿಯರು ನಾಚಿಕೆಯಿಂದ ತಮ್ಮ ಮೈಗಳನ್ನು ಮರೆಮಾಚಿಕೊಂಡರು.

೭೦. ಸಾಷ್ಟಾಂಗ ಪ್ರಣಾಮವನ್ನು ಮಾಡಿದ ಮಹಾರಾಜನನ್ನು ಕಂಡು ಸ್ವಾಮಿಯು "ಅಕಾಲದಲ್ಲಿ ಬರಲು ಕಾರಣವೇನು?" ಎಂದು ಪ್ರಶ್ನೆಮಾಡಿದನು. ತೊಂಡಮಾನನು ಭಯದಿಂದ ಕೂಡಿದವನಾಗಿ ನಮಸ್ಕರಿಸಿ ಬ್ರಾಹ್ಮಣಸ್ತ್ರೀಯು ಮೃತಳಾದ ಸಂಗತಿಯನ್ನು ಬಿನ್ನವಿಸಿದನು.

೭೧–೭೨. ವಿಚಾರವನ್ನೆಲ್ಲ ಕೇಳಿ ದೇವದೇವನು ಹೇಳಿದನು. ಮಹಾರಾಜನೆ! ಬ್ರಾಹ್ಮಣನ ದೆಸೆಯಿಂದ ನೀನು ಭಯಪಡಬೇಡ. ಆ ಸ್ತ್ರೀಯಳ ದೇಹವನ್ನು ಆಕೆಯ ಸಖಿಯರೊಡನೆ ಒಂದು ಪಲ್ಲಕ್ಕಿಯಲ್ಲಿರಿಸಿ ದ್ವಾದಶಿಯ ದಿನದಲ್ಲಿ ತಂದು ನನ್ನ ದೇವಾಲಯಕ್ಕೆ ಪೂರ್ವಭಾಗದಲ್ಲಿರುವ ಸಕಲ ಅಪಮೃತ್ಯುನಿವಾರಕವಾದ ಅಸ್ಥಿಸರೋವರವೆಂಬ ತೀರ್ಥದಲ್ಲಿ ಸ್ನಾನಮಾಡಿಸು.

ಪ್ರಾಪ್ತಜೀವಾ ಸಮಂ ಸ್ತ್ರೀಭಿರ್ಬ್ರಾಹ್ಮಣೇನ ಚ ಯೋಕ್ಷ್ಯತೇ ।
ಶೀಘ್ರಂ ಯಾಹಿ ನೃಪಶ್ರೇಷ್ಠ ಯಥೋಕ್ತಂ ವಚನಂ ಕುರು ॥ ೭೩ ॥
ಇತಿ ದೇವವಚಃ ಶ್ರುತ್ವಾ ಪ್ರಯಯೌ ಸ್ವಪುರಂ ನೃಪಃ ।
ಆಂದೋಲಿಕಾಸು ರಮ್ಯಾಸು ಸ್ತ್ರಿಯ ಆರೋಪ್ಯ ತಾಮಪಿ ॥ ೭೪ ॥
ಬ್ರಾಹ್ಮಣಂ ಚ ಪುರಸ್ಕೃತ್ಯ ದ್ರಷ್ಟುಂ ದೇವಂ ಯಯೌ ನೃಪಃ ।
ಅಸ್ಥಿಕೂಟಸರಃ ಪ್ರಾಪ್ಯ ಸ್ನಾಪಯಾಮಾಸ ತಾಃ ಸ್ತ್ರಿಯಃ ॥ ೭೫ ॥
ತ್ವಗಸ್ಥಿರೂಪಾ ಸಾ ಚಾಪಿ ತಾಭಿಃ ಕ್ಷಿಪ್ತಾ ಸರೋವರೇ ।
ಪ್ರಾಪ್ತಜೀವಾ ಯಥಾಪೂರ್ವಂ ಸುವ್ಯಂಜಿತಶರೀರಜಾ ॥ ೭೬ ॥
ಉತ್ಥಿತಾ ಸರಸಃ ಸ್ನಾತ್ವಾ ರಾಜ್ಞೀಭಿಃ ಸಹ ಮಂಗಲಾ ।
ಪ್ರಾಪ್ತಾ ಚ ಬ್ರಾಹ್ಮಣಂ ಪ್ರೀತಾ ಭರ್ತಾರಂ ಪುನರಾಗತಂ ॥ ೭೭ ॥
ರಾಜಾ ಹರಿಂ ಪೂಜಯಿತ್ವಾ ಬ್ರಾಹ್ಮಣಾಯ ಧನಂ ದದೌ ।
ಸಹಸ್ರನಿಷ್ಕಪರ್ಯಂತಂ ವಸ್ತ್ರಾಣಿ ವಿವಿಧಾನಿ ಚ ॥ ೭೮ ॥

---

೭೩. ಇತರ ಸ್ತ್ರೀಯರಂತೆ ಆಕೆಯೂ ಜೀವಸಹಿತಳಾಗಿ ತನ್ನ ಪತಿಯಾದ ಬ್ರಾಹ್ಮಣನನ್ನು ಸೇರುವಳು. ಮಹಾರಾಜನೆ! ಬೇಗ ಹೊರಡು. ನಾನು ಹೇಳಿದ ಮಾತಿನಂತೆ ನಡೆದುಕೊ.

೭೪–೭೫. ಇಂತೆಂದ ಸ್ವಾಮಿಯ ಮಾತುಗಳನ್ನು ಕೇಳಿ ರಾಜನು ತನ್ನ ರಾಜಧಾನಿಗೆ ಹಿಂದಿರುಗಿದನು. ಮನೋಹರಗಳಾದ ಪಲ್ಲಕ್ಕಿಗಳಲ್ಲಿ ಸ್ತ್ರೀಯರನ್ನೂ ಬ್ರಾಹ್ಮಣಿಯನ್ನೂ ಕೂಡಿಸಿ ಆ ಬ್ರಾಹ್ಮಣನೊಡನೆ ಶ್ರೀನಿವಾಸನನ್ನು ನೋಡಲು ಹೊರಟನು. ಮತ್ತು ಅಸ್ಥಿಕೂಟವೆಂಬ ಸರೋವರವನ್ನು ಸಮೀಪಿಸಿ ಆ ಸ್ತ್ರೀಯರಿಗೆಲ್ಲ ಸ್ನಾನಮಾಡುವಂತೆ ಅಪ್ಪಣೆಯನ್ನು ಮಾಡಿದನು.

೭೬. ಕೇವಲ ಚರ್ಮಾಸ್ಥಿಗಳಿಂದ ಕೂಡಿ ಶುಷ್ಕವಾಗಿದ್ದ ಆ ಬ್ರಾಹ್ಮಣ ಸ್ತ್ರೀಯ ಶರೀರವೂ ಆ ಸ್ತ್ರೀಯರಿಂದ ಸರೋವರದಲ್ಲಿ ಹಾಕಲ್ಪಟ್ಟಿತು. ತಕ್ಷಣ ದಲ್ಲಿಯೇ ಆಕೆಯು ಸಜೀವಳಾಗಿ ಮುನ್ನಿನಂತೆಯೇ ಹೃಷ್ಟಪುಷ್ಟದೇಹವುಳ್ಳವ ಳಾದಳು.

೭೭. ಮತ್ತು ರಾಜಾಂತಃಪುರಸ್ತ್ರೀಯರೊಡನೆ ಸ್ನಾನವನ್ನು ಮಾಡಿ ಕೊಂಡು ಸೌಭಾಗ್ಯವತಿಯಾಗಿ ಸರೋವರದಿಂದ ಮೇಲಕ್ಕೆ ಬಂದಳು. ಯಾತ್ರೆ ಯಿಂದ ಹಿಂದಿರುಗಿದ ಪತಿಯಾದ ಬ್ರಾಹ್ಮಣನನ್ನು ಮತ್ತೆ ಸೇರಿದಳು.

೭೮. ಮಹಾರಾಜನೂ ಸಂತೋಷದಿಂದ ಸ್ವಾಮಿಗೆ ಪೂಜೆಯನ್ನು ಮಾಡಿ ಬ್ರಾಹ್ಮಣನಿಗೆ ಒಂದು ಸಾವಿರ ನಿಷ್ಕದಷ್ಟು ಧನವನ್ನೂ ವಿವಿಧ ವಸ್ತ್ರಗಳನ್ನೂ ಕೊಟ್ಟನು.

ಸ್ವದೇಶಗಮನಾಯೈವ ಸಾದರಂ ವಿಸಸರ್ಜ ಹ ।
ವಿಪ್ರಃ ಶ್ರುತ್ವಾ ಸ್ತ್ರಿಯೋ ವೃತ್ತಂ ಪ್ರಭಾವಂ ವೇಂಕಟೇಶಿತುಃ ॥ ೭೯ ॥
ಆಶೀಃ ಪ್ರಯುಜ್ಯ ರಾಜ್ಞೇಽಥ ಸ್ವದೇಶಂ ಪ್ರಯಯೌ ದ್ವಿಜಃ ।
ವಿಪ್ರೇ ಗತೇ ಶ್ರೀನಿವಾಸೋ ರಾಜಾನಂ ಪುನರಬ್ರವೀತ್ ॥ ೮೦ ॥
ದಿನೇ ದಿನೇ ಚ ಮಧ್ಯಾಹ್ನೇ ನೈವೇದ್ಯಾನಂತರಂ ನೃಪ ।
ಆಗತ್ಯ ಮಾಮರ್ಚಯಿತ್ವಾ ಯಥೇಷ್ಟಂ ಸ್ವರ್ಣಪಂಕಜೈಃ ॥ ೮೧ ॥
ಗತ್ವಾ ಪುರೀಂ ಸ್ವಧರ್ಮೇಣ ರಾಜ್ಯಂ ಕುರು ನರಾಧಿಪ ।
ಯದ್ಯದಿಷ್ಟಂ ತವ ನೃಪ ಭವಿಷ್ಯತಿ ನ ಸಂಶಯಃ ॥ ೮೨ ॥
ನಾಗಂತವ್ಯಮಕಾಲೇ ತು ತ್ವಯಾ ನೃಪ ಕದಾಚನ ।
ಏವಂ ಕಾಲಾರ್ಚನಂ ಕೃತ್ವಾ ಗತ್ವಾ ತ್ವಂ ಸ್ವಪುರೇ ವಸ ॥ ೮೩ ॥

ರಾಜೋವಾಚ :—

ತಥಾ ಕರಿಷ್ಯೇ ದೇವೇಶ ಮಧ್ಯಾಹ್ನೇ ಚಾರ್ಚಯಾಮ್ಯಹಂ ।
ಇತಿ ದೇವಾಜ್ಞಯಾ ನಿತ್ಯಮರ್ಚಯನ್ಸ್ವರ್ಣಪಂಕಜೈಃ ॥ ೮೪ ॥

---

೭೯–೮೦. ಮತ್ತು ಆದರದಿಂದ ಸ್ವದೇಶಕ್ಕೆ ಹಿಂದಿರುಗಲು ಬೀಳ್ಕೊಟ್ಟನು. ಆ ಬ್ರಾಹ್ಮಣನು ತನ್ನ ಪತ್ನಿಯ ಸಮಾಚಾರವನ್ನೂ ಶ್ರೀ ವೆಂಕಟೇಶ್ವರನ ಪ್ರಭಾವದಿಂದ ಆಕೆಯು ಮರಳಿ ಬದುಕಿ ಬಂದುದನ್ನೂ ಕೇಳಿ ಮಹಾರಾಜನಿಗೆ ಅನೇಕ ಆಶೀರ್ವಾದಗಳನ್ನು ಮಾಡಿ ತನ್ನ ದೇಶವನ್ನು ಕುರಿತು ಪ್ರಯಾಣ ಮಾಡಿದನು. ಇಂತು ಬ್ರಾಹ್ಮಣನು ಹೊರಟುಹೋಗಲು ಶ್ರೀನಿವಾಸನು ಮಹಾರಾಜನಿಗೆ ಮತ್ತೆ ಹೇಳತೊಡಗಿದನು.

೮೧–೮೨. ಎಲೈ ಮಹಾರಾಜನೆ! ಪ್ರತಿನಿತ್ಯವೂ ನೈವೇದ್ಯವಾದಮೇಲೆ ಮಧ್ಯಾಹ್ನಕಾಲದಲ್ಲಿ ನೀನು ಬಂದು ಮನಃಪೂರ್ತಿಯಾಗಿ ನನ್ನನ್ನು ಹೇಮಕಮಲಗಳಿಂದ ಪೂಜಿಸಿ ನಿನ್ನ ರಾಜಧಾನಿಗೆ ಸೇರಿ ಧರ್ಮದಿಂದ ರಾಜ್ಯಭಾರವನ್ನು ನಡೆಸುತ್ತಿರು. ನಿನಗೆ ಬೇಕಾದ ಇಷ್ಟಾರ್ಥಗಳೆಲ್ಲವೂ ಕೈಗೂಡುವುವೆಂಬುದರಲ್ಲಿ ಲೇಶಮಾತ್ರವೂ ಸಂಶಯವಿಲ್ಲದಿರಲಿ.

೮೩. ಆದರೆ ಎಂದಿಗೂ ಹೀಗೆ ಅಕಾಲದಲ್ಲಿ ನನ್ನನ್ನು ನೋಡಲು ಬರಲಾಗದು. ಮಹಾರಾಜನೆ! ಇಂತು ಸಕಾಲದಲ್ಲಿ ಅರ್ಚನೆಯನ್ನು ಮಾಡಿಕೊಂಡಿರು.

೮೪. ರಾಜನು ಹೇಳುತ್ತಾನೆ:—ದೇವೇಶ್ವರನೆ! ನಿನ್ನ ಅಪ್ಪಣೆಯಂತೆಯೇ ಮಧ್ಯಾಹ್ನಕಾಲದಲ್ಲಿ ಮಾತ್ರ ಪೂಜೆಯನ್ನು ಮಾಡುವೆನು. ಇಂತೆಂದು ದೇವರ ಆಜ್ಞಾನುಸಾರವಾಗಿಯೇ ಪ್ರತಿದಿನದಲ್ಲಿಯೂ ಸ್ವರ್ಣಕಮಲಗಳಿಂದ ಪೂಜೆಯನ್ನು ಮಾಡುತ್ತಿದ್ದನು.

ತದೂರ್ಧ್ವಂ ತುಲಸೀಪುಷ್ಪಂ ಜಾತ್ವಪಶ್ಯತ್ಸ ಮೃಣ್ಮಯಂ ॥ ೮೫ ॥
ವಿಸ್ಮಿತೋ ದೇವದೇವೇಶಮಪೃಚ್ಛನ್ನೃಪಸತ್ತಮಃ ।

ರಾಜೋವಾಚ :—

ಕೇನಾರ್ಚ್ಯಸೇ ಮೃನ್ಮಯೈಶ್ಚ ಕಮಲೈಸ್ತುಲಸೀಸಮೈಃ ॥ ೮೬ ॥
ರಾಜ್ಞಾಪೃಷ್ಟೋ ದೇವದೇವಃ ಸ್ಮೃತ್ವಾ ರಾಜಾನಮಬ್ರವೀತ್ ।
ಕಶ್ಚಿತ್ಕುಲಾಲೋ ಮದ್ಭಕ್ತಃ ಕುರ್ವಗ್ರಾಮೇ ವಸತ್ಯಸೌ ॥ ೮೭ ॥
ಸ್ವಗೃಹೇಽರ್ಚಯತೇ ರಾಜಂಸ್ತದಂಗೀಕ್ರಿಯತೇ ಮಯಾ ।
ಇತಿ ದೇವವಚಃ ಶ್ರುತ್ವಾ ತಂ ದ್ರಷ್ಟುಂ ಪ್ರಯಯೌ ನೃಪಃ ॥ ೮೮ ॥
ಗತ್ವಾ ಕುರ್ವಪುರಂ ತಸ್ಯ ಕುಲಾಲಸ್ಯ ಗೃಹಂ ಯಯೌ ।
ರಾಜಾನಮಾಗತಂ ದೃಷ್ಟ್ವಾ ಪ್ರಣಮ್ಯಾಗ್ರತಃ ಸ್ಥಿತಃ ॥ ೮೯ ॥
ಸ್ಥಿತಂ ತಂ ಭೀಮನಾಮಾನಂ ಪಪ್ರಚ್ಛ ನೃಪಸತ್ತಮಃ ।

ತೊಂಡಮಾನುವಾಚ :—

ಭೀಮ ಪೂಜಯಸೇ ದೇವಂ ಕಥಂ ವದ ಕುಲೋತ್ತಮ ॥ ೯೦ ॥

---

೮೫. ಮತ್ತು ನಿತ್ಯವೂ ಬಂದಾಗ ಹಿಂದಿನ ದಿನದ ಪುಷ್ಪಗಳ ರಾಶಿಯ ಮೇಲೆ ಮಣ್ಣಿನ ತುಳಸೀದಳವನ್ನೂ ಕಮಲವನ್ನೂ ಕಾಣುತ್ತಿದ್ದನು.

೮೬. ವಿಸ್ಮಯಗೊಂಡವನಾಗಿ ಒಂದು ದಿನ ಮಹಾರಾಜನು ಸ್ವಾಮಿಯನ್ನು ಕೇಳತೊಡಗಿದನು. ರಾಜನು ಕೇಳುತ್ತಾನೆ:—ಸ್ವಾಮಿಯೆ! ಮಣ್ಣಿನಲ್ಲಿ ಮಾಡಿದ ತುಲಸೀ ಪುಷ್ಪಗಳಿಂದ ನಿನ್ನನ್ನರ್ಚಿಸುತ್ತಿರುವವನು ಯಾವನು?

೮೭. ಇಂತೆಂದು ಕೇಳಲ್ಪಟ್ಟವನಾಗಿ ಶ್ರೀನಿವಾಸನು ಜ್ಞಾಪಿಸಿಕೊಂಡು ರಾಜನಿಗೆ ಹೇಳತೊಡಗಿದನು. ನನ್ನ ಭಕ್ತನಾದ ಕುಂಬಾರನೊಬ್ಬನು ಕುರ್ವ ವೆಂಬ ಗ್ರಾಮದಲ್ಲಿ ವಾಸಮಾಡುತ್ತಿರುವನು.

೮೮–೮೯. ಮಹಾರಾಜನೆ! ಆತನು ತನ್ನ ಮನೆಯಲ್ಲಿ ನನ್ನ ಪೂಜೆಯನ್ನು ಮಾಡುತ್ತಿರುವನು. ಆ ಅರ್ಚನೆಯನ್ನು ನಾನು ಅಂಗೀಕರಿಸುತ್ತಿರುವೆನು. ಇಂತೆಂದ ದೇವರ ಮಾತುಗಳನ್ನು ಕೇಳಿ ಆ ಮಹಾಭಕ್ತನನ್ನು ನೋಡಲು ರಾಜನು ಹೊರಟನು. ಮತ್ತು ಕುರ್ವಗ್ರಾಮಕ್ಕೆ ಹೋಗಿ ಆ ಕುಂಬಾರನ ಮನೆಯನ್ನು ಹುಡುಕಿಕೊಂಡು ಹೋದನು. ಆತನೂ ಮಹಾರಾಜನು ಬಂದು ದನ್ನು ಕಂಡು ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಮುಂದೆ ನಿಂತನು.

೯೦. ಇಂತು ಮುಂದಿರುವ ಭೀಮನಾಮಕನಾದ ಕುಂಬಾರನನ್ನು ಕುರಿತು ಮಹಾರಾಜನು ಕೇಳತೊಡಗಿದನು. ತೊಂಡಮಾನನು ಕೇಳುತ್ತಾನೆ:—ಭೀಮನೆ! ಸತ್ಕುಲಪ್ರಸೂತನೆ! ನೀನು ಶ್ರೀನಿವಾಸನ ಪೂಜೆಯನ್ನು ಹೇಗೆ ಮಾಡುತ್ತಿರುವೆಯೆಂಬುದನ್ನು ಹೇಳು.

ಶ್ರೀ ವರಾಹ ಉವಾಚ:—

ಪೃಷ್ಟಃ ಪ್ರಾಹ ಕುಲಾಲೋಽಪಿ ಜಾತು ಜಾನೇ ನ ಚಾರ್ಚನಂ ।
ಕೇನೋಕ್ತಂ ನೃಪತಿಶ್ರೇಷ್ಠ ಕಲಾಲೋಽರ್ಚಯತೀತಿ ಹಿ ॥ ೯೧ ॥

ತೊಂಡಮಾನುವಾಚ:—

ದೇವೇನ ಶ್ರೀನಿವಾಸೇನ ಮಮೋಕ್ತಂ ಹಿ ತ್ವದರ್ಚನಂ ।
ಸ ತು ಶ್ರುತ್ವಾ ನೃಪವಚಃ ಸ್ಮೃತ್ವಾ ದೇವವರಂ ಪುರಾ ॥ ೯೨ ॥

ಭೀಮ ಉವಾಚ:—

ಯದಾ ಪ್ರಕಾಶಿತಾ ಪೂಜಾ ಯದಾ ರಾಜಾ ಸಮಾಗತಃ ।
ತೊಂಡಮಾಂಸ್ತೇನ ಸಂವಾದಸ್ತದಾ ಮೋಕ್ಷಂ ಗಮಿಷ್ಯಸಿ ॥ ೯೩ ॥
ಇತಿ ಪೂರ್ವಂ ವರಂ ದೇವೋ ದತ್ತವಾನ್ವೇಂಕಟೇಶ್ವರಃ ॥ ೯೪ ॥
ಇತ್ಯುಕ್ತ್ವಾಥ ಕುಲಾಲೋಽಪಿ ಪತ್ನ್ಯಾ ಸಾರ್ಧಂ ತಥೈವ ಚ ।
ವಿಮಾನಮಾಗತಂ ದೃಷ್ಟ್ವಾ ದೇವಂ ದೃಷ್ಟ್ವಾ ಜನಾರ್ದನಂ ॥ ೯೫ ॥
ಪ್ರಣಮನ್ವ್ರಜಹೌ ಪ್ರಾಣಾನ್ಸದಾರೋ ಭಕ್ತಸತ್ತಮಃ ॥ ೯೬ ॥
ಪಶ್ಯತೋ ರಾಜರಾಜಸ್ಯ ವಿಮಾನಮಧಿರುಹ್ಯ ಚ ।
ದಿವ್ಯರೂಪಧರೋ ದೇವ್ಯಾ ಸಾರ್ಧಂ ವಿಷ್ಣುಪದಂ ಯಯೌ ॥ ೯೭ ॥

---

೯೧. ಶ್ರೀ ವರಾಹಸ್ವಾಮಿಯು ಹೇಳುತ್ತಾನೆ:—ಇಂತು ಕೇಳಲ್ಪಟ್ಟ ಆ ಕುಂಬಾರನು "ಮಹಾರಾಜನೆ! ನನಗೆ ಯಾವ ಪೂಜಾವಿಧಾನವೂ ತಿಳಿಯದು. ಕುಂಬಾರನಾದ ನಾನು ದೇವರನ್ನು ಪೂಜಿಸುತ್ತಿರುವೆನೆಂಬುದನ್ನು ನಿನಗೆ ಯಾರು ಹೇಳಿದರು?" ಎಂಬುದಾಗಿ ಪ್ರಶ್ನೆಮಾಡಿದನು.

೯೨. ತೊಂಡಮಾನನು ಹೇಳುತ್ತಾನೆ:—ದೇವದೇವನಾದ ಶ್ರೀನಿವಾಸನೇ ನೀನು ಪೂಜಿಸುತ್ತಿರುವುದನ್ನು ನನಗೆ ತಿಳಿಸಿರುವನು. ಇಂತೆಂದ ಮಹಾರಾಜನ ಮಾತುಗಳನ್ನು ಕೇಳಿ ಕುಂಬಾರನು ತನಗೆ ಹಿಂದೆ ದೇವರು ಕೊಟ್ಟಿದ್ದ ವರವನ್ನು ಜ್ಞಾಪಿಸಿಕೊಂಡನು.

೯೩–೯೪. ಭೀಮನು ಹೇಳುತ್ತಾನೆ:—ವೇಂಕಟೇಶ್ವರನು ನನಗೆ ಮೊದಲೇ "ನಿನ್ನ ಪೂಜೆಯು ಇತರರಿಗೆ ಬಹಿರಂಗವಾಗಿ ತಿಳಿದು ತೊಂಡಮಾನನು ನಿನ್ನಲ್ಲಿಗೆ ಬಂದು ಯಾವಾಗ ನಿನ್ನನ್ನು ಮಾತನಾಡಿಸುವನೊ, ಆಗ ನಿನಗೆ ಮೋಕ್ಷ ವುಂಟಾಗುವುದು" ಎಂಬುದಾಗಿ ವರವನ್ನು ದಯೆಪಾಲಿಸಿದ್ದನು.

೯೫–೯೭. ಇಂತೆಂದು ಆ ಕುಂಬಾರನು ತನ್ನ ಪತ್ನಿಯೊಡನೆ ಕೂಡಿದವನಾಗಿ ವಿಮಾನವು ಪ್ರಾಪ್ತವಾದುದನ್ನೂ ಶ್ರೀಮನ್ನಾರಾಯಣನು ಪ್ರತ್ಯಕ್ಷನಾದುದನ್ನೂ ಕಂಡು ಭಕ್ತಿಭರಿತರಾಗಿ ಪ್ರಣಾಮಗಳನ್ನು ಮಾಡುತ್ತಿರುವಂತೆಯೇ ದಂಪತಿಗಳು ದೇಹಗಳನ್ನು ತ್ಯಜಿಸಿದರು. ಮತ್ತು ಮಹಾರಾಜನು ನೋಡುತ್ತಿರು

ದೃಷ್ಟ್ವಾ ರಾಜಾದ್ಭುತಂ ತತ್ರ ಸ್ವಪುರಂ ಪ್ರಾಪ್ಯ ಹರ್ಷಿತಃ ।
ಸ್ವಪುತ್ರಂ ಶ್ರೀನಿವಾಸಾಖ್ಯಮಭಿಷಿಚ್ಯ ವಿಧಾನತಃ ॥ ೯೮ ॥
ಪರಿಪಾಲಯ ಧರ್ಮೇಣ ಮಾನವಾಂಶ್ಚ ವಸುಂಧರಾಂ ।
ಇತ್ಯಾಜ್ಞಾಪ್ಯ ಸುತಂ ಧೀಮಾಂಸ್ತತಾಪ ಪರಮಂ ತಪಃ ॥ ೯೯ ॥
ತಪ್ಯತಸ್ತಸ್ಯ ದೇವೋಽಪಿ ಪ್ರತ್ಯಕ್ಷಮಭವದ್ಧರಿಃ ।
ಆರುಹ್ಯ ಗರುಡಂ ದೇವೋ ರಮಾಭೂಮಿಸಮನ್ವಿತಃ ॥ ೧೦೦ ॥
ಕಿಂ ಕರೋಮಿ ನೃಪಶ್ರೇಷ್ಠ ತಪಸಾ ತೋಷಿತಸ್ತವ ।
ಇತ್ಯುಕ್ತೋ ದೇವದೇವೇನ ತೊಂಡಮಾನಪಿ ರಾಜರಾಟ್ ॥ ೧೦೧ ॥
ಪ್ರೀತಿಮಾನ್ಪ್ರಾಂಜಲಿರ್ಭೂತ್ವಾ ಸಗದ್ಗದಮುವಾಚ ಹ ।
ತ್ವಲ್ಲೋಕೇ ವಸ್ತುಮಿಚ್ಛಾಮಿ ಜರಾಮರಣವರ್ಜಿತೇ ॥ ೧೦೨ ॥
ಇದಮೇವ ವರಂ ದೇಹಿ ಮಾಧವೈತನ್ಮಮೇಪ್ಸಿತಂ ॥ ೧೦೩ ॥

ಶ್ರೀ ವರಾಹ ಉವಾಚ :—

ಇತ್ಯುಕ್ತ್ವಾ ನಿಪಪಾತೋರ್ವ್ಯಾಂ ಸಾಷ್ಟಾಂಗಂ ದೇವಸನ್ನಿಧೌ ।
ತದಾ ಕಲೇವರಂ ಮುಕ್ತ್ವಾ ವಿಮಾನಂ ತ್ವಾರುರೋಹ ಚ ॥ ೧೦೪ ॥

---

ವಂತೆಯೇ ಆ ವಿಮಾನವನ್ನೇರಿ ಭೀಮನು ಪತ್ನೀಸಹಿತನಾಗಿ ದಿವ್ಯವಾದ ರೂಪ ವನ್ನು ಹೊಂದಿ ವೈಕುಂಠವನ್ನು ಕುರಿತು ಪ್ರಯಾಣಮಾಡಿದನು.

೯೮–೯೯. ಈ ಅದ್ಭುತವನ್ನೆಲ್ಲ ಕಣ್ಣಾರೆ ಕಂಡ ತೊಂಡಮಾನನು ಸಂತೋಷ ದಿಂದ ತನ್ನ ರಾಜಧಾನಿಗೆ ಹಿಂದಿರುಗಿ ತನ್ನ ಮಗನಾದ ಶ್ರೀನಿವಾಸನಿಗೆ ಉಚಿತ ರೀತಿಯಿಂದ ಪಟ್ಟಾಭಿಷೇಕವನ್ನು ಮಾಡಿ "ಪ್ರಜೆಗಳನ್ನೂ ಭೂಮಿಯನ್ನೂ ಧರ್ಮದಿಂದ ಪಾಲಿಸುತ್ತಿರು" ಎಂಬುದಾಗಿ ಆಜ್ಞೆಯನ್ನು ಮಾಡಿ ತಾನು ಮಹತ್ತರವಾದ ತಪಸ್ಸನ್ನು ಮಾಡುತ್ತಿದ್ದನು.

೧೦೦. ಇಂತು ತಪೋನಿರತನಾಗಿದ್ದ ಆತನ ಬಳಿಗೆ ಶ್ರೀ ಭೂದೇವಿಯ ರೊಡನೆ ಶ್ರೀನಿವಾಸನು ಗರುಡವಾಹನನಾಗಿ ಪ್ರತ್ಯಕ್ಷನಾದನು.

೧೦೧–೧೦೩. ಶ್ರೀನಿವಾಸನು ಹೇಳುತ್ತಾನೆ:—ಎಲೈ ಮಹಾರಾಜನೆ! ನಿನ್ನ ತಪಸ್ಸಿಗೆ ಸಂತುಷ್ಟನಾಗಿ ಬಂದಿರುವೆನು. ನಿನಗೆ ಏನನ್ನು ಮಾಡಲಿ? ಇಂತು ದೇವೇಶ್ವರನು ಕೇಳುತ್ತಿರಲು ರಾಜೇಂದ್ರನಾದ ತೊಂಡಮಾನನು ಭಕ್ತಿ ಯಿಂದ ಅಂಜಲಿಬಂಧವನ್ನು ಮಾಡಿಕೊಂಡು ಧ್ವನಿಯು ಗದ್ಗದಿತವಾಗುತ್ತಿರಲು ಇಂತೆಂದನು. "ಮಾಧವನೆ! ಜರಾಮರಣವರ್ಜಿತವಾದ ನಿನ್ನ ಲೋಕದಲ್ಲಿ ವಾಸಮಾಡಲಿಚ್ಛಿಸುವೆನು. ಈ ವರವೊಂದನ್ನು ನನಗೆ ದಯೆಪಾಲಿಸು. ಇದೇ ನನಗೆ ಅತ್ಯಂತೇಪ್ಸಿತವು."

೧೦೪. ವರಾಹಸ್ವಾಮಿಯು ಹೇಳುತ್ತಾನೆ:—ಇಂತೆಂದು ಆತನು ದೇವನ

ಗಂಧರ್ವೈಃ ಸ್ತೂಯಮಾನೋಽಸೌ ಸಾರೂಪ್ಯಂ ಪ್ರಾಪ್ಯ ಶಾರ್ಙ್ಗಿಣಃ ।
ಯಯೌ ಶೋಕಮೋಹರಹಿತಂ ಜರಾಮರಣವರ್ಜಿತಂ ॥ ೧೦೫ ॥
ಪುನರಾವೃತ್ತಿರಹಿತಂ ತದ್ವಿಷ್ಣೋಃ ಪದಮಾಯಯೌ ॥ ೧೦೬ ॥
ಏತದ್ಭವಿಷ್ಯಂ ದೇವೇಶಿ ಮಯೋಕ್ತಂ ವರವರ್ಣಿನಿ ।
ಯಃ ಶ್ರಾವಯೇದ್ಯಃ ಶೃಣುಯಾದ್ವಿಷ್ಣುಲೋಕಂ ಸ ಗಚ್ಛತಿ ॥ ೧೦೭ ॥

ಶ್ರೀ ಸೂತ ಉವಾಚ :—

ಇತ್ಯುಕ್ತಂ ದೇವದೇವೇನ ಸಭವಿಷ್ಯಂ ಸಹೋತ್ತರಂ ।
ಶೃಣುಯಾದ್ಯಃ ಪಠೇದ್ಭಕ್ತ್ಯಾ ಕಥಾಂ ಪುಣ್ಯಾಂ ಪುರಾತನೀಂ ॥ ೧೦೮ ॥
ಸ ತು ಭುಕ್ತ್ವಾಖಿಲಾನ್ಕಾಮಾನಂತೇ ವಿಷ್ಣುಪದಂ ವ್ರಜೇತ್ ॥ ೧೦೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹ ಸಂವಾದೇ
"ಭವಿಷ್ಯದ್ವರ್ಣನೇ ತೊಂಡಮಾಂಶ್ಚಕ್ರವರ್ತಿವೃತ್ತವರ್ಣನಂ"
ನಾಮ ದಶಮೋಽಧ್ಯಾಯಃ

---

ಸನ್ನಿಧಿಯಲ್ಲಿ ಸಾಷ್ಟಾಂಗ ಪ್ರಣಾಮವನ್ನು ಮಾಡಿ ಭೂಮಿಯಲ್ಲಿ ಬಿದ್ದನು. ಆ ಕ್ಷಣದಲ್ಲಿಯೇ ದೇಹವನ್ನು ತ್ಯಜಿಸಿ ದಿವ್ಯವಿಮಾನವನ್ನಾರೋಹಿಸಿದನು.

೧೦೫–೧೦೬. ಗಂಧರ್ವರಿಂದ ಹೊಗಳಿಸಿಕೊಳ್ಳಲ್ಪಟ್ಟವನಾಗಿ ಶ್ರೀಮನ್ನಾರಾಯಣನ ಸಾರೂಪ್ಯರೂಪವಾದ ಮೋಕ್ಷವನ್ನು ಪಡೆದನು. ಮತ್ತು ಶೋಕಮೋಹವರ್ಜಿತವೂ, ಜರಾಮರಣರಹಿತವೂ, ಪುನರಾವೃತ್ತಿಯಿಲ್ಲದುದೂ ಆದ ವಿಷ್ಣುಲೋಕವನ್ನು ಕುರಿತು ಹೊರಟುಹೋದನು.

೧೦೭. ಎಲೈ ಸುಂದರಿಯಾದ ಭೂದೇವಿಯೆ! ಇಂತು ನಿನಗೆ ಭವಿಷ್ಯದ ವೃತ್ತಾಂತವೆಲ್ಲವನ್ನೂ ವಿಸ್ತಾರವಾಗಿ ವರ್ಣಿಸಿರುವೆನು. ಯಾವನು ಈ ಚರಿತ್ರೆಯನ್ನು ಇತರರಿಗೆ ಪಠನಮಾಡುವನೊ, ಯಾವನು ಶ್ರದ್ಧೆಯಿಂದ ಕೇಳುವನೊ, ಅವನು ವೈಕುಂಠಲೋಕವನ್ನು ಸೇರುವನು.

೧೦೮–೧೦೯. ಸೂತನು ಹೇಳುತ್ತಾನೆ:— ಇಂತು ವರಾಹಸ್ವಾಮಿಯು ಭೂದೇವಿಗೆ ಮುಂದೆ ನಡೆಯುವುದನ್ನೂ ಕೂಡಿದ ಉತ್ತರ ಚರಿತ್ರೆಯನ್ನೂ ವಿಸ್ತರಿಸಿದನು. ಪುರಾತನವಾದ ಈ ಪುಣ್ಯಚರಿತ್ರೆಯನ್ನು ಯಾವನು ಭಕ್ತಿಯಿಂದ ಕೇಳುವನೊ, ಯಾವನು ಹೇಳುವನೊ, ಅವನು ಇಹಲೋಕದಲ್ಲಿ ಸಕಲ ಸೌಭಾಗ್ಯಗಳನ್ನನುಭವಿಸಿ ಕೊನೆಯಲ್ಲಿ ವಿಷ್ಣುವಿನ ನೆಲೆಯಾದ ವೈಕುಂಠವನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೆಂಕಟಾಚಲ
ಮಾಹಾತ್ಮ್ಯೆಯು ಧರಣೀವರಾಹಸಂವಾದದಲ್ಲಿ "ಭವಿಷದ್ವರ್ಣನ—ತೊಂಡಮಾನ
ಚಕ್ರವರ್ತಿ ವೃತ್ತಾಂತವರ್ಣನ"ವೆಂಬ ಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಾದಶೋಽಧ್ಯಾಯಃ

### ಶ್ರೀ ಸ್ವಾಮಿಪುಷ್ಕರಿಣೀ ಕಾಶ್ಯಪದೋಷನಿವೃತ್ತಿವರ್ಣನಂ

ಶ್ರೀ ಸೂತ ಉವಾಚ:—

ಅಥಾತಃ ಸಂಪ್ರವಕ್ಷ್ಯಾಮಿ ಸ್ವಾಮಿಪುಷ್ಕರಿಣೀಂ ಶುಭಾಂ ।
ಲಕ್ಷ್ಯೀಕೃತ್ಯ ಕಥಾಮೇಕಾಂ ಪವಿತ್ರಾಂ ದ್ವಿಜಸತ್ತಮಾಃ ॥ ೧ ॥
ಕಾಶ್ಯಪಾಖ್ಯೋ ದ್ವಿಜಃ ಪೂರ್ವಮಸ್ಮಿನ್ತೀರ್ಥವರೇ ಶುಭೇ ।
ಸ್ನಾತ್ವಾ ತಿಮಹತಃ ಪಾಪಾದ್ವಿಮುಕ್ತೋ ನರಕಪ್ರದಾತ್ ॥ ೨ ॥

ಋಷಯ ಊಚುಃ:—

ಮುನೇ ಕಾಶ್ಯಪನಾಮಾಸಾವಕರೋತ್ಕಿಂ ಹಿ ಪಾತಕಂ ।
ಸ್ನಾತ್ವಾ ತೀರ್ಥವರೇ ಹ್ಯತ್ರ ಯಸ್ಮಾನ್ಮುಕ್ತೋಽಭವತ್ಕ್ಷಣಾತ್ ॥ ೩ ॥
ಏತನ್ನಃ ಶ್ರದ್ದಧಾನಾನಾಂ ಬ್ರೂಹಿ ಸೂತ ಕೃಪಾಬಲಾತ್ ।
ತ್ವದ್ವಚೋಽಮೃತತೃಪ್ತಾನಾಂ ನ ಪಿಪಾಸಾಪಿ ವಿದ್ಯತೇ ॥ ೪ ॥

---

## ಕನ್ನಡದ ಅನುವಾದ

### ಶ್ರೀ ಸ್ವಾಮಿಪುಷ್ಕರಿಣೀ ತೀರ್ಥದಲ್ಲಿ ಕಾಶ್ಯಪದೋಷನಿವೃತ್ತಿವರ್ಣನ

೧. ಸೂತನು ಹೇಳುತ್ತಾನೆ:—ಎಲೈ ಬ್ರಾಹ್ಮಣರಿರಾ! ಇನ್ನು ಮುಂದೆ ಪರಮಪಾವನವಾದ ಸ್ವಾಮಿಪುಷ್ಕರಿಣಿಗೆ ಸಂಬಂಧಪಟ್ಟಂತೆ ಪವಿತ್ರವಾದ ಕಥೆಯೊಂದನ್ನು ಹೇಳುವೆನು, ಕೇಳಿರಿ.

೨. ಪೂರ್ವಕಾಲದಲ್ಲಿ ಕಾಶ್ಯಪನೆಂಬೊಬ್ಬ ಮಹಾಬ್ರಾಹ್ಮಣನು ಮಂಗಳಕರವಾದ ಈ ಉತ್ತಮತೀರ್ಥದಲ್ಲಿ ಸ್ನಾನವನ್ನು ಮಾಡಿ ನರಕಪ್ರದವಾದ ಒಂದು ಮಹಾಪಾತಕದಿಂದ ಬಿಡುಗಡೆಯನ್ನು ಹೊಂದಿದನು.

೩. ಋಷಿಗಳು ಕೇಳುತ್ತಾರೆ:—ಸೂತಮುನಿಯೆ! ಕಾಶ್ಯಪನೆಂಬ ಹೆಸರಿನ ಬ್ರಾಹ್ಮಣನು ಯಾವ ಪಾತಕವನ್ನು ಮಾಡಿದನು? ಮತ್ತು ಇಲ್ಲಿ ತೀರ್ಥದಲ್ಲಿ ಸ್ನಾನಮಾಡಿದುದರಿಂದ ಕ್ಷಣಮಾತ್ರದಲ್ಲಿ ಆತನ ಪಾಪವು ಹೇಗೆ ನಾಶವಾಯಿತು?

೪. ನೀನು ಕೃಪೆಮಾಡಿ ಶ್ರದ್ಧೆಯಿಂದ ಕೇಳುತ್ತಿರುವ ನಮಗೆ ಆ ಕಥೆಯನ್ನು ಹೇಳುವವನಾಗು. ನಿನ್ನ ಮಾತುಗಳೆಂಬ ಅಮೃತವನ್ನು ಪಾನಮಾಡುತ್ತಿರುವ ನಮಗೆ ಬಾಯಾರಿಕೆಯೂ ಕೂಡ ತೋರುತ್ತಿಲ್ಲ.

ಶ್ರೀ ಸೂತ ಉವಾಚ :—

ಶ್ರೀ ಸ್ವಾಮಿಪುಷ್ಕರಿಣ್ಯಾಶ್ಚ ಮಾಹಾತ್ಮ್ಯಪ್ರತಿಪಾದಕಂ ।
ಇತಿಹಾಸಂ ಪ್ರವಕ್ಷ್ಯಾಮಿ ಪಠತಾಂ ಪಾಪನಾಶನಂ ॥ ೫ ॥
ಅಭಿಮನ್ಯುಸುತೋ ರಾಜಾ ಪರೀಕ್ಷಿನ್ನಾಮ ನಾಮತಃ ।
ಅಧ್ಯಾಸ್ತ ಹಸ್ತಿನಪುರಂ ಪಾಲಯನ್ಧರ್ಮತೋ ಮಹೀಂ ॥ ೬ ॥
ಸ ರಾಜಾ ಜಾತು ವಿಪಿನೇ ಚಚಾರ ಮೃಗಯಾರತಃ ।
ಷಷ್ಟಿವರ್ಷವಯಾ ಭೂಪಃ ಕ್ಷುತ್ತೃಷ್ಣಾಪರಿಪೀಡಿತಃ ॥ ೭ ॥
ನಷ್ಟಮೇಕಂ ಸ ವಿಪಿನೇ ಮಾರ್ಗಯನ್ಮೃಗಮಾದರಾತ್ ।
ಧ್ಯಾನಾರೂಢಂ ಮುನಿಂ ದೃಷ್ಟ್ವಾ ಪ್ರಾಹ ಭೂಪಾಲಕೋತ್ತಮಃ ॥ ೮ ॥
ಮಯಾ ಬಾಣೇನ ವಿಪಿನೇ ಮೃಗೋ ವಿದ್ಧೋಽಧುನಾ ಮುನೇ ।
ದೃಷ್ಟಃ ಸ ಕಿಂ ತ್ವಯಾ ವಿದ್ವನ್ವಿದ್ರುತೋ ಭಯಕಾತರಃ ॥ ೯ ॥
ಸಮಾಧಿನಿಷ್ಠೋ ಮೌನಿತ್ವಾನ್ನ ಕಿಂಚಿದಪಿ ಸೋಽಬ್ರವೀತ್ ।
ತತೋ ಧನುರಟನ್ಯಾ ಸ ಸ್ಕಂಧೇ ತಸ್ಯ ಮಹಾಮುನೇಃ ॥ ೧೦ ॥

---

೫. ಸೂತನು ಹೇಳುತ್ತಾನೆ :—ಶ್ರೀ ಸ್ವಾಮಿಪುಷ್ಕರಿಣೀತೀರ್ಥದ ಮಾಹಾತ್ಮ್ಯೆಯನ್ನು ಪ್ರತಿಪಾದಿಸುವಂತಹ ಇತಿಹಾಸವನ್ನು ನಿಮಗೆ ತಿಳಿಸುವೆನು. ಇದನ್ನು ಪಠಿಸುವವರ ಪಾಪಗಳೆಲ್ಲವೂ ನಾಶವನ್ನೈದುವುವು.

೬. ಅಭಿಮನ್ಯುವಿನ ಮಗನಾದ ಪರೀಕ್ಷಿತನೆಂಬ ಮಹಾರಾಜನು ಧರ್ಮದಿಂದ ರಾಜ್ಯಪರಿಪಾಲನೆಯನ್ನು ಮಾಡುತ್ತ ಹಸ್ತಿನಾವತಿಯಲ್ಲಿ ವಾಸಮಾಡಿಕೊಂಡಿರುತ್ತಿದ್ದನು.

೭. ರಾಜನು ಒಮ್ಮೆ ಬೇಟೆಯನ್ನಾಡುತ್ತ ಕಾಡಿನಲ್ಲಿ ಸಂಚರಿಸುತ್ತ ಅರವತ್ತು ವರ್ಷದ ವಯಸ್ಸುಳ್ಳವನಾದುದರಿಂದ ಬೇಗ ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿದ್ದನು.

೮. ಮತ್ತು ಆತನು ತನ್ನ ಕೈಗಳಿಂದ ತಪ್ಪಿಸಿಕೊಂಡ ಜಿಂಕೆಯೊಂದನ್ನು ಕಾಡಿನಲ್ಲಿ ಕುತೂಹಲದಿಂದ ಹುಡುಕುತ್ತ ಧ್ಯಾನದಲ್ಲಿ ಆಸಕ್ತನಾಗಿ ಕುಳಿತಿದ್ದ ಮಹರ್ಷಿಯನ್ನು ಕಂಡು ಆತನನ್ನು ಮಾತನಾಡಿಸಿದನು.

೯. ಎಲೈ ಮುನಿಯೆ! ನನ್ನಿಂದ ಬಾಣದ ಪೆಟ್ಟನ್ನು ತಿಂದ ಜಿಂಕೆಯೊಂದು ಭಯದಿಂದ ಕಾತರಗೊಂಡು ಈಗ ತಾನೆ ಓಡಿಹೋಯಿತು. ಎಲೈ ಜ್ಞಾನಿಯೆ! ಅದನ್ನು ನೀನೇದರೂ ಕಂಡೆಯ?

೧೦–೧೧. ಆದರೆ ಮೌನವ್ರತವನ್ನವಲಂಬಿಸಿ ಸಮಾಧಿಸ್ಥಿತಿಯನ್ನು ಹೊಂದಿದ್ದ ಆ ಮುನಿಯು ರಾಜನಿಗೆ ಉತ್ತರವನ್ನು ಕೊಡಲಿಲ್ಲವು. ಮಹಾರಾಜನಿಗೆ ಕೋಪವುಮ್ಮಳಿಸಲು ತನ್ನ ಬಿಲ್ಲಿನ ಕೋಲಿನಿಂದ ಅಲ್ಲಿ ಬಿದ್ದಿದ್ದ ಹಾವಿನ

ನಿಧಾಯ ಮೃತಸರ್ಪಂ ತು ಕುಪಿತಃ ಸ್ವಪುರಂ ಯಯೌ ।
ಮುನೇಸ್ತಸ್ಯ ಸುತಃ ಕಶ್ಚಿಚ್ಛೃಂಗೀ ನಾಮ ಬಭೂವ ವೈ ॥ ೧೧ ॥
ಸಖಾ ತಸ್ಯ ಕೃಶಾಖ್ಯೋಽಭೂಚ್ಛೃಂಗಿಣೋ ದ್ವಿಜಸತ್ತಮಃ ।
ಸಖಾಯಂ ಶೃಂಗಿಣಂ ಪ್ರಾಹ ಕೃಶಾಖ್ಯಃ ಸ ಸಖಾ ತತಃ ॥ ೧೨ ॥
ಪಿತಾ ತವ ಮೃತಂ ಸರ್ಪಂ ಸ್ಕಂಧೇನ ವಹತೇಽಧುನಾ ।
ಮಾ ಭೂದ್ದರ್ಪಸ್ತವ ಸಖೇ ಮಾ ಕ್ರುಧ್ಯಸ್ತ್ವಮಿದಂ ವೃಥಾ ॥ ೧೩ ॥
ಸೋಽಭವತ್ಕುಪಿತಃ ಶೃಂಗೀ ದಿತ್ಸುಃ ಶಾಪಂ ನೃಪಾಯ ವೈ ।
ಮತ್ತಾತೇ ಶವಸರ್ಪಂ ಯೋ ನ್ಯಸ್ತವಾನ್ಮೂಢಚೇತನಃ ।
ಸ ಸಪ್ತರಾತ್ರಾನ್ಮ್ರಿಯತಾಂ ಸಂದಷ್ಟಸ್ತಕ್ಷಕಾಹಿನಾ ॥ ೧೪ ॥
ಶಶಾಪೈವಂ ಮುನಿಸುತಃ ಸೌಭದ್ರೇಯಂ ಪರೀಕ್ಷಿತಂ ।
ಶಮೀಕಾಖ್ಯಃ ಪಿತಾ ತಸ್ಯ ಶಪ್ತಂ ಶ್ರುತ್ವಾ ಸುತೇನ ತಂ ॥ ೧೫ ॥
ನೃಪಂ ಪ್ರೋವಾಚ ತನಯಂ ಶೃಂಗಿಣಂ ಮುನಿಪುಂಗವಃ ।
ರಕ್ಷಕಂ ಸರ್ವಲೋಕಾನಾಂ ನೃಪಂ ಕಿಂ ಶಪ್ತವಾನಸಿ ॥ ೧೬ ॥

---

ಮೃತಶರೀರವನ್ನು ತೆಗೆದುಕೊಂಡು ಆ ಮಹಾಮುನಿಯ ಭುಜದಲ್ಲಿ ಹಾಕಿದವನಾಗಿ ತನ್ನ ರಾಜಧಾನಿಯನ್ನು ಸೇರಿದನು. ಆ ಮುನಿಗೆ ಶೃಂಗಿಯೆಂಬ ಹೆಸರಿನ ಒಬ್ಬಾನೊಬ್ಬ ಮಗನಿದ್ದನು.

೧೨. ಆ ಶೃಂಗಿಗೆ ಬ್ರಾಹ್ಮಣೋತ್ತಮನಾದ ಕೃಶನೆಂಬುವನು ಸ್ನೇಹಿತನಾಗಿದ್ದನು. ಕೃಶನೆಂಬ ಸಖನು ಶೃಂಗಿಯನ್ನು ಕುರಿತು ಇಂತೆಂದನು.

೧೩. ಸ್ನೇಹಿತನೆ! ನಿನ್ನ ತಂದೆಯು ಮೃತಸರ್ಪವನ್ನು ಕೊರಳಲ್ಲಿ ಧರಿಸಿಕೊಂಡು ಈಗ ಕುಳಿತಿರುವನಲ್ಲವೆ? ನಿನಗೆ ಈ ದರ್ಪವು ಸರಿಯಾದುದಲ್ಲ. ಮತ್ತು ನೀನು ವ್ಯರ್ಥವಾದ ಕೋಪವನ್ನೂ ಮಾಡಬೇಡ.

೧೪. ಇದನ್ನು ಕೇಳಿ ಶೃಂಗಿಯು ಅತ್ಯಂತ ಕೋಪಗೊಂಡವನಾಗಿ ಪರೀಕ್ಷಿನ್ಮಹಾರಾಜನಿಗೆ ಶಾಪವನ್ನು ಕೊಡಲು ಉದ್ಯುಕ್ತನಾದನು. ಯಾವನು ಮೂಢಬುದ್ಧಿಯುಳ್ಳವನಾಗಿ ಪೂಜ್ಯನಾದ ನನ್ನ ತಂದೆಯ ಮೈಯಲ್ಲಿ ಹಾವಿನ ಶವವನ್ನು ಹಾಕಿರುವನೊ, ಅವನು ಇಂದಿಗೆ ಏಳು ದಿವಸಗಳಲ್ಲಿ ತಕ್ಷಕನೆಂಬ ಸರ್ಪರಾಜನ ವಿಷದಿಂದ ಸಾವನ್ನು ಹೊಂದಲಿ.

೧೫–೧೬. ಇಂತು ಮುನಿಪುತ್ರನಾದ ಶೃಂಗಿಯು ಸುಭದ್ರಾಪೌತ್ರನಾದ ಪರೀಕ್ಷಿತನಿಗೆ ಶಾಪವನ್ನು ಕೊಟ್ಟನು. ತಂದೆಯಾದ ಶಮೀಕಮುನಿಯು ಮಗನಿಂದ ಮಹಾರಾಜನು ಶಾಪವನ್ನು ಪಡೆದ ವೃತ್ತಾಂತವನ್ನು ಕೇಳಿ ಶೃಂಗಿಯನ್ನು ಕುರಿತು ಹೇಳತೊಡಗಿದನು. ಸಕಲ ಲೋಕಗಳಿಗೂ ಪಾಲಕನಾದ ಮಹಾರಾಜನನ್ನು ಏಕೆ ಶಾಪಗ್ರಸ್ತನನ್ನಾಗಿ ಮಾಡಿದೆ?

ಅರಾಜಕೇ ವಯಂ ಲೋಕೇ ಸ್ಥಾಸ್ಯಾಮಃ ಕಥಮಂಜಸಾ ।
ಕ್ರೋಧೇನ ಪಾತಕಂ ಭೂಯಾದ್ದಯಯಾ ಪ್ರಾಪ್ಯತೇ ಸುಖಂ ॥ ೧೭ ॥
ಯಃ ಸಮುತ್ಪತಿತಂ ಕೋಪಂ ಕ್ಷಮಯೈವ ನಿರಸ್ಯತಿ ।
ಇಹ ಲೋಕೇ ಪರತ್ರಾಸಾವತ್ಯಂತಂ ಸುಖಮಶ್ನುತೇ ॥ ೧೮ ॥
ಕ್ಷಮಾಯುಕ್ತಾ ಹಿ ಪುರುಷಾ ಲಭಂತೇ ಶ್ರೇಯ ಉತ್ತಮಂ ॥ ೧೯ ॥
ತತಃ ಶಮೀಕಃ ಸ್ವಂ ಶಿಷ್ಯಂ ಪ್ರಾಹ ಗೌರಮುಖಾಭಿಧಂ ।
ಭೋ ಗೌರಮುಖ ಗತ್ವಾ ತ್ವಂ ವದ ಭೂಪಂ ಪರೀಕ್ಷಿತಂ ॥ ೨೦ ॥
ಇಮಂ ಶಾಪಂ ಮತ್ಸುತೋಕ್ತಂ ತಕ್ಷಕಾಧಿಪದಂಶನಂ ।
ಪುನರಾಯಾಹಿ ಶೀಘ್ರಂ ತ್ವಂ ಮತ್ಸಮೀಪಂ ಮಹಾಮತೇ ॥ ೨೧ ॥
ಏವಮುಕ್ತಃ ಶಮೀಕೇನ ಯಯೌ ಗೌರಮುಖೋ ನೃಪಂ ।
ಸಮೇತ್ಯ ಚಾಬ್ರವೀದ್ಭೂಪಂ ಸೌಭದ್ರೇಯಂ ಪರೀಕ್ಷಿತಂ ॥ ೨೨ ॥
ದೃಷ್ಟ್ವಾ ಸರ್ಪಂ ಪಿತುಃ ಸ್ಕಂಧೇ ತ್ವಯಾ ವಿನಿಹಿತಂ ಮೃತಂ ।
ಶಮೀಕಸ್ಯ ಸುತಃ ಶೃಂಗೀ ಶಶಾಪ ತ್ವಾಂ ರುಷಾನ್ವಿತಃ ॥ ೨೩ ॥

---

೧೭. ರಾಜನಿಲ್ಲದ ದೇಶದಲ್ಲಿ ನಾವು ಸುಖವಾಗಿ ಹೇಗೆ ಬಾಳಲಾಗುವುದು ? ಕ್ರೋಧದಿಂದ ಮಹಾಪಾಪವು ಸಂಭವಿಸುವುದು ಮತ್ತು ದಯೆಯಿಂದಲೇ ಸುಖವು ಲಭಿಸುವುದು.

೧೮–೧೯. ಯಾವನು ಉದ್ರೇಕದಿಂದ ಉಂಟಾದ ಕೋಪವನ್ನು ಸೈರಣೆಯಿಂದ ತಡೆಗಟ್ಟುವನೊ, ಅಂತಹವನೇ ಇಹಲೋಕದಲ್ಲಿಯೂ ಪರದಲ್ಲಿಯೂ ಅನತಿಶಯವಾದ ಸೌಖ್ಯವನ್ನು ಪಡೆಯುವನು. ಕ್ಷಮೆಯಿಂದೊಡಗೂಡಿದ ಪುರುಷರೇ ಉತ್ತಮವಾದ ಶ್ರೇಯಸ್ಸನ್ನು ಹೊಂದುವರು.

೨೦–೨೧. ಇಂತೆಂದು ಶಮೀಕನು ತನ್ನ ಶಿಷ್ಯನಾದ ಗೌರಮುಖನೆಂಬವನನ್ನು ಕರೆದು ಇಂತೆಂದನು. ಎಲೈ ಗೌರಮುಖನೆ! ನೀನು ಬೇಗ ಪ್ರಯಾಣ ಮಾಡಿ ಪರೀಕ್ಷಿದ್ರಾಜನನ್ನು ಕಂಡು ಶೃಂಗಿಯಿಂದ ತಕ್ಷಕದಂಶನ ರೂಪವಾದ ಶಾಪವನ್ನು ಪಡೆದಿರುವ ವೃತ್ತಾಂತವನ್ನು ಆತನಿಗೆ ತಿಳಿಸು. ಎಲೈ ಮಹಾ ಪ್ರಾಜ್ಞನೆ! ನೀನು ಮತ್ತೆ ಶೀಘ್ರವಾಗಿ ಹಿಂದಿರುಗಿ ನನ್ನ ಬಳಿಗೆ ಬರುವವನಾಗು.

೨೨. ಇಂತು ಶಮೀಕನಿಂದ ಹೇಳಲ್ಪಟ್ಟವನಾಗಿ ಗೌರಮುಖನು ಹಸ್ತಿನಾವತಿಯನ್ನೈದಿ ಸುಭದ್ರೆಯ ಮೊಮ್ಮಗನಾದ ಪರೀಕ್ಷಿದ್ರಾಜನನ್ನು ಕಂಡು ಇಂತೆಂದು ಹೇಳಿದನು.

೨೩. ನೀನು ಸತ್ತ ಹಾವಿನ ದೇಹವನ್ನು ತಂದೆಯ ಭುಜಗಳಲ್ಲಿಟ್ಟಿದ್ದುದನ್ನು ಕಂಡು, ಶಮೀಕನ ಮಗನಾದ ಶೃಂಗಿಯು ಅತ್ಯಂತ ಕೋಪಗೊಂಡವನಾಗಿ ನಿನ್ನನ್ನು ಶಪಿಸಿರುವನು.

ಏತದ್ದಿನಾತ್ಸಪ್ತಮೇಽಹ್ನಿ ತಕ್ಷಕೇಣ ಮಹಾಹಿನಾ ।
ದಷ್ಟೋ ವಿಷಾಗ್ನಿನಾ ದಗ್ಧೋ ಭೂಯಾದಾಶ್ವಭಿಮನ್ಯುಜಃ ॥ ೨೪ ॥
ಏವಂ ಶಶಾಪ ತ್ವಾಂ ರಾಜನ್ಶೃಂಗೀ ತಸ್ಯ ಮುನೇಃ ಸುತಃ ।
ಏತದ್ವಕ್ತುಂ ಪಿತಾ ತಸ್ಯ ಪಾಹಿಣೋನ್ಮಾಂ ತ್ವದಂತಿಕಂ ॥ ೨೫ ॥
ಇತೀರಯಿತ್ವಾ ತಂ ಭೂಪಮಾಶು ಗೌರಮುಖೋ ಯಯೌ ।
ಗತೇ ಗೌರಮುಖೇ ಪಶ್ಚಾದ್ರಾಜಾ ಶೋಕಪರಾಯಣಃ ॥ ೨೬ ॥
ಅಭ್ರಂಲಿಹಮಥೋತ್ತುಂಗಮೇಕಸ್ತಂಭಂ ಸುವಿಸ್ತೃತಂ ।
ಮಧ್ಯೇಗಂಗಂ ವ್ಯತನುತ ಮಂಡಪಂ ನೃಪಪುಂಗವಃ ॥ ೨೭ ॥
ಮಹಾಗಾರುಡಮಂತ್ರಜ್ಞೈರೋಷಧಿಜ್ಞೈಶ್ಚಿಕಿತ್ಸಕೈಃ ।
ತಕ್ಷಕಸ್ಯ ವಿಷಂ ಹಂತುಂ ಯತ್ನಂ ಕುರ್ವನ್ಸಮಾಹಿತಃ ॥ ೨೮ ॥
ಅನೇಕದೇವಬ್ರಹ್ಮರ್ಷಿರಾಜರ್ಷಿಪ್ರವರಾನ್ವಿತಃ ।
ಆಸ್ತೇ ತಸ್ಮಿನ್ನೃಪಸ್ತುಂಗೇ ಮಂಡಪೇ ವಿಷ್ಣುಭಕ್ತಿಮಾನ್ ॥ ೨೯ ॥

---

೨೪. ಇಂದಿನಿಂದ ಏಳನೆಯ ದಿನದಲ್ಲಿ ತಕ್ಷಕನೆಂಬ ಸರ್ಪರಾಜನಿಂದ ಕಚ್ಚಲ್ಪಟ್ಟು ಅಭಿಮನ್ಯುಕುಮಾರನಾದ ಪರೀಕ್ಷಿತನು ವಿಷಾಗ್ನಿಯಲ್ಲಿ ಭಸ್ಮೀಭೂತನಾಗಲಿ.

೨೫. ಎಲೈ ರಾಜನೆ! ಮುನಿಪುತ್ರನಾದ ಶೃಂಗಿಯು ನಿನಗೆ ಈ ರೀತಿಯಾದ ಶಾಪವನ್ನು ಕೊಟ್ಟಿರುವನು. ಈ ವಿಷಯವನ್ನು ನಿನಗೆ ತಿಳಿಸಲು ತಂದೆಯಾದ ಶಮೀಕನು ನನ್ನನ್ನು ನಿನ್ನ ಬಳಿಗೆ ಕಳುಹಿಸಿಕೊಟ್ಟಿರುವನು.

೨೬. ಇಂತೆಂದು ವಿಚಾರವನ್ನು ತಿಳಿಸಿ ಗೌರಮುಖನು ರಾಜನ ಸಮ್ಮುಖದಿಂದ ಹೊರಟುಹೋದನು. ಆತನು ಹೋದಮೇಲೆ ಮಹಾರಾಜನು ಅತ್ಯಂತ ಶೋಕವನ್ನು ಪಡೆದವನಾದನು.

೨೭. ಆ ರಾಜಶ್ರೇಷ್ಠನು ಗಂಗಾನದಿಯ ಮಧ್ಯದಲ್ಲಿ ಮೇಘಮಂಡಲವನ್ನು ಮುಟ್ಟುವಂತಹ ಸ್ತಂಭವೊಂದನ್ನು ನೆಲೆಗೊಳಿಸಿ ಅದರ ಮೇಲೆ ವಿಸ್ತಾರವಾದ ಮಂಟಪವೊಂದನ್ನು ಮಾಡಿಸಿದನು.

೨೮. ಮಹಾಗಾರುಡಮಂತ್ರಗಳನ್ನು ತಿಳಿದ ಮಾಂತ್ರಿಕರಿಂದಲೂ, ವನಸ್ಪತಿಗಳ ಗುಣಗಳನ್ನು ತಿಳಿದ ಚಿಕಿತ್ಸಕರಿಂದಲೂ, ಪರಿವೇಷ್ಟಿತನಾಗಿ ತಕ್ಷಕನ ವಿಷವನ್ನು ಕಳೆಯಲು ಸಮಾಧಾನಮನಸ್ಕನಾಗಿ ಪ್ರಯತ್ನಮಾಡತೊಡಗಿದನು.

೨೯. ಅಸಂಖ್ಯಾತರಾದ ದೇವರ್ಷಿಗಳು, ಬ್ರಹ್ಮರ್ಷಿಗಳು, ರಾಜರ್ಷಿಗಳು ಮುಂತಾದವರಿಂದ ಪರಿವೃತನಾಗಿ ಪರೀಕ್ಷಿದ್ರಾಜನು ಶ್ರೀಮನ್ನಾರಾಯಣನಲ್ಲಿ ಭಕ್ತಿಯನ್ನೇ ಮಾಡುತ್ತ ಎತ್ತರದಲ್ಲಿದ್ದ ತನ್ನ ಮಂಟಪದಲ್ಲಿ ಆಸೀನನಾಗಿದ್ದನು.

ತಸ್ಮಿನ್ನವಸರೇ ವಿಪ್ರಃ ಕಾಶ್ಯಪೋ ಮಾಂತ್ರಿಕೋತ್ತಮಃ ।
ರಾಜಾನಂ ರಕ್ಷಿತುಂ ಪ್ರಾಯಾತ್ತಕ್ಷಕಸ್ಯ ಮಹಾವಿಷಾತ್ ॥ ೩೦ ॥
ಸಪ್ತಮೇಽಹನಿ ವಿಪ್ರೇಂದ್ರೋ ದರಿದ್ರೋ ಧನಕಾಮುಕಃ ।
ಅತ್ರಾಂತರೇ ತಕ್ಷಕೋಽಪಿ ವಿಪ್ರರೂಪೀ ಸಮಾಯಯೌ ॥ ೩೧ ॥
ಮಧ್ಯೇಮಾರ್ಗಂ ವಿಲೋಕ್ಯಾಥ ಕಾಶ್ಯಪಂ ಪ್ರತ್ಯಭಾಷತ ।
ಬ್ರಾಹ್ಮಣ ತ್ವಂ ಕುತ್ರ ಯಾಸಿ ವದ ಮೇಽದ್ಯ ಮಹಾಮುನೇ ॥ ೩೨ ॥
ಇತಿ ಪೃಷ್ಟಸ್ತದಾವಾದೀತ್ಕಾಶ್ಯಪಸ್ತಕ್ಷಕಂ ದ್ವಿಜಃ ।
ಪರೀಕ್ಷಿತಂ ಮಹಾರಾಜಂ ತಕ್ಷಕೋಽದ್ಯ ವಿಷಾಗ್ನಿನಾ ॥ ೩೩ ॥
ಧಕ್ಷ್ಯತೇ ತಂ ಶಮಯಿತುಂ ತತ್ಸಮೀಪಮುಪೈಮ್ಯಹಂ ।
ಇತ್ಯುಕ್ತಃ ಸ ಚ ತಂ ವಿಪ್ರಂ ತಕ್ಷಕಃ ಪುನರಬ್ರವೀತ್ ॥ ೩೪ ॥
ತಕ್ಷಕೋಽಹಂ ದ್ವಿಜಶ್ರೇಷ್ಠ ಮಯಾ ದಷ್ಟಶ್ಚಿಕಿತ್ಸಿತುಂ ।
ನ ಶಕ್ಯೋಽಬ್ದಶತೇನಾಪಿ ಮಹಾಮಂತ್ರಾಯುತೈರಪಿ ॥ ೩೫ ॥

---

೩೦. ಆ ಸಮಯದಲ್ಲಿ ಮಂತ್ರಜ್ಞರಲ್ಲಿ ಸರ್ವಶ್ರೇಷ್ಠನಾದ ಕಾಶ್ಯಪನೆಂಬ ಬ್ರಾಹ್ಮಣನೋರ್ವನು ಮಹಾರಾಜನನ್ನು ತಕ್ಷಕನ ವಿಷದ ದೆಸೆಯಿಂದ ರಕ್ಷಿಸುವುದಕ್ಕಾಗಿ ಹೊರಟನು.

೩೧. ಆ ಬ್ರಾಹ್ಮಣನು ದರಿದ್ರನಾದುದರಿಂದ ಹಣದಾಸೆಯುಳ್ಳವನಾಗಿ ರಾಜನ ಜೀವಿತದ ಅವಧಿಯ ಏಳನೆಯ ದಿನದಲ್ಲಿ ನಡೆದುಬರುತ್ತಿದ್ದನು. ಆಗಲೇ ತಕ್ಷಕನೂ ಸಹ ಬ್ರಾಹ್ಮಣ ವೇಷವನ್ನು ಧರಿಸಿದವನಾಗಿ ಅದೇ ಮಾರ್ಗವಾಗಿ ಬರುತ್ತಿದ್ದನು.

೩೨. ಮಾರ್ಗಮಧ್ಯದಲ್ಲಿ ಕಾಶ್ಯಪನನ್ನು ಕಂಡು "ಬ್ರಾಹ್ಮಣೋತ್ತಮನಾದ ಮಹಾಮುನಿಯೆ! ನೀನು ಎಲ್ಲಿಗೆ ಹೊರಟಿರುವೆಯೆಂಬುದನ್ನು ನನಗೆ ತಿಳಿಸು" ಎಂಬುದಾಗಿ ಪ್ರಶ್ನೆಮಾಡಿದನು.

೩೩–೩೪. ಇಂತು ಕೇಳಲ್ಪಟ್ಟ ಕಾಶ್ಯಪನು ತಕ್ಷಕನನ್ನು ಕುರಿತು "ಮಹಾರಾಜನಾದ ಪರೀಕ್ಷಿತನನ್ನು ಇಂದು ತಕ್ಷಕನು ತನ್ನ ವಿಷದ ಜ್ವಾಲೆಗಳಿಂದ ಸುಡಲಿರುವನು; ನಾನು ಆ ವಿಷಾಗ್ನಿಯನ್ನು ಶಮನಮಾಡುವುದಕ್ಕಾಗಿ ಹೋಗುತ್ತಿರುವೆನು" ಎಂಬುದಾಗಿ ಉತ್ತರವನ್ನು ಕೊಟ್ಟನು. ಇಂತೆಂದ ಬ್ರಾಹ್ಮಣಶ್ರೇಷ್ಠನನ್ನು ಕುರಿತು ತಕ್ಷಕನು ಮತ್ತೆ ಹೇಳತೊಡಗಿದನು.

೩೫. "ಎಲೈ ಬ್ರಾಹ್ಮಣೋತ್ತಮನೆ! ನಾನೇ ತಕ್ಷಕನು. ನನ್ನಿಂದ ಸಂದಷ್ಟನಾದ ಯಾವ ಮನುಷ್ಯನೂ ಹತ್ತುಸಾವಿರ ಮಹಾಮಂತ್ರಗಳ ಪಠನದಿಂದಲೂ ಕೂಡ ನೂರಾರು ವರ್ಷಗಳಲ್ಲಿಯೂ ಚಿಕಿತ್ಸೆಯಿಂದ ಗುಣವನ್ನು ಹೊಂದಲಾರನು.

ಚಿಕಿತ್ಸಿತುಂ ಚೇನ್ಮದ್ದಷ್ಟಂ ಶಕ್ತಿರಸ್ತಿ ತವಾಧುನಾ ।
ಅನೇಕಯೋಜನೋಚ್ಛ್ರಾಯಂ ದಶಾಮ್ಯುಜ್ಜೀವಯ ದ್ರುಮಂ ॥ ೩೬ ॥
ತತೋ ಭವಾನ್ಸಮರ್ಥೋ ಹೀತ್ಯೇವಂ ಮೇ ಭಾತಿ ಹೇ ದ್ವಿಜ ।
ಇತೀರಯಿತ್ವಾ ತಂ ವೃಕ್ಷಮದಶತ್ತಕ್ಷಕಸ್ತದಾ ॥ ೩೭ ॥
ಅಭವದ್ಭಸ್ಮಸಾತ್ಸೋಽಪಿ ವೃಕ್ಷೋಽತ್ಯಂತಸಮುಚ್ಛ್ರಿತಃ ।
ಪೂರ್ವಮೇವ ನರಃ ಕಶ್ಚಿತ್ತಂ ವೃಕ್ಷಮಧಿರೂಢವಾನ್ ॥ ೩೮ ॥
ತಕ್ಷಕಸ್ಯ ವಿಷೋಲ್ಕಾಭಿಃ ಸೋಽಪಿ ದಗ್ಧೋಽಭವತ್ತದಾ ।
ತನ್ನರಂ ನ ವಿಜಜ್ಞಾತೇ ತೌ ಚ ಕಾಶ್ಯಪತಕ್ಷಕೌ ॥ ೩೯ ॥
ಕಾಶ್ಯಪಃ ಪ್ರತಿಜಜ್ಞೇಽಥ ತಕ್ಷಕಸ್ಯಾಪಿ ಶೃಣ್ವತಃ ।
ಮನ್ಮಂತ್ರಶಕ್ತಿಂ ಪಶ್ಯಂತು ಸರ್ವೇ ವಿಪ್ರಾದಯೋಽಧುನಾ ॥ ೪೦ ॥
ಇತೀರಯಿತ್ವಾ ತಂ ವೃಕ್ಷಂ ಭಸ್ಮೀಭೂತಂ ವಿಷಾಗ್ನಿನಾ ।
ಅಜೀವಯನ್ಮಂತ್ರಶಕ್ತ್ಯಾ ಕಾಶ್ಯಪೋ ಮಾಂತ್ರಿಕೋತ್ತಮಃ ॥ ೪೧ ॥

---

೩೬. ಆದರೆ ನನ್ನಿಂದ ಕೊಲ್ಲಲ್ಪಟ್ಟವನನ್ನು ಗುಣಪಡಿಸುವ ಶಕ್ತಿಯು ನಿನ್ನಲ್ಲಿರುವುದು ನಿಜವೇ ಆದಲ್ಲಿ ಅನೇಕ ಯೋಜನಗಳ ವಿಸ್ತಾರವುಳ್ಳ ಈ ಮಹಾ ವೃಕ್ಷವನ್ನು ನಾನು ಕಡಿಯುವೆನು. ನಿನ್ನ ಮಂತ್ರಶಕ್ತಿಯಿಂದ ಅದನ್ನು ಪುನರುಜ್ಜೀವನಗೊಳಿಸು.

೩೭. ಅದರಿಂದ ನೀನು ಸಮರ್ಥನೆಂಬುದನ್ನು ನಾನು ತಿಳಿದುಕೊಳ್ಳುವೆನು.” ಇಂತೆಂದು ತಕ್ಷಕನು ಹತ್ತಿರದಲ್ಲಿದ್ದ ವೃಕ್ಷವನ್ನು ಕಡಿದನು.

೩೮. ಆ ವೃಕ್ಷವು ಅತ್ಯಂತ ವಿಶಾಲವಾಗಿದ್ದರೂ ಕೂಡ ಕ್ಷಣಮಾತ್ರ ದಲ್ಲಿಯೇ ಭಸ್ಮೀಭೂತವಾಯಿತು. ಇದಕ್ಕೆ ಮುಂಚೆಯೇ ಒಬ್ಬಾನೊಬ್ಬ ಮನುಷ್ಯನು ಆ ಮರದ ಮೇಲೇರಿದ್ದನು.

೩೯. ತಕ್ಷಕನ ವಿಷದ ತೀಕ್ಷ್ಣಜ್ವಾಲೆಗಳಿಂದ ಆತನೂ ಕೂಡ ಆಗ ಸುಡಲ್ಪಟ್ಟನು. ಆತನು ಮರದ ಮೇಲಿದ್ದುದನ್ನು ಕಾಶ್ಯಪನಾಗಲಿ ತಕ್ಷಕ ನಾಗಲಿ ತಿಳಿದಿರಲಿಲ್ಲ.

೪೦. ಬಳಿಕ ತಕ್ಷಕನು ಕೇಳುವಂತೆಯೇ ಕಾಶ್ಯಪನು “ಇಲ್ಲಿ ನೆರೆದಿರುವ ಬ್ರಾಹ್ಮಣರಾದಿಯಾದ ಸಕಲರೂ ಈಗ ನನ್ನ ಮಂತ್ರಶಕ್ತಿಯನ್ನು ನೋಡುವ ರಾಗಲಿ” ಎಂಬುದಾಗಿ ಪ್ರತಿಜ್ಞೆಯನ್ನು ಮಾಡಿದನು.

೪೧. ಇಂತೆಂದು ಮಂತ್ರಶಾಸ್ತ್ರಪಾರಂಗತನಾದ ಕಾಶ್ಯಪಬ್ರಾಹ್ಮಣನು ತಕ್ಷಕನ ವಿಷದಿಂದ ಭಸ್ಮೀಭೂತವಾಗಿದ್ದ ಆ ವೃಕ್ಷವನ್ನು ಮತ್ತೆ ಜೀವಸಹಿತ ವನ್ನಾಗಿ ಮಾಡಿದನು.

ಸ ನರಸ್ತೇನ ವೃಕ್ಷೇಣ ಸಾಕಮುಜ್ಜೀವಿತೋಽಭವತ್ ।
ಅಥಾಬ್ರವೀತ್ತಕ್ಷಕಸ್ತಂ ಕಾಶ್ಯಪಂ ಮಂತ್ರಕೋವಿದಂ ॥ ೪೨ ॥
ಯಥಾ ಸ ಮುನಿವಾಙ್ಮಿಥ್ಯಾ ಭವೇದೇವಂ ಕುರು ದ್ವಿಜ ।
ಯತ್ತೇ ರಾಜಾ ಧನಂ ದದ್ಯಾತ್ತತೋಽಪಿ ದ್ವಿಗುಣಂ ಧನಂ ॥ ೪೩ ॥
ದದಾಮ್ಯಹಂ ನಿವರ್ತಸ್ವ ಶೀಘ್ರಮೇವ ದ್ವಿಜೋತ್ತಮ ।
ಇತ್ಯುಕ್ತ್ವಾನರ್ಘರತ್ನಾನಿ ತಸ್ಮೈ ದತ್ವಾ ಸ ತಕ್ಷಕಃ ॥ ೪೪ ॥
ನ್ಯವರ್ತಯತ್ಕಾಶ್ಯಪಂ ತಂ ಬ್ರಾಹ್ಮಣಂ ಮಂತ್ರಕೋವಿದಂ ।
ಅಲ್ಪಾಯುಷಂ ನೃಪಂ ದೃಷ್ಟ್ವಾ ಜ್ಞಾನದೃಷ್ಟ್ಯಾ ಸ ಕಾಶ್ಯಪಃ ।
ಸ್ವಾಶ್ರಮಂ ಪ್ರಯಯೌ ತೂಷ್ಣೀಂ ಲಬ್ಧರತ್ನಶ್ಚ ತಕ್ಷಕಾತ್ ॥ ೪೫ ॥
ಸೋಽಬ್ರವೀತ್ತಕ್ಷಕಸ್ಸರ್ವಾನ್ಸರ್ಪಾನಾಹೂಯ ತತ್ಕ್ಷಣೇ ।
ಯೂಯಂ ತಂ ನೃಪತಿಂ ಪ್ರಾಪ್ಯ ಮುನೀನಾಂ ವೇಷಧಾರಿಣಃ ॥ ೪೬ ॥
ಉಪಹಾರಫಲಾನ್ಯಾಶು ಪ್ರಯಚ್ಛತ ಪರೀಕ್ಷಿತೇ ।
ತಥೇತ್ಯುಕ್ತ್ವಾ ಸರ್ವಸರ್ಪಾದದೂ ರಾಜ್ಞೇ ಫಲಾನ್ಯಮೀ ॥ ೪೭ ॥

---

೪೨. ಮರದಮೇಲಿದ್ದ ಮನುಷ್ಯನೂ ಸಹ ಮರದೊಡನೆಯೇ ಜೀವಿತನಾದನು. ಇದನ್ನು ಕಂಡು ಮಂತ್ರಕೋವಿದನಾದ ಕಾಶ್ಯಪನನ್ನು ಕುರಿತು ತಕ್ಷಕನು ಹೇಳತೊಡಗಿದನು.

೪೩–೪೫. ಎಲೈ ಬ್ರಾಹ್ಮಣನೆ! ಶೃಂಗಿಮುನಿಯ ಮಾತು ಸುಳ್ಳಾಗದಂತೆ ನೀನು ನಡೆದುಕೊಳ್ಳುವವನಾಗು. ನಿನಗೆ ಮಹಾರಾಜನು ಎಷ್ಟು ಧನವನ್ನು ಕೊಡುವನೊ, ಅದಕ್ಕೆ ಎರಡರಷ್ಟು ಐಶ್ವರ್ಯವನ್ನು ನಾನೇ ನಿನಗೆ ಕೊಡುವೆನು. ವಿಪ್ರೋತ್ತಮನೆ! ನೀನು ಇಲ್ಲಿಂದಲೇ ಶೀಘ್ರವಾಗಿ ಹಿಂದಿರುಗು. ಇಂತೆಂದು ತಕ್ಷಕನು ಅಮೂಲ್ಯಗಳಾದ ಅನೇಕ ರತ್ನಗಳನ್ನು ಆ ಬ್ರಾಹ್ಮಣನಿಗೆ ಕೊಟ್ಟು ಮಂತ್ರಶಾಸ್ತ್ರ ನಿಷ್ಣಾತನಾದ ಆ ಕಾಶ್ಯಪನನ್ನು ಹಾಗೆಯೇ ಹಿಂದಕ್ಕೆ ಕಳುಹಿಸಿದನು. ಆ ಕಾಶ್ಯಪನಾದರೊ ತನ್ನ ಜ್ಞಾನದೃಷ್ಟಿಯಿಂದ ಪರೀಕ್ಷಿದ್ರಾಜನು ಅಲ್ಪಾಯುವಾಗಿರುವನೆಂಬುದನ್ನು ತಿಳಿದವನಾಗಿ ತಕ್ಷಕನಿಂದ ಅನೇಕ ರತ್ನಗಳನ್ನು ಪಡೆದು ಸುಮ್ಮನೆ ತನ್ನ ಆಶ್ರಮವನ್ನು ಕುರಿತು ಹೊರಟುಹೋದನು.

೪೬–೪೭. ಬಳಿಕ ತಕ್ಷಕನು ಸಕಲ ಸರ್ಪಗಳನ್ನೂ ತತ್‌ಕ್ಷಣದಲ್ಲಿಯೇ ಬರಮಾಡಿಕೊಂಡು "ನೀವೆಲ್ಲರೂ ಮುನಿಗಳ ವೇಷವನ್ನು ಧರಿಸಿದವರಾಗಿ ಮಹಾರಾಜನಲ್ಲಿಗೆ ಹೋಗಿ ಆತನಿಗೆ ಫಲಾಹಾರಕ್ಕಾಗಿ ವಿಧವಿಧಗಳಾದ ಫಲಗಳನ್ನು ಸಮರ್ಪಿಸಿರಿ" ಎಂಬುದಾಗಿ ಅಪ್ಪಣೆಯನ್ನು ಮಾಡಿದನು. ಹಾಗೆಯೇ ಆಗಲೆಂದು ಸಕಲ ನಾಗರೂ ಪರೀಕ್ಷಿದ್ರಾಜನಿಗೆ ಅನೇಕ ಫಲಗಳನ್ನು ಕೊಟ್ಟರು.

ತಕ್ಷಕೋಽಪಿ ತಥಾ ತತ್ರ ಕಸ್ಮಿಂಶ್ಚಿದ್ಬದರೀಫಲೇ ।
ಕೃಮಿವೇಷಧರೋ ಭೂತ್ವಾ ವ್ಯತಿಷ್ಠದ್ದಂಶಿತುಂ ನೃಪಂ ॥ ೪೮ ॥
ಅಥ ರಾಜಾ ಪ್ರದತ್ತಾನಿ ಸರ್ವೈರ್ಬ್ರಾಹ್ಮಣರೂಪಕೈಃ ।
ಪರೀಕ್ಷಿನ್ಮಂತ್ರಿವೃದ್ಧೇಭ್ಯೋ ದತ್ವಾ ಸರ್ವಫಲಾನ್ಯಪಿ ॥ ೪೯ ॥
ಕೌತೂಹಲೇನ ಜಗ್ರಾಹ ಸ್ಥೂಲಮೇಕಂ ಕರೇ ಫಲಂ ।
ತಸ್ಮಿನ್ನವಸರೇ ಸೂರ್ಯೋಽಪ್ಯಸ್ತಾಚಲಮುಗಾಹತ ॥ ೫೦ ॥
ಮಿಥ್ಯಾ ಋಷಿವಚೋ ಮಾಭೂದಿತಿ ತತ್ರತ್ಯಮಾನವಾಃ ।
ಅನ್ಯೋನ್ಯಮುವದನ್ಸರ್ವೇ ಬ್ರಾಹ್ಮಣಾಶ್ಚ ನೃಪಾಸ್ತದಾ ॥ ೫೧ ॥
ಏವಂ ವದತ್ಸು ಸರ್ವೇಷು ಫಲೇ ತಸ್ಮಿನ್ನದೃಶ್ಯತ ।
ಸಾಧು ರಕ್ತಃ ಕೃಮಿಃ ಸರ್ವೈ ರಾಜ್ಞಾ ಚಾಪಿ ಪರೀಕ್ಷಿತಾ ॥ ೫೨ ॥
ಅಯಂ ಕಿಂ ಮಾಂ ದಶೇದದ್ಯ ಕೃಮಿರಿತ್ಯುಕ್ತವಾನ್ನೃಪಃ ।
ನಿದಧೇ ತತ್ಫಲಂ ಕಂಠೇ ಸಕೃಮಿ ದ್ವಿಜಸತ್ತಮಾಃ ॥ ೫೩ ॥
ತಕ್ಷಕೋಽಸ್ಮಿನ್ಸ್ಥಿತಃ ಕಂಠೇ ಕೃಮಿರೂಪೀ ಫಲೇ ತದಾ ।
ನಿರ್ಗತ್ಯ ತತ್ಫಲಾದಾಶು ನೃಪದೇಹಮವೇಷ್ಟಯತ್ ॥ ೫೪ ॥

---

೪೮–೫೦. ತಕ್ಷಕನೂ ಕೂಡ ಕ್ರಿಮಿಯ ವೇಷವನ್ನು ತಾಳಿದವನಾಗಿ ಮಹಾರಾಜನನ್ನು ಕಡಿಯುವುದಕ್ಕಾಗಿ ಒಂದಾನೊಂದು ಬದರೀಫಲದಲ್ಲಿ ಸೇರಿ ಕೊಂಡಿದ್ದನು. ಆಗ ಪರೀಕ್ಷಿದ್ರಾಜನು ಬ್ರಾಹ್ಮಣವೇಷಧಾರಿಗಳಾದ ಅವರಿಂದ ಕೊಡಲ್ಪಟ್ಟ ಸಕಲ ಫಲಗಳನ್ನೂ ತನ್ನ ಮಂತ್ರಿ ವೃದ್ಧರಿಗೆ ಕೊಟ್ಟವನಾಗಿ ತಾನೂ ಕೂಡ ಕುತೂಹಲದಿಂದ ದಪ್ಪವಾದ ಒಂದು ಫಲವನ್ನು ಕೈಯಲ್ಲಿ ತೆಗೆದು ಕೊಂಡನು. ಆ ಸಮಯಕ್ಕೆ ಸರಿಯಾಗಿ ಸಾಯಂಸಮಯವಾಗಲು ಸೂರ್ಯನು ಅಸ್ತಾಚಲವನ್ನು ಸೇರುವವನಾದನು.

೫೧. ಅಲ್ಲಿದ್ದ ಸಕಲ ಮನುಷ್ಯರೂ ಬ್ರಾಹ್ಮಣರೂ ರಾಜರೂ "ಮಹರ್ಷಿಯ ಮಾತುಗಳು ಸುಳ್ಳಾಗದಿರಲಿ" ಎಂದು ತಮ್ಮತಮ್ಮಲ್ಲಿಯೇ ಮಾತನಾಡಿ ಕೊಳ್ಳುತ್ತಿದ್ದರು.

೫೨. ಇಂತು ಸಕಲರೂ ಹೇಳುತ್ತಿರಲು ಆ ಫಲದಲ್ಲಿ ಸಾಧುವೂ ರಕ್ತವರ್ಣ ಯುಕ್ತವೂ ಆದ ಕ್ರಿಮಿಯೊಂದು ಕಾಣಿಸಿಕೊಂಡಿತು. ಅದನ್ನು ಮಹಾರಾಜನೂ ಮಿಕ್ಕವರೂ ನೋಡುವವರಾದರು.

೫೩. ಎಲೈ ಬ್ರಾಹ್ಮಣಶ್ರೇಷ್ಠರಿರಾ! ಪರೀಕ್ಷಿದ್ರಾಜನು "ಈ ಕ್ರಿಮಿಯೇ ಇಂದು ನನ್ನನ್ನು ಕಡಿಯುವುದೇನು?" ಎಂದು ಹೇಳುತ್ತ ಕ್ರಿಮಿಸಹಿತವಾದ ಆ ಫಲವನ್ನು ತನ್ನ ಕಂಠದಲ್ಲಿರಿಸಿಕೊಂಡನು.

೫೪. ಆ ಫಲದಲ್ಲಿ ತಕ್ಷಕನೇ ಕೃಮಿರೂಪದಿಂದ ನೆಲಸಿದ್ದನು. ಮತ್ತು

ತಕ್ಷಕಾವೇಷ್ಟಿತೇ ಭೂಪೇ ಪಾರ್ಶ್ವಸ್ಥಾ ದುದ್ರುವುರ್ಭಯಾತ್ ।
ಅನಂತರಂ ನೃಪೋ ವಿಪ್ರಾಸ್ತಕ್ಷಕಸ್ಯ ವಿಷಾಗ್ನಿನಾ ॥ ೫೫ ॥
ದಗ್ಧೋಽಭೂದ್ಭಸ್ಮಸಾದಾಶು ಸಪ್ರಾಸಾದೋ ಬಲೀಯಸಾ ।
ಕೃತ್ವೌರ್ಧ್ವದೇಹಿಕಂ ತಸ್ಯ ನೃಪಸ್ಯ ಸಪುರೋಹಿತಾಃ ॥ ೫೬ ॥
ಮಂತ್ರಿಣಸ್ತತ್ಸುತಂ ರಾಜ್ಯೇ ಜನಮೇಜಯನಾಮಕಂ ।
ರಾಜಾನಮಭ್ಯಷಿಂಚನ್ಸ್ವೈ ಜಗದ್ರಕ್ಷಣವಾಂಛಯಾ ॥ ೫೭ ॥
ತಕ್ಷಕಾದ್ರಕ್ಷಿತುಂ ಭೂಪಮಾಯಾತಃ ಕಾಶ್ಯಪಾಭಿಧಃ ।
ಯೋ ಬ್ರಾಹ್ಮಣೋ ಮುನಿಶ್ರೇಷ್ಠಃ ಸ ಸರ್ವೈರ್ನಿಂದಿತೋ ಜನೈಃ ॥ ೫೮ ॥
ಬಭ್ರಾಮ ಸಕಲಾನ್ದೇಶಾನ್ಶಿಷ್ಟೈಃ ಸರ್ವೈಶ್ಚ ದೂಷಿತಃ ।
ಅವಸ್ಥಾನಂ ನ ಲೇಭೇ ಸ ಗ್ರಾಮೇ ವಾಪ್ಯಾಶ್ರಮೇಽಪಿ ವಾ ॥ ೫೯ ॥
ಯಾನ್ಯಾನ್ದೇಶಾನಸೌ ಯಾತಸ್ತತ್ರ ತತ್ರ ಮಹಾಜನೈಃ ।
ತತ್ತದ್ದೇಶಾನ್ನಿರಸ್ತಃ ಸನ್ಶಾಕಲ್ಯಂ ಶರಣಂ ಯಯೌ ॥ ೬೦ ॥

---

ಶೀಘ್ರವಾಗಿ ಫಲದಿಂದ ಹೊರಕ್ಕೆ ಬಂದು ರಾಜನ ಕಂಠವನ್ನು ಹಿಡಿದು ಕ್ಷಣ ಮಾತ್ರದಲ್ಲಿಯೇ ಆತನ ದೇಹವನ್ನೆಲ್ಲ ಆವರಿಸಿಕೊಂಡನು.

೫೫–೫೭. ಮಹಾರಾಜನು ತಕ್ಷಕನಿಂದ ಆವೃತನಾಗಲು ಪಕ್ಕದಲ್ಲಿದ್ದವರೆಲ್ಲರೂ ಭಯದಿಂದ ಓಡಿಹೋದರು. ಬಳಿಕ ದುಸ್ಸಹಗಳಾದ ತಕ್ಷಕನ ವಿಷಜ್ವಾಲೆಗಳಿಂದ ಪರೀಕ್ಷಿದ್ರಾಜನು ಮಂಟಪಸಮೇತನಾಗಿ ಸುಟ್ಟು ಕ್ಷಣದಲ್ಲಿಯೇ ಭಸ್ಮೀಭೂತನಾದನು. ಬಳಿಕ ಮಂತ್ರಿಗಳೆಲ್ಲರೂ ಪುರೋಹಿತರೊಡನೆ ಸೇರಿ ಮಹಾರಾಜನಿಗೆ ಔರ್ಧ್ವದೇಹಿಕ ಕರ್ಮಗಳನ್ನೆಲ್ಲ ನೆರವೇರಿಸಿ ಲೋಕವು ಅನಾಯಕವಾಗಬಾರದೆಂಬ ಇಚ್ಛೆಯಿಂದ ಆತನ ಮಗನಾದ ಜನಮೇಜಯನೆಂಬುವನಿಗೆ ರಾಜ್ಯಾಭಿಷೇಕವನ್ನು ಮಾಡಿದರು.

೫೮–೫೯. ತಕ್ಷಕನ ವಿಷದಿಂದ ಪರೀಕ್ಷಿದ್ರಾಜನನ್ನು ರಕ್ಷಿಸಲು ಬಂದ ಬ್ರಾಹ್ಮಣನೂ ಮುನಿವರ್ಯನೂ ಆದ ಕಾಶ್ಯಪನೆಂಬುವನು ಸಕಲ ಜನರಿಂದಲೂ ದೂಷಿಸಲ್ಪಟ್ಟವನಾಗಿ ಸಕಲ ದೇಶಗಳನ್ನು ತಿರುಗಿದರೂ, ಎಲ್ಲಿಯೂ ಶಿಷ್ಟರಾದವರು ಈತನನ್ನು ತಮ್ಮಲ್ಲಿ ಸೇರಿಸಿಕೊಳ್ಳದಾದರು. ಆತನಿಗೆ ಗ್ರಾಮದಲ್ಲಾಗಲಿ ಆಶ್ರಮದಲ್ಲಾಗಲಿ ನಿಲ್ಲಲು ಸ್ಥಳವು ಸಿಕ್ಕಲಿಲ್ಲ.

೬೦. ಈತನು ಯಾವ ಯಾವ ದೇಶಗಳನ್ನು ನೋಡಲು ಹೋದನೊ, ಅಲ್ಲೆಲ್ಲ ಮಹಾಜನರು ಈತನನ್ನು ತಮ್ಮ ದೇಶದಿಂದ ಹೊರಗೆಡಹಿದರು. ಕಡೆಗೆ ಕಾಶ್ಯಪನು ಶಾಕಲ್ಯನೆಂಬ ಮುನಿವರ್ಯನನ್ನು ಶರಣುಹೊಕ್ಕನು.

ಪ್ರಣಮ್ಯ ಶಾಕಲ್ಯಮುನಿಂ ಕಾಶ್ಯಪೋ ನಿಂದಿತೋ ಜನೈಃ ।
ಇದಂ ವಿಜ್ಞಾಪಯಾಮಾಸ ಶಾಕಲ್ಯಾಯ ಮಹಾತ್ಮನೇ ॥ ೬೧ ॥

ಕಾಶ್ಯಪ ಉವಾಚ :—

ಭಗವನ್ಸರ್ವಧರ್ಮಜ್ಞ ಶಾಕಲ್ಯ ಹರಿವಲ್ಲಭ ।
ಮುನಯೋ ಬ್ರಾಹ್ಮಣಾಶ್ಚಾನ್ಯೇ ಮಾಂ ನಿಂದಂತಿ ಸುಹೃಜ್ಜನಾಃ ॥ ೬೨ ॥
ನಾಸ್ಯಾಹಂ ಕಾರಣಂ ಜಾನೇ ಕಿಂ ಮಾಂ ನಿಂದಂತಿ ಮಾನವಾಃ ॥ ೬೩ ॥
ಬ್ರಹ್ಮಹತ್ಯಾ ಸುರಾಪಾನಂ ಗುರುಸ್ತ್ರೀಗಮನಂ ತಥಾ ।
ಸ್ತೇಯಂ ಸಂಸರ್ಗದೋಷೋ ವಾ ಮಯಾ ನಾಚರಿತಂ ಕ್ವಚಿತ್ ॥ ೬೪ ॥
ಅನ್ಯಾನ್ಯಪಿ ಚ ಪಾಪಾನಿ ನ ಕೃತಾನಿ ಮಯಾ ಮುನೇ ।
ತಥಾಪಿ ನಿಂದಂತಿ ಜನಾ ವೃಥಾ ಮಾಂ ಬಾಂಧವಾದಯಃ ॥ ೬೫ ॥
ಜಾನಾಸಿ ಚೇತ್ತ್ವಂ ಶಾಕಲ್ಯ ಮಯಾ ದೋಷಂ ಕೃತಂ ವದ ॥ ೬೬ ॥
ಉಕ್ತೋಽಥ ಕಾಶ್ಯಪೇನೈವ ಶಾಕಲ್ಯಾಖ್ಯೋ ಮಹಾಮುನಿಃ ।
ಕ್ಷಣಂ ಧ್ಯಾತ್ವಾ ಬಭಾಷೇ ತಂ ಕಾಶ್ಯಪಂ ದ್ವಿಜಸತ್ತಮಾಃ ॥ ೬೭ ॥

---

೬೧. ಜನರಿಂದ ನಿಂದೆಯನ್ನು ಪಡೆದ ಕಾಶ್ಯಪನು ಶಾಕಲ್ಯ ಮಹಾಮುನಿಗೆ ನಮಸ್ಕರಿಸಿ ಮಹಾತ್ಮನಾದ ಆತನಿಗೆ ಇಂತೆಂದು ವಿಜ್ಞಾಪನೆಯನ್ನು ಮಾಡಿಕೊಂಡನು.

೬೨–೬೪. ಕಾಶ್ಯಪನು ಹೇಳುತ್ತಾನೆ :—"ವಿಷ್ಣುಭಕ್ತನಾದ ಶಾಕಲ್ಯನೆ! ನೀನು ಸರ್ವಶಕ್ತನು. ಸರ್ವಧರ್ಮಗಳನ್ನೂ ತಿಳಿದವನು. ಮುನಿಗಳೂ, ಬ್ರಾಹ್ಮಣರೂ, ಇತರ ಸ್ನೇಹಿತರೂ ನನ್ನನ್ನು ನಿಂದಿಸುತ್ತಿರುವರು. ಮನುಷ್ಯರು ನನ್ನನ್ನು ಏತಕ್ಕೆ ಈ ರೀತಿ ನಿಂದಿಸುತ್ತಿರುವರೆಂಬುದನ್ನು ಮಾತ್ರ ತಿಳಿಯಲಾರದವನಾಗಿರುವೆನು. ಬ್ರಾಹ್ಮಣ ವಧೆಯಾಗಲಿ, ಸುರಾಸೇವನೆಯಾಗಲಿ, ಗುರುಸ್ತ್ರೀಗಮನವಾಗಲಿ, ಇತರರ ಧನಾಪಹರಣವಾಗಲಿ, ಇವುಗಳನ್ನು ಮಾಡುವವರ ಸಹವಾಸವಾಗಲಿ ನನ್ನಿಂದ ಎಂದೂ ಮಾಡಲ್ಪಡಲಿಲ್ಲವು.

೬೫. ಎಲೈ ಮಹಾಮುನಿಯೆ! ಇತರ ಪಾಪಗಳನ್ನೂ ಕೂಡ ನಾನು ಎಂದೂ ಮಾಡಿದವನಲ್ಲ. ಹಾಗಾದರೂ ಬಂಧುಗಳೇ ಮೊದಲಾದ ಜನರೆಲ್ಲರೂ ನಿಷ್ಕಾರಣವಾಗಿಯೇ ನನ್ನನ್ನು ನಿಂದಿಸುತ್ತಿರುವರು.

೬೬. ಎಲೈ ಶಾಕಲ್ಯನೆ! ನಾನೇನಾದರೂ ದೋಷವನ್ನಾಚರಿಸಿರುವುದನ್ನು ನೀನು ತಿಳಿದಿದ್ದರೆ ಅದನ್ನು ನನಗೆ ತಿಳಿಸುವವನಾಗು."

೬೭. ಇಂತು ಕಾಶ್ಯಪನಿಂದ ಕೇಳಲ್ಪಟ್ಟ ಮಹಾಮುನಿಯಾದ ಶಾಕಲ್ಯನು ಕ್ಷಣಕಾಲ ಧ್ಯಾನದಲ್ಲಿದ್ದು ಸಕಲ ವೃತ್ತಾಂತವನ್ನೂ ತಿಳಿದವನಾಗಿ ಕಾಶ್ಯಪನನ್ನು ಕುರಿತು ಹೇಳತೊಡಗಿದನು.

ಶಾಕಲ್ಯ ಉವಾಚ:—

ಪರೀಕ್ಷಿತಂ ಮಹಾರಾಜಂ ತಕ್ಷಕಾದ್ರಕ್ಷಿತುಂ ಭವಾನ್ ।
ಆಯಾಸೀದರ್ಧಮಾರ್ಗೇ ತು ತಕ್ಷಕೇನ ನಿವಾರಿತಃ ॥ ೬೮ ॥
ಚಿಕಿತ್ಸಿತುಂ ಸಮರ್ಥೋಽಪಿ ವಿಷರೋಗಾದಿಪೀಡಿತಂ ।
ಯೋ ನ ರಕ್ಷತಿ ಲೋಕೇಽಸ್ಮಿನ್ಸ ತಮಾಹುರ್ಬ್ರಹ್ಮಘಾತಕಂ ॥ ೬೯ ॥
ಕ್ರೋಧಾತ್ಕಾಮಾದ್ಭಯಾಲ್ಲೋಭಾನ್ಮಾತ್ಸರ್ಯಾನ್ಮೋಹತೋಽಪಿ ವಾ ।
ಯೋ ನ ರಕ್ಷತಿ ವಿಪ್ರೇಂದ್ರ ವಿಷರೋಗಾತುರಂ ನರಂ ॥ ೭೦ ॥
ಬ್ರಹ್ಮಹಾ ಚ ಸುರಾಪೀ ಚ ಸ್ತೇಯೀ ಚ ಗುರುತಲ್ಪಗಃ ।
ಸಂಸರ್ಗದೋಷದುಷ್ಟಶ್ಚ ನಾಪಿ ತಸ್ಯ ವಿನಿಷ್ಕೃತಿಃ ॥ ೭೧ ॥
ಕನ್ಯಾವಿಕ್ರಯಿಣಶ್ಚಾಪಿ ಹಯವಿಕ್ರಯಿಣಸ್ತಥಾ ।
ಕೃತಘ್ನಸ್ಯಾಪಿ ಶಾಸ್ತ್ರೇಷು ಪ್ರಾಯಶ್ಚಿತ್ತಂ ತು ವಿದ್ಯತೇ ॥ ೭೨ ॥
ವಿಷರೋಗಾತುರಂ ಯಸ್ತು ಸಮರ್ಥೋಽಪಿ ನ ರಕ್ಷತಿ ।
ನ ತಸ್ಯ ನಿಷ್ಕೃತಿಃ ಪ್ರೋಕ್ತಾ ಪ್ರಾಯಶ್ಚಿತ್ತಾಯುತೈರಪಿ ॥ ೭೩ ॥

---

೬೮. ಶಾಕಲ್ಯನು ಹೇಳುತ್ತಾನೆ:—"ನೀನು ಪರೀಕ್ಷಿನ್ಮಹಾರಾಜನನ್ನು ತಕ್ಷಕನ ವಿಷದಿಂದ ರಕ್ಷಿಸಲು ಹೊರಟು ಬರುತ್ತ ಮಾರ್ಗಮಧ್ಯದಲ್ಲಿಯೇ ಆತನಿಂದ ಹಿಂದಿರುಗಿಸಲ್ಪಟ್ಟೆ.

೬೯. ಈ ಲೋಕದಲ್ಲಿ ವಿಷರೋಗದಿಂದ ಪೀಡಿತನಾದವನನ್ನು ಗುಣಪಡಿಸಲು ಶಕ್ತನಾಗಿದ್ದರೂ ಯಾವನು ಚಿಕಿತ್ಸೆಮಾಡುವುದಿಲ್ಲವೊ, ಅವನನ್ನು ಬ್ರಹ್ಮಘಾತಕನೆಂಬುದಾಗಿ ಕರೆಯುವರು.

೭೦–೭೧. ಕೋಪದಿಂದಾಗಲಿ, ಕಾಮದಿಂದಾಗಲಿ, ಭಯದಿಂದಾಗಲಿ, ಧನಾಶೆಯಿಂದಾಗಲಿ, ಮಾತ್ಸರ್ಯದಿಂದಲೇ ಆಗಲಿ, ಮೋಹಗೊಂಡು ಯಾವನು ವಿಷರೋಗಾವಿಷ್ಟನಾದ ಮನುಷ್ಯನನ್ನು ಕಾಪಾಡದಿರುವನೊ, ಅವನೇ ಬ್ರಹ್ಮಘ್ನನು, ಸುರಾಪಾನ ಮಾಡಿದವನು, ಕಳ್ಳನು, ಗುರುತಲ್ಪಗಾಮಿಯು, ಅಂತಹರ ಸಹವಾಸದಿಂದ ದುಷ್ಟನೂ ಆದವನು. ಅಂತಹನಿಗೆ ಯಾವ ಪ್ರಾಯಶ್ಚಿತ್ತವೂ ಇಲ್ಲವೇ ಇಲ್ಲ.

೭೨. ಕನ್ಯೆಯನ್ನು ಮಾರಿದವನಿಗೂ, ಕುದುರೆಯನ್ನು ವಿಕ್ರಯಿಸಿದವನಿಗೂ, ಪೂರ್ವದಲ್ಲಿ ಮಾಡಿದ ಉಪಕಾರವನ್ನು ಸ್ಮರಿಸದವನಿಗೂ ಶಾಸ್ತ್ರಗಳಲ್ಲಿ ಪ್ರಾಯಶ್ಚಿತ್ತವು ಹೇಳಲ್ಪಟ್ಟಿರುವುದು.

೭೩. ಆದರೆ ಯಾವನು ಸಮರ್ಥನಾದರೂ ವಿಷದಿಂದ ನರಳುತ್ತಿರುವವನನ್ನು ಗುಣಪಡಿಸುವುದಿಲ್ಲವೊ, ಅವನಿಗೆ ಹತ್ತು ಸಾವಿರ ಪ್ರಾಯಶ್ಚಿತ್ತಗಳಿಂದಲೂ ಸಹ ಪಾಪವು ಕಳೆಯುವುದೆಂಬುದನ್ನು ಎಲ್ಲಿಯೂ ಹೇಳಿರುವುದಿಲ್ಲ.

ನ ತೇನ ಸಹ ಪಙ್ಕ್ತೌ ಚ ಭುಂಜೀತ ಸುಕೃತೀ ಜನಃ ।
ನ ತೇನ ಸಹ ಭಾಷೇತ ನ ಪಶ್ಯೇತ್ತಂ ನರಂ ಕ್ವಚಿತ್ ॥ ೨೪ ॥
ತತ್ಸಂಭಾಷಣಮಾತ್ರೇಣ ಮಹಾಪಾತಕಭಾಗ್ಭವೇತ್ ।
ಪರೀಕ್ಷಿತ್ಸ ಮಹಾರಾಜಃ ಪುಣ್ಯಶ್ಲೋಕಶ್ಚ ಧಾರ್ಮಿಕಃ ॥ ೨೫ ॥
ವಿಷ್ಣುಭಕ್ತೋ ಮಹಾಯೋಗೀ ಚಾತುರ್ವರ್ಣ್ಯಸ್ಯ ರಕ್ಷಿತಾ ।
ವ್ಯಾಸಪುತ್ರಾದ್ಧರಿಕಥಾಂ ಶ್ರುತವಾನ್ಭಕ್ತಿಪೂರ್ವಕಂ ॥ ೨೬ ॥
ಅರಕ್ಷಿತ್ವಾ ನೃಪಂ ತಂ ತು ವಚನಾತ್ತಕ್ಷಕಸ್ಯ ಯತ್ ।
ನಿವೃತ್ತಸ್ತೇನ ವಿಪ್ರೇಂದ್ರೈರ್ಬಾಂಧವೈರಪಿ ದೂಷ್ಯಸೇ ॥ ೨೭ ॥
ಸ ಪರೀಕ್ಷಿನ್ಮಹಾರಾಜೋ ಯದ್ಯಪಿ ಕ್ಷಣಜೀವಿತಃ ।
ತಥಾಪಿ ಯಾವನ್ಮರಣಂ ಬುಧೈಃ ಕಾರ್ಯಂ ಚಿಕಿತ್ಸಿತಂ ॥ ೨೮ ॥
ಯಾವತ್ಕಂಠಗತಾಃ ಪ್ರಾಣಾಃ ಮುಮೂರ್ಷೋರ್ಮಾನವಸ್ಯ ಹಿ ।
ತಾವಚ್ಚಿಕಿತ್ಸಾ ಕರ್ತವ್ಯಾ ಕಾಲಸ್ಯ ಕುಟಿಲಾ ಗತಿಃ ॥ ೨೯ ॥

---

೨೪. ಪುಣ್ಯವಂತರಾದ ಜನರು ಅಂತಹವನೊಡನೆ ಸಹಪಙ್ಕ್ತಿಯಲ್ಲಿ ಊಟವನ್ನು ಮಾಡುವುದಿಲ್ಲ. ಆ ಮನುಷ್ಯನೊಡನೆ ಮಾತನಾಡುವುದಿಲ್ಲ. ಎಂದಿಗೂ ಅವನ ಮುಖವನ್ನೂ ನೋಡುವುದಿಲ್ಲ.

೨೫. ಅವನೊಡನೆ ಸಂಭಾಷಣೆಯನ್ನು ಮಾಡಿದ ಮಾತ್ರದಿಂದಲೇ ಮನುಷ್ಯನು ಮಹಾಪಾತಕಗಳಿಗೆ ಭಾಗಿಯಾಗುವನು. ಮಹಾರಾಜನಾದ ಪರೀಕ್ಷಿತನು ಪುಣ್ಯಕೀರ್ತಿಯುಳ್ಳವನು. ಧರ್ಮೈಕತತ್ಪರನು.

೨೬. ಅಲ್ಲದೆ ವಿಷ್ಣುಭಕ್ತನು. ಮಹಾಯೋಗಸಂಪನ್ನನು. ಚಾತುರ್ವರ್ಣ್ಯಗಳನ್ನೂ ತಮ್ಮ ತಮ್ಮ ಧರ್ಮಗಳಲ್ಲಿ ರಕ್ಷಿಸಿಕೊಂಡಿದ್ದವನು. ಮತ್ತು ಶ್ರದ್ಧಾಭಕ್ತಿಗಳಿಂದ ಕೂಡಿದವನಾಗಿ ಶುಕಮುನಿಯ ಕಡೆಯಿಂದ ಶ್ರೀಮನ್ನಾರಾಯಣನ ದಿವ್ಯಚರಿತ್ರೆಯನ್ನು ಕೇಳಿದವನು.

೨೭. ಇಂತಹ ಮಹಾರಾಜನನ್ನು ರಕ್ಷಿಸಲೊಲ್ಲದೆ ತಕ್ಷಕನ ಮಾತನ್ನು ಕೇಳಿ ಅರ್ಧಮಾರ್ಗದಲ್ಲಿಯೇ ನೀನು ಹಿಂದಿರುಗಿದ ಕಾರಣದಿಂದ ಬ್ರಾಹ್ಮಣೋತ್ತಮರಿಂದಲೂ, ಬಾಂಧವರಿಂದಲೂ ದೂಷಿಸಲ್ಪಡುತ್ತಿರುವೆ.

೨೮. ಆ ಪರೀಕ್ಷಿನ್ಮಹಾರಾಜನು ಅಲ್ಪಜೀವಿತವುಳ್ಳವನೇ ಆಗಿದ್ದಿರಬಹುದು. ಆದರೂ ಪ್ರಾಜ್ಞರು ಮರಣವಾಗುವವರೆಗೂ ಚಿಕಿತ್ಸೆಯ ಪ್ರಯತ್ನವನ್ನು ಮಾಡಬೇಕು.

೨೯. ಮೃತ್ಯೂನ್ಮುಖನಾದ ಮನುಷ್ಯನ ಪ್ರಾಣಗಳು ಕಂಠಗತಗಳಾಗುವವರೆಗೂ ಚಿಕಿತ್ಸೆಯನ್ನು ನಡೆಸಬೇಕು. ಕಾಲದ ಗತಿಯನ್ನು ತಿಳಿಯಲು ಅಸಾಧ್ಯವಾಗಿರುವುದು.

ಇತಿಪ್ರಾಹುಃ ಪುರಾ ಶ್ಲೋಕಂ ಭಿಷಗ್ವಿದ್ಯಾಬ್ಧಿಪಾರಗಾಃ ।
ತತಶ್ಚಿಕಿತ್ಸಾಶಕ್ತೋಽಪಿ ಯಸ್ಮಾದಕೃತಭೇಷಜಃ ॥ ೮೦ ॥
ಅರ್ಧಮಾರ್ಗನಿವೃತ್ತಶ್ಚ ತೇನ ತ್ವಂ ಗರ್ಹಿತೋ ಹ್ಯಸಿ ।
ಶಾಕಲ್ಯೇನೈವಮುದಿತಃ ಕಾಶ್ಯಪಃ ಪ್ರತ್ಯಭಾಷತ ॥ ೮೧ ॥

ಕಾಶ್ಯಪ ಉವಾಚ :—

ಮಮೈತದ್ದೋಷಶಾಂತ್ಯರ್ಥಮುಪಾಯಂ ವದ ಸುವ್ರತ ।
ಯೇನ ಮಾಂ ಪ್ರತಿಗೃಹ್ಣೀಯುರ್ಬಾಂಧವಾಃ ಸಸುಹೃಜ್ಜನಾಃ ॥ ೮೨ ॥
ಕೃಪಾಂ ಮಯಿ ಕುರುಷ್ವ ತ್ವಂ ಶಾಕಲ್ಯ ಹರಿವಲ್ಲಭ ॥ ೮೩ ॥
ಕಾಶ್ಯಪೇನೈವಮುಕ್ತಸ್ತು ಶಾಕಲ್ಯೋಽಪಿ ಮುನೀಶ್ವರಃ ।
ಕ್ಷಣಂ ಧ್ಯಾತ್ವಾ ಜಗಾದೈವಂ ಕಾಶ್ಯಪಂ ಕೃಪಯಾ ತದಾ ॥ ೮೪ ॥

ಶಾಕಲ್ಯ ಉವಾಚ :—

ಅಸ್ಯ ಪಾಪಸ್ಯ ಶಾಂತ್ಯರ್ಥಮುಪಾಯಂ ಪ್ರವದಾಮಿ ತೇ ।
ತತ್ಕರ್ತವ್ಯಂ ತ್ವಯಾ ಶೀಘ್ರಂ ವಿಲಂಬಂ ಮಾ ಕೃಥಾ ದ್ವಿಜ ॥ ೮೫ ॥

---

೮೦. ಇಂತೆಂದು ಮುನ್ನು ವೈದ್ಯವಿದ್ಯೆಯಲ್ಲಿ ಪಾರಂಗತರಾದವರು ಶ್ಲೋಕವನ್ನು ಹೇಳಿರುವರು. ನೀನು ಮಹಾರಾಜನಿಗೆ ಚಿಕಿತ್ಸೆಯನ್ನು ಮಾಡಲು ಶಕ್ತನಾಗಿದ್ದರೂ ಆತನಿಗೆ ಭೈಷಜ್ಯವನ್ನು ಮಾಡಲಿಲ್ಲ.

೮೧. ಆದಕ್ಕಾಗಿಯೇ ಹೊರಟವನು ಅರ್ಧಮಾರ್ಗದಲ್ಲಿಯೇ ಹಿಂದಿರುಗಿದವನಾದೆ. ಆದುದರಿಂದಲೇ ನೀನು ಎಲ್ಲರಿಂದಲೂ ನಿಂದೆಗೆ ಅರ್ಹನಾಗಿರುವೆ." ಶಾಕಲ್ಯನಿಂದ ಈ ಮಾತುಗಳನ್ನು ಕೇಳಿ ಕಾಶ್ಯಪನು ಮತ್ತೆ ಹೇಳತೊಡಗಿದನು.

೮೨. ಕಾಶ್ಯಪನು ಹೇಳುತ್ತಾನೆ:—"ಎಲೈ ಸುವ್ರತನೆ! ಈ ನನ್ನ ದೋಷವನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ಯಾವುದಾದರೂ ಉಪಾಯವನ್ನು ಹೇಳುವವನಾಗು. ನನ್ನ ಬಂಧುಗಳೂ ಸ್ನೇಹಿತರೂ ಮತ್ತೆ ನನ್ನನ್ನು ತಮ್ಮೊಡನೆ ಸೇರಿಸಿಕೊಳ್ಳುವಂತೆ ಮಾಡಬೇಕು.

೮೩. ವಿಷ್ಣುಭಕ್ತನಾದ ಶಾಕಲ್ಯನೆ! ನೀನು ನನ್ನಲ್ಲಿ ಕೃಪೆಯನ್ನು ಮಾಡುವವನಾಗು."

೮೪. ಕಾಶ್ಯಪನಿಂದ ಇಂತು ಪ್ರಾರ್ಥಿತನಾಗಿ ಮುನೀಶ್ವರನಾದ ಶಾಕಲ್ಯನು ಕನಿಕರಗೊಂಡು ಒಂದು ಕ್ಷಣದ ಮಟ್ಟಿಗೆ ಧ್ಯಾನಾಸಕ್ತನಾಗಿದ್ದು ಬಳಿಕ ಕಾಶ್ಯಪನಿಗೆ ಹೇಳತೊಡಗಿದನು.

೮೫. ಶಾಕಲ್ಯನು ಹೇಳುತ್ತಾನೆ :—"ಈ ಪಾಪದ ಉಪಶಾಂತಿಗಾಗಿ ಒಂದೇ ಒಂದು ಉಪಾಯವಿರುವುದು. ಅದನ್ನು ನಿನಗೆ ಹೇಳುವೆನು. ಅದನ್ನು ಶೀಘ್ರವಾಗಿ ಮಾಡಬೇಕು. ಓ ಬ್ರಾಹ್ಮಣೋತ್ತಮಾ! ಕಾಲವಿಳಂಬವನ್ನು ಮಾಡಬೇಡ.

ಸುವರ್ಣಮುಖರೀತೀರೇ ಲಕ್ಷ್ಮೀಪತಿನಿವಾಸಭೂಃ ।
ವೇಂಕಟಾದ್ರಿರಿತಿ ಖ್ಯಾತಃ ಸರ್ವಲೋಕೇಷು ಪೂಜಿತಃ ॥ ೮೬ ॥
ತಸ್ಮಿನ್ಶೇಷಗಿರೌ ಪುಣ್ಯೇ ಸುರಾಸುರನಮಸ್ಕೃತೇ ।
ಬ್ರಹ್ಮಹತ್ಯಾಸುರಾಪಾನಸ್ವರ್ಣಸ್ತೇಯಾದಿನಾಶಕೇ ॥ ೮೭ ॥
ಸ್ವಾಮಿಪುಷ್ಕರಿಣೀ ಚೇತಿ ಸರ್ವಪಾಪಾಪನೋದಿನೀ ।
ಉತ್ತರೇ ಶ್ರೀನಿವಾಸಸ್ಯ ವರ್ತತೇ ಮಂಗಲಪ್ರದಾ ॥ ೮೮ ॥
ತಂ ಗತ್ವಾ ವೇಂಕಟಂ ಶೈಲಂ ಸ್ವಾಮಿಪುಷ್ಕರಿಣೀಂ ಶುಭಾಂ ।
ಸ್ನಾತ್ವಾ ಸಂಕಲ್ಪಪೂರ್ವಂ ತು ವರಾಹಸ್ವಾಮಿನಂ ಹರಿಂ ॥ ೮೯ ॥
ಸೇವಿತ್ವಾ ಪಶ್ಚಿಮೇ ತೀರೇ ನಿರ್ಗತ್ಯ ಹರಿಮಂದಿರಂ ।
ಗತ್ವಾ ತತ್ರ ವಿಧಾನೇನ ಸ್ವರ್ಣಾಚಲನಿವಾಸಿನಂ ॥ ೯೦ ॥
ಶ್ರೀನಿವಾಸಂ ಪರಂ ದೇವಂ ಭಕ್ತಾನಾಮಭಯಪ್ರದಂ ।
ಶಂಖಚಕ್ರಧರಂ ದೇವಂ ವನಮಾಲಾವಿಭೂಷಿತಂ ॥ ೯೧ ॥
ದೃಷ್ಟ್ವಾ ನಿರ್ಧೂತಪಾಪೋಽಸಿ ಸಂಶಯಂ ಮಾಕೃಥಾ ದ್ವಿಜ ॥ ೯೨ ॥

---

೮೬. ಸುವರ್ಣಮುಖರೀನದಿಯ ತೀರದಲ್ಲಿ ಶ್ರೀ ಶ್ರೀನಿವಾಸನ ನಿವಾಸ ಸ್ಥಳವಾದ ವೇಂಕಟಾಚಲವೆಂಬ ಪರ್ವತವೊಂದಿರುವುದು. ಹದಿನಾಲ್ಕು ಲೋಕಗಳಲ್ಲಿಯೂ ಅದು ವಿಶೇಷಪೂಜೆಯನ್ನು ಹೊಂದುತ್ತಿರುವುದು.

೮೭–೮೮. ಸಮಸ್ತ ದೇವದಾನವರಿಂದ ನಮಸ್ಕರಿಸಲ್ಪಡುವುದೂ, ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಾಪಹರಣ ಮುಂತಾದ ಸಮಸ್ತ ಪಾಪಗಳನ್ನೂ ನಾಶಗೊಳಿಸುವುದೂ, ಸಕಲಕಲ್ಯಾಣಗಳನ್ನುಂಟುಮಾಡುವುದೂ ಆದ ಆ ಶೇಷಾಚಲದ ಮೇಲ್ಭಾಗದಲ್ಲಿ ಶ್ರೀನಿವಾಸನ ನಿವಾಸಕ್ಕೆ ಉತ್ತರದಲ್ಲಿ ಸಮಸ್ತ ಪಾಪಗಳನ್ನು ಕಳೆಯುವುದೂ ಮಂಗಳಪ್ರದಾಯಕವೂ ಆದ ಸ್ವಾಮಿಪುಷ್ಕರಿಣಿಯೆಂಬ ಸರೋವರವೊಂದಿರುವುದು.

೮೯–೯೨. ನೀನು ವೇಂಕಟಾಚಲಕ್ಕೆ ಹೋಗಿ ಸಂಕಲ್ಪಪೂರ್ವಕವಾಗಿ ಶುಭದಾಯಕವಾದ ಆ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿಕೊಂಡು ಅದರ ಪಶ್ಚಿಮದಡದಲ್ಲಿರುವ ವರಾಹಸ್ವರೂಪಿಯಾದ ಶ್ರೀ ಹರಿಯನ್ನು ಸೇವಿಸಿ ವಿಷ್ಣುಮಂಟಪವನ್ನು ಸೇರಿದವನಾಗಿ ಅಲ್ಲಿ ಸ್ವರ್ಣಶೈಲನಿವಾಸಿಯಾದವನೂ, ಪರಾತ್ಪರವಸ್ತುವೂ, ಭಕ್ತರಿಗೆ ಇಷ್ಟಾರ್ಥಗಳನ್ನು ಕೊಡುವವನೂ, ಶಂಖಚಕ್ರಗಳನ್ನು ಧರಿಸಿದವನೂ, ವನಮಾಲೆಯನ್ನು ಭೂಷಣವಾಗಿ ಸ್ವೀಕರಿಸಿರುವವನೂ ಆದ ಶ್ರೀನಿವಾಸನನ್ನು ಕಂಡು ಪಾಪರಹಿತನಾಗುವೆ. ಎಲೈ ಬ್ರಾಹ್ಮಣನೆ! ಈ ವಿಷಯದಲ್ಲಿ ಸಂದೇಹಪಡಬೇಡ."

ಶಾಕಲ್ಯೇನೈವಮುಕ್ತಸ್ತು ಕಾಶ್ಯಪೋ ಮುನಿಪುಂಗವಃ ।
ಗತ್ವಾ ವೇಂಕಟಶೈಲೇಂದ್ರಂ ಸುರಾಸುರನಮಸ್ಕೃತಂ ॥ ೯೩ ॥
ಪುಷ್ಕರಿಣ್ಯಾಂ ಶುಭಾಯಾಂ ತು ಸ್ನಾತೋ ನಿಯಮಪೂರ್ವಕಂ ।
ಸ್ವಸ್ಥೋಽಭೂತ್ಕಾಶ್ಯಪೋ ವಿಪ್ರೋ ಭಿಷಗ್ವಿದ್ಯಾಬ್ಧಿಪಾರಗಃ ॥ ೯೪ ॥
ಸರ್ವೇ ಬಂಧುಜನಾ ವಿಪ್ರಾಃ ಕಾಶ್ಯಪಂ ಬ್ರಾಹ್ಮಣೋತ್ತಮಂ ।
ಅಪೂಜಯನ್ವಿಧಾನೇನ ಪೂಜ್ಯೋಽಸಿ ನ ಚ ಸಂಶಯಃ ॥ ೯೫ ॥
ಏವಂ ವಃ ಕಥಿತಂ ವಿಪ್ರಾ ವೇಂಕಟಾಚಲವೈಭವಂ ।
ಯಃ ಶೃಣೋತಿ ನರೋ ಭಕ್ತ್ಯಾ ವಿಷ್ಣುಲೋಕೇ ಮಹೀಯತೇ ॥ ೯೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹ ಸಂವಾದೇ "ಸ್ವಾಮಿಪುಷ್ಕರಿಣೀಕಾಶ್ಯಪದೋಷನಿವೃತ್ತಿವರ್ಣನಂ" ನಾಮ ಏಕಾದಶೋಽಧ್ಯಾಯಃ

---

೯೩–೯೪. ಶಾಕಲ್ಯನಿಂದ ಈ ರೀತಿಯಾದ ಮಾತುಗಳನ್ನು ಕೇಳಿದವನಾಗಿ, ಮುನಿಪುಂಗವನಾದ ಕಾಶ್ಯಪನು ಸಕಲಸುರಾಸುರರಿಂದ ನಮಸ್ಕರಿಸಲ್ಪಡುತ್ತಿರುವ ವೆಂಕಟಾಚಲವನ್ನು ಸೇರಿ ನಿಯಮವನ್ನನುಸರಿಸಿ ಅದರ ಮೇಲಿರುವ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿಕೊಂಡು ವೈದ್ಯವಿದ್ಯೆಯ ಪರಾಕಾಷ್ಠೆಯನ್ನು ಪಡೆದವನಾಗಿ ಸುಖದಿಂದಿದ್ದನು.

೯೫. ಬ್ರಾಹ್ಮಣೋತ್ತಮನಾದ ಕಾಶ್ಯಪನನ್ನು ಸಕಲ ಬಂಧುಗಳೂ ಬ್ರಾಹ್ಮಣರೂ "ನೀನು ನಮ್ಮ ಪೂಜೆಗೆ ಅರ್ಹನೆಂಬುದರಲ್ಲಿ ಸಂಶಯವಿಲ್ಲ" ಎಂದು ಹೇಳುತ್ತ ಬಹುವಿಧವಾಗಿ ಗೌರವಿಸಿದರು.

೯೬. ಎಲೈ ವಿಪ್ರೋತ್ತಮರಿರಾ! ಇಂತು ವೆಂಕಟಾಚಲದ ವೈಭವವೆಲ್ಲವನ್ನೂ ನಿಮಗೆ ನಿರೂಪಿಸಿರುವೆನು. ಯಾವ ಮಾನವನು ಈ ಚರಿತ್ರೆಯನ್ನು ಭಕ್ತಿಯಿಂದ ಕೇಳುವನೊ ಅವನು ವೈಕುಂಠಲೋಕದಲ್ಲಿ ಪೂಜ್ಯವಾದ ಸ್ಥಾನವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೆಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹ ಸಂವಾದದಲ್ಲಿ "ಕಾಶ್ಯಪದೋಷನಿವೃತ್ತಿವರ್ಣನ"ವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾದಶೋಽಧ್ಯಾಯಃ

### ಶ್ರೀಸ್ವಾಮಿಪುಷ್ಕರಿಣೀತೀರ್ಥಮಹಿಮಾನುವರ್ಣನ

ಋಷಯ ಊಚುಃ:—

ಸೂತ ಸರ್ವಾರ್ಥತತ್ತ್ವಜ್ಞ ವೇದವೇದಾಂಗಪಾರಗ ।
ಶ್ರೀ ಸ್ವಾಮಿಪುಷ್ಕರಿಣ್ಯಾಶ್ಚ ವೈಭವಂ ವದ ನಃ ಪ್ರಭೋ ॥ ೧ ॥
ಯಸ್ಯಾಃ ಸ್ಮರಣಮಾತ್ರೇಣ ಮುಕ್ತಃ ಸ್ಯಾನ್ಮಾನವೋ ಭುವಿ ॥ ೨ ॥

ಶ್ರೀ ಸೂತ ಉವಾಚ :—

ಸ್ವಾಮಿತೀರ್ಥಂ ಪ್ರಶಂಸಂತಿ ಸ್ನಾಂತಿ ವಾ ಕಥಯಂತಿ ಯೇ ।
ಅಷ್ಟಾವಿಂಶತಿಭೇದಾಂಸ್ತೇ ನರಕಾನ್ನೋಪಭುಂಜತೇ ॥ ೩ ॥
ತಾಮಿಸ್ರಮಂಧತಾಮಿಸ್ರಂ ಮಹಾರೌರವರೌರವೌ ।
ಕುಂಭೀಪಾಕಂ ಕಾಲಸೂತ್ರಮಸಿಪತ್ರವನಂ ತಥಾ ॥ ೪ ॥
ಕೃಮಿಭಕ್ಷೋಽಂಧಕೂಪಶ್ಚ ಸಂದಂಶಃ ಶಾಲ್ಮಲೀ ತಥಾ ।
ಲಾಲಾಭಕ್ಷೋ ಹ್ಯವೀಚಿಶ್ಚ ಸಾರಮೇಯಾದನಂ ತಥಾ ॥ ೫ ॥

---

### ಕನ್ನಡದ ಅನುವಾದ

#### ಸ್ವಾಮಿಪುಷ್ಕರಿಣೀತೀರ್ಥ ಮಹಿಮಾನುವರ್ಣನ

೧–೨. ಋಷಿಗಳು ಕೇಳುತ್ತಾರೆ:— ಎಲೈ ಸೂತನೆ! ನೀನು ಸಕಲ ವಿಷಯುಗಳ ತತ್ತ್ವವನ್ನೂ ಅರಿತಿರುವೆ. ವೇದಗಳನ್ನೂ ವೇದಾಂಗಗಳನ್ನೂ ಸಮಗ್ರವಾಗಿ ಅಧ್ಯಯನಮಾಡಿರುವೆ. ಯಾವುದರ ಸ್ಮರಣದ ಮಾತ್ರದಿಂದ ಮನುಷ್ಯನು ಇಹಲೋಕದಲ್ಲಿ ಮುಕ್ತಿಯನ್ನು ಪಡೆಯುವನೊ, ಅಂತಹ ಸ್ವಾಮಿ ಪುಷ್ಕರಿಣಿಯ ವೈಭವವನ್ನು ನಮಗೆ ವಿಸ್ತಾರವಾಗಿ ತಿಳಿಸುವವನಾಗು.

೩. ಸೂತನು ಹೇಳುತ್ತಾನೆ:—ಯಾವ ಮನುಷ್ಯರು, ಸ್ವಾಮಿಪುಷ್ಕರಿಣೀ ತೀರ್ಥವನ್ನು ಶ್ಲಾಘಿಸುವರೊ, ಅದರಲ್ಲಿ ಸ್ನಾನವನ್ನುಮಾಡುವರೊ, ಅದರ ವೈಭವವನ್ನು ಕಥನ ಮಾಡುವರೊ, ಅವರು ಇಪ್ಪತ್ತೆಂಟು ವಿಧಗಳಾದ ನರಕ ಗಳನ್ನೂ ಅನುಭವಿಸುವುದಿಲ್ಲ.

೪–೮. ತಾಮಿಸ್ರ, ಅಂಧತಾಮಿಸ್ರ, ಮಹಾರೌರವ, ರೌರವ, ಕುಂಭೀ ಪಾಕ, ಕಾಲಸೂತ್ರ, ಅಸಿಪತ್ರವನ, ಕೃಮಿಭಕ್ಷ, ಅಂಧಕೂಪ, ಸಂದಂಶ, ಶಾಲ್ಮಲಿ, ಲಾಲಾಭಕ್ಷ, ಅವೀಚಿ, ಸಾರಮೇಯಾದನ, ವಜ್ರಕಣಕ, ಕ್ಷಾರ ಕರ್ದಮ, ರಕ್ಷೋಗಣಾಶನ, ಶೂಲಪ್ರೋತ, ನಿರೋಧನ, ತಿರೋಧಾನ, ಸೂಚೀಮುಖ, ಪೂಯ, ಶೋಣಿತಭಕ್ಷ, ವಿಷಾಗ್ನಿಪೀಡನ, ಮುಂತಾದುವುಗಳೇ

ತಥೈವ ವಜ್ರಕಣಕಃ ಕ್ಷಾರಕರ್ದಮಪಾತನಂ ।
ರಕ್ಷೋಗಣಾಶನಂ ಚಾಪಿ ಶೂಲಪ್ರೋತನಿರೋಧನಂ ॥ ೬ ॥
ತಿರೋಧಾನಾಭಿಧಂ ವಿಪ್ರಾಸ್ತಥಾ ಸೂಚೀಮುಖಾಭಿಧಂ ।
ಪೂಯಶೋಣಿತಭಕ್ಷಂ ಚ ವಿಷಾಗ್ನಿಪರಿಪೀಡನಂ ॥ ೭ ॥
ಅಷ್ಟಾವಿಂಶತಿಸಂಖ್ಯಾತಮೇತನ್ನರಕಸಂಚಯಂ ।
ನ ಯಾತಿ ಮನುಜೋ ವಿಪ್ರಾಃ ಸ್ವಾಮಿತೀರ್ಥನಿಮಜ್ಜನಾತ್ ॥ ೮ ॥
ವಿತ್ತಾಪತ್ಯಕಲತ್ರಾಣಾಂ ಯೋಽನ್ಯೇಷಾಮಪಹಾರಕಃ ।
ಸ ಕಾಲಪಾಶಬದ್ಧೋಽಯಂ ಯಮದೂತೈರ್ಭಯಾನಕೈಃ ॥ ೯ ॥
ತಾಮಿಸ್ರೇ ನರಕೇ ಘೋರೇ ಪಾತ್ಯತೇ ಬಹುವತ್ಸರಂ ।
ಸ್ನಾತಿ ಚೇತ್ಸ್ವಾಮಿತೀರ್ಥೇ ಸ ತಸ್ಮಿನ್ನಾಸೌ ನಿಪಾತ್ಯತೇ ॥ ೧೦ ॥
ಮಾತರಂ ಪಿತರಂ ವಿಪ್ರಾನ್ಯೋ ದ್ವೇಷ್ಟಿ ಪುರುಷಾಧಮಃ ।
ಸ ಕಾಲಸೂತ್ರನರಕೇ ವಿಸ್ತೃತಾಯುತಯೋಜನೇ ॥ ೧೧ ॥
ಅಧಸ್ತಾದಗ್ನಿಸಂತಪ್ತೇ ಉಪರ್ಯರ್ಕಮರೀಚಿಭಿಃ ।
ಖಲೇ ತಾಮ್ರಮಯೇ ವಿಪ್ರಾಃ ಪಾತ್ಯತೇ ಕ್ಷುಧಯಾರ್ದಿತಃ ॥ ೧೨ ॥
ಸ್ನಾತಿ ಚೇತ್ಪುಷ್ಕರಿಣ್ಯಾಂ ವೈ ತಸ್ಮಿನ್ನಾಸೌ ನಿಪಾತ್ಯತೇ ।
ಯೋ ವೇದಮಾರ್ಗಮುಲ್ಲಂಘ್ಯ ವರ್ತತೇ ಕುಪಥೇ ನರಃ ॥ ೧೩ ॥

---

ಇಪ್ಪತ್ತೆಂಟು ನರಕಗಳೆಂದು ಹೇಳಲ್ಪಟ್ಟಿರುವುವು. ಎಲೈ ಬ್ರಾಹ್ಮಣರೆ! ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡುವುದರಿಂದ ಇವುಗಳಲ್ಲಿ ಯಾವ ನರಕವನ್ನೂ ಮನುಷ್ಯನು ಹೊಂದುವುದಿಲ್ಲ.

೯–೧೦. ದ್ರವ್ಯ, ಪುತ್ರ, ಕಲತ್ರಗಳನ್ನು ಅಪಹರಿಸುವುದರಿಂದ ಇತರರನ್ನು ಹಿಂಸಿಸುವವನು ಭಯಂಕರರಾದ ಯಮದೂತರಿಂದ ಕಾಲಪಾಶಗಳಲ್ಲಿ ಬಿಗಿಯಲ್ಪಟ್ಟು ಘೋರವಾದ ತಾಮಿಸ್ರವೆಂಬ ನರಕದಲ್ಲಿ ಅನೇಕ ವರ್ಷಗಳ ಕಾಲ ತಳ್ಳಲ್ಪಡುವನು. ಆದರೆ ಒಮ್ಮೆ ಸ್ವಾಮಿ ತೀರ್ಥದಲ್ಲಿ ಮಿಂದವನಾದರೆ ಆ ನರಕದಲ್ಲಿ ಬೀಳುವುದಿಲ್ಲ.

೧೧–೧೨. ಯಾವ ಮನುಷ್ಯಾಧಮನು ತಾಯಿತಂದೆಗಳನ್ನೂ ಬ್ರಾಹ್ಮಣರನ್ನೂ ದ್ವೇಷಿಸುವನೊ, ಅವನು ಹತ್ತುಸಾವಿರ ಯೋಜನಗಳ ವಿಸ್ತಾರವಾಗಿರುವ ಕಾಲಸೂತ್ರವೆಂಬ ನರಕದಲ್ಲಿ ಬೀಳುವನು. ಅಲ್ಲಿ ತಾಮ್ರಮಯವಾದ ಪಾತ್ರೆಯಲ್ಲಿ ಅವನನ್ನು ಹಾಕಿ ಕೆಳಗೆ ಬೆಂಕಿಯನ್ನೊಡ್ಡುವರು. ಕೆಳಗೆ ಬೆಂಕಿಯಿಂದಲೂ ಮೇಲೆ ಸೂರ್ಯನ ತೀಕ್ಷ್ಣ ಕಿರಣಗಳಿಂದಲೂ ಸುಡಲ್ಪಟ್ಟು ಆ ನೀಚನು ಹಸಿವಿನಿಂದ ಸಂಕಟಪಡುವನು.

೧೩–೧೪. ಅವನು ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿದವನಾದರೆ

ಸೋಽಸಿಪತ್ರವನೇ ಘೋರೇ ಪಾತ್ಯತೇ ಯಮಕಿಂಕರೈಃ ।
ಸ್ನಾತಿ ಚೇತ್ಸ್ವಾಮಿತೀರ್ಥೇ ತು ತಸ್ಮಿನ್ನಾಸೌ ನಿಪಾತ್ಯತೇ ॥ ೧೪ ॥
ಯೋಽಶ್ನಾತಿ ಪಙ್ಕ್ತಿಭೇದೇನ ಪಕ್ವಂ ಸೂಪಾದಿಕಂ ನರಃ ।
ಅಕೃತ್ವಾ ಪಂಚಯಜ್ಞಾನ್ವಾ ಭುಙ್ಕ್ತೇ ಮೋಹೇನ ಸ ದ್ವಿಜಾಃ ॥ ೧೫ ॥
ಪಾತ್ಯತೇಽಯಂ ಯಮಭಟೈರ್ನರಕೇ ಕೃಮಿಭೋಜನೇ ।
ಭಕ್ಷ್ಯಮಾಣಃ ಕೃಮಿಶತೈರ್ಭಕ್ಷಯನ್ಕೃಮಿಸಂಚಯಾನ್ ॥ ೧೬ ॥
ಸ್ವಯಂ ಚ ಕೃಮಿಭೂತಃ ಸಂಸ್ತಿಷ್ಠೇದ್ಯಾವದಘಕ್ಷಯಂ ।
ಸ್ನಾತಿ ಚೇತ್ಸ್ವಾಮಿತೀರ್ಥೇ ವೈ ತಸ್ಮಿನ್ನಾಸೌ ನಿಪಾತ್ಯತೇ ॥ ೧೭ ॥
ಯೋ ಹರೇದ್ವಿಪ್ರವಿತ್ತಾನಿ ಸ್ನೇಹೇನ ಬಲತೋಽಪಿ ವಾ ।
ಅನ್ಯೇಷಾಮಪಿ ವಿತ್ತಾನಿ ರಾಜಾ ತತ್ಪುರುಷೋಽಪಿ ವಾ ॥ ೧೮ ॥
ಅಯೋಮಯಾಗ್ನಿಕುಂಡೇಷು ಸಂದಂಶೈಃ ಸೋಽಪಿ ಪೀಡಿತಃ ।
ಸಂದಂಶೇ ನರಕೇ ಘೋರೇ ಪಾತ್ಯತೇ ಯಮಪೂರುಷೈಃ ॥ ೧೯ ॥

---

ಆ ನರಕಕ್ಕೆ ತಳ್ಳಲ್ಪಡುವುದಿಲ್ಲ. ಯಾವನು ವೈದಿಕಮಾರ್ಗವನ್ನು ತ್ಯಜಿಸಿ ಇತರ ಕಾಪಥಗಳಲ್ಲಿ ನಡೆದುಕೊಳ್ಳುವನೊ, ಅವನು ಯಮದೂತರಿಂದ ಅಸಿಪತ್ರ ವನವೆಂಬ ಘೋರನರಕದಲ್ಲಿ ತಳ್ಳಲ್ಪಡುವನು. ಆದರೆ ಸ್ವಾಮಿತೀರ್ಥದಲ್ಲಿ ಮಿಂದವನು ಆ ನರಕದಲ್ಲಿ ಬೀಳುವುದಿಲ್ಲ.

೧೫–೧೬. ಯಾವನು ಊಟದಲ್ಲಿ ಪಙ್ಕ್ತಿಭೇದವನ್ನುಮಾಡಿ ಸೂಪವೇ ಮೊದಲಾದ ಪಕ್ವಪದಾರ್ಥಗಳನ್ನು ಸೇವಿಸುವನೊ, ಅಥವ ಯಾವನು ಪಂಚ ಮಹಾಯಜ್ಞಗಳನ್ನು ಮಾಡದೆ ಭೋಜನವನ್ನು ಮಾಡುವನೊ, ಅವನು ತನ್ನ ಅಜ್ಞಾನದ ಫಲವಾಗಿ ಯಮಭಟರ ಕೈಗಳಲ್ಲಿ ಸಿಕ್ಕಿ ಕೃಮಿಭೋಜನವೆಂಬ ನರಕದಲ್ಲಿ ಬೀಳುವನು. ನೂರಾರು ಕೃಮಿಗಳು ಅವನ ಶರೀರವನ್ನು ಭಕ್ಷಿಸುವುವು ಮತ್ತು ಅವನೂ ನೂರಾರು ಕೃಮಿಗಳನ್ನು ಭಕ್ಷಿಸುವನು.

೧೭. ತಾನೂ ಕೂಡ ತನ್ನ ಪಾಪವು ಕಳೆಯುವವರೆಗೂ ಕೃಮಿಯ ರೂಪವನ್ನೇ ಧರಿಸಿರುವನು. ಸ್ವಾಮಿತೀರ್ಥದಲ್ಲಿ ಸ್ನಾನವನ್ನು ಮಾಡಿದುದರ ಫಲವಾಗಿ ಆ ಪಾಪಿಯು ನರಕದಲ್ಲಿ ಬೀಳುವುದಿಲ್ಲ.

೧೮–೧೯. ಯಾವ ಮನುಷ್ಯನು ಸ್ನೇಹದಿಂದಾಗಲಿ ಬಲದಿಂದಾಗಲಿ ಬ್ರಾಹ್ಮಣನ ಸ್ವತ್ತನ್ನು ಅಪಹರಿಸುವನೊ, ಯಾವ ರಾಜನಾಗಲಿ ರಾಜಭಟ ನಾಗಲಿ ಇತರರ ಸ್ವತ್ತನ್ನು ಅಪಹರಿಸುವರೊ, ಅವರು ಯಮಭಟರಿಂದ ಸಂದಂಶ ವೆಂಬ ನರಕದಲ್ಲಿ ತಳ್ಳಲ್ಪಟ್ಟವರಾಗಿ ಕಬ್ಬಿಣದ ಒಲೆಗಳಲ್ಲಿ ಬಿದ್ದು ಒದ್ದಾಡು ತ್ತಿರಲು ವಜ್ರದಂಷ್ಟ್ರಗಳುಳ್ಳ ಸಂದಂಶಗಳೆಂಬ ಕೀಟಗಳು ಅವರ ದೇಹಗಳನ್ನು ಕಿತ್ತು ತಿನ್ನುವುವು.

ಸ್ನಾತಿ ಚೇತ್ಸ್ವಾಮಿತೀರ್ಥೇ ತು ತಸ್ಮಿನ್ನಾಸೌ ನಿಪಾತ್ಯತೇ ।
ಅಗಮ್ಯಾಂ ಯೋಽಭಿಗಚ್ಛೇತ ಸ್ತ್ರಿಯಂ ವೈ ಪುರುಷಾಧಮಃ ॥ ೨೦ ॥
ಅಗಮ್ಯಂ ಪುರುಷಂ ಯೋಷಿದಭಿಗಚ್ಛೇತ ವಾ ದ್ವಿಜಾಃ ।
ತಾವಯೋಮಯನಾರೀಂ ಚ ಪುರುಷಂ ಚಾಪ್ಯಯೋಮಯಂ ॥ ೨೧ ॥
ತಪ್ತಾವಾಲಿಂಗ್ಯ ತಿಷ್ಠಂತೌ ಯಾವಚ್ಚಂದ್ರದಿವಾಕರೌ ।
ಸೂಚ್ಯಾಖ್ಯೇ ನರಕೇ ಘೋರೇ ಪಾತ್ಯೇತೇ ಯಮಕಿಂಕರೈಃ ॥ ೨೨ ॥
ಸ್ನಾತಿಚೇತ್ಸ್ವಾಮಿತೀರ್ಥೇ ಚ ತಸ್ಮಿನ್ನಾಸೌ ನಿಪಾತ್ಯತೇ ।
ಬಾಧತೇ ಸರ್ವಜಂತೂನ್ಯೋ ನಾನೋಪಾಯೈರುಪದ್ರವೈಃ ॥ ೨೩ ॥
ಶಾಲ್ಮಲೀನರಕೇ ಘೋರೇ ಪಾತ್ಯತೇ ಬಹುಕಂಟಕೇ ।
ಸ್ನಾತಿ ಚೇತ್ಸ್ವಾಮಿತೀರ್ಥೇ ತು ತಸ್ಮಿನ್ನಾಸೌ ನಿಪಾತ್ಯತೇ ॥ ೨೪ ॥
ರಾಜಾ ವಾ ರಾಜಭೃತ್ಯೋ ವಾ ಯಃ ಪಾಷಂಡಮನುದ್ರುತಃ ।
ಭೇದಕೋ ಧರ್ಮಸೇತೂನಾಂ ವೈತರಣ್ಯಾಂ ನಿಪಾತ್ಯತೇ ॥ ೨೫ ॥
ಸ್ನಾತಿ ಚೇತ್ಸ್ವಾಮಿತೀರ್ಥೇ ತು ತಸ್ಮಿನ್ನಾಸೌ ನಿಪಾತ್ಯತೇ ।
ವೃಷಲೀಸಂಗದುಷ್ಟೋ ವಾ ಶೌಚಾದ್ಯಾಚಾರವರ್ಜಿತಃ ॥ ೨೬ ॥

---

೨೦–೨೨. ಅಂತಹ ಪಾಪಿಯು ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನಮಾಡಿದವನೇ ಆದರೆ ಆ ನರಕದಲ್ಲಿ ಬೀಳುವುದಿಲ್ಲ. ಯಾವ ಮನುಷ್ಯಾಧಮನು ನಿಷಿದ್ಧಸ್ತ್ರೀಗಮನವನ್ನು ಮಾಡುವನೊ, ಯಾವ ನಾರಿಯು ನಿಷಿದ್ಧಪುರುಷನೊಡನೆ ರಮಿಸುವಳೊ, ಅವರಿಬ್ಬರೂ ಯಮಕಿಂಕರರಿಂದ ಸೂಚೀನರಕದಲ್ಲಿ ಬೀಳಿಸಲ್ಪಡುವರು. ಅಲ್ಲಿ ಆ ಸ್ತ್ರೀಯು ಕಾದ ಕಬ್ಬಿಣದ ಪುರುಷಪ್ರತಿಮೆಯನ್ನೂ, ಪುರುಷನು ಕಾದ ಕಬ್ಬಿಣದ ಸ್ತ್ರೀ ವಿಗ್ರಹವನ್ನೂ ಆಲಿಂಗಿಸಿಕೊಂಡು ಸೂರ್ಯಚಂದ್ರರಿರುವವರೆಗೂ ಸಂಕಟಪಡಬೇಕಾಗುವುದು.

೨೩–೨೪. ಸ್ವಾಮಿತೀರ್ಥದ ಸ್ನಾನದಿಂದ ಅವರು ಆ ನರಕದಲ್ಲಿ ಬೀಳುವುದಿಲ್ಲವು. ಯಾವನು ಬಹುವಿಧಗಳಾದ ಹಿಂಸೆಗಳಿಂದ ಸಕಲಪ್ರಾಣಿಗಳನ್ನೂ ಬಾಧಿಸುವನೊ, ಅವನು ಅನೇಕ ಕಂಟಕಗಳಿಂದ ನಿಬಿಡವಾದ ಶಾಲ್ಮಲಿಯೆಂಬ ಘೋರನರಕದಲ್ಲಿ ನೂಕಲ್ಪಡುವನು. ಸ್ವಾಮಿ ಪುಷ್ಕರಿಣೀತೀರ್ಥದ ಸ್ನಾನದ ಫಲವಾಗಿ ಅವನು ಆ ನರಕದಲ್ಲಿ ಬೀಳಲಾರನು.

೨೫. ರಾಜನಾಗಲಿ ರಾಜಭೃತ್ಯನಾಗಲಿ ಯಾವನು ಪಾಷಂಡಮತಗಳನ್ನನುಸರಿಸಿ ಧರ್ಮದ ಮರ್ಯಾದೆಗಳನ್ನು ಮೀರಿ ವರ್ತಿಸುವನೊ, ಅವನು ವೈತರಣಿಯಲ್ಲಿ ಮುಳುಗಿಸಲ್ಪಡುನು.

೨೬–೨೮. ಅಂತಹವನು ಸ್ವಾಮಿತೀರ್ಥದಲ್ಲಿ ಸ್ನಾನವನ್ನು ಮಾಡಿದವನಾದರೆ ಆ ಯಾತನೆಗೊಳಗಾಗುವುದಿಲ್ಲ. ವೃಷಲಿಯ (ಅವಿವಾಹಿತ ಪ್ರೌಢ

ತ್ಯಕ್ತಲಜ್ಜಸ್ತ್ಯಕ್ತವೇದಃ ಪಶುಚರ್ಯಾರತಃ ಸದಾ ।
ಸ ಪೂಯವಿಷ್ಠಾಮೂತ್ರಾಸೃಕ್ಶ್ಲೇಷ್ಮಪಿತ್ತಾದಿಪೂರಿತೇ ॥ ೨೭ ॥
ಅತಿಬೀಭತ್ಸನರಕೇ ಪಾತ್ಯತೇ ಯಮಕಿಂಕರೈಃ ।
ಸ್ನಾತಿ ಚೇತ್ಸ್ವಾಮಿತೀರ್ಥೇ ತು ತಸ್ಮಿನ್ನಾಸೌ ನಿಪಾತ್ಯತೇ ॥ ೨೮ ॥
ಯಃ ಶ್ವಭಿರ್ಮೃಗಯಾರ್ವನ್ಯಾನ್ಬಾಣೈರ್ವಾ ಬಾಧತೇ ಮೃಗಾನ್ ।
ಸ ವಿಧ್ಯಮಾನೋ ಬಾಣೌಘೈಃ ಪರತ್ರ ಯಮಕಿಂಕರೈಃ ॥ ೨೯ ॥
ಪ್ರಾಣರೋಧಾಖ್ಯನರಕೇ ಪಾತ್ಯತೇ ಯಮಕಿಂಕರೈಃ ।
ಸ್ನಾತಿ ಚೇತ್ಸ್ವಾಮಿತೀರ್ಥೇ ತು ತಸ್ಮಿನ್ನಾಸೌ ನಿಪಾತ್ಯತೇ ॥ ೩೦ ॥
ದಂಭಕೋ ಯಃ ಪಶೂನ್ಯಜ್ಞೇ ವಿಧ್ಯನುಷ್ಠಾನವರ್ಜಿತಃ ।
ಹಂತ್ಯಸೌ ಪರಲೋಕೇಷು ವೈಶಸೇ ನರಕೇ ದ್ವಿಜಾಃ ॥ ೩೧ ॥
ಕರ್ತ್ಯಮಾನೋ ಯಮಭಟೈಃ ಪಾತ್ಯತೇ ಯಮಕಿಂಕರೈಃ ।
ಸ್ನಾತಿ ಚೇತ್ಪುಷ್ಕರಿಣ್ಯಾಂ ವೈ ತಸ್ಮಿನ್ನಾಸೌ ನಿಪಾತ್ಯತೇ ॥ ೩೨ ॥
ಆತ್ಮಭಾರ್ಯಾಂ ಸವರ್ಣಾಂ ಯೋ ರೇತಃ ಪಾಯಯತೇ ಯದಿ ।
ಪರತ್ರ ರೇತಃಪಾಯೀ ಸ ರೇತಃಕುಂಡೇ ನಿಪಾತ್ಯತೇ ॥ ೩೩ ॥

---

ಕನ್ಯೆಯ) ಸಹವಾಸದಿಂದ ದುಷ್ಟನಾದವನೂ, ಶೌಚಾದಿ ಶ್ರೌತಸ್ಮಾರ್ತ ಕರ್ಮವಿಹೀನನಾದವನೂ, ಲಜ್ಜಾರಹಿತನೂ, ವೇದದೂಷಕನೂ, ಕೇವಲ ಪಶುವೃತ್ತಿಯಿಂದ ಜೀವನವನ್ನು ನಡೆಸುವವನೂ, ದುರ್ಗಂಧಮಯಗಳಾದ ಪುರೀಷ, ಮೂತ್ರ, ರಕ್ತ, ಶ್ಲೇಷ್ಮ, ಪಿತ್ತರಸಗಳಿಂದ ತುಂಬಿರುವ ಅತಿ ಬೀಭತ್ಸವೆಂಬ ನರಕದಲ್ಲಿ ಯಮಕಿಂಕರರಿಂದ ತಳ್ಳಲ್ಪಡುವನು. ಸ್ವಾಮಿ ತೀರ್ಥದಲ್ಲಿ ಸ್ನಾನಮಾಡುವುದರಿಂದ ಆ ನರಕದಲ್ಲಿ ಅವನು ಬೀಳುವುದಿಲ್ಲ.

೨೯-೩೦. ಯಾವನು ಬೇಟೆಯಾಡುವಾಗ ವನ್ಯಮೃಗಗಳನ್ನು ನಾಯಿ ಗಳಿಂದಾಗಲಿ, ಬಾಣಗಳಿಂದಾಗಲಿ ಹಿಂಸಿಸುವನೊ, ಅವನು ಪರಲೋಕದಲ್ಲಿ ಯಮಭಟರ ಬಾಣಸಮೂಹಗಳಿಂದ ಪೀಡಿಸಲ್ಪಟ್ಟವನಾಗಿ ಪ್ರಾಣರೋಧವೆಂಬ ನರಕದಲ್ಲಿ ಹಾಕಲ್ಪಡುವನು. ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿದ ವನು ಮಾತ್ರ ಆ ನರಕದಲ್ಲಿ ಬೀಳುವುದಿಲ್ಲ.

೩೧-೩೨. ಯಾವನು ಕೇವಲ ದಂಭದಿಂದ ವೈದಿಕ ವಿಧಿಗಳನ್ನು ಅನುಷ್ಠಾನಮಾಡದೆ ಯಜ್ಞದಲ್ಲಿ ಪಶುಗಳನ್ನು ಕೊಲ್ಲುವನೊ, ಅಂತಹನನ್ನು ವೈಶಸವೆಂಬ ನರಕದಲ್ಲಿ ಯಮಭಟರು ಆಯುಧಗಳಿಂದ ಸೀಳುತ್ತ ತಳ್ಳುವರು. ಪುಷ್ಕರಿಣಿಯಲ್ಲಿ ಸ್ನಾನಮಾಡಿದವನಾದರೆ ಆ ನರಕದಲ್ಲಿ ಬೀಳುವುದಿಲ್ಲ.

೩೩. ಸವರ್ಣಜಾತಳಾದ ತನ್ನ ಹೆಂಡತಿಗೆ ಯಾವ ಮೂಢನು ರೇತಃ ಪಾನವನ್ನು ಮಾಡಿಸುವನೊ, ಅವನು ಪರಲೋಕದಲ್ಲಿ ರೇತಃಪಾನವನ್ನು ಮಾಡುವನಾಗಿ ರೇತಃಕುಂಡದಲ್ಲಿ ಬೀಳುವನು.

ಸ್ನಾತಿ ಚೇತ್ಪುಷ್ಕರಿಣ್ಯಾಂ ವೈ ತಸ್ಮಿನ್ನಾಸೌ ನಿಪಾತ್ಯತೇ ।
ಯೋ ದಸ್ಯುಮಾರ್ಗಮಾಶ್ರಿತ್ಯ ಗರದೋ ಗ್ರಾಮದಾಹಕಃ ॥ ೩೪ ॥
ವಣಿಗ್ದ್ರವ್ಯಾಪಹಾರೀ ಚ ಸ ಪರತ್ರ ದ್ವಿಜೋತ್ತಮಾಃ ।
ವಜ್ರದಂಷ್ಟ್ರಾಭಿಧೇ ಘೋರೇ ಪಾತ್ಯತೇ ನರಕೇ ಚಿರಂ ॥ ೩೫ ॥
ಸ್ನಾತಿ ಚೇತ್ಸ್ವಾಮಿತೀರ್ಥೇ ತು ತಸ್ಮಿನ್ನಾಸೌ ನಿಪಾತ್ಯತೇ ।
ವಿದ್ಯಂತೇ ಯಾನಿ ಚಾನ್ಯಾನಿ ನರಕಾಣಿ ಪರತ್ರವೈ ॥ ೩೬ ॥
ತಾನಿ ನಾಪ್ನೋತಿ ಮನುಜಃ ಸ್ವಾಮಿತೀರ್ಥನಿಮಜ್ಜನಾತ್ ।
ಪುಷ್ಕರಿಣ್ಯಾಂ ಸಕೃತ್ಸ್ನಾನಾದಶ್ವಮೇಧಫಲಂ ಲಭೇತ್ ॥ ೩೭ ॥
ಆತ್ಮವಿದ್ಯಾ ಭವೇತ್ಸಾಕ್ಷಾನ್ಮುಕ್ತಿಶ್ಚಾಪಿ ಚತುರ್ವಿಧಾ ।
ನ ಪಾಪೇ ರಮತೇ ಬುದ್ಧಿರ್ನ ಭವೇದ್ದುಃಖಮೇವ ವಾ ॥ ೩೮ ॥
ತುಲಾಪುರುಷದಾನೇನ ಯತ್ಫಲಂ ಲಭ್ಯತೇ ನರೈಃ ।
ತತ್ಫಲಂ ಲಭ್ಯತೇ ಪುಂಭಿಃ ಸ್ವಾಮಿತೀರ್ಥನಿಮಜ್ಜನಾತ್ ॥ ೩೯ ॥

---

೩೪–೩೫. ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡುವುದರಿಂದ ಆ ನರಕದ ಯಾತನೆಯು ತಪ್ಪುವುದು. ಎಲೈ ಬ್ರಾಹ್ಮಣೋತ್ತಮರೆ! ಯಾವನು ಕಿರಾತ ವೃತ್ತಿಯನ್ನವಲಂಬಿಸಿ ಜನರಿಗೆ ವಿಷವನ್ನು ಕೊಡುತ್ತ, ಗ್ರಾಮಗಳಿಗೆ ಬೆಂಕಿ ಯನ್ನಿಟ್ಟು, ವರ್ತಕರ ದ್ರವ್ಯಾದಿಗಳನ್ನು ಅಪಹರಿಸುವನೊ, ಅವನು ಪರಲೋಕ ದಲ್ಲಿ ವಜ್ರದಂಷ್ಟ್ರವೆಂದು ಕರೆಯಲ್ಪಡುವ ಘೋರನರಕದಲ್ಲಿ ಬಹುಕಾಲ ಯಾತನೆ ಯನ್ನನುಭವಿಸುವನು.

೩೬–೩೭. ಆ ಮನುಷ್ಯನು ಸ್ವಾಮಿತೀರ್ಥದಲ್ಲಿ ಸ್ನಾನಮಾಡಿದರೆ ಯಮ ದೂತರು ಅವನನ್ನು ಆ ನರಕದಲ್ಲಿ ತಳ್ಳುವುದಿಲ್ಲ. ಅಲ್ಲದೆ ಪರಲೋಕದಲ್ಲಿ ಇತರ ಯಾವ ಯಾವ ನರಕಗಳಿರುವುವೊ, ಅವುಗಳಲ್ಲಿ ಯಾವುದನ್ನೂ ಮನುಜನು ಸ್ವಾಮಿಪುಷ್ಕರಿಣಿಯಲ್ಲಿ ಮಾಡಿದ ಸ್ನಾನದ ಪುಣ್ಯಫಲದಿಂದ ಹೊಂದುವುದಿಲ್ಲ. ಈ ಪುಷ್ಕರಿಣಿಯಲ್ಲಿ ಮಾಡಿದ ಒಂದೊಂದು ಸ್ನಾನದಿಂದಲೂ ಒಂದು ಅಶ್ವಮೇಧ ಯಜ್ಞವನ್ನು ಮಾಡಿದ ಫಲವು ಲಭಿಸುವುದು.

೩೮. ಅಲ್ಲದೆ ಅವನಿಗೆ ಆತ್ಮಜ್ಞಾನವೂ, ಸಾಮೀಪ್ಯ, ಸಾಯುಜ್ಯ, ಸಾಲೋಕ್ಯ, ಸಾರೂಪ್ಯಗಳೆಂಬ ಚತುರ್ವಿಧಮುಕ್ತಿಗಳೂ, ಲಭಿಸುವುವು. ಪಾಪದಲ್ಲಿ ಬುದ್ಧಿಯು ಪ್ರವೃತ್ತವಾಗುವುದಿಲ್ಲ. ದುಃಖವೆಂಬುದೆಂದಿಗೂ ಉಂಟಾಗುವುದಿಲ್ಲ.

೩೯. ತುಲಾಭಾರದ ಸುವರ್ಣದಾನದಿಂದ ಮನುಷ್ಯರು ಯಾವ ಫಲವನ್ನು ಹೊಂದುವರೊ, ಅದನ್ನೇ ಸ್ವಾಮಿತೀರ್ಥಸ್ನಾನದಿಂದ ಹೊಂದುವರು.

ಗೋಸಹಸ್ರಪ್ರದಾನೇನ ಯತ್ಪುಣ್ಯಂ ಹಿ ಭವೇನ್ನೃಣಾಂ ।
ತತ್ಪುಣ್ಯಂ ಲಭತೇ ಮರ್ತ್ಯಃ ಸ್ವಾಮಿತೀರ್ಥನಿಮಜ್ಜನಾತ್ ॥ ೪೦ ॥
ಧರ್ಮಾರ್ಥಕಾಮಮೋಕ್ಷಾಣಾಂ ಯಂ ಯಮಿಚ್ಛತಿ ಪೂರುಷಃ ।
ತಂ ತಂ ಸದ್ಯಃ ಸಮಾಪ್ನೋತಿ ಸ್ವಾಮಿತೀರ್ಥನಿಮಜ್ಜನಾತ್ ॥ ೪೧ ॥
ಮಹಾಪಾತಕಯುಕ್ತೋ ವಾ ಯುಕ್ತೋ ವಾ ಸರ್ವಪಾತಕೈಃ ।
ಸದ್ಯಃ ಪೂತೋ ಭವೇದ್ವಿಪ್ರಾಃ ಸ್ವಾಮಿತೀರ್ಥನಿಮಜ್ಜನಾತ್ ॥ ೪೨ ॥
ಪ್ರಜ್ಞಾ ಲಕ್ಷ್ಮೀರ್ಯಶಃ ಸಂಪಜ್ಜ್ಞಾನಂ ಧರ್ಮೋ ವಿರಕ್ತತಾ ।
ಮನಃಶುದ್ಧಿರ್ಭವೇನ್ನೄಣಾಂ ಸ್ವಾಮಿತೀರ್ಥನಿಷೇವಣಾತ್ ॥ ೪೩ ॥
ಬ್ರಹ್ಮಹತ್ಯಾಯುತಂ ಚಾಪಿ ಸುರಾಪಾನಾಯುತಂ ತಥಾ ।
ಅಯುತಂ ಗುರುದಾರಾಣಾಂ ಗಮನಂ ಪಾಪಕಾರಿಣಾಂ ॥ ೪೪ ॥
ಸ್ತೇಯಾಯುತಂ ಸುವರ್ಣಾನಾಂ ತತ್ಸಂಸರ್ಗಾಶ್ಚ ಕೋಟಿಶಃ ।
ಶೀಘ್ರಂ ವಿಲಯಮಾಯಾಂತಿ ಸ್ವಾಮಿತೀರ್ಥನಿಮಜ್ಜನಾತ್ ॥ ೪೫ ॥
ಬ್ರಹ್ಮಹತ್ಯಾಸಮಾನಾನಿ ಸುರಾಪಾನಸಮಾನಿ ಚ ।
ಗುರುಸ್ತ್ರೀಗಮನೇನಾಪಿ ಯಾನಿ ತುಲ್ಯಾನಿ ಚಾಸ್ತಿಕಾಃ ॥ ೪೬ ॥

---

೪೦–೪೧. ಸಾವಿರ ಕಿಪಿಲೆ ಗೋವುಗಳನ್ನು ದಾನಮಾಡಿದ ಮನುಷ್ಯನಿಗೆ ಯಾವ ಪುಣ್ಯವು ಲಭಿಸುವುದೊ, ಅದನ್ನೇ ಸ್ವಾಮಿಪುಷ್ಕರಿಣಿಯ ಸ್ನಾನದಿಂದ ಸಂಪಾದಿಸಬಹುದು. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಲ್ಲಿ ಯಾವುದನ್ನು ಯಾವ ಯಾವ ಮನುಷ್ಯನು ಅಪೇಕ್ಷಿಸುವನೊ ಅದನ್ನು ಸ್ವಾಮಿಪುಷ್ಕರಿಣಿಯ ಸ್ನಾನದಿಂದ ಹೊಂದುವನು.

೪೨. ಎಲೈ ಬ್ರಾಹ್ಮಣರೆ! ಮಹಾಪಾತಕಗಳನ್ನು ಮಾಡಿದವನಾಗಲಿ, ಸಕಲ ಪಾಪಗಳಿಂದ ಸಹಿತನಾದವನಾಗಲಿ ಸ್ವಾಮಿತೀರ್ಥದಲ್ಲಿ ಸ್ನಾನವನ್ನು ಮಾಡಿದ ಕ್ಷಣದಲ್ಲಿಯೇ ಪುನೀತನಾಗುವನು.

೪೩. ಬುದ್ಧಿಶಕ್ತಿ, ಐಶ್ವರ್ಯ, ಯಶಸ್ಸು, ಸಂಪತ್ತು, ಜ್ಞಾನ, ಧರ್ಮ, ವೈರಾಗ್ಯ, ಮನಃಪರಿಪಾಕ ಇವೇ ಮುಂತಾದ ಸತ್ಫಲಗಳೆಲ್ಲ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡುವುದರಿಂದ ಮನುಷ್ಯನಿಗುಂಟಾಗುವುವು.

೪೪–೪೫. ಹತ್ತುಸಾವಿರ ಬ್ರಹ್ಮಹತ್ಯೆಗಳೂ, ಹತ್ತುಸಾವಿರ ಸುರಾಪಾನಗಳೂ, ಪಾಪಿಗಳುಮಾಡುವ ಹತ್ತುಸಾವಿರ ಗುರುಸ್ತ್ರೀಗಮನಗಳೂ, ಹತ್ತುಸಾವಿರ ಸ್ವರ್ಣಸ್ತೇಯಗಳೂ, ಅಂತಹ ಅಕಾರ್ಯಗಳನ್ನು ಮಾಡುವ ಪಾಪಿಷ್ಠರ ಅನೇಕ ಕೋಟಿ ಸಂಸರ್ಗದೋಷಗಳೂ ಸ್ವಾಮಿತೀರ್ಥದಲ್ಲಿ ಸ್ನಾನವನ್ನು ಮಾಡಿದ ಮಾತ್ರದಿಂದ ತಕ್ಷಣದಲ್ಲಿಯೇ ನಾಶವನ್ನೈದುವುವು.

೪೬–೪೭. ಎಲೈ ಆಸ್ತಿಕರಾದ ಬ್ರಾಹ್ಮಣಶ್ರೇಷ್ಠರೇ! ಬ್ರಾಹ್ಮಣಹಿಂಸೆ,

ಸುವರ್ಣಸ್ತ್ರೇಯತುಲ್ಯಾನಿ ತತ್ಸಂಸರ್ಗಸಮಾನಿ ಚ ।
ತಾನಿ ಸರ್ವಾಣಿ ನಶ್ಯಂತಿ ಸ್ವಾಮಿತೀರ್ಥನಿಮಜ್ಜನಾತ್ ॥ ೪೭ ॥
ಉಕ್ತೇಷ್ವೇತೇಷು ಸಂದೇಹೋ ನ ಕರ್ತವ್ಯಃ ಕದಾಚನ ।
ಜಿಹ್ವಾಗ್ರೇ ಪರಶುಂ ತಪ್ತಂ ಪ್ರಕ್ಷಿಪಂತಿ ಚ ಕಿಂಕರಾಃ ॥ ೪೮ ॥
ಅರ್ಥವಾದಮಿಮಂ ಸರ್ವಂ ಬ್ರುವನ್ಸ್ವೈ ನರಕಂ ವ್ರಜೇತ್ ।
ಸೂಕರಃ ಸ ಹಿ ವಿಜ್ಞೇಯಃ ಸರ್ವಕರ್ಮಬಹಿಷ್ಕೃತಃ ॥ ೪೯ ॥
ಅಹೋಮೌರ್ಖ್ಯಮಹೋಮೌರ್ಖ್ಯಮಹೋಮೌರ್ಖ್ಯಂದ್ವಿಜೋ
ತ್ತಮಾಃ। ಸ್ವಾಮಿತೀರ್ಥಾಭಿಧೇ ತೀರ್ಥೇ ಸರ್ವಪಾತಕನಾಶನೇ ॥ ೫೦ ॥
ಅದ್ವೈತಜ್ಞಾನದೇ ಪುಂಸಾಂ ಭಕ್ತಿಮುಕ್ತಿಪ್ರದಾಯಿನಿ ।
ಇಷ್ಟಕಾಮಪ್ರದೇ ನಿತ್ಯಂ ತಥೈವಾಜ್ಞಾನನಾಶನೇ ॥ ೫೧ ॥
ಸ್ಥಿತೇಽಪಿ ತದ್ವಿಹಾಯಾಯಂ ರಮತೇಽನ್ಯತ್ರ ವೈ ಜನಃ ।
ಅಹೋ ಮೋಹಸ್ಯ ಮಾಹಾತ್ಮ್ಯಂ ಮಯಾ ವಕ್ತುಂ ನ ಶಕ್ಯತೇ ॥ ೫೨ ॥
ಸ್ನಾತಸ್ಯ ಸ್ವಾಮಿತೀರ್ಥೇ ತು ನಾಂತಕಾದ್ಭಯಮಸ್ತಿ ವೈ ।
ಸ್ವಾಮಿತೀರ್ಥಂ ಚ ಪಶ್ಯಂತಿ ತತ್ರ ಸ್ನಾಂತಿ ಚ ಯೇ ನರಾಃ ॥ ೫೩ ॥

---

ಸುರಾಪಾನ, ಗುರುಸ್ತ್ರೀಗಮನ, ಹಿರಣ್ಯಾಪಹರಣ, ಇವುಗಳನ್ನು ಮಾಡುವ ನೀಚರ ಸಂಸರ್ಗವು ಈ ಮಹಾಪತಕಗಳಿಗೆ ಸಮಾನಗಳೆನಿಸಿದ ಅನೇಕ ಇತರ ಪಾತಕಗಳೆಲ್ಲವೂ ಸ್ವಾಮಿಪುಷ್ಕರಿಣಿಯ ಸ್ನಾನದಿಂದ ನಾಶಹೊಂದುವುವು.

೪೮. ಮೇಲೆ ಹೇಳಿದ ಫಲಗಳು ಮನುಷ್ಯನಿಗೆ ಲಭಿಸುವ ವಿಷಯದಲ್ಲಿ ಯಾವನಿಗೂ ಸಂದೇಹವುಂಟಾಗಬಾರದು. ಅಂತಹವನ ನಾಲಿಗೆಯನ್ನು ಯಮ ಕಿಂಕರರು ಕಾದ ಕಬ್ಬಿಣದ ಕೊಡಲಿಯಿಂದ ಕತ್ತರಿಸುವರು.

೪೯. ಈ ವಿವರವನ್ನೆಲ್ಲ ಅರ್ಥವಾದವೆಂದು (ಧರ್ಮಸಂಗ್ರಹಕ್ಕೋಸ್ಕರ ಮಾಡಿದ ಅಧರ್ಮನಿಂದೆಯೆಂದು) ಹೇಳುವವನು ಖಂಡಿತವಾಗಿಯೂ ನರಕಕ್ಕೆ ಭಾಗಿಯಾಗುವನು. ಅವನೇ ಸೂಕರ (ಹಂದಿಯಂತೆ ಅಶುದ್ಧ)ನೆಂದು ಕರೆಯಲ್ಪಡುವನು. ಅಲ್ಲದೆ ಅವನೇ ಸಕಲ ಸತ್ಕರ್ಮಬಾಹಿರನಾಗಿರುವನು.

೫೦-೫೨. ಎಲೈ ಬ್ರಾಹ್ಮಣೋತ್ತಮರಿರಾ! ಪಾಮರರ ಮೌರ್ಖ್ಯವನ್ನು ಏನೆಂದು ಹೇಳಲಿ! ಸಕಲಪಾತಕಗಳನ್ನು ನಾಶಗೊಳಿಸುವುದೂ, ಜನರಿಗೆ ಅದ್ವೈತ ಜ್ಞಾನವನ್ನುಂಟುಮಾಡುವುದೂ, ಭಕ್ತಿಮುಕ್ತಿಗಳನ್ನು ಕೊಡುವುದೂ, ಸಮಸ್ತ ಇಷ್ಟಾರ್ಥಗಳನ್ನು ನೆರವೇರಿಸುವ ಸಾಧನವಾಗಿರುವುದೂ, ಅಜ್ಞಾನವನ್ನು ದೂರ ಗೊಳಿಸುವುದೂ ಆದ ಸ್ವಾಮಿತೀರ್ಥವೆಂಬ ಹೆಸರಿನ ತೀರ್ಥವು ಭೂಲೋಕ ದಲ್ಲಿ ನೆಲಸಿರಲು ಅದನ್ನುಳಿದು ಇತರ ಸಾಧನಗಳಲ್ಲಿ ತೊಡಗಿರುವರಲ್ಲ! ಅವರ ಮೋಹದ ಹಿರಿಮೆಯನ್ನು ವರ್ಣಿಸಲು ನನಗೆ ಶಕ್ಯವಲ್ಲವು.

ಸ್ತುವಂತಿ ಚ ಪ್ರಶಂಸಂತಿ ಸ್ಪೃಶಂತಿ ಚ ನಮಂತಿ ಚ ।
ನ ಪಿಬಂತಿ ಹಿ ತೇ ಸ್ತನ್ಯಂ ಮಾತೄಣಾಂ ದ್ವಿಜಪುಂಗವಾಃ ॥ ೫೪ ॥
ಏವಂ ವಃ ಕಥಿತಂ ವಿಪ್ರಾಃ ಸ್ವಾಮಿತೀರ್ಥಸ್ಯ ವೈಭವಂ ।
ಭುಕ್ತಿಮುಕ್ತಿಪ್ರದಂ ನೄಣಾಂ ಸರ್ವಪಾಪನಿಬರ್ಹಣಂ ॥ ೫೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹ ಸಂವಾದೇ "ಶ್ರೀ ಸ್ವಾಮಿ ಪುಷ್ಕರಿಣೀತೀರ್ಥಮಹಿಮಾನುವರ್ಣನಂ" ನಾಮ ದ್ವಾದಶೋಽಧ್ಯಾಯಃ

---

೫೩–೫೪. ಸ್ವಾಮಿತೀರ್ಥದಲ್ಲಿ ಸ್ನಾನವನ್ನು ಮಾಡಿದವನಿಗೆ ಯಮನಿಂದಲೂ ಭಯವೆಂಬುದಿಲ್ಲವೆಂಬುದು ನಿಜವು. ಎಲೈ ದ್ವಿಜಪುಂಗವರೆ! ಯಾರು ಸ್ವಾಮಿಪುಷ್ಕರಿಣಿಯನ್ನು ನೋಡುವರೊ, ಅದರಲ್ಲಿ ಸ್ನಾನಮಾಡುವರೊ, ಅದನ್ನು ಸ್ತೋತ್ರಮಾಡುವರೊ, ಅದರ ಮಾಹಾತ್ಮ್ಯೆಯನ್ನು ಪ್ರಶಂಸಿಸುವರೊ, ಅದನ್ನು ಸ್ಪರ್ಶಿಸಿ ನಮಸ್ಕರಿಸುವರೊ, ಅವರೆಲ್ಲರೂ ಪುನಃ ತಾಯಿಯರ ಸ್ತನ್ಯವನ್ನು ಪಾನಮಾಡುವುದಿಲ್ಲವು.

೫೫. ಎಲೈ ವಿಪ್ರರೆ! ಇಂತು ನಿಮಗೆ ಸ್ವಾಮಿ ಪುಷ್ಕರಿಣಿಯೆಂಬ ತೀರ್ಥದ ವೈಭವವನ್ನು ವರ್ಣಿಸಿರುವೆನು. ಈ ಚರಿತ್ರೆಯು ಜನರಿಗೆ ಭಕ್ತಿ ಮೋಕ್ಷಗಳನ್ನು ಕೊಟ್ಟು ಸಕಲ ಪಾಪಗಳನ್ನೂ ಕಳೆಯುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೆಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹ ಸಂವಾದದಲ್ಲಿ "ಸ್ವಾಮಿ ಪುಷ್ಕರಿಣೀತೀರ್ಥ ಮಹಿಮಾನುವರ್ಣನ"ವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋದಶೋಽಧ್ಯಾಯಃ

### ಸ್ವಾಮಿಪುಷ್ಕರಿಣೀ ತೀರ್ಥ ಮಹಿಮಾನುವರ್ಣನ

ಶ್ರೀ ಸೂತ ಉವಾಚ :—

ಭೂಯೋಽಪಿ ಸಂಪ್ರವಕ್ಷ್ಯಾಮಿ ಸ್ವಾಮಿತೀರ್ಥಸ್ಯ ವೈಭವಂ ।
ಯುಷ್ಮಾಕಮಾದರೇಣಾಹಂ ನೈಮಿಷಾರಣ್ಯವಾಸಿನಃ ॥ ೧ ॥
ನಂದೋ ನಾಮ ಮಹಾರಾಜಃ ಸೋಮವಂಶಸಮುದ್ಭವಃ ।
ಧರ್ಮೇಣ ಪಾಲಯಾಮಾಸ ಸಾಗರಾಂತಾಂ ಧರಾಮಿಮಾಂ ॥ ೨ ॥
ತಸ್ಯ ಪುತ್ರಸ್ಸಮಭವದ್ಧರ್ಮಗುಪ್ತ ಇತಿ ಸ್ಮೃತಃ ।
ರಾಜ್ಯರಕ್ಷಾಧುರಂ ನಂದೋ ನಿಜಪುತ್ರೇ ನಿಧಾಯ ಸಃ ।
ಜಿತೇಂದ್ರಿಯೋ ಜಿತಾಹಾರಃ ಪ್ರವಿವೇಶ ತಪೋವನಂ ॥ ೩ ॥
ತಾತೇ ತಪೋವನಂ ಯಾತೇ ಧರ್ಮಗುಪ್ತಾಭಿಧೋ ನೃಪಃ ।
ಮೇದಿನೀಂ ಪಾಲಯಾಮಾಸ ಧರ್ಮಜ್ಞೋ ನೀತಿತತ್ಪರಃ ॥ ೪ ॥
ಈಜೇ ಬಹುವಿಧೈರ್ಯಜ್ಞೈರ್ದೇವಾನಿಂದ್ರಪುರೋಗಮಾನ್ ।
ಬ್ರಾಹ್ಮಣಾನಾಂ ದದೌ ವಿತ್ತಂ ಕ್ಷೇತ್ರಾಣಿ ಚ ಬಹೂನಿ ಸಃ ॥ ೫ ॥

---

## ಕನ್ನಡದ ಅನುವಾದ

### ಸ್ವಾಮಿಪುಷ್ಕರಿಣೀ ತೀರ್ಥ ಮಹಿಮಾನುವರ್ಣನ

೧. ಸೂತನು ಹೇಳುತ್ತಾನೆ:—ನೈಮಿಷಾರಣ್ಯವಾಸಿಗಳಾದ ಎಲೈ ಬ್ರಾಹ್ಮಣರೆ! ನಿಮಗೆ ಸ್ವಾಮಿಪುಷ್ಕರಿಣಿಯ ವೈಭವವನ್ನು ಇನ್ನೂ ತಿಳಿಸುವೆನು. ಆದರದಿಂದ ಕೇಳಿರಿ.

೨-೩. ಪೂರ್ವದಲ್ಲಿ ಚಂದ್ರವಂಶದಲ್ಲಿ ಹುಟ್ಟಿದ ನಂದನೆಂಬ ಮಹಾರಾಜನು ಚತುಸ್ಸಾಗರಪರ್ಯಂತವಾದ ಈ ಭೂಮಂಡಲವನ್ನು ಧರ್ಮದಿಂದ ಪಾಲಿಸುತ್ತಿದ್ದನು. ಆತನಿಗೆ ಧರ್ಮಗುಪ್ತನೆಂಬ ಹೆಸರಿನ ಮಗನೊಬ್ಬನುಂಟಾದನು. ಕಾಲಕ್ರಮದಲ್ಲಿ ನಂದನು ರಾಜ್ಯರಕ್ಷಣೆಯ ಭಾರವನ್ನು ತನ್ನ ಮಗನಿಗೆ ವಹಿಸಿಕೊಟ್ಟು, ತಾನು ಜಿತೇಂದ್ರಿಯನೂ, ಜಿತಾಹಾರನೂ ಆಗಿ ತಪಸ್ಸನ್ನು ಮಾಡಲು ವನವನ್ನು ಪ್ರವೇಶಮಾಡಿದನು.

೪. ಇಂತು ತನ್ನ ತಂದೆಯು ತಪೋವನವನ್ನು ಸೇರಲು ಧರ್ಮಗುಪ್ತನೆಂಬ ಮಹಾರಾಜನು ಧರ್ಮವನ್ನು ತಿಳಿದವನೂ, ನೀತಿತತ್ಪರನೂ ಆಗಿ ಭೂಮಂಡಲವನ್ನು ಪಾಲಿಸುತ್ತಿದ್ದನು.

೫. ಮಹೇಂದ್ರನೇ ಮೊದಲಾದ ದೇವತೆಗಳನ್ನು ಬಹುವಿಧಗಳಿಂದ

ಸರ್ವೇ ಸ್ವಧರ್ಮನಿರತಾಸ್ತಸ್ಮಿನ್ರಾಜನಿ ಶಾಸತಿ ।
ಕದಾಚಿನ್ನಾಭವನ್ಪೀಡಾಸ್ತಸ್ಮಿನ್ ಚೋರಾದಿಸಂಭವಾಃ ॥ ೬ ॥
ಕದಾಚಿದ್ಧರ್ಮಗುಪ್ತೋಽಯಮಾರುಹ್ಯ ತುರಗೋತ್ತಮಂ ।
ವನಂ ವಿವೇಶ ವಿಪ್ರೇಂದ್ರಾ ಮೃಗಯಾರಸಕೌತುಕೀ ॥ ೭ ॥
ತಮಾಲತಾಲಹಿಂತಾಲಕುರಬಾಕುಲದಿಙ್ಮುಖೇ ।
ವಿಚಚಾರ ವನೇ ತಸ್ಮಿನ್ಸಿಂಹವ್ಯಾಘ್ರಭಯಾನಕೇ ॥ ೮ ॥
ಮತ್ತಾಲಿಕುಲಸನ್ನಾದಸಮ್ಮೂರ್ಛಿತದಿಗಂತರೇ ।
ಪದ್ಮಕಲ್ಹಾರಕುಮುದನೀಲೋತ್ಪಲವನಾಕುಲೇ ॥ ೯ ॥
ತಟಾಕೇ ರಸಸಂಪೂರ್ಣೇ ತಪಸ್ವಿಜನಮಂಡಿತೇ ॥ ೧೦ ॥
ತಸ್ಮಿನ್ವನೇ ಸಂಚರತೋ ಧರ್ಮಗುಪ್ತಸ್ಯ ಭೂಪತೇಃ ।
ಅಭೂದ್ವಿಭಾವರೀ ವಿಪ್ರಾಸ್ತಮಸಾವೃತದಿಙ್ಮುಖಾ ॥ ೧೧ ॥
ರಾಜಾಪಿ ಪಶ್ಚಿಮಾಂ ಸಂಧ್ಯಾಮುಪಾಸ್ಯ ವಿನಯಾನ್ವಿತಃ ।
ಜಜಾಪ ಚ ವನೇ ತತ್ರ ಗಾಯತ್ರೀಂ ವೇದಮಾತರಂ ॥ ೧೨ ॥

---

ಯಜ್ಞಗಳನ್ನುಮಾಡಿ ತೃಪ್ತಿಪಡಿಸಿದನು. ಬ್ರಾಹ್ಮಣರಿಗೆ ಅಪಾರವಾದ ಧನ ವನ್ನೂ ಭೂಮಿಯನ್ನೂ ದಾನಮಾಡಿದನು.

೬. ಆ ಮಹಾರಾಜನು ರಾಜ್ಯವನ್ನಾಳುತ್ತಿರಲು ಸಕಲ ವರ್ಣಗಳವರೂ ತಮ್ಮ ತಮ್ಮ ಧರ್ಮಗಳಲ್ಲಿ ಆಸಕ್ತರಾಗಿದ್ದರು. ರಾಜ್ಯದಲ್ಲೆಲ್ಲಿಯೂ ಚೋರಾದಿ ಗಳಿಂದ ಎಂದಿಗೂ ಸಂಕಟವುಂಟಾಗುತ್ತಿರಲಿಲ್ಲ.

೭. ಒಂದಾನೊಂದು ದಿನ ಧರ್ಮಗುಪ್ತನು ಉತ್ತಮವಾದ ಕುದುರೆ ಯನ್ನೇರಿ ಬೇಟೆಯನ್ನಾಡುವ ಅಭಿಲಾಷೆಯಿಂದ ವನವನ್ನು ಕುರಿತು ಹೊರಟನು.

೮–೧೧. ತಮಾಲ, ತಾಲ, ಹಿಂತಾಲ, ಕುರವಕ ಮುಂತಾದ ವೃಕ್ಷಗ ಳಿಂದ ನಿಬಿಡವಾದುದೂ, ಸಿಂಹ, ವ್ಯಾಘ್ರಾದಿ ದುಷ್ಟಮೃಗಗಳಿಂದ ಭಯಂಕರ ವಾದುದೂ, ಮದಿಸಿದ ದುಂಬಿಗಳ ಝೇಂಕಾರದಿಂದ ಮೂರ್ಛೆಗೊಳಿಸಲ್ಪಟ್ಟ ದಿಕ್ಚಕ್ರವುಳ್ಳುದೂ, ಪದ್ಮ, ಕಲ್ಹಾರ, ಕುಮುದ, ನೀಲೋತ್ಪಲಗಳೇ ಮೊದ ಲಾದ ಪುಷ್ಪತರುಗುಲ್ಮಗಳಿಂದ ತುಂಬಿದುದೂ, ನಿರ್ಮಲೋದಕದಿಂದ ಕೂಡಿದ ತಟಾಕಗಳ ಬಳಿಯಲ್ಲಿ ಓಡಾಡುವ ತಪಸ್ವಿಜನರಿಂದ ಶೋಭಿಸುತ್ತಿರುವುದೂ ಆದ ಆ ವನದಲ್ಲಿ ಧರ್ಮಗುಪ್ತರಾಜನು ಸಂಚರಿಸುತ್ತಿರಲು ದಿಕ್ಕುಗಳೆಲ್ಲವನ್ನೂ ತಮಸ್ಸಿನಿಂದಾವರಿಸುತ್ತ ರಾತ್ರಿಯ ಸಮಯವಾಯಿತು.

೧೨. ಮಹಾರಾಜನು ವಿನಯಭಾವದಿಂದ ಸಾಯಂಸಮಯದ ಆಹ್ನಿಕ ವನ್ನು ಮುಗಿಸಿಕೊಂಡು ಅಲ್ಲಿಯೇ ವೇದಮಾತೆಯಾದ ಗಾಯತ್ರೀ ಮಂತ್ರ ವನ್ನು ಜಪಿಸಿದನು.

ಸಿಂಹವ್ಯಾಘ್ರಾದಿಭೀತ್ಯಾಸ್ಮಿನ್ವೃಕ್ಷಮೇಕಂ ಸಮಾಶ್ರಿತೇ ।
ರಾಜಪುತ್ರೇ ತದಭ್ಯಾಶಮೃಕ್ಷಃ ಸಿಂಹಭಯಾರ್ದಿತಃ ॥ ೧೩ ॥
ಅನ್ವಧಾವತ ವೃಕ್ಷಂ ತಮೇಕಃ ಸಿಂಹೋ ವನೇಚರಃ ।
ಅನುದ್ರುತಃ ಸ ಸಿಂಹೇನ ಋಕ್ಷೋ ವೃಕ್ಷಮುಪಾರುಹತ್ ॥ ೧೪ ॥
ಆರುಹ್ಯ ಋಕ್ಷೋ ವೃಕ್ಷಂ ತಂ ದದರ್ಶ ಜಗತೀಪತಿಂ ।
ವೃಕ್ಷಸ್ಥಿತಂ ಮಹಾತ್ಮಾನಂ ಮಹಾಬಲಪರಾಕ್ರಮಂ ॥ ೧೫ ॥
ಉವಾಚ ಭೂಪತಿಂ ದೃಷ್ಟ್ವಾ ಋಕ್ಷೋಽಯಂ ವನಗೋಚರಃ ।
ಮಾ ಭೀತಿಂ ಕುರು ರಾಜೇಂದ್ರ ವತ್ಸ್ಯಾವೋ ರಜನೀಮಿಹ ॥ ೧೬ ॥
ಮಹಾಸತ್ತ್ವೋ ಮಹಾಕಾಯೋ ಮಹಾದಂಷ್ಟ್ರಸಮಾಕುಲಃ ।
ವೃಕ್ಷಮೂಲಂ ಸಮಾಯಾತಃ ಸಿಂಹೋಽಯಮತಿಭೀಷಣಃ ॥ ೧೭ ॥
ರಾತ್ರ್ಯರ್ಧಂ ಭಜ ನಿದ್ರಾಂ ತ್ವಂ ರಕ್ಷ್ಯಮಾಣೋ ಮಯೋದ್ಯತಃ ।
ತತಃ ಪ್ರಸುಪ್ತಂ ಮಾಂ ರಕ್ಷ ಶರ್ವರ್ಯರ್ಧಂ ಮಹಾಮತೇ ॥ ೧೮ ॥
ಇತಿ ತದ್ವಾಕ್ಯಮಾಕರ್ಣ್ಯ ಸುಪ್ತೇ ನಂದಸುತೇ ಹರಿಃ ।
ಪ್ರೋವಾಚ ಋಕ್ಷಂ ಸುಪ್ತೋಽಯಂ ನೃಪೋ ಮೇ ತ್ಯಜ್ಯತಾಮಿತಿ ॥೧೯॥

---

೧೩–೧೪. ಬಳಿಕ ರಾಜಪುತ್ರನು ರಾತ್ರಿಯ ಕಾಲದಲ್ಲಿ ಸಿಂಹ ವ್ಯಾಘ್ರಾದಿಗಳ ಭಯದ ದೆಸೆಯಿಂದ ಒಂದು ಮರವನ್ನೇರಿದ್ದನು. ಆ ಪ್ರದೇಶಕ್ಕೆ ಸಿಂಹದ ಭಯದಿಂದ ಕೂಡಿದ ಕರಡಿಯೊಂದು ಓಡುತ್ತ ವೃಕ್ಷದಸಮೀಪಕ್ಕೆ ಬಂದಿತು. ಅದನ್ನು ಅರಣ್ಯರಾಜನಾದ ಸಿಂಹವೊಂದು ಬೆನ್ನಟ್ಟಿಕೊಂಡು ಬಂದಿತು. ಇಂತು ಸಿಂಹದಿಂದ ಹಿಂಬಾಲಿಸಲ್ಪಟ್ಟ ಕರಡಿಯೂ ಆ ಮರವನ್ನೇ ಹತ್ತಿತು.

೧೫. ಮರದಮೇಲಕ್ಕೆ ಬರುತ್ತ ಬರುತ್ತ ಅದರಲ್ಲಿ ಕುಳಿತಿದ್ದ ಮಹಾತ್ಮನೂ, ಮಹಾಬಲಶಾಲಿಯೂ, ಪರಾಕ್ರಮಿಯೂ ಆದ ಚಕ್ರವರ್ತಿಯನ್ನು ಆ ಕರಡಿಯು ಕಂಡಿತು.

೧೬–೧೭. ಅರಣ್ಯಗೋಚರವಾದ ಆ ಕರಡಿಯು ಮಹಾರಾಜನನ್ನು ಕುರಿತು ಇಂತೆಂದಿತು. "ಎಲೈ ರಾಜೇಂದ್ರನೆ! ನೀನು ಭಯಪಡಬೇಡ. ನಾವಿಬ್ಬರೂ ಈ ರಾತ್ರಿಯನ್ನು ಇಲ್ಲಿಯೇ ಕಳೆಯೋಣ. ಮಹಾಬಲವುಳ್ಳುದೂ, ಮಹಾದೇಹವುಳ್ಳುದೂ, ತೀಕ್ಷ್ಣದಂಷ್ಟ್ರಯುತವೂ, ಅತಿ ಭಯಂಕರವೂ ಆದ ಈ ಸಿಂಹವು ಈ ಮರದ ಬುಡದಲ್ಲಿಯೆ ಹೊಂಚುಹಾಕುತ್ತಿರುವುದು.

೧೮. ಜಾಗರೂಕನಾದ ನನ್ನಿಂದ ರಕ್ಷಿತನಾದ ನೀನು ರಾತ್ರಿಯ ಅರ್ಧಭಾಗದವರೆಗೂ ನಿದ್ರೆಯನ್ನು ಮಾಡುವವನಾಗು. ಬಳಿಕ ನೀನೆಚ್ಚತ್ತು ನಿದ್ರಿಸುವ ನನ್ನನ್ನು ಮಿಕ್ಕ ಅರ್ಧರಾತ್ರಿಯಲ್ಲಿ ಕಾಯುತ್ತಿರು.

೧೯. ಇಂತೆಂದ ಕರಡಿಯು ಮಾತನ್ನು ಕೇಳಿ ನಂದನ ಮಗನಾದ ಧರ್ಮ

ತಂ ಸಿಂಹಮಬ್ರವೀದ್ವೃಕ್ಷೋ ಧರ್ಮಜ್ಞೋ ದ್ವಿಜಸತ್ತಮಾಃ ।
ಭವಾನ್ಧರ್ಮಂ ನ ಜಾನೀಶೇ ಮೃಗರಾಜ ವನೇಚರ ॥ ೨೦ ॥
ವಿಶ್ವಾಸಘಾತಿನಾಂ ಲೋಕೇ ಮಹಾಕಷ್ಟಂ ಭವತ್ಯಹೋ ।
ನ ಹಿ ಮಿತ್ರದ್ರುಹಾಂ ಪಾಪಂ ನಶ್ಯೇದ್ಯಜ್ಞಾಯುತೈರಪಿ ॥ ೨೧ ॥
ಬ್ರಹ್ಮಹತ್ಯಾದಿಪಾಪಾನಾಂ ಕಥಂಚಿನ್ನಿಷ್ಕೃತಿರ್ಭವೇತ್ ।
ವಿಶ್ವಾಸಘಾತಿನಾಂ ಪಾಪಂ ನ ನಶ್ಯೇಜ್ಜನ್ಮಕೋಟಿಭಿಃ ॥ ೨೨ ॥
ನಾಹಂ ಮೇರುಂ ಮಹಾಭಾರಂ ಮನ್ಯೇ ಪಂಚಾಸ್ಯ ಭೂತಲೇ ।
ಮಹಾಭಾರಮಿಮಂ ಮನ್ಯೇ ಲೋಕೇ ವಿಶ್ವಾಸಘಾತಕಂ ॥ ೨೩ ॥
ಏವಮುಕ್ತೋಽಥ ಋಕ್ಷೇಣ ಸಿಂಹಸ್ತೂಷ್ಣೀಂ ಬಭೂವ ಹ ।
ಧರ್ಮಗುಪ್ತೇ ಪ್ರಬುದ್ಧೇ ತು ಋಕ್ಷಃ ಸುಷ್ವಾಪ ಭೂರುಹೇ ।
ತತಃ ಸಿಂಹೋಽಬ್ರವೀದ್ಭೂಪಮೇನಮೃಕ್ಷಂ ತ್ಯಜಸ್ವ ಮೇ ॥ ೨೪ ॥

---

ಗುಪ್ತನು ನಿದ್ರಾಪರವಶನಾದನು. ಆಗ ಸಿಂಹವು ಕರಡಿಯನ್ನು ಕುರಿತು "ಮಲಗಿರುವ ಈ ರಾಜನನ್ನು ನನಗಾಗಿ ಕೆಳಗೆ ತಳ್ಳಿಬಿಡು" ಎಂಬುದಾಗಿ ಕೇಳಿತು.

೨೦. ಎಲೈ ಬ್ರಾಹ್ಮಣಸತ್ತಮರಿರಾ! ಇಂತು ಕೇಳಿದ ಸಿಂಹಕ್ಕೆ ಧರ್ಮ ಸೂಕ್ಷ್ಮವನ್ನು ತಿಳಿದ ಕರಡಿಯು ಹೇಳತೊಡಗಿತು. "ಎಲೈ ಮೃಗರಾಜನೆ! ಕಾಡಿನಲ್ಲಿಯೇ ಓಡಾಡುತ್ತಿರುವ ನಿನಗೆ ಧರ್ಮವೆಂಬುದೇ ತಿಳಿಯದು.

೨೧. ಲೋಕದಲ್ಲಿ ವಿಶ್ವಾಸಘಾತಕರಿಗೆ ಮಹತ್ತರವಾದ ಕಷ್ಟವು ಸಂಭವಿಸು ವುದಲ್ಲವೆ! ಮಿತ್ರರಿಗೆ ದ್ರೋಹವನ್ನು ಮಾಡಿದ ಪಾಪವು ಹತ್ತುಸಾವಿರ ಯಜ್ಞ ಗಳನ್ನು ಮಾಡುವುದರಿಂದಲೂ ನಾಶವನ್ನು ಹೊಂದುವುದಿಲ್ಲ.

೨೨. ಬ್ರಹ್ಮಹತ್ಯೆಯೇ ಮೊದಲಾದ ಮಹಾಪಾತಕಗಳಿಂದಲೂ ಹೇಗಾ ದರೂ ಬಿಡುಗಡೆಯನ್ನು ಹೊಂದಬಹುದು. ಆದರೆ ವಿಶ್ವಾಸಘಾತಕರ ಪಾಪ ವೆಂಬುದು ಕೋಟಿಜನ್ಮಗಳ ಅನುಭವದಿಂದಲೂ ಕಡೆಗಾಣುವುದಿಲ್ಲ.

೨೩. ಎಲೈ ಸಿಂಹವೆ! ಭೂಲೋಕದಲ್ಲಿ ಮೇರುಪರ್ವತವೂ ಕೂಡ ಹೆಚ್ಚಿನ ಭಾರವುಳ್ಳದ್ದನ್ನಾಗಿ ನಾನು ತಿಳಿಯುವುದಿಲ್ಲ. ಆದರೆ ಲೋಕದಲ್ಲಿ ಒಬ್ಬ ವಿಶ್ವಾಸಘಾತಕನಿದ್ದರೆ ಅವನೇ ಭೂದೇವಿಗೂ ಮಹಾಭಾರಪ್ರಾಯನೆಂದೇ ತಿಳಿಯುವೆನು."

೨೪. ಇಂತು ಕರಡಿಯಿಂದ ಪ್ರತ್ಯುತ್ತರವನ್ನು ಪಡೆದ ಸಿಂಹವು ಸುಮ್ಮ ನಾಯಿತು. ಅರ್ಧರಾತ್ರಿಯಾಗಲು ಧರ್ಮಗುಪ್ತನು ಎಚ್ಚತ್ತನು. ಕರಡಿಯು ಮರದಲ್ಲಿಯೇ ನಿದ್ರೆಯನ್ನು ಹೊಂದಿತು. ಆಗ ಸಿಂಹವು ರಾಜನನ್ನು ಕುರಿತು "ಈ ಕರಡಿಯನ್ನು ನನ್ನ ಆಹಾರಕ್ಕಾಗಿ ತಳ್ಳಿಕೊಡು" ಎಂದು ಹೇಳಿತು.

ಏವಮುಕ್ತೋಽಥ ಸಿಂಹೇನ ರಾಜಾ ಸುಪ್ತಮಶಂಕಿತಃ ।
ಸ್ವಾಂಕನ್ಯಸ್ತಶಿರಸ್ಕಂ ತಮೃಕ್ಷಂ ತತ್ಯಾಜ ಭೂತಲೇ ॥ ೨೫ ॥
ಪಾತ್ಯಮಾನಸ್ತತೋ ರಾಜ್ಞಾ ಸಮಾಲಂಬಿತಪಾದಪಃ ।
ಋಕ್ಷಃ ಪುಣ್ಯವಶಾದ್ವೃಕ್ಷಾನ್ನ ಪಪಾತ ಮಹೀತಲೇ ॥ ೨೬ ॥
ಸ ಋಕ್ಷೋ ನೃಪಮಭ್ಯೇತ್ಯ ಕೋಪಾದ್ವಾಕ್ಯಮಭಾಷತ ॥ ೨೭ ॥
ಕಾಮರೂಪಧರೋ ರಾಜನ್ನಹಂ ಭೃಗುಕುಲೋದ್ಭವಃ ।
ಧ್ಯಾನಕಾಷ್ಠಾಭಿಧೋ ನಾಮ್ನಾ ಋಕ್ಷರೂಪಮಧಾರಯಂ ॥ ೨೮ ॥
ಕಸ್ಮಾದನಾಗಸಂ ಸುಪ್ತಮತ್ಯಾಕ್ಷೀರ್ಮಾಂ ಭವಾನ್ನೃಪ ।
ಮಚ್ಛಾಪಾದತಿಶೀಘ್ರಂ ತ್ವಮುನ್ಮತ್ತಶ್ಚರ ಭೂತಲೇ ॥ ೨೯ ॥
ಇತಿ ಶಪ್ತ್ವಾ ಮುನಿರ್ಭೂಪಂ ತತಃ ಸಿಂಹಮಭಾಷತ ।
ನ ಸಿಂಹಸ್ತ್ವಂ ಮಹಾಯಕ್ಷಃ ಕುಬೇರಸಚಿವಃ ಪುರಾ ॥ ೩೦ ॥
ಹಿಮವದ್ಗಿರಿಮಾಸಾದ್ಯ ಕದಾಚಿತ್ತ್ವಂ ವಧೂಸಖಃ ।
ಅಜ್ಞಾನಾದ್ಗೌತಮಾಭ್ಯಾಶೇ ವಿಹಾರಮತನೋರ್ಮುದಾ ॥ ೩೧ ॥

---

೨೫–೨೬. ಸಿಂಹದ ಮಾತನ್ನು ಕೇಳಿ ರಾಜನು ತನ್ನ ತೊಡೆಯಲ್ಲಿ ತಲೆಯನ್ನಿಟ್ಟು ನಿದ್ರಿಸುತ್ತಿದ್ದ ಆ ಕರಡಿಯನ್ನು ಪೂರ್ವಾಪರವಿವೇಚನೆಯೇ ಇಲ್ಲದಂತೆ ಕೆಳಕ್ಕೆ ತಳ್ಳಿಬಿಟ್ಟನು. ಇಂತು ರಾಜನಿಂದ ತಳ್ಳಲ್ಪಟ್ಟ ಕರಡಿಯು ಕೆಳಕ್ಕೆ ಬೀಳುತ್ತ ಮಧ್ಯದಲ್ಲಿಯೇ ಮರದ ಮತ್ತೊಂದು ಶಾಖೆಯನ್ನು ಹಿಡಿದುದರಿಂದ ಪುಣ್ಯವಶದಿಂದ ನೆಲದ ಮೇಲೆ ಬೀಳಲಿಲ್ಲ.

೨೭–೨೮. ಆಗ ಆ ಕರಡಿಯು ರಾಜನ ಬಳಿಗೆ ಬಂದು ಕೋಪದಿಂದ ಮಾತನಾಡತೊಡಗಿತು. "ಎಲೈ ರಾಜನೆ! ನಾನು ಭೃಗುಕುಲೋತ್ಪನ್ನನಾದ ಧ್ಯಾನಕಾಷ್ಠನೆಂಬುವನು. ನನ್ನ ಇಚ್ಛಾರೂಪಧಾರಣಶಕ್ತಿಯಿಂದ ಕರಡಿಯ ರೂಪವನ್ನು ಧರಿಸಿದ್ದೇನು.

೨೯. ನೀನು ಪಾಪರಹಿತನೂ ಪ್ರಸುಪ್ತನೂ ಆದ ನನ್ನನ್ನು ಏತಕ್ಕಾಗಿ ತ್ಯಜಿಸಿದೆ? ಈ ಕಾರಣದಿಂದ ನೀನು ಶೀಘ್ರದಲ್ಲಿಯೇ ನನ್ನ ಶಾಪದ ಫಲವಾಗಿ ಹುಚ್ಚನಾಗಿ ಭೂಮಿಯಲ್ಲಿ ಸಂಚರಿಸುತ್ತಿರು."

೩೦. ಇಂತೆಂದು ರಾಜನಿಗೆ ಶಾಪವನ್ನು ಕೊಟ್ಟು ಆ ಮಹರ್ಷಿಯು ಸಿಂಹವನ್ನು ಕುರಿತು ಇಂತೆಂದನು. "ನೀನು ನಿಜವಾಗಿಯೂ ಸಿಂಹವಲ್ಲ. ಪೂರ್ವದಲ್ಲಿ ನೀನು ಕುಬೇರನಿಗೆ ಮಂತ್ರಿಯಾಗಿದ್ದ ಮಹಾಯಕ್ಷನು.

೩೧. ಒಮ್ಮೆ ನೀನು ಹೆಂಡತಿಯೊಡನೆ ಹಿಮವತ್ಪಾರ್ಶ್ವವನ್ನು ಸೇರಿ ತಿಳುವಳಿಕೆಯಿಲ್ಲದೆ ಗೌತಮಮಹರ್ಷಿಗಳ ಆಶ್ರಮದ ಸಮೀಪದಲ್ಲಿ ಆಕೆಯೊಡನೆ ಸಂತೋಷದಿಂದ ವಿಹರಿಸುತ್ತಿದ್ದೆ.

ಗೌತಮೋಽಪ್ಯುಟಜಾದ್ದೈವಾತ್ಸಮಿದಾಹರಣಾಯ ವೈ ।
ನಿರ್ಗತಸ್ತ್ವಾಂ ವಿವಸನಂ ದೃಷ್ಟ್ವಾ ಶಾಪಮುದಾಹರತ್ ॥ ೩೨ ॥
ಯಸ್ಮಾನ್ಮಮಾಶ್ರಮೇಽದ್ಯ ತ್ವಂ ವಿವಸ್ತ್ರಃ ಸ್ಥಿತವಾನಸಿ ।
ಅತಃ ಸಿಂಹತ್ವಮದ್ಯೈವ ಭವಿತಾ ತೇ ನ ಸಂಶಯಃ ॥ ೩೩ ॥
ಇತಿ ಗೌತಮಶಾಪೇನ ಸಿಂಹತ್ವಮಗಮತ್ಪುರಾ ।
ಕುಬೇರಸಚಿವೋ ಯಕ್ಷೋ ಭದ್ರನಾಮಾಭವಾನ್ಪುರಾ ॥ ೩೪ ॥
ಕುಬೇರೋ ಧರ್ಮಶೀಲೋ ಹಿ ತದ್ಭೃತ್ಯಾಶ್ಚ ತಥೈವ ಹಿ ।
ಅತಃ ಕಿಮರ್ಥಂ ತ್ವಂ ಹಂಸಿ ಮಾಮೃಷಿಂ ವನಗೋಚರಂ ॥ ೩೫ ॥
ಏತತ್ಸರ್ವಮಹಂ ಧ್ಯಾನಾಜ್ಜಾನಾಮಿ ಹಿ ಮೃಗಾಧಿಪ ।
ಇತ್ಯುಕ್ತೋ ಧ್ಯಾನಕಾಷ್ಠೇನ ತ್ಯಕ್ತ್ವಾ ಸಿಂಹತ್ವಮಾಶು ಸಃ ॥ ೩೬ ॥
ಯಕ್ಷರೂಪಂ ಗತೋ ದಿವ್ಯಂ ಕುಬೇರಸಚಿವಾತ್ಮಕಂ ।
ಧ್ಯಾನಕಾಷ್ಠಮಸಾವಾಹ ಪ್ರಾಂಜಲಿಃ ಪ್ರಣತೋ ಮುನಿಂ ॥ ೩೭ ॥

---

೩೨. ಗೌತಮನೂ ಕೂಡ ಅದೃಷ್ಟವಶದಿಂದ ಸಮಿತ್ತುಗಳನ್ನು ತರುವುದಕ್ಕಾಗಿ ತನ್ನ ಗುಡಿಸಿಲಿನಿಂದ ಹೊರಕ್ಕೆ ಬಂದು ದಿಗಂಬರನಾಗಿ ನಿಂತಿದ್ದ ನಿನ್ನನ್ನು ಕಂಡು ಕೋಪದಿಂದ ಶಾಪವನ್ನು ಕೊಟ್ಟನು.

೩೩. ನೀನು ಪವಿತ್ರವಾದ ಈ ನನ್ನ ಆಶ್ರಮದಲ್ಲಿ ನಗ್ನನಾಗಿ ನಿಂತಿರುವ ಕಾರಣದಿಂದ ಈಗಲೇ ನಿನಗೆ ಸಿಂಹದ ಜನ್ಮವು ಪ್ರಾಪ್ತವಾಗುವುದರಲ್ಲಿ ಸಂದೇಹವಿಲ್ಲವು.

೩೪. ಇಂತೆಂಬ ಗೌತಮನ ಶಾಪದಿಂದ ನೀನು ಈ ಸಿಂಹರೂಪವನ್ನು ಪಡೆದಿರುವೆ. ಪೂರ್ವದಲ್ಲಿ ನೀನು ಭದ್ರನೆಂಬ ಹೆಸರಿನಿಂದ ಕುಬೇರನಿಗೆ ಸಚಿವನಾದ ಯಕ್ಷನಾಗಿದ್ದೆ.

೩೫. ಕುಬೇರನು ಧರ್ಮೈಕತತ್ಪರನು. ಆತನ ಅನುಚರರೂ ಹಾಗೆಯೇ ಇರಬೇಕಲ್ಲವೆ. ಆದುದರಿಂದ ನೀನು ಅರಣ್ಯವಾಸಿಯೂ ಋಷಿಯೂ ಆದ ನನ್ನನ್ನು ಏತಕ್ಕಾಗಿ ಕೊಲ್ಲಲೆಳಸುವೆ?

೩೬. ಎಲೈ ಸಿಂಹವೆ! ಇದೆಲ್ಲವನ್ನೂ ನಾನು ಧ್ಯಾನಬಲದಿಂದ ತಿಳಿದಿರುವೆನು. ಇಂತು ಧ್ಯಾನಕಾಷ್ಠಮುನಿಯಿಂದ ಹೇಳಲ್ಪಟ್ಟವನಾಗಿ ಯಕ್ಷನು ಒಡನೆಯೇ ತನ್ನ ಸಿಂಹಸ್ವರೂಪವನ್ನು ತ್ಯಜಿಸಿದನು.

೩೭. ಆತನು ತಾನು ಕುಬೇರನ ಮಂತ್ರಿಯಾಗಿದ್ದ ಕಾಲದಲ್ಲಿ ಹೊಂದಿದ್ದ ದಿವ್ಯವಾದ ತನ್ನ ಯಕ್ಷರೂಪವನ್ನು ಸ್ವೀಕರಿಸಿ ಧ್ಯಾನಕಾಷ್ಠನಿಗೆ ದಂಡಪ್ರಣಾಮವನ್ನು ಮಾಡಿ ಅಂಜಲಿಬಂಧವನ್ನು ಮಾಡಿಕೊಂಡು ಹೇಳತೊಡಗಿದನು.

ಅದ್ಯ ಜ್ಞಾತಂ ಮಯಾ ಸರ್ವಂ ಪೂರ್ವವೃತ್ತಂ ಮಹಾಮುನೇ ।
ಗೌತಮಃ ಶಾಪಕಾಲೇ ಮೇ ಶಾಪಾಂತಮಪಿ ಚೋಕ್ತವಾನ್ ॥ ೩೮ ॥
ಧ್ಯಾನಕಾಷ್ಠೇನ ಸಂವಾದೋ ಋಕ್ಷರೂಪೇಣ ತೇ ಯದಾ ।
ತದಾ ನಿರ್ಧೂಯ ಸಿಂಹತ್ವಂ ಯಕ್ಷರೂಪಮವಾಪ್ಸ್ಯಸಿ ॥ ೩೯ ॥
ಇತಿ ಮಾಮಬ್ರವೀದ್ಬ್ರಹ್ಮನ್ಗೌತಮೋ ಮುನಿಪುಂಗವಃ ।
ಅದ್ಯ ಸಿಂಹತ್ವನಾಶಾನ್ಮೇ ಜಾನಾಮಿ ತ್ವಾಂ ಮಹಾಮುನೇ ॥ ೪೦ ॥
ಧ್ಯಾನಕಾಷ್ಠಾಭಿಧಂ ಶುದ್ಧಂ ಕಾಮರೂಪಧರಂ ಸದಾ ।
ಇತ್ಯುಕ್ತ್ವಾ ತಂ ಪ್ರಣಮ್ಯಾಥ ಧ್ಯಾನಕಾಷ್ಠಂ ಸ ಯಕ್ಷರಾಟ್ ॥ ೪೧ ॥
ವಿಮಾನವರಮಾರುಹ್ಯ ಪ್ರಯಯಾವಲಕಾಪುರೀಂ ।
ಉನ್ಮತ್ತರೂಪಂ ದೃಷ್ಟ್ವಾ ತಂ ಮಂತ್ರಿಣಸ್ತು ನೃಪೋತ್ತಮಂ ॥ ೪೨ ॥
ಪಿತುಃ ಸಕಾಶಮಾನಿನ್ಯೂ ರೇವಾತೀರೇ ನೃಪೋತ್ತಮಂ ।
ತಸ್ಮೈ ನಿವೇದಯಾಮಾಸುರ್ಮತಿಭ್ರಂಶಂ ಸುತಸ್ಯ ಚ ॥ ೪೩ ॥
ಜ್ಞಾತ್ವಾ ತು ಪುತ್ರವೃತ್ತಾಂತಂ ಪಿತಾ ವೈ ನಂದನಸ್ತದಾ ।
ಪುತ್ರಮಾದಾಯ ಸಹಸಾ ಜೈಮಿನೇರಂತಿಕಂ ಯಯೌ ॥ ೪೪ ॥

---

೩೮. "ಎಲೈ ಮಹಾಮುನಿಯೆ! ಈಗ ಪೂರ್ವದಲ್ಲಿ ನಡೆದ ಚರಿತ್ರೆಯೆಲ್ಲವೂ ಜ್ಞಾಪಕಕ್ಕೆ ಬಂದಿತು. ಗೌತಮಮಹರ್ಷಿಯು ಶಾಪವನ್ನು ಕೊಟ್ಟಕಾಲದಲ್ಲಿ ವಿಶಾಪದ ಮಾರ್ಗವನ್ನೂ ಹೇಳಿದನು.

೩೯. ನೀನು ಕರಡಿಯ ರೂಪದಿಂದಿರುವ ಧ್ಯಾನಕಾಷ್ಠನೆಂಬವನೊಡನೆ ಸಂವಾದವನ್ನು ಯಾವಾಗ ನಡೆಸುವೆಯೊ, ಆಗ ನಿನ್ನ ಸಿಂಹಸ್ವರೂಪವು ಕಳೆದು ಮತ್ತೆ ಯಕ್ಷರೂಪವನ್ನು ಹೊಂದುವೆ.

೪೦–೪೩. ಎಲೈ ಬ್ರಾಹ್ಮಣನೆ! ಇಂತೆಂದು ಮುನಿಪುಂಗವನಾದ ಗೌತಮನು ನನಗೆ ಹೇಳಿದ್ದನು. ಈಗ ನನ್ನ ಸಿಂಹರೂಪವು ನಾಶವಾದುದರಿಂದ ನೀನು ಮಹಾಮುನಿಯೂ, ಪರಿಶುದ್ಧನೂ, ಇಚ್ಛಾರೂಪಧಾರಿಯೂ ಆದ ಧ್ಯಾನಕಾಷ್ಠನೆಂಬುದನ್ನು ತಿಳಿದೆನು." ಇಂತೆಂದು ಆ ಯಕ್ಷರಾಜನು ಧ್ಯಾನಕಾಷ್ಠನಿಗೆ ದಂಡಪ್ರಣಾಮವನ್ನು ಮಾಡಿ ತನಗಾಗಿ ಬಂದಿದ್ದ ವಿಮಾನವನ್ನು ಹತ್ತಿಕೊಂಡು ಅಲಕಾಪುರಿಯನ್ನು ಕುರಿತು ಹೊರಟುಹೋದನು. ಇತ್ತ ರಾಜನಾದ ಧರ್ಮಗುಪ್ತನು ಹುಚ್ಚನಾಗಿದ್ದುದನ್ನು ಕಂಡು ಮಂತ್ರಿಗಳೆಲ್ಲರೂ ಆತನನ್ನು ಕರೆದುಕೊಂಡು ರೇವಾನದಿಯ ದಡದ ಆಶ್ರಮದಲ್ಲಿದ್ದ ತಂದೆಯಾದ ನಂದನ ಸಮೀಪಕ್ಕೆ ಕರೆದುಕೊಂಡು ಹೋದರು. ಮತ್ತು ಆತನಿಗೆ ಮಗನ ಬುದ್ಧಿಯು ಕೆಟ್ಟುಹೋದುದನ್ನು ತಿಳಿಸಿದರು.

೪೪–೪೫. ತಂದೆಯಾದ ನಂದನು ಸಕಲ ವೃತ್ತಾಂತವನ್ನೂ ತಿಳಿದವನಾಗಿ

ತಸ್ಮೈ ನಿವೇದಯಾಮಾಸ ಪುತ್ರವೃತ್ತಾಂತಮಾದಿತಃ ॥ ೪೫ ॥
ಭಗವನ್ಜೈಮಿನೇ ಪುತ್ರೋ ಮಮಾದ್ಯೋನ್ಮತ್ತತಾಂ ಗತಃ ।
ಅಸ್ಯೋನ್ಮಾದವಿನಾಶಾಯ ಬ್ರೂಹ್ಯುಪಾಯಂ ಮಹಾಮುನೇ ॥ ೪೬ ॥
ಇತಿ ಪೃಷ್ಟಶ್ಚಿರಂ ದಧ್ಯೌ ಜೈಮಿನಿರ್ಮುನಿಪುಂಗವಃ ।
ಧ್ಯಾತ್ವಾ ತು ಸುಚಿರಂ ಕಾಲಂ ನೃಪನಂದನಮಬ್ರವೀತ್ ॥ ೪೭ ॥
ಧ್ಯಾನಕಾಷ್ಠಸ್ಯ ಶಾಪೇನ ಹ್ಯುನ್ಮತ್ತಸ್ತೇ ಸುತೋಽಭವತ್ ।
ತಸ್ಯ ಶಾಪಸ್ಯ ಮೋಕ್ಷಾರ್ಥಮುಪಾಯಂ ಪ್ರಬ್ರವೀಮಿ ತೇ ॥ ೪೮ ॥
ಸುವರ್ಣಮುಖರೀತೀರೇ ವೇಂಕಟೇ ನಾಮ್ನಿ ಪರ್ವತೇ ।
ಸರ್ವಪಾಪಹರೇ ಪುಣ್ಯೇ ನಾನಾಧಾತುವಿನಿರ್ಮಿತೇ ॥ ೪೯ ॥
ಸ್ವಾಮಿಪುಷ್ಕರಿಣೀ ಚೇತಿ ತೀರ್ಥಮಸ್ತಿ ಮಹತ್ತರಂ ।
ಪವಿತ್ರಾಣಾಂ ಪವಿತ್ರಂ ಹಿ ಮಂಗಲಾನಾಂ ಚ ಮಂಗಲಂ ॥ ೫೦ ॥
ಶ್ರುತಿಸಿದ್ಧಂ ಮಹಾಪುಣ್ಯಂ ಬ್ರಹ್ಮಹತ್ಯಾದಿಶೋಧಕಂ ।
ನೀತ್ವಾ ತತ್ರ ಸುತಂ ತೇಽದ್ಯ ಸ್ನಾಪಯಸ್ವ ಮಹಾಮತೇ ॥ ೫೧ ॥

---

ಮಗನನ್ನು ಕರೆದುಕೊಂಡು ಜೈಮಿನಿಮಹರ್ಷಿಯ ಸಮೀಪಕ್ಕೆ ಹೋದನು. ಆತನಿಗೆ ತನ್ನ ಮಗನ ಪೂರ್ವಾಪರವೆಲ್ಲವನ್ನೂ ತಿಳಿಯಹೇಳಿದನು.

೪೬. "ಭಗವಂತನಾದ ಜೈಮಿನಿಯೆ! ನನ್ನ ಮಗನು ಈಗ ಹುಚ್ಚನ ಅವಸ್ಥೆಯನ್ನು ಹೊಂದಿರುವನು. ಮಹರ್ಷಿಯೆ! ಅವನ ಹುಚ್ಚು ಕಳೆಯಲು ಉತ್ತಮವಾದ ಉಪಾಯವೊಂದನ್ನು ತಿಳುಹು.

೪೭–೪೮. ಈ ಪ್ರಶ್ನೆಯನ್ನು ಕೇಳಿ ಆ ಮುನಿಪುಂಗವನು ಬಹಳಕಾಲ ಧ್ಯಾನಾಸಕ್ತನಾದನು. ಇಂತು ಧ್ಯಾನವನ್ನು ಮಾಡಿದವನಾಗಿ ರಾಜನಾದ ನಂದನಿಗೆ ಹೇಳತೊಡಗಿದನು. "ನಿನ್ನ ಮಗನು ಧ್ಯಾನಕಾಷ್ಠಮುನಿಯ ಶಾಪದ ದೆಸೆಯಿಂದ ಉನ್ಮತ್ತನಾಗಿರುವನು. ಆ ಶಾಪದಿಂದ ಬಿಡುಗಡೆಯನ್ನು ಹೊಂದಲು ನಿನಗೆ ಒಂದು ಉಪಾಯವನ್ನು ಹೇಳುವೆನು.

೪೯–೫೦. ಸುವರ್ಣಮುಖರಿಯ ತೀರದಲ್ಲಿ ಸಕಲಪಾಪಗಳನ್ನು ಕಳೆಯುವುದೂ, ಪುಣ್ಯಪ್ರದವೂ, ನಾನಾಧಾತುಗಳಿಂದ ರಂಜಿಸುತ್ತಿರುವುದೂ ಆದ ವೇಂಕಟಾಚಲವೆಂಬ ಪರ್ವತದಲ್ಲಿ ಸ್ವಾಮಿಪುಷ್ಕರಿಣಿಯೆಂಬ ಮಹಾಪವಿತ್ರವಾದ ತೀರ್ಥವೊಂದಿರುವುದು. ಆ ತೀರ್ಥವು ಪವಿತ್ರ ವಸ್ತುಗಳಲ್ಲೆಲ್ಲ ಅತಿ ಪವಿತ್ರವೂ, ಮಂಗಳದ್ರವ್ಯಗಳಲ್ಲೆಲ್ಲ ಅತಿ ಮಂಗಳದಾಯಕವೂ ಆಗಿರುವುದು.

೫೧. ಅಲ್ಲದೆ ವೇದಪ್ರತಿಪಾದ್ಯವೂ, ಮಹಾಪುಣ್ಯಫಲಪ್ರದವೂ, ಬ್ರಹ್ಮಹತ್ಯಾದಿ ಮಹಾಪಾತಕಗಳನ್ನೂ ನಾಶಗೊಳಿಸುವುದೂ ಆಗಿರುವುದು. ಈಗ ನೀನು ನಿನ್ನ ಪುತ್ರನನ್ನು ಅಲ್ಲಿಗೆ ಕರೆದುಕೊಂಡು ಹೋಗಿ ಸ್ನಾನಮಾಡಿಸು.

ಉನ್ಮಾದಸ್ತತ್ಕ್ಷಣಾದೇವ ತಸ್ಯ ನಶ್ಯೇನ್ನ ಸಂಶಯಃ ।
ಇತ್ಯುಕ್ತಸ್ತಂ ಪ್ರಣಮ್ಯಾಸೌ ಜೈಮಿನಿಂ ಮುನಿಪುಂಗವಂ ॥ ೫೨ ॥
ನಂದಃ ಪುತ್ರಂ ಸಮಾದಾಯ ಸ್ವಾಮಿಪುಷ್ಕರಿಣೀಂ ಯಯೌ ।
ತತ್ರ ಚ ಸ್ನಾಪಯಾಮಾಸ ಪುತ್ರಂ ನಿಯಮಪೂರ್ವಕಂ ॥ ೫೩ ॥
ಸ್ನಾನಮಾತ್ರಾತ್ತತಃ ಸದ್ಯೋ ನಷ್ಟೋನ್ಮಾದೋಽಭವತ್ಸುತಃ ।
ಸ್ವಯಂ ಸಸ್ನೌ ಸ ನಂದೋಽಪಿ ಸ್ವಾಮಿಪುಷ್ಕರಿಣೀಜಲೇ ॥ ೫೪ ॥
ಉಷಿತ್ವಾ ದಿನಮೇಕಂ ತು ಸಹಪುತ್ರಃ ಪಿತಾ ತದಾ ।
ಸೇವಿತ್ವಾ ವೇಂಕಟೇಶಂ ಚ ಶ್ರೀನಿವಾಸಂ ಕೃಪಾನಿಧಿಂ ॥ ೫೫ ॥
ಪುತ್ರಮಾಪೃಚ್ಛ್ಯ ನಂದಸ್ತಂ ಪ್ರಯಯೌ ತಪಸೇ ವನಂ ।
ಗತೇ ಪಿತರಿ ಪುತ್ರೋಽಪಿ ಧರ್ಮಗುಪ್ತೋ ನೃಪೋ ದ್ವಿಜಾಃ ॥ ೫೬ ॥
ಪ್ರದದೌ ವೇಂಕಟೇಶಸ್ಯ ಬಹುವಿತ್ತಾನಿ ಭಕ್ತಿತಃ ।
ಬ್ರಾಹ್ಮಣೇಭ್ಯೋ ಧನಂ ಧಾನ್ಯಂ ಕ್ಷೇತ್ರಾಣಿ ಚ ದದೌ ತದಾ ॥ ೫೭ ॥
ಪ್ರಯಯೌ ಮಂತ್ರಿಭಿಃ ಸಾರ್ಧಂ ಸ್ವಾಂ ಪುರೀಂ ತದನಂತರಂ ।
ಧರ್ಮೇಣ ಪಾಲಯಾಮಾಸ ರಾಜ್ಯಂ ನಿಹತಕಂಟಕಂ ॥ ೫೮ ॥

---

೫೨-೫೩. ಅದರಿಂದ ಅವನ ಉನ್ಮಾದವು ತಕ್ಷಣದಲ್ಲಿಯೇ ನಾಶವನ್ನು ಹೊಂದುವುದರಲ್ಲಿ ಸಂದೇಹವಿಲ್ಲ.' ಇಂತೆಂದ ಮುನಿಶ್ರೇಷ್ಠನಾದ ಜೈಮಿನಿಯನ್ನು ಕುರಿತು ಸಾಷ್ಟಾಂಗಪ್ರಣಾಮವನ್ನುಮಾಡಿ ನಂದನು ಮಗನನ್ನು ಕರೆದುಕೊಂಡು ಸ್ವಾಮಿಪುಷ್ಕರಿಣಿಯನ್ನು ಸೇರಿದನು. ಅಲ್ಲಿ ನಿಯಮವನ್ನನುಸರಿಸಿ ಅವನಿಗೆ ಸ್ನಾನಮಾಡಿಸಿದನು.

೫೪. ಸ್ನಾನವನ್ನು ಮಾಡಿದ ಮಾತ್ರದಿಂದಲೇ ಮಗನಾದ ಧರ್ಮಗುಪ್ತನು ತತ್ಷಣದಲ್ಲಿಯೇ ಹುಚ್ಚನ್ನು ಕಳೆದುಕೊಂಡನು. ಬಳಿಕ ತಂದೆಯೂ ಕೂಡ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿದನು.

೫೫-೫೭. ಅಲ್ಲಿ ನಂದನು ಒಂದು ದಿವಸ ನಿಂತು ಮಗನೊಡನೆ ವೇಂಕಟೇಶ್ವರನನ್ನು ಸೇವಿಸಿ ಕೃಪಾಸಮುದ್ರನಾದ ಆ ಶ್ರೀನಿವಾಸನಿಗೆ ಮಣಿದು ಮಗನನ್ನು ಬೀಳುಕೊಟ್ಟು ತಪಸ್ಸನ್ನು ಮಾಡಲು ಮತ್ತೆ ಅರಣ್ಯವನ್ನು ಕುರಿತು ಪ್ರಯಾಣ ಮಾಡಿದನು. ಎಲೈ ಬ್ರಾಹ್ಮಣರಿರಾ! ತಂದೆಯಿಂತು ಹೊರಟುಹೋಗಲು ಮಗನಾದ ಧರ್ಮಗುಪ್ತನು ಮತ್ತೆ ರಾಜನಾಗಿ ವೇಂಕಟೇಶನಿಗೆ ಅನೇಕ ದ್ರವ್ಯವನ್ನು ಭಕ್ತಿಯಿಂದರ್ಪಿಸಿದನು. ಮತ್ತು ಬ್ರಾಹ್ಮಣರಿಗೆ ಅಪಾರವಾದ ಧನವನ್ನೂ ಧಾನ್ಯಗಳನ್ನೂ ಭೂಮಿಗಳನ್ನೂ ದಾನಮಾಡಿದನು.

೫೮. ಅನಂತರದಲ್ಲಿ ಮಂತ್ರಿಗಳೊಡನೆ ತನ್ನ ರಾಜಧಾನಿಯನ್ನು ಕುರಿತು ಹೊರಟನು. ನಿಷ್ಕಂಟಕವಾದ ತನ್ನ ರಾಜ್ಯವನ್ನು ಧರ್ಮದಿಂದ ಪಾಲಿಸುತ್ತಿದ್ದನು.

ಪಿತೃಪೈತಾಮಹಂ ವಿಪ್ರಾ ಧರ್ಮಗುಪ್ತೋಽತಿಧಾರ್ಮಿಕಃ ।
ಉನ್ಮಾದೈರಪ್ಯಪಸ್ಮಾರೈರ್ಗ್ರಹೈರ್ದುಷ್ಟೈಶ್ಚ ಯೇ ನರಾಃ ॥ ೫೯ ॥
ಗ್ರಸ್ತಾ ಭವಂತಿ ವಿಪ್ರೇಂದ್ರಾಸ್ತೇಽಪಿ ಚಾತ್ರ ನಿಮಜ್ಜನಾತ್ ।
ಪುಷ್ಕರಿಣ್ಯಾಂ ವಿಮುಕ್ತಾಸ್ಸ್ಯುಃ ಸತ್ಯಂ ಸತ್ಯಂ ವದಾಮ್ಯಹಂ ॥ ೬೦ ॥
ಸ್ವಾಮಿಪುಷ್ಕರಿಣೀಂ ತ್ಯಕ್ತ್ವಾ ತೀರ್ಥಮನ್ಯದ್ವ್ರಜೇತ್ತು ಯಃ
ಸ್ನಿಗ್ಧಂ ಸ ಗೋಪಯಸ್ತ್ಯಕ್ತ್ವಾ ಸ್ನುಹೀಕ್ಷೀರಂ ಪ್ರಯಾಚತೇ ॥ ೬೧ ॥
ಸ್ವಾಮಿತೀರ್ಥಂ ಸ್ವಾಮಿತೀರ್ಥಂ ಸ್ವಾಮಿತೀರ್ಥಮಿತಿ ದ್ವಿಜಾಃ ।
ತ್ರಿಃಪಠಂತೋ ನರಾ ಏವಂ ಯತ್ರ ಕ್ವಾಪಿ ಜಲಾಶಯೇ ॥ ೬೨ ॥
ಸ್ನಾಂತಿ ಸರ್ವೇ ನರಾಸ್ತೇ ವೈ ಯಾಸ್ಯಂತಿ ಬ್ರಹ್ಮಣಃ ಪದಂ ॥ ೬೩ ॥
ಏವಂ ವಃ ಕಥಿತಾ ವಿಪ್ರಾ ಧರ್ಮಗುಪ್ತಕಥಾ ಶುಭಾ ।
ಯಸ್ಯಾಃ ಶ್ರವಣಮಾತ್ರೇಣ ಬ್ರಹ್ಮಹತ್ಯಾ ವಿನಶ್ಯತಿ ॥ ೬೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀ ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ "ಸ್ವಾಮಿಪುಷ್ಕರಿಣೀತೀರ್ಥಮಹಿಮಾನುವರ್ಣನಂ" ನಾಮ ತ್ರಯೋದಶೋಽಧ್ಯಾಯಃ

---

೫೯–೬೧. ಎಲೈ ವಿಪ್ರರೆ! ಇಂತು ಧರ್ಮೈಕತತ್ಪರನಾದ ಧರ್ಮಗುಪ್ತನು ಕುಲಕ್ರಮಾಗತವಾದ ರಾಜ್ಯವನ್ನು ಅನುಭವಿಸುತ್ತ ಸುಖವಾಗಿದ್ದನು. ಯಾವ ಮನುಷ್ಯರು ಉನ್ಮಾದ, ಅಪಸ್ಮಾರ, ದುಷ್ಟಗ್ರಹಪೀಡೆ ಮುಂತಾದುವುಗಳಿಂದ ಗ್ರಸ್ತರಾಗಿರುವರೊ, ಅವರು ಈ ಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡುವುದರಿಂದ ಸೌಖ್ಯವನ್ನು ಹೊಂದುವರು. ಈ ನನ್ನ ಮಾತು ಸತ್ಯವೇ ಹೊರತು ಬೇರೆ ತಿಳಿಯಬಾರದು. ಯಾವ ಯಾತ್ರಿಕನು ಉತ್ತಮವಾದ ಸ್ವಾಮಿಪುಷ್ಕರಿಣಿಯನ್ನು ಬಿಟ್ಟು ಇತರ ತೀರ್ಥಗಳನ್ನು ಸೇವಿಸಲೆಳಸುವನೊ, ಅವನು ಕಾಸಿದ ಕೆನೆ ಹಾಲನ್ನು ಕಡೆನೂಕಿ ಕಳ್ಳಿಯ ಹಾಲಿಗೆಳಸುವವನಂತೆ ಮೂಢನೆನಿಸುವನು.

೬೨–೬೩. ಎಲೈ ಬ್ರಾಹ್ಮಣೋತ್ತಮರೆ! ಮನುಷ್ಯರು ಯಾವ ಜಲಾಶಯದಲ್ಲಿ ಸ್ನಾನಮಾಡುವಾಗಲೂ ಈ ತೀರ್ಥದ ಹೆಸರನ್ನು ಮೂರು ಬಾರಿ ಗಟ್ಟಿಯಾಗಿ ಉಚ್ಚರಿಸಿ ಬಳಿಕ ಸ್ನಾನವನ್ನು ಮಾಡುವರೊ, ಅವರೆಲ್ಲರೂ ಶಾಶ್ವತವಾದ ಬ್ರಹ್ಮಲೋಕವನ್ನು ಪಡೆಯುವರು.

೬೪. ಬ್ರಾಹ್ಮಣಶ್ರೇಷ್ಠರಿರಾ! ಇಂತು ನಿಮಗೆ ಧರ್ಮಗುಪ್ತನ ಪವಿತ್ರವಾದ ಚರಿತ್ರೆಯನ್ನು ವಿಸ್ತರಿಸಿರುವೆನು. ಇದನ್ನು ಕೇಳಿದ ಮಾತ್ರದಿಂದಲೇ ಬ್ರಹ್ಮಹತ್ಯೆಯೆಂಬ ಮಹಾಪಾತಕವು ನಾಶವನ್ನೈದುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೆಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ಸ್ವಾಮಿಪುಷ್ಕರಿಣೀ ತೀರ್ಥ ಮಹಿಮಾನುವರ್ಣನ"ವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ದಶೋಽಧ್ಯಾಯಃ

### ಸ್ವಾಮಿಪುಷ್ಕರಿಣೀತೀರ್ಥಮಹಿಮಾನುವರ್ಣನಂ

ಶ್ರೀ ಸೂತ ಉವಾಚ :—

ಭೋ ಭೋ ತಪೋಧನಾಸ್ಸರ್ವೇ ನೈಮಿಷಾರಣ್ಯವಾಸಿನಃ ।
ಸ್ವಾಮಿತೀರ್ಥಸ್ಯ ಮಾಹಾತ್ಮ್ಯಂ ಭೂಯೋಽಪಿ ಪ್ರವದಾಮ್ಯಹಂ ॥ ೧ ॥
ಪುರಾ ಕಿರಾತೀಸಂಸರ್ಗಾತ್ಸುಮತಿರ್ಬ್ರಾಹ್ಮಣಃ ಸುರಾಂ ।
ಪೀತವಾನ್ಪುಷ್ಕರಿಣ್ಯಾಂ ಸ ಸ್ನಾತ್ವಾ ಪಾಪಾದ್ವಿಮೋಚಿತಃ ॥ ೨ ॥

ಋಷಯ ಊಚುः :—

ಸುಮತಿಃ ಕಸ್ಯ ಪುತ್ರೋಽಸೌ ಕಥಂ ಸ ಚ ಸುರಾಂ ಪಪೌ ।
ಕಥಂ ಕಿರಾತ್ಯಾ ಸಕ್ತೋಽಭೂತ್ಸೂತ ಪೌರಾಣಿಕೋತ್ತಮ ॥ ೩ ॥
ಸರ್ವೇಷಾಂ ವಿಸ್ತರಾದೇತದ್ವದ ತ್ವಂ ಕೃಪಯಾಧುನಾ ॥ ೪ ॥

ಶ್ರೀ ಸೂತ ಉವಾಚ :—

ಮಹಾರಾಷ್ಟ್ರಾಭಿಧೇ ದೇಶೇ ಬ್ರಾಹ್ಮಣಃ ಕಶ್ಚಿದಾಸ್ತಿಕಃ ।
ಯಜ್ಞದೇವ ಇತಿ ಖ್ಯಾತೋ ವೇದವೇದಾಂಗಪಾರಗಃ ॥ ೫ ॥

---

## ಕನ್ನಡದ ಅನುವಾದ

### ಸ್ವಾಮಿಪುಷ್ಕರಿಣೀತೀರ್ಥಮಹಿಮಾನುವರ್ಣನ

೧. ಸೂತನು ಹೇಳುತ್ತಾನೆ:—ಎಲೈ ನೈಮಿಷಾರಣ್ಯನಿವಾಸಿಗಳಾದ ತಪೋನಿಷ್ಠರೆ! ಸ್ವಾಮಿಪುಷ್ಕರಿಣಿಯ ಮಾಹಾತ್ಮ್ಯೆಯನ್ನು ಇನ್ನೂ ವಿಸ್ತರಿಸುವೆನು, ಕೇಳಿರಿ.

೨. ಪೂರ್ವದಲ್ಲಿ ಸುಮತಿಯೆಂಬ ಬ್ರಾಹ್ಮಣನೊಬ್ಬನು ಕಿರಾತಸ್ತ್ರೀಯ ಸಹವಾಸಕ್ಕೆ ಬಿದ್ದವನಾಗಿ ಅವಳೊಡನೆ ಸುರಾಪಾನಾದಿಗಳನ್ನು ಮಾಡುತ್ತ ಕಾಲಾಂತರದಲ್ಲಿ ಪುಷ್ಕರಿಣಿಯ ಸ್ನಾನದಿಂದ ಪಾಪನಿರ್ಮುಕ್ತನಾದನು.

೩-೪. ಋಷಿಗಳು ಕೇಳುತ್ತಾರೆ:— "ಸುಮತಿಯೆಂಬುವನು ಯಾರ ಪುತ್ರನು? ಸುರಾಪಾನವನ್ನು ಹೇಗೆ ಮಾಡಿದನು? ಪುರಾಣಜ್ಞರಲ್ಲಿ ಉತ್ತಮನಾದ ಸೂತನೆ! ಆತನು ಕಿರಾತಸ್ತ್ರೀಯ ಸಂಸರ್ಗವನ್ನು ಹೇಗೆ ಹೊಂದಿದನು? ಈಗ ಕೃಪೆಯಿಂದ ನಮ್ಮೆಲ್ಲರಿಗೂ ನೀನು ಆ ಕಥೆಯನ್ನು ವಿಸ್ತಾರವಾಗಿ ಹೇಳುವವನಾಗು.

೫. ಸೂತನು ಹೇಳುತ್ತಾನೆ:— ಮಹಾರಾಷ್ಟ್ರವೆಂಬ ದೇಶದಲ್ಲಿ ವೇದವೇದಾಂಗಪಾರಂಗತನಾದ ಯಜ್ಞದೇವನೆಂಬ ಆಸ್ತಿಕಶಿರೋಮಣಿಯಾದ ಒಬ್ಬಾನೊಬ್ಬ ಬ್ರಾಹ್ಮಣನಿದ್ದನು.

ದಯಾಲುರಾತಿಥೇಯಶ್ಚ ಶಿವನಾರಾಯಣಾರ್ಚಕಃ ।
ಸುಮತಿರ್ನಾಮ ಪುತ್ರೋಽಭೂದ್ಯಜ್ಞದೇವಸ್ಯ ತಸ್ಯ ವೈ ॥ ೬ ॥
ಪಿತರಂ ಸ ಪರಿತ್ಯಜ್ಯ ಭಾರ್ಯಾಮಪಿ ಪತಿವ್ರತಾಂ ।
ಪ್ರಯಯಾವುತ್ಕಲೇ ದೇಶೇ ವಿಟಗೋಷ್ಠೀಪರಾಯಣಃ ॥ ೭ ॥
ಕಾಚಿತ್ಕಿರಾತೀ ತದ್ದೇಶೇ ವಸಂತೀ ಯುವಮೋಹಿನೀ ।
ಯೂನಾಂ ಸಮಸ್ತದ್ರವ್ಯಾಣಿ ಪ್ರಲೋಭ್ಯ ಜಗೃಹೇ ಚಿರಂ ॥ ೮ ॥
ತಸ್ಯಾ ಗೃಹಂ ಸ ಪ್ರಯಯೌ ಸುಮತಿರ್ಬ್ರಾಹ್ಮಣಾಧಮಃ ।
ಸುಮತಿಂ ಸಾ ಚ ಜಗ್ರಾಹ ಕಿರಾತೀ ನಿರ್ಧನಂ ದ್ವಿಜಂ ॥ ೯ ॥
ತಯಾ ಯುಕ್ತೋಽಥ ಸುಮತಿಸ್ತತ್ಸಂಯೋಗೈಕತತ್ಪರಃ ।
ಇತಸ್ತತಶ್ಚೋರಯಿತ್ವಾ ಬಹುದ್ರವ್ಯಾಣಿ ಸಂತತಂ ॥ ೧೦ ॥
ದತ್ವಾ ತಯಾ ಚಿರಂ ರೇಮೇ ತದ್ಗೃಹೇ ಬುಭುಜೇ ಚ ಸಃ ।
ಏಕೇನ ಚಷಕೇಣಾಸೌ ತಯಾ ಸಹ ಸುರಾಂ ಪಪೌ ॥ ೧೧ ॥

---

೬. ಆತನು ಭೂತದಯಾಪರನೂ, ಅತಿಥಿಪೂಜಕನೂ, ಶಿವ ವಿಷ್ಣು ಪೂಜಕನೂ ಆಗಿದ್ದನು. ಆ ಯಜ್ಞದೇವನಿಗೆ ಸುಮತಿಯೆಂಬ ಒಬ್ಬ ಮಗ ನಿದ್ದನು.

೭. ಅವನು ದುರಾಚಾರಿಯಾಗಿ ತಂದೆಯನ್ನೂ ಪತಿವ್ರತೆಯಾದ ತನ್ನ ಪತ್ನಿಯನ್ನೂ ತ್ಯಜಿಸಿ ಕೆಲವು ವಿಟಪುರುಷರ ಗುಂಪನ್ನು ಸೇರಿ ಉತ್ಕಲ ದೇಶವನ್ನು ಕುರಿತು ಪ್ರಯಾಣಮಾಡಿದನು.

೮. ಆ ದೇಶದಲ್ಲಿ ಒಬ್ಬ ಕಿರಾತಸ್ತ್ರೀಯು ವಾಸಮಾಡುತ್ತ ಯುವಕರಿಗೆಲ್ಲ ಮೋಹವನ್ನುಂಟುಮಾಡುತ್ತಿದ್ದಳು. ಮತ್ತು ಬಹಳ ಕಾಲದಿಂದ ಆ ಯುವಕ ರನ್ನು ಹಾವಭಾವಗಳಿಂದ ಪ್ರಲೋಭಗೊಳಿಸಿ ಅವರ ಸಮಸ್ತೈಶ್ವರ್ಯಗಳನ್ನೂ ಸುಲಿಗೆಮಾಡುತ್ತಿದ್ದಳು.

೯. ಬ್ರಾಹ್ಮಣಬ್ರುವನಾದ ಆ ಸುಮತಿಯು ಅವಳ ಮನೆಯನ್ನು ಸೇರಿದನು. ಆ ಕಿರಾತಿಯೂ ಕೂಡ ಬಡವನಾದರೂ ಬ್ರಾಹ್ಮಣನೆಂಬ ಅಭಿಮಾನದಿಂದ ಅವನನ್ನು ಪರಿಗ್ರಹಿಸಿದಳು.

೧೦–೧೧. ಆ ಬ್ರಾಹ್ಮಣನು ಅವಳನ್ನು ಸೇರಿ ಅವಳ ಸಹವಾಸವೊಂದನ್ನೇ ಪರಮಪುರುಷಾರ್ಥವೆಂದು ಬಗೆದು, ಸತತವೂ ನಾನಾಗೃಹಗಳಿಂದ ಅನೇಕ ದ್ರವ್ಯವನ್ನು ಕಳ್ಳತನದಿಂದ ಸಂಪಾದಿಸಿ ಅವಳಿಗೆ ಕೊಡುತ್ತ, ಅವಳೊಡನೆ ಬಹುಕಾಲ ರಮಿಸುತ್ತಿದ್ದನು. ಅವಳ ಮನೆಯಲ್ಲಿಯೇ ಊಟವನ್ನು ಮಾಡು ತ್ತಿದ್ದನು. ಒಂದೇ ಪಾತ್ರೆಯಿಂದ ಅವಳೊಡನೆ ಸುರಾಪಾನವನ್ನೂ ಮಾಡು ತ್ತಿದ್ದನು.

ಏವಂ ಸ ಬಹುಕಾಲಂ ವೈ ರಮಮಾಣಸ್ತಯಾ ಸಹ ।
ಪಿತರೌ ನಿಜಪತ್ನೀಂಚ ನಾಸ್ಮರದ್ವಿಷಯಾತುರಃ ॥ ೧೨ ॥
ಸ ಕದಾಚಿತ್ಕಿರಾತೈಸ್ತು ಚೌರ್ಯಂ ಕರ್ತುಂ ಯಯೌ ಸಹ ।
ವಿಪ್ರಸ್ಯ ಕಸ್ಯಚಿದ್ಗೇಹೇ ಸೋಽಪಿ ಕೈರಾತವೇಷಭೃತ್ ।
ಯಯೌ ಚೋರಯಿತುಂ ದ್ರವ್ಯಂ ಸಾಹಸೀ ಖಡ್ಗಹಸ್ತವಾನ್ ॥ ೧೩ ॥
ತದ್ಗೃಹಸ್ವಾಮಿನಂ ವಿಪ್ರಂ ಹತ್ವಾ ಖಡ್ಗೇನ ಸಾಹಸಾತ್ ।
ಸಮಾದಾಯ ಬಹುದ್ರವ್ಯಂ ಕಿರಾತೀಭವನಂ ಯಯೌ ॥ ೧೪ ॥
ತಂ ಯಾಂತಮನುಯಾತಿ ಸ್ಮ ಬ್ರಹ್ಮಹತ್ಯಾ ಭಯಂಕರೀ ।
ನೀಲವಸ್ತ್ರಧರಾ ಭೀಮಾ ಭೃಶಂ ರಕ್ತಶಿರೋರುಹಾ ॥ ೧೫ ॥
ಗರ್ಜಂತೀ ಸಾಟ್ಟಹಾಸಂ ಸಾ ಕಂಪಯಂತೀ ಚ ರೋದಸೀ ।
ಅನುದ್ರುತಸ್ತಯಾ ಸೋಽಯಂ ಬಭ್ರಾಮ ಜಗತೀತಲೇ ॥ ೧೬ ॥
ಏವಂ ಭ್ರಮನ್ಸ್ವಪಂ ಸರ್ವಾಂ ಕದಾಚಿತ್ಸುಮತಿಃ ಸ್ವಯಂ ।
ಸ್ವಗ್ರಾಮಂ ಪ್ರಯಯೌ ಭೀತ್ಯಾ ವಿಪ್ರಬಂಧುರ್ದುರಾತ್ಮವಾನ್ ॥ ೧೭ ॥

---

೧೨. ಇಂತು ದೀರ್ಘಕಾಲ ಅವಳೊಡನೆ ಸಂಭೋಗಸುಖವನ್ನನುಭವಿಸುತ್ತ ಕೇವಲ ವಿಷಯಸುಖಗಳಲ್ಲಿಯೇ ಮಗ್ನನಾಗಿ ತಾಯಿ ತಂದೆಯರನ್ನೂ ತನ್ನ ಹೆಂಡತಿಯನ್ನೂ ಮರೆತುಹೋದನು.

೧೩. ಅವನು ಒಂದು ದಿನ ಕೆಲವು ಕಿರಾತರೊಡನೆ ಕಳ್ಳತನವನ್ನು ಮಾಡಲು ಹೊರಟನು. ತಾನೂ ಕಿರಾತವೇಷವನ್ನು ಧರಿಸಿದವನಾಗಿ, ನಿಷ್ಠುರ ಹೃದಯನಾಗಿ ಕೈಯಲ್ಲಿ ಖಡ್ಗವನ್ನು ಹಿಡಿದು ಒಬ್ಬ ಬ್ರಾಹ್ಮಣನ ಮನೆಯಲ್ಲಿ ಧನವನ್ನಪಹರಿಸಲು ಹೊರಟನು.

೧೪. ಅವನು ಸಾಹಸದಿಂದ ಮನೆಯ ಯಜಮಾನನಾದ ಆ ಬ್ರಾಹ್ಮಣನನ್ನು ಕೊಂದು ಹೆಚ್ಚಿನ ದ್ರವ್ಯವನ್ನು ದೋಚಿಕೊಂಡು ಕಿರಾತಸ್ತ್ರೀಯ ಮನೆಗೆ ಹೊರಟು ಬಂದನು.

೧೫. ಇಂತು ಬರುತ್ತಿರುವ ಆ ಬ್ರಾಹ್ಮಣನನ್ನು ಭಯಂಕರಳೂ, ನೀಲವಸ್ತ್ರಾನ್ವಿತೆಯೂ, ಪರಾಕ್ರಮಶಾಲಿಯೂ, ಹೆಚ್ಚಾದ ಕೆಂಪು ಕೂದಲುಳ್ಳವಳೂ ಆದ ಬ್ರಹ್ಮಹತ್ಯಾಶಕ್ತಿಯು ಹಿಂಬಾಲಿಸುತ್ತಿದ್ದಳು.

೧೬–೧೭. ಆಕೆಯು ಅಟ್ಟಹಾಸದಿಂದ ಸಿಂಹಗರ್ಜನೆಯನ್ನುಮಾಡುತ್ತ ಭೂವ್ಯಾಕಾಶಗಳನ್ನು ನಡುಗಿಸುತ್ತಿದ್ದಳು. ಆಕೆಯಿಂದ ಹಿಂಬಾಲಿಸಲ್ಪಟ್ಟವನಾಗಿ ಆ ಸುಮತಿಯು ಭೂಮಂಡಲವನ್ನೆಲ್ಲ ಸುತ್ತಿದನು. ಇಂತು ಸಕಲ ಭೂಮಂಡಲವನ್ನೂ ಸುತ್ತುತ್ತ ಸುಮತಿಯು ಬ್ರಾಹ್ಮಣಾಧಮನೂ, ದುರಾತ್ಮನೂ ಆಗಿ ಕಡೆಗೊಮ್ಮೆ ಮಹಾರಾಷ್ಟ್ರದಲ್ಲಿದ್ದ ತನ್ನ ಗ್ರಾಮಕ್ಕೆ ಬಂದನು.

ಅನುದ್ರುತಸ್ತಯಾ ಭೀತಃ ಪ್ರಯಯೌ ಸ್ವಗೃಹಂ ಪ್ರತಿ ।
ಬ್ರಹ್ಮಹತ್ಯಾಪ್ಯನುದ್ರುತ್ಯ ತೇನ ಸಾಕಂ ಗೃಹಂ ಯಯೌ ॥ ೧೮ ॥
ಪಿತರಂ ರಕ್ಷ ರಕ್ಷೇತಿ ಸುಮತಿಃ ಶರಣಂ ಯಯೌ ।
ಮಾ ಭೈಷೀರಿತಿ ತಂ ಪ್ರೋಚ್ಯ ಪಿತಾ ರಕ್ಷಿತುಮುದ್ಯತಃ ॥ ೧೯ ॥
ತದಾನೀಂ ಬ್ರಹ್ಮಹತ್ಯೇಯಂ ತತ್ರಾತಂ ಪ್ರತ್ಯಭಾಷತ ॥ ೨೦ ॥

ಬ್ರಹ್ಮಹತ್ಯೋವಾಚ :—

ನೈವ ತ್ವಂ ಪ್ರತಿಗೃಹ್ಣೀಷ್ವ ಯಜ್ಞದೇವ ದ್ವಿಜೋತ್ತಮ ।
ಅಸೌ ಸುರಾಪೀ ಸ್ತೇಯೀ ಚ ಬ್ರಹ್ಮಹಾ ಚಾತಿಪಾತಕೀ ॥ ೨೧ ॥
ಮಾತೃದ್ರೋಹೀ ಪಿತೃದ್ರೋಹೀ ಭಾರ್ಯಾತ್ಯಾಗೀ ಚ ಪಾತಕೀ ।
ಕಿರಾತೀಸಂಗದುಷ್ಟಶ್ಚ ಹ್ಯೇನಂ ಮುಂಚ ದುರಾತ್ಮಕಂ ॥ ೨೨ ॥
ಗೃಹ್ಣಾಸಿ ಚೇದಿಮಂ ವಿಪ್ರ ಮಹಾಪಾತಕಿನಂ ಸುತಂ ।
ತ್ವದ್ಭಾರ್ಯಾಮಸ್ಯ ಭಾರ್ಯಾಂ ಚ ತ್ವಾಂ ಚ ಪುತ್ರಮಿಮಂ ದ್ವಿಜ ॥ ೨೩ ॥
ಭಕ್ಷಯಿಷ್ಯಾಮಿ ವಂಶಂ ಚ ತಸ್ಮಾನ್ಮುಂಚ ಸುತಂ ತ್ವಿಮಂ ।
ಇಮಂ ತ್ಯಜಸಿ ಚೇತ್ಪುತ್ರಂ ಯುಷ್ಮಾನ್ಮುಂಚಾಮಿ ಸಾಂಪ್ರತಂ ॥ ೨೪ ॥

---

೧೮. ಬ್ರಹ್ಮಹತ್ಯೆಯಿಂದ ಅನುದ್ರುತನಾಗಿ ಭಯಗೊಂಡು ತನ್ನ ಮನೆಯನ್ನು ಕುರಿತು ಹೊರಟನು. ಆ ಶಕ್ತಿಯೂ ಅವನನ್ನು ಹಿಂಬಾಲಿಸಿ ಅವನ ಜೊತೆಯಲ್ಲಿಯೇ ಮನೆಯನ್ನು ಪ್ರವೇಶಿಸಿತು.

೧೯–೨೦. ಸುಮತಿಯು "ಕಾಪಾಡು, ಕಾಪಾಡು" ಎನ್ನುತ್ತ ತಂದೆಯನ್ನು ಶರಣುಹೊಕ್ಕನು. ತಂದೆಯಾದ ಯಜ್ಞದೇವನು ಹೆದರಬೇಡವೆಂದು ಅಭಯವನ್ನಿತ್ತು ಅವನನ್ನು ರಕ್ಷಿಸುವ ಪ್ರಯತ್ನದಲ್ಲಿದ್ದನು. ಆಗ ಬ್ರಹ್ಮಹತ್ಯೆಯು ಬ್ರಾಹ್ಮಣೋತ್ತಮನನ್ನು ಕುರಿತು ಹೇಳತೊಡಗಿತು.

೨೧. ಬ್ರಹ್ಮಹತ್ಯೆಯು ಹೇಳುತ್ತಾಳೆ:—"ಬ್ರಾಹ್ಮಣಶ್ರೇಷ್ಠನಾದ ಯಜ್ಞದೇವನೆ! ಇವನನ್ನು ನೀನು ಪ್ರತಿಗ್ರಹಿಸಬೇಡ. ಇವನು ಸುರಾಪಾನವನ್ನು ಮಾಡಿರುವನು, ಪರಸ್ವವನ್ನು ಅಪಹರಿಸಿದವನು ಮತ್ತು ಬ್ರಾಹ್ಮಣವಧೆಯನ್ನು ಮಾಡಿದ ಮಹಾಪಾತಕಿಯು.

೨೨. ತಾಯಿಗೆ ದ್ರೋಹವನ್ನು ಮಾಡಿರುವನು; ಪಿತೃದ್ರೋಹಿಯು, ಪತಿವ್ರತೆಯಾದ ಹೆಂಡತಿಯನ್ನು ತ್ಯಜಿಸಿದ ಪಾಪಿಯು. ಕಿರಾತಸ್ತ್ರೀಯ ಸಂಸರ್ಗದಿಂದ ದೂಷಿತನಾಗಿರುವನು. ಈ ದುರಾತ್ಮನನ್ನು ಬಿಟ್ಟುಬಿಡು.

೨೩–೨೪. ಎಲೈ ಬ್ರಾಹ್ಮಣನೆ! ಮಹಾಪಾತಕಿಯಾದ ಈ ನಿನ್ನ ಮಗನನ್ನು ಪರಿಗ್ರಹಿಸಿದೆಯಾದರೆ ನಾನು ನಿನ್ನ ಪತ್ನಿಯನ್ನೂ ಇವನ ಪತ್ನಿಯನ್ನೂ ನಿನ್ನನ್ನೂ ಈ ನಿನ್ನ ಮಗನನ್ನೂ ಭಕ್ಷಿಸಿ ವಂಶವನ್ನೇ ನಿರ್ಮೂಲಗೊಳಿಸುವೆನು.

ನೈಕಸ್ಯಾರ್ಥೇ ಕುಲಂ ಹಂತುಮರ್ಹಸಿ ತ್ವಂ ಮಹಾಮತೇ ।
ಇತ್ಯುಕ್ತಸ್ಸ ತಯಾ ತತ್ರ ಯಜ್ಞದೇವೋಽಬ್ರವೀಚ್ಚ ತಾಂ ॥ ೨೫ ॥

ಯಜ್ಞದೇವ ಉವಾಚ :—

ಬಾಧತೇ ಮಾಂ ಸುತಸ್ನೇಹಃ ಕಥಮೇನಂ ಪರಿತ್ಯಜೇ ।
ಬ್ರಹ್ಮಹತ್ಯಾ ತದಾಕರ್ಣ್ಯ ದ್ವಿಜೋಕ್ತಂ ತಮಭಾಷತ ॥ ೨೬ ॥

ಬ್ರಹ್ಮಹತ್ಯೋವಾಚ :—

ಅಯಂ ಹಿ ಪತಿತೋ ಭೂತ್ವಾ ವರ್ಣಾಶ್ರಮಬಹಿಷ್ಕೃತಃ ।
ಪುತ್ರೇಽಸ್ಮಿನ್ಮಾಕುರು ಸ್ನೇಹಂ ನಿಂದಿತಂ ಚಾಸ್ಯ ದರ್ಶನಂ ॥ ೨೭ ॥
ಇತ್ಯುಕ್ತ್ವಾ ಬ್ರಹ್ಮಹತ್ಯಾ ಸಾ ಯಜ್ಞದೇವಸ್ಯ ಪಶ್ಯತಃ ।
ತಲೇನ ಪ್ರಜಹಾರಾಸ್ಯ ಪುತ್ರಂ ಸುಮತಿನಾಮಕಂ ॥ ೨೮ ॥
ರುರೋದ ತಾತತಾತೇತಿ ಪಿತರಂ ಪ್ರಬ್ರುವನ್ಮುಹುಃ ॥ ೨೯ ॥
ರುರುದುರ್ಜನಕೋ ಮಾತಾ ಭಾರ್ಯಾಪಿ ಸುಮತೇಸ್ತದಾ ।
ಏತಸ್ಮಿನ್ನಂತರೇ ತತ್ರ ದುರ್ವಾಸಾಃ ಶಂಕರಾಂಶಕಃ ।
ದಿಷ್ಟ್ಯಾ ಸಮಾಯಯೌ ಯೋಗೀ ಧಾರ್ಮಿಕೋ ಮುನಿಸತ್ತಮಃ ॥ ೩೦ ॥

---

ಆದುದರಿಂದ ಈ ಮಗನನ್ನು ಬಿಟ್ಟುಬಿಡು. ಇವನನ್ನು ನೀನು ತ್ಯಜಿಸಿದರೆ ನಾನೂ ತತ್ಷಣದಲ್ಲಿಯೇ ನಿಮ್ಮೆಲ್ಲರನ್ನೂ ಬಿಟ್ಟುಬಿಡುವೆನು.

೨೫. ಮಹಾಬುದ್ಧಿಶಾಲಿಯಾದ ನೀನು ಒಬ್ಬನಿಗಾಗಿ ಕುಲವನ್ನು ನಾಶಗೊಳಿಸುವುದು ಧರ್ಮವಲ್ಲ.'' ಇಂತೆಂದ ಮಾತುಗಳನ್ನು ಕೇಳಿ ಯಜ್ಞದೇವನು ಆ ಬ್ರಹ್ಮಹತ್ಯೆಗೆ ಹೇಳತೊಡಗಿದನು.

೨೬. ಯಜ್ಞದೇವನು ಹೇಳುತ್ತಾನೆ:—''ಪುತ್ರಸ್ನೇಹವೆಂಬುದು ನನ್ನನ್ನು ಬಾಧಿಸುತ್ತಿರುವುದು. ಇವನನ್ನು ಹೇಗೆ ಕೈಬಿಡಲಿ?'' ಇಂತು ಬ್ರಾಹ್ಮಣನಾಡಿದ ಮಾತನ್ನು ಕೇಳಿ ಬ್ರಹ್ಮಹತ್ಯೆಯು ಆತನನ್ನು ಕುರಿತು ಹೇಳಿತು.

೨೭. ಬ್ರಹ್ಮಹತ್ಯೆಯು ಹೇಳುತ್ತಾಳೆ:—''ಇವನು ಪತಿತನಾದುದರಿಂದ ಸಕಲ ವರ್ಣಾಶ್ರಮಾಚಾರಗಳಿಂದ ಬಹಿಷ್ಕೃತನಾಗಿರುವನು. ಆದುದರಿಂದ ಇವನಲ್ಲಿ ಪುತ್ರಸ್ನೇಹವನ್ನೂ ಮಾಡಬೇಡ, ಇವನನ್ನು ನೋಡುವುದೂ ಕೂಡ ಶಾಸ್ತ್ರನಿಂದಿತವು.''

೨೮–೨೯. ಇಂತೆಂದು ಆ ಬ್ರಹ್ಮಹತ್ಯೆಯು ಯಜ್ಞದೇವನು ನೋಡುತ್ತಿರುವಂತೆಯೇ ಸುಮತಿಯೆಂಬ ಪುತ್ರನನ್ನು ಅಂಗೈಯಿಂದ ಹೊಡೆದಳು. ಅವನು ಮತ್ತೆ ಮತ್ತೆ ತಂದೆಯನ್ನು ಕೂಗುತ್ತ ಗಟ್ಟಿಯಾಗಿ ಅಳತೊಡಗಿದನು.

೩೦. ಆಗ ಸುಮತಿಯ ತಂದೆಯೂ, ತಾಯಿಯೂ, ಹೆಂಡತಿಯೂ ರೋದನಮಾಡಿದರು. ಇಷ್ಟರಲ್ಲಿ ಈಶ್ವರಾಂಶಸಂಭೂತನಾದ ದೂರ್ವಾಸ

ಯಜ್ಞದೇವೋಽಥ ತಂ ದೃಷ್ಟ್ವಾ ಮುನಿಂ ರುದ್ರಾವತಾರಕಂ ।
ಸ್ತುತ್ವಾ ಪ್ರಣಮ್ಯ ಶರಣಂ ಯಯಾಚೇ ಪುತ್ರಕಾರಣಾತ್ ॥ ೩೧ ॥
ದುರ್ವಾಸಾಸ್ತ್ವಂ ಮಹಾಯೋಗಿನ್ಸಾಕ್ಷಾದ್ವೈ ಶಂಕರಾಂಶಕಃ ।
ತ್ವದ್ದರ್ಶನಮಪುಣ್ಯಾನಾಂ ಭವಿತಾ ನ ಕದಾಚನ ॥ ೩೨ ॥
ಬ್ರಹ್ಮಹಾ ಚ ಸುರಾಪೀ ಚ ಸ್ತೇಯೀ ಚಾಭೂತ್ಸುತೋ ಮಮ ।
ಏನಂ ಪ್ರಹರ್ತುಮಾಯಾತಾ ಬ್ರಹ್ಮಹತ್ಯಾಪಿ ವರ್ತತೇ ॥ ೩೩ ॥
ಭೂಯಾದ್ಯಥಾ ಮೇ ಪುತ್ರೋಽಯಂ ಮಹಾಪಾತಕವರ್ಜಿತಃ ।
ಘೋರಾ ಚ ಬ್ರಹ್ಮಹತ್ಯೇಯಂ ಯಥಾ ಶೀಘ್ರಂ ಲಯಂ ವ್ರಜೇತ್ ॥
ತಮುಪಾಯಂ ವದಸ್ವಾದ್ಯ ಮಮ ಪುತ್ರೇ ದಯಾಂ ಕುರು ।
ಅಯಮೇವ ಹಿ ಪುತ್ರೋ ಮೇ ನಾನ್ಯೋಽಸ್ತಿ ತನಯೋ ಮುನೇ ॥೩೫॥
ಅಸ್ಮಿನ್ಮೃತೇ ತು ವಂಶೋ ಮೇ ಸಮುಚ್ಛಿದ್ಯೇತ ಮೂಲತಃ ।
ತತಃ ಪಿತೃಭ್ಯಃ ಪಿಂಡಾನಾಂ ದಾತಾಪಿ ನ ಭವೇದ್ಧ್ರುವಂ ॥ ೩೬ ॥

---

ಮಹರ್ಷಿಯು ದೈವಯೋಗದಿಂದ ಅಲ್ಲಿಗೈತಂದನು. ಆತನು ಯೋಗಿಯು, ಧರ್ಮಜ್ಞನು, ಮುನಿಪುಂಗವನು.

೩೧. ರುದ್ರಾವತಾರನಾದ ಆ ಮುನಿಯನ್ನು ಕಂಡು ಯಜ್ಞದೇವನು ಸ್ತೋತ್ರಮಾಡಿ ಸಾಷ್ಟಾಂಗವಾಗಿ ನಮಸ್ಕರಿಸಿ ಮಗನಿಗೋಸ್ಕರವಾಗಿ ಶರಣು ಹೊಕ್ಕು ಯಾಚಿಸಿದನು.

೩೨. "ಎಲೈ ದೂರ್ವಾಸನೆ! ನೀನು ಮಹಾಯೋಗಿಯು. ಸಾಕ್ಷಾತ್ತಾದ ಮಹೇಶ್ವರನ ಅಂಶದಿಂದ ಹುಟ್ಟಿರುವೆ. ಪುಣ್ಯವಂತರಲ್ಲದವರಿಗೆ ನಿನ್ನ ದರ್ಶನವು ಎಂದಿಗೂ ಲಭಿಸಲಾರದು.

೩೩. ಈ ನನ್ನ ಮಗನು ಬ್ರಹ್ಮಘ್ನನು. ಸುರಾಪಾನಮಾಡಿದನು. ಸ್ವರ್ಣ ಸ್ತೇಯಿಯು. ಇವನನ್ನು ಕೊಲ್ಲುವುದಕ್ಕಾಗಿ ಬಂದ ಬ್ರಹ್ಮಹತ್ಯೆಯು ಇಲ್ಲಿಯೇ ಇರುವುದು.

೩೪–೩೫. ಮಹಾಮುನಿಯೆ! ಈ ನನ್ನ ಮಗನು ಮಹಾಪಾತಕಗಳಿಂದ ಬಿಡುಗಡೆಯನ್ನು ಹೊಂದುವುದಕ್ಕೂ, ಭಯಂಕರವಾದ ಈ ಬ್ರಹ್ಮಹತ್ಯೆಯು ಬೇಗ ನಿವೃತ್ತಿಯಾಗುವುದಕ್ಕೂ ಈಗ ಉಪಾಯವನ್ನು ತಿಳಿಸು. ನನ್ನ ಮಗನ ವಿಷಯದಲ್ಲಿ ದಯೆಯನ್ನುಮಾಡು. ಇವನೇ ನನ್ನ ಪುತ್ರನು. ನನಗೆ ಬೇರೆ ಸಂತತಿಯಿಲ್ಲ.

೩೬. ಇವನು ಮೃತನಾಗಲು ನನ್ನ ವಂಶವು ಸಮೂಲವಾಗಿ ನಾಶವನ್ನೈದುವುದು. ಆ ಮೇಲೆ ನಿಜವಾಗಿಯೂ ಪಿತೃಗಳಿಗೆ ಪಿಂಡಗಳನ್ನು ಕೊಡುವವರೂ ಇಲ್ಲದಂತಾಗುವುದು.

ತತಃ ಕೃಪಾಂ ಕುರುಷ್ವ ತ್ವಮಸ್ಮಾಸು ಭಗವನ್ಮುನೇ ॥ ೩೭ ॥
ಇತ್ಯುಕ್ತಃ ಸ ತದೋವಾಚ ದುರ್ವಾಸಾಃ ಶಂಕರಾಂಶಕಃ ।
ಧ್ಯಾತ್ವಾಥ ಸುಚಿರಂ ಕಾಲಂ ಯಜ್ಞದೇವಂ ದ್ವಿಜೋತ್ತಮಂ ॥ ೩೮ ॥
ದುರ್ವಾಸ ಉವಾಚ :—
ಯಜ್ಞದೇವ ಕೃತಂ ಪಾಪಮತಿಕ್ರೂರಂ ಸುತೇನ ತೇ ।
ನಾಸ್ಯ ಪಾಪಸ್ಯ ಶಾಂತಿಃ ಸ್ಯಾತ್ಪ್ರಾಯಶ್ಚಿತ್ತಾಯುತೈರಪಿ ॥ ೩೯ ॥
ತಥಾಪಿ ತೇ ಸುತಸ್ಯಾಹಂ ತಸ್ಯ ಪಾಪಸ್ಯ ಶಾಂತಯೇ ।
ಪ್ರಾಯಶ್ಚಿತ್ತಂ ವದಿಷ್ಯಾಮಿ ಶೃಣು ನಾನ್ಯಮನಾ ದ್ವಿಜ ॥ ೪೦ ॥
ವೇಂಕಟಾದ್ರೌ ಮಹಾಪುಣ್ಯೇ ಸರ್ವಪಾತಕನಾಶನೇ ।
ಸ್ವಾಮಿಪುಷ್ಕರಿಣೀ ಚೇತಿ ವರ್ತತೇ ಮಂಗಲಪ್ರದಾ ॥ ೪೧ ॥
ಸ್ನಾತಿ ಚೇತ್ತತ್ರ ಪುತ್ರೋಽಯಂ ಪಾತಕಾನ್ಮುಚ್ಯತೇ ಕ್ಷಣಾತ್ ॥ ೪೨ ॥
ಏವಂ ಶ್ರುತ್ವಾ ಮುನೇರ್ವಾಕ್ಯಂ ಯಜ್ಞದೇವೋ ಮಹಾಮತಿಃ ।
ಪುತ್ರಮಾದಾಯ ಸುಮತಿಂ ಸ್ವಾಮಿಪುಷ್ಕರಿಣೀಂ ಗತಃ ॥ ೪೩ ॥

---

೩೭. ಷಡ್ಗುಣೈಶ್ವರ್ಯವಂತನಾದ ಮುನಿಯೆ! ಆದುದರಿಂದ ನೀನು ನಮ್ಮಲ್ಲಿ ಕೃಪೆಮಾಡುವವನಾಗು.''

೩೮. ಈ ಮಾತುಗಳನ್ನು ಕೇಳಿ ಪರಶಿವನ ಅಂಶಭೂತನಾದ ದೂರ್ವಾಸನು ದೀರ್ಘಕಾಲದವರೆಗೂ ಯೋಚನೆಯನ್ನುಮಾಡಿ ಬ್ರಾಹ್ಮಣೋತ್ತಮನಾದ ಯಜ್ಞದೇವನನ್ನು ಕುರಿತು ಹೇಳಿದನು.

೩೯–೪೦. ದೂರ್ವಾಸನು ಹೇಳುತ್ತಾನೆ :—'' ಅಯ್ಯಾ ಯಜ್ಞದೇವನೆ! ನಿನ್ನ ಮಗನು ಮಾಡಿರುವ ಪಾಪವು ಅತಿ ಕ್ರೂರವೆಂಬುದರಲ್ಲಿ ಸಂಶಯವಿಲ್ಲ. ಹತ್ತುಸಾವಿರ ಪ್ರಾಯಶ್ಚಿತ್ತಗಳಿಂದಲೂ ಈ ಪಾಪಕ್ಕೆ ತಕ್ಕ ಶಾಂತಿಯುಂಟಾಗಲಾರದೆಂದು ತಿಳಿಯುವೆನು. ಆದರೂ ನಿನ್ನ ಮಗನ ಪಾಪದ ಶಾಂತಿಯ ನಿಮಿತ್ತವಾಗಿ ಒಂದು ಪ್ರಾಯಶ್ಚಿತ್ತವನ್ನು ತಿಳಿಸುವೆನು. ಬ್ರಾಹ್ಮಣೋತ್ತಮಾ! ಏಕಾಗ್ರಚಿತ್ತದಿಂದ ಕೇಳುವವನಾಗು.

೪೧–೪೨. ಮಹಾಪುಣ್ಯಪ್ರದೇಶವೂ, ಸಕಲಪಾಪನಾಶಕವೂ ಆದ ವೇಂಕಟಾಚಲದಲ್ಲಿ ಮಂಗಳದಾಯಕವಾದ ಸ್ವಾಮಿಪುಷ್ಕರಿಣಿಯೆಂಬ ಉತ್ತಮ ತೀರ್ಥವೊಂದಿರುವುದು. ಈ ನಿನ್ನ ಮಗನು ಅದರಲ್ಲಿ ಸ್ನಾನವನ್ನು ಮಾಡಿದರೆ ತತ್ಕ್ಷಣದಲ್ಲಿಯೇ ತನ್ನ ಪಾಪಗಳಿಂದ ಮುಕ್ತನಾಗುವನು.''

೪೩. ಮಹಾಮುನಿಯ ಈ ಮಾತುಗಳನ್ನು ಕೇಳಿ ಮಹಾಬುದ್ಧಿಯಾದ ಯಜ್ಞದೇವನು ಮಗನಾದ ಸುಮತಿಯನ್ನು ಕರೆದುಕೊಂಡು ಸ್ವಾಮಿಪುಷ್ಕರಿಣಿಯನ್ನು ಕುರಿತು ಹೊರಟನು.

ಸ್ನಾಪಯಾಮಾಸ ಸುಮತಿಂ ಹತ್ಯಯಾ ಪೀಡಿತಂ ಸುತಂ ।
ಆಕಾಶವಾಣೀ ತಂ ವಿಪ್ರಮುವಾಚ ಮಧುರಸ್ವರಾ ॥ ೪೪ ॥
ಯಜ್ಞದೇವ ಮಹಾಭಾಗ ಸ್ನಾನೇನಾನೇನ ಸುವ್ರತ ।
ಪೂತೋಽಭವತ್ತವ ಸುತಃ ಸಂಶಯಂ ಮಾಕೃಥಾ ದ್ವಿಜ ।
ಏವಂಪ್ರಭಾವಂ ತತ್ತೀರ್ಥಂ ಪಾಪವೃಕ್ಷಕುಠಾರಕಂ ॥ ೪೫ ॥
ಏವಂ ವಃ ಕಥಿತಂ ವಿಪ್ರಾ ಇತಿಹಾಸಂ ಪುರಾತನಂ ।
ಶ್ರುಣ್ವತಾಂ ಪಠತಾಂ ಚಾಪಿ ವಾಜಪೇಯಫಲಂ ಲಭೇತ್ ॥ ೪೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹ ಸಂವಾದೇ "ಸ್ವಾಮಿಪುಷ್ಕರಿಣೀತೀರ್ಥಮಹಿಮಾನುವರ್ಣನಂ" ನಾಮ ಚತುರ್ದಶೋಽಧ್ಯಾಯಃ

---

೪೪. ಬ್ರಹ್ಮಹತ್ಯೆಯಿಂದ ಪೀಡಿತನಾದ ತನ್ನ ಮಗನನ್ನು ಆ ತೀರ್ಥದಲ್ಲಿ ಸ್ನಾನಮಾಡಿಸಿದನು. ಆಗ ಮಧುರಧ್ವನಿಯುಳ್ಳ ಆಕಾಶವಾಣಿಯು ಆ ಬ್ರಾಹ್ಮಣನನ್ನು ಕುರಿತು ಹೇಳತೊಡಗಿತು :—

೪೫. "ಮಹಾತ್ಮನಾದ ಎಲೈ ಯಜ್ಞದೇವನೆ! ಈ ತೀರ್ಥದ ಸ್ನಾನದಿಂದ ನಿನ್ನ ಮಗನು ಪವಿತ್ರನಾದನು. ಸುವ್ರತಿಯಾದ ಓ ಬ್ರಾಹ್ಮಣನೆ! ಈ ವಿಷಯದಲ್ಲಿ ನೀನು ಸಂಶಯವನ್ನಿಟ್ಟುಕೊಳ್ಳಬೇಡ. ಈ ತೀರ್ಥವು ಇಂತಹ ಪ್ರಭಾವವುಳ್ಳದ್ದಾಗಿರುವುದು. ಇದು ಪಾಪಗಳೆಂಬ ವೃಕ್ಷಗಳನ್ನು ನಿರ್ಮೂಲಗೊಳಿಸಲು ತಕ್ಕುದಾದ ಕೊಡಲಿಯಂತಿರುವುದು."

೪೬. ಎಲೈ ಬ್ರಾಹ್ಮಣೋತ್ತಮರಿರಾ! ಇಂತು ನಿಮಗೆ ಪುರಾತನವಾದ ಇತಿಹಾಸವನ್ನು ನಿರೂಪಿಸಿರುವೆನು. ಇದನ್ನು ಕೇಳುವವರಿಗೂ, ಓದುವವರಿಗೂ ವಾಜಪೇಯ ಯಾಗವನ್ನು ಮಾಡಿದ ಪುಣ್ಯವು ಲಭಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ವೈಷ್ಣವಖಂಡದ ಎರಡನೆಯ ಶ್ರೀ ವೆಂಕಟಾಚಲ ಮಹಾತ್ಮ್ಯೆಯ ಧರಣೀವರಾಹ ಸಂವಾದದಲ್ಲಿ "ಸ್ವಾಮಿಪುಷ್ಕರಿಣೀತೀರ್ಥಮಹಿಮಾನುವರ್ಣನ"ವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚದಶೋಽಧ್ಯಾಯಃ

### ರಾಮಕೃಷ್ಣತೀರ್ಥಮಹಿಮಾನುವರ್ಣನಂ

ಶ್ರೀ ಸೂತ ಉವಾಚ :—

ವೇಂಕಟಾಖ್ಯೇ ಮಹಾಪುಣ್ಯೇ ಸರ್ವಪಾತಕನಾಶನೇ ।
ಕೃಷ್ಣತೀರ್ಥಸ್ಯ ಮಾಹಾತ್ಮ್ಯಂ ಶೃಣುಧ್ವಂ ಸುಸಮಾಹಿತಾಃ ॥ ೧ ॥
ಯತ್ರ ಮಜ್ಜನಮಾತ್ರೇಣ ಕೃತಘ್ನೋಽಪಿ ವಿಮುಚ್ಯತೇ ।
ಪಿತೄನ್ಮಾತೄನ್‌ಗುರೂಂಶ್ಚಾವಮನ್ಯಂತೇ ಮೋಹವೇಷ್ಟಿತಾಃ ॥ ೨ ॥
ಯೇ ಚಾಪ್ಯನ್ಯೇ ದುರಾತ್ಮಾನಃ ಕೃತಘ್ನಾ ನಿರಪತ್ರಪಾಃ ।
ತೇ ಸರ್ವೇ ಕೃಷ್ಣತೀರ್ಥೇಽಸ್ಮಿನ್ಶುದ್ಧ್ಯಂತಿ ಸ್ನಾನಮಾತ್ರತಃ ॥ ೩ ॥
ಕೃಷ್ಣನಾಮಾ ಮುನಿಃ ಪೂರ್ವಂ ವೇಂಕಟಾಹ್ವಯಭೂಧರೇ ।
ಅವರ್ತತ ತಪಃ ಕುರ್ವನ್ವಿಷ್ಣುಂ ಧ್ಯಾಯನ್ಸಮಾಹಿತಃ ॥ ೪ ॥
ಸ ತತ್ರ ಕಲ್ಪಯಾಮಾಸ ಸ್ನಾನಾರ್ಥಂ ತೀರ್ಥಮುತ್ತಮಂ ।
ತತ್ರ ಸ್ನಾತ್ವಾ ಸಕೃನ್ಮರ್ತ್ಯಃ ಕೃತಘ್ನೋಽಪಿ ವಿಮುಚ್ಯತೇ ॥ ೫ ॥

---

## ಕನ್ನಡದ ಅನುವಾದ

### ರಾಮಕೃಷ್ಣತೀರ್ಥಮಹಿಮಾನುವರ್ಣನ

೧. ಸೂತನು ಹೇಳುತ್ತಾನೆ :—ಪರಮ ಪುಣ್ಯದಾಯಕವಾದುದೂ, ಸಕಲ ಪಾತಕಗಳನ್ನು ನಾಶಗೊಳಿಸುವುದೂ ಆಗಿ ವೇಂಕಟಾಚಲದಲ್ಲಿರುವ ಕೃಷ್ಣ ತೀರ್ಥದ ಮಾಹಾತ್ಮ್ಯೆಯನ್ನು ತಿಳಿಸುವೆನು, ಏಕಾಗ್ರಚಿತ್ತದಿಂದ ಕೇಳಿರಿ.

೨-೩. ಆ ತೀರ್ಥದಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಕೃತಘ್ನನೂ ತನ್ನ ಪಾಪವನ್ನು ಕಳೆದುಕೊಳ್ಳುವನು. ಯಾರು ಮೋಹಾವಿಷ್ಟಚೇತನರಾಗಿ ತಂದೆಯರನ್ನೂ, ತಾಯಿಯರನ್ನೂ, ಗುರುಗಳನ್ನೂ ನಿಂದಿಸುವರೋ, ಯಾರು ದುರಾತ್ಮರಾಗಿ ಉಪಕಾರಗಳನ್ನು ಸ್ಮರಿಸದೆ ಲಜ್ಜಾಹೀನರಾಗಿರುವರೊ, ಅವರೆಲ್ಲರೂ ಕೃಷ್ಣ ತೀರ್ಥದಲ್ಲಿ ಸ್ನಾನವನ್ನು ಮಾಡುವುದರಿಂದಲೇ ಶುದ್ಧಿಯನ್ನು ಹೊಂದುವರು.

೪. ಪೂರ್ವದಲ್ಲಿ ವೇಂಕಟಾಚಲವೆಂಬ ಪರ್ವತದಲ್ಲಿ ಕೃಷ್ಣನೆಂಬ ಹೆಸರಿನ ಮಹಾಮುನಿಯೊಬ್ಬನಿದ್ದನು. ಆತನು ಮಹಾವಿಷ್ಣುವನ್ನೇ ಧ್ಯಾನಿಸುತ್ತ ಸಮಾಹಿತಮನಸ್ಕನಾಗಿ ತಪಸ್ಸನ್ನು ಮಾಡಿಕೊಂಡಿದ್ದನು.

೫. ಆತನು ಸ್ನಾನಕ್ಕೋಸ್ಕರವಾಗಿ ಉತ್ತಮವಾದ ತೀರ್ಥವೊಂದನ್ನು ನಿರ್ಮಿಸಿಕೊಂಡನು. ಅದರಲ್ಲಿ ಒಮ್ಮೆ ಸ್ನಾನವನ್ನು ಮಾಡುವುದರಿಂದಲೇ ಎಂತಹ ಕೃತಘ್ನನಾದ ಮನುಷ್ಯನಾದರೂ ಪುನೀತನಾಗುವನು.

ಅತ್ರೇತಿಹಾಸಂ ವಕ್ಷ್ಯಾಮಿ ಪುರಾಣಂ ಪಾಪನಾಶನಂ ।
ಯಸ್ಯ ಶ್ರವಣಮಾತ್ರೇಣ ನರೋ ಮುಕ್ತಿಮವಾಪ್ನುಯಾತ್ ॥ ೬ ॥
ಪುರಾ ಬಭೂವ ವಿಪ್ರೇಂದ್ರೋ ರಾಮಕೃಷ್ಣೋ ಮಹಾಮುನಿಃ ।
ಸತ್ಯವಾನ್ಶೀಲವಾನ್ವಾಗ್ಮೀ ಸರ್ವಭೂತದಯಾನ್ವಿತಃ ॥ ೭ ॥
ಶತ್ರುಮಿತ್ರಸಮೋ ದಾಂತಸ್ತಪಸ್ವೀ ವಿಜಿತೇಂದ್ರಿಯಃ ।
ಪರೇ ಬ್ರಹ್ಮಣಿ ನಿಷ್ಣಾತೋ ಬ್ರಹ್ಮತತ್ತ್ವೈಕಸಂಶ್ರಯಃ ॥ ೮ ॥
ಏವಂಪ್ರಭಾವಃ ಸ ಮುನಿಃ ತಪಸ್ತೇಪೇ ಸುದಾರುಣಂ ।
ಸ ವೈ ನಿಶ್ಚಲಸರ್ವಾಂಗಸ್ತಿಷ್ಠನ್ಸರ್ವತ್ರ ಭೂತಲೇ ॥ ೯ ॥
ಪರಮಾಣ್ವಂತರಂ ವಾಪಿ ನ ಸ್ವಸ್ಥಾನಾಚ್ಚಚಾಲ ಸಃ ।
ಸ್ಥಿತ್ವಾ ತತ್ರ ತಪಸ್ಯಂತಮನೇಕಶತವತ್ಸರಾನ್ ॥ ೧೦ ॥
ತಂ ಚಾಕ್ರಮತ ವಲ್ಮೀಕಂ ಛಾದಿತಾಂಗಂ ಚಕಾರ ವೈ ।
ವಲ್ಮೀಕಾಕ್ರಾಂತದೇಹೋಽಪಿ ರಾಮಕೃಷ್ಣೋ ಮಹಾಮುನಿಃ ॥ ೧೧ ॥
ಅಕರೋತ್ತಪ ಏವಾಸೌ ವಲ್ಮೀಕಂ ನ ತ್ವಬುಧ್ಯತ ।
ತಸ್ಮಿಂಶ್ಚ ತಪ್ಯತಿ ತಪೋ ವಾಸವೋ ಮುನಿಪುಂಗವೇ ॥ ೧೨ ॥

---

೬. ಈ ವಿಷಯದಲ್ಲಿ ಪುರಾತನವೂ, ಪಾಪನಾಶಕವೂ ಆದ ಇತಿಹಾಸವೊಂದನ್ನು ಹೇಳುವೆನು. ಅದನ್ನು ಕೇಳುವುದರಿಂದಲೇ ಮಾನವನು ಮೋಕ್ಷವನ್ನು ಪಡೆಯುತ್ತಾನೆ.

೭. ಮುನ್ನು ಬ್ರಾಹ್ಮಣಕುಲಪ್ರಸೂತನೂ, ಮಹಾಮುನಿಯೂ ಆದ ರಾಮಕೃಷ್ಣನೆಂಬವನೊಬ್ಬನಿದ್ದನು. ಆತನು ಸತ್ಯವಾದಿಯೂ, ಸೌಶೀಲ್ಯವಂತನೂ, ಮಾತುಬಲ್ಲವನೂ, ಸಕಲ ಭೂತಗಳಲ್ಲಿಯೂ ದಯೆಯುಳ್ಳವನೂ ಆಗಿದ್ದನು.

೮. ಶತ್ರು ಮಿತ್ರರನ್ನು ಸಮದೃಷ್ಟಿಯಿಂದ ಕಾಣುತ್ತ ತಪಸ್ಸಂಪನ್ನನಾಗಿ ಜ್ಞಾನೇಂದ್ರಿಯಗಳನ್ನೂ, ಕರ್ಮೇಂದ್ರಿಯಗಳನ್ನೂ ಸ್ವಾಧೀನದಲ್ಲಿರಿಸಿಕೊಂಡು ವೇದಗಳಲ್ಲಿ ಪಾರಂಗತನೂ, ಬ್ರಹ್ಮತತ್ತ್ವದಲ್ಲಿಯೇ ಆದರವುಳ್ಳವನೂ ಆಗಿದ್ದನು.

೯–೧೩. ಇಂತಹ ಪ್ರಭಾವಶಾಲಿಯಾದ ಮುನಿಯು ಅತ್ಯಂತ ಕಠಿನವಾದ ತಪಸ್ಸನ್ನು ಮಾಡಲುಪಕ್ರಮಿಸಿದನು. ಆತನು ಭೂಮಿಯಮೇಲೆ ಸ್ಥಿರವಾದ ಆಸನವನ್ನು ಹಾಕಿಕೊಂಡು ಶರೀರದ ಸರ್ವಾಂಗಗಳನ್ನೂ ನಿಶ್ಚಲಗಳನ್ನಾಗಿ ಮಾಡಿ ತನ್ನ ಆಸನದಿಂದ ಪರಮಾಣುಮಾತ್ರವಾದರೂ ಚಲಿಸದಿದ್ದನು. ಇಂತು ಅನೇಕ ನೂರು ವರ್ಷಗಳವರೆಗೂ ಅಲುಗದೆ ಕುಳಿತು ತಪಸ್ಸನ್ನು ಮಾಡುತ್ತಿರುವ ಆತನ ಸುತ್ತಲೂ ಒಂದು ಹುತ್ತವು ಬೆಳೆಯತೊಡಗಿತು. ಕಾಲಕ್ರಮದಲ್ಲಿ ಆ ಹುತ್ತವು ಆತನ ದೇಹವನ್ನೆಲ್ಲ ಆಚ್ಛಾದಿಸಿತು. ಹುತ್ತದಿಂದ ಮುಚ್ಚಿದ ದೇಹ

ವಿಸೃಜ್ಯ ಮೇಘಜಾಲಾನಿ ವರ್ಷಯಾಮಾಸ ವೇಗವಾನ್ ।
ಏವಂ ದಿವಾನಿ ಸಪ್ತಾಯಂ ವವರ್ಷ ಚ ನಿರಂತರಂ ॥ ೧೩ ॥
ಧಾರಾವರ್ಷೇಣ ಮಹತಾ ವೃಷ್ಯಮಾಣೋಽಪಿ ವೈ ಮುನಿಃ ।
ತದ್ವರ್ಷಂ ಪ್ರತಿಜಗ್ರಾಹ ನಿಮೀಲಿತವಿಲೋಚನಃ ॥ ೧೪ ॥
ಮಹತಾ ಸ್ತನಿತೇನಾಶುತದಾ ಬಧಿರಯನ್ನೃತೀಃ ।
ವಲ್ಮೀಕಸ್ಯೋಪರಿಷ್ಟಾದ್ವೈ ನಿಪಪಾತ ಮಹಾಶನಿಃ ॥ ೧೫ ॥
ತಸ್ಮಿನ್ವರ್ಷತಿ ಪರ್ಜನ್ಯೇ ಶೀತವಾತಾದಿದುಃಸಹೇ ।
ವಲ್ಮೀಕಶಿಖರಂ ಧ್ವಸ್ತಂ ಬಭೂವಾಶನಿತಾಡಿತಂ ॥ ೧೬ ॥
ತದಾ ಪ್ರಾದುರಭೂದ್ದೇವಃ ಶಂಖಚಕ್ರಗದಾಧರಃ ।
ವಿನತಾನಂದನಾರೂಢೋ ವನಮಾಲಾವಿಭೂಷಿತಃ ॥ ೧೭ ॥
ರಾಮಕೃಷ್ಣಸ್ಯ ತಪಸಾ ತೋಷಿತೋ ವಾಕ್ಯಮಬ್ರವೀತ್ ॥ ೧೮ ॥

---

ವುಳ್ಳವನಾದರೂ ಮಹಾಮುನಿಯಾದ ಆ ರಾಮಕೃಷ್ಣನು ತಪಸ್ಸನ್ನೇ ಮಾಡುತ್ತಿದ್ದನು. ತನ್ನನ್ನಾವರಿಸಿದ ಹುತ್ತದ ಜ್ಞಾನವೂ ಆತನಿಗುಂಟಾಗಲಿಲ್ಲ. ಇಂತು ಮುನಿಶ್ರೇಷ್ಠನಾದ ಆತನು ತಪಸ್ಸನ್ನು ಮಾಡುತ್ತಿರಲು ಮಹೇಂದ್ರನು ಸಂರಂಭಸಹಿತನಾಗಿ ತನ್ನ ಮೇಘಸಮೂಹಗಳನ್ನು ಬಿಟ್ಟು ಮಳೆಯನ್ನು ಕರೆಯತೊಡಗಿದನು. ಇಂತು ಎಡಬಿಡದೆ ಏಳು ದಿವಸಗಳವರೆಗೂ ಮಳೆಯು ಭೋರ್ಗರೆಯಿತು.

೧೪. ಆ ಮಹಾಮುನಿಯಾದರೊ, ಮಹತ್ತರವಾದ ವೃಷ್ಟಿಯ ಸಂಪಾತಕ್ಕೆ ಸಿಲುಕಿದವನಾದರೂ ಧ್ಯಾನನಿಮೀಲಿತ ನೇತ್ರಗಳುಳ್ಳವನಾಗಿ ಮಳೆಯನ್ನೆಲ್ಲ ಶಾಂತರೀತಿಯಿಂದ ಪರಿಗ್ರಹಿಸಿದನು.

೧೫. ಆಗ ಭಯಂಕರವಾದ ಶಬ್ದದಿಂದ ಕಿವಿಗಳನ್ನೇ ಕಿವುಡುಮಾಡುವಂತಹ ಸಿಡಿಲು ಆ ಹುತ್ತದ ತಲೆಯಮೇಲೆರಗಿತು.

೧೬. ಇಂತು ಶೀತದಿಂದಲೂ ಗಾಳಿಯಿಂದಲೂ ಸಹಿಸಲಸಾಧ್ಯವಾದ ಮಳೆಯು ಸುರಿಯುತ್ತಿರಲು ಸಿಡಿಲಿನ ಹೊಡೆತಕ್ಕೆ ಸಿಕ್ಕಿದ ಹುತ್ತವೂ ಧ್ವಂಸವಾಯಿತು.

೧೭. ಆಗ ದೇವದೇವನಾದ ನಾರಾಯಣನು ಶಂಖಚಕ್ರಗದಾದಿ ಆಯುಧಗಳಿಂದ ಕೂಡಿದವನಾಗಿ, ಗರುಡನನ್ನೇರಿ ವನಮಾಲೆಯನ್ನು ಕೊರಳಿನಲ್ಲಿ ಧರಿಸಿ ಪ್ರತ್ಯಕ್ಷನಾದನು.

೧೮. ಪರಮಾತ್ಮನು ರಾಮಕೃಷ್ಣನ ಉಗ್ರವಾದ ತಪಸ್ಸಿನಿಂದ ಸಂತೋಷಗೊಂಡು ಹೇಳತೊಡಗಿದನು.

ತಪೋನಿಧೇ ರಾಮಕೃಷ್ಣ ವೇದಶಾಸ್ತ್ರಾರ್ಥಪಾರಗ ।
ಮದಾವಿರ್ಭಾವದಿವಸೇ ಯಃ ಸ್ನಾತಿ ಮನುಜೋತ್ತಮಃ ॥ ೧೯ ॥
ತಸ್ಯ ಪುಣ್ಯಫಲಂ ವಕ್ತುಂ ಶೇಷೇಣಾಪಿ ನ ಶಕ್ಯತೇ ।
ಮಕರಸ್ಥೇ ರವೌ ವಿಪ್ರ ಪೌರ್ಣಮಾಸ್ಯಾಂ ಮಹಾತಿಥೌ ।
ಪುಷ್ಯನಕ್ಷತ್ರಯುಕ್ತಾಯಾಂ ಸ್ನಾನಕಾಲೋ ವಿಧೀಯತೇ ॥ ೨೦ ॥
ತದ್ದಿನೇ ಸ್ನಾತಿ ಯೋ ಮರ್ತ್ಯಃ ಕೃಷ್ಣತೀರ್ಥೇ ಮಹಾಮತಿಃ ।
ಸರ್ವಪಾಪವಿನಿರ್ಮುಕ್ತಃ ಸರ್ವಾನ್ ಕಾಮಾಂಲ್ಲಭೇತ ಸಃ ॥ ೨೧ ॥
ಮದಾವಿರ್ಭಾವದಿವಸೇ ಕೃಷ್ಣತೀರ್ಥಜಲೇ ಶುಭೇ ।
ಸ್ನಾತುಂ ತತ್ರ ಸಮಾಯಾಂತಿ ಸ್ವಪಾಪಪರಿಶುದ್ಧಯೇ ॥ ೨೨ ॥
ದೇವಾ ಮನುಷ್ಯಾಃ ಸರ್ವೇ ಚ ದಿಕ್ಪಾಲಾಶ್ಚ ಮಹೌಜಸಃ ।
ಏತೇ ಸರ್ವೇ ಮಹಾತ್ಮಾನಃ ಕೋಟಿಸೂರ್ಯಸಮಪ್ರಭಾಃ ॥ ೨೩ ॥
ತೇ ಸರ್ವೇ ಕೃಷ್ಣತೀರ್ಥೇಽಸ್ಮಿನ್ಸ್ನಾನಾತ್ಪೂತಾ ಭವಂತಿ ಹಿ ॥ ೨೪ ॥
ತ್ವನ್ನಾಮ್ನೇದಂ ಮಹಾತೀರ್ಥಂ ಲೋಕೇ ಪ್ರಖ್ಯಾತಿಮೇಷ್ಯತಿ ।
ಇತ್ಯುಕ್ತ್ವಾ ಶ್ರೀನಿವಾಸಶ್ಚ ತತ್ರೈವಾಂತರಧೀಯತ ॥ ೨೫ ॥

---

೧೯–೨೦. "ತಪೋನಿಧಿಯೂ ವೇದಶಾಸ್ತ್ರಪಾರಂಗತನೂ ಆದ ಎಲೈ ರಾಮಕೃಷ್ಣನೆ! ಯಾವ ಮನುಷ್ಯೋತ್ತಮನು ಈ ಕೃಷ್ಣತೀರ್ಥದಲ್ಲಿ ನಾನು ಪ್ರತ್ಯಕ್ಷನಾದ ದಿವಸ ಈ ಸ್ನಾನವನ್ನು ಮಾಡುವನೊ, ಅವನ ಪುಣ್ಯದ ಫಲವನ್ನು ಸಾಂಗವಾಗಿ ಹೇಳಲು ಆದಿಶೇಷನಿಗೂ ಅಳವಲ್ಲವು. ಅಯ್ಯಾ ಬ್ರಾಹ್ಮಣನೆ! ಸೂರ್ಯನು ಮಕರರಾಶಿಸ್ಥನಾಗಿರಲು ಪುಷ್ಯನಕ್ಷತ್ರದಿಂದೊಡಗೂಡಿದ ಪೌರ್ಣಿಮೆಯ ಮಹಾತಿಥಿಯು ಈ ತೀರ್ಥದ ಸ್ನಾನಕಾಲವಾಗಿ ವಿಧಿಸಲ್ಪಟ್ಟಿರುವುದು.

೨೧–೨೪. ಮಹಾಬುದ್ಧಿಶಾಲಿಯಾದ ಯಾವ ಮಾನವನು ಆ ದಿವಸದಲ್ಲಿ ಇಲ್ಲಿ ಸ್ನಾನವನ್ನು ಮಾಡುವನೊ, ಅವನು ಸಕಲ ಪಾಪಗಳಿಂದಲೂ ಮುಕ್ತನಾಗಿ ಸಮಸ್ತ ಇಷ್ಟಾರ್ಥಗಳನ್ನೂ ಪಡೆಯುವನು. ನಾನು ಪ್ರತ್ಯಕ್ಷವಾದ ಈ ದಿವಸದಲ್ಲಿ ತಮ್ಮ ಪಾಪಗಳನ್ನು ಕಳೆದುಕೊಳ್ಳಲು ಪರಿಶುದ್ಧವಾದ ಈ ಕೃಷ್ಣತೀರ್ಥಕ್ಕೆ ಯಾರು ಬರುವರೊ, ಅವರು ದೇವತೆಗಳಾಗಲಿ, ಮನುಷ್ಯರಾಗಲಿ, ಇತರ ಪ್ರಾಣಿಗಳಾಗಲಿ, ಮಹಾ ತೇಜೋವಂತರಾದ ಅಷ್ಟದಿಕ್ಪಾಲಕರಾಗಲಿ, ಎಲ್ಲರೂ ಕೃಷ್ಣತೀರ್ಥದ ಸ್ನಾನದಿಂದ ಕೋಟಿಸೂರ್ಯರ ತೇಜಸ್ಸನ್ನು ಹೊಂದಿದ ಮಹಾತ್ಮರಾಗಿ ಪರಮಪವಿತ್ರರಾಗುವುದರಲ್ಲಿ ಸಂಶಯವಿಲ್ಲವು.

೨೫. ಈ ಮಹಾತೀರ್ಥವು ಇನ್ನುಮೇಲೆ ನಿನ್ನ ಹೆಸರಿಂದಲೇ ಲೋಕದಲ್ಲಿ ರಾಮಕೃಷ್ಣತೀರ್ಥವೆಂದು ಪ್ರಖ್ಯಾತಿಯನ್ನು ಹೊಂದುವುದು." ಇಂತೆಂದು ವರವನ್ನು ಕೊಟ್ಟು ಶ್ರೀನಿವಾಸನು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.

ಏವಂಪ್ರಭಾವಂ ತತ್ತೀರ್ಥಂ ಮಹಾಪಾಪವಿಶೋಧನಂ ।
ಬುದ್ಧಿಶುದ್ಧಿಪ್ರದಂ ಪುಂಸಾಂ ಸರ್ವೈಶ್ವರ್ಯಪ್ರದಾಯಕಂ ॥ ೨೬ ॥
ಏವಂ ವಃ ಕಥಿತಂ ವಿಪ್ರಾಃ ಕೃಷ್ಣತೀರ್ಥಸ್ಯ ವೈಭವಂ ।
ಶೃಣ್ವತಾಂ ಪಠತಾಂ ಚೈವ ವಿಷ್ಣುಲೋಕಪ್ರದಾಯಕಂ ॥ ೨೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ "ರಾಮಕೃಷ್ಣತೀರ್ಥಮಹಿಮಾನುವರ್ಣನಂ"ನಾಮ ಪಂಚದಶೋಽಧ್ಯಾಯಃ

---

೨೬. ಆ ತೀರ್ಥವು ಇಂತಹ ಪ್ರಭಾವವುಳ್ಳದ್ದಾಗಿರುವುದು. ಸಕಲ ಪಾಪಗಳನ್ನೂ ನಾಶಗೊಳಿಸುವುದು. ಜನರಿಗೆ ಶುದ್ಧಿ ಬುದ್ಧಿಗಳನ್ನೂ ಸಕಲೈಶ್ವರ್ಯಗಳನ್ನೂ ಕೊಡುವುದು.

೨೭. ಎಲೈ ಬ್ರಾಹ್ಮಣರಿರಾ! ಇಂತು ಕೃಷ್ಣತೀರ್ಥದ ವೈಭವವನ್ನು ನಿಮಗೆ ಹೇಳಿರುವೆನು. ಈ ಚರಿತ್ರೆಯು ಕೇಳುವವರಿಗೂ ಪಠಿಸುವವರಿಗೂ ವಿಷ್ಣುಲೋಕವನ್ನು ಸಂಪಾದಿಸಿಕೊಡುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ವೈಷ್ಣವಖಂಡದ ಎರಡನೆಯ ಶ್ರೀ ವೆಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹ ಸಂವಾದದಲ್ಲಿ "ರಾಮಕೃಷ್ಣತೀರ್ಥಮಹಿಮಾನುವರ್ಣನ"ವೆಂಬ ಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷೋಡಶೋಽಧ್ಯಾಯಃ

### ಜಲದಾನವೈಭವವರ್ಣನಂ

ಶ್ರೀ ಸೂತ ಉವಾಚ :—

ವೇಂಕಟಾಖ್ಯೇ ಮಹಾಪುಣ್ಯೇ ತೃಷಾರ್ತಾನಾಂ ವಿಶೇಷತಃ ।
ಜಲದಾನಮಕುರ್ವಾಣಸ್ತಿರ್ಯಗ್ಯೋನಿಮವಾಪ್ನುಯಾತ್ ॥ ೧ ॥
ತಸ್ಮಾದ್ವೇಂಕಟಶೈಲೇಂದ್ರೇ ಯಥಾಶಕ್ತ್ಯನುಸಾರತಃ ।
ಜಲದಾನಂ ಹಿ ಕರ್ತವ್ಯಂ ಸರ್ವೇಷಾಂ ಜೀವನಂ ಮಹತ್ ॥ ೨ ॥
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ವಿಪ್ರಸ್ಯ ಗೃಹಗೋಧಾಯಾಃ ಸಂವಾದಂ ಪರಮಾದ್ಭುತಂ ॥ ೩ ॥
ಪುರಾ ಚೇಕ್ಷ್ವಾಕುವಂಶೇಽಭೂದ್ಧೇಮಾಂಗ ಇತಿ ಭೂಮಿಪಃ ।
ಬ್ರಹ್ಮಣ್ಯೋ ಬ್ರಹ್ಮಭೂಯಿಷ್ಠೋ ಜಿತಾಮಿತ್ರೋ ಜಿತೇಂದ್ರಿಯಃ ॥ ೪ ॥
ಯಾವಂತೋ ಭೂಮಿಕಣಿಕಾ ಯಾವಂತಸ್ತೋಯಬಿಂದವಃ ।
ಯಾವಂತ್ಯುಡೂನಿ ಗಗನೇ ತಾವತೀರ್ಗಾ ದದತ್ಯಸೌ ॥ ೫ ॥

---

### ಕನ್ನಡದ ಅನುವಾದ

#### ಜಲದಾನವೈಭವವರ್ಣನ

೧. ಸೂತನು ಹೇಳುತ್ತಾನೆ:—ಪರಮಪಾವನವಾದ ವೇಂಕಟಾಚಲದಲ್ಲಿ ನೀರಡಿಕೆಯಿಂದ ಬಳಲಿದವರಿಗೆ ಯಾವನು ಜಲವನ್ನು ದಾನಮಾಡುವುದಿಲ್ಲವೊ ಅವನು ತಿರ್ಯಗ್ಜಂತುಗಳಲ್ಲಿ ಜನ್ಮವನ್ನೈತ್ತುವನು.

೨. ಆದುದರಿಂದ ಉತ್ತಮವಾದ ವೇಂಕಟಾಚಲದಲ್ಲಿ ಪ್ರತಿಯೊಬ್ಬನೂ ಶಕ್ತ್ಯನುಸಾರವಾಗಿ ಜಲದಾನವನ್ನು ಮಾಡಬೇಕು. ಜಲವೇ ಸಕಲರಿಗೂ ಮುಖ್ಯವಾದ ಜೀವನಾಧಾರವಾಗಿರುವುದಲ್ಲವೆ!

೩. ಈ ವಿಷಯದಲ್ಲಿ ಪುರಾತನವೂ ಮಹಾದ್ಭುತವೂ ಆಗಿ, ಬ್ರಾಹ್ಮಣನಿಗೂ ಮನೆಯೊಳಗಿನ ಹಲ್ಲಿಗೂ ನಡೆದ ಸಂವಾದರೂಪವೂ ಆದ ಈ ಇತಿಹಾಸವನ್ನು ಬಲ್ಲವರು ಉದಾಹರಿಸುವರು.

೪. ಪೂರ್ವದಲ್ಲಿ ಇಕ್ಷ್ವಾಕುವಂಶಸಂಭವನಾದ ಹೇಮಾಂಗನೆಂಬ ಚಕ್ರವರ್ತಿಯೊಬ್ಬನು ರಾಜ್ಯವಾಳುತ್ತಿದ್ದನು. ಆತನು ಬ್ರಾಹ್ಮಣಪ್ರಿಯನೂ, ವೇದಶಾಸ್ತ್ರಸಂಪನ್ನನೂ, ಶತ್ರುಗಳನ್ನು ಜಯಿಸಿದವನೂ, ಜಿತೇಂದ್ರಿಯನೂ ಆಗಿದ್ದನು.

೫. ಭೂಮಿಯಲ್ಲಿ ಎಷ್ಟು ಪರಮಾಣುಗಳಿರುವುವೊ, ಮಳೆಯಲ್ಲಿ ಎಷ್ಟು

ಯೇನೇಷ್ಟಯಜ್ಞದರ್ಭೈಶ್ಚ ಭೂಮಿರ್ಬರ್ಹಿಷ್ಮತೀ ಸ್ಮೃತಾ ।
ಗೋಭೂತಿಲಹಿರಣ್ಯಾದ್ಯೈಸ್ತೋಷಿತಾ ಬಹವೋ ದ್ವಿಜಾಃ ॥ ೬ ॥
ತೇನಾದತ್ತಾನಿ ದಾನಾನಿ ನ ವಿದ್ಯಂತ ಇತಿ ಶ್ರುತಂ ।
ತೇನಾದತ್ತಂ ಜಲಂ ಚೈಕಂ ಸುಖಲಭ್ಯಧಿಯಾ ದ್ವಿಜಾಃ ॥ ೭ ॥
ಬೋಧಿತೋ ಬ್ರಹ್ಮಪುತ್ರೇಣ ವಸಿಷ್ಠೇನ ಮಹಾತ್ಮನಾ ।
ಅಮೂಲ್ಯಂ ಸರ್ವತೋಲಭ್ಯಂ ತದ್ದಾತುಃ ಕಿಂ ಫಲಂ ಲಭೇತ್ ॥ ೮ ॥
ಇತಿ ದುರ್ಧೀರ್ಹೇತುವಾದೈರ್ನ ಜಲಂ ದತ್ತವಾನ್ವಿಭುಃ ।
ಅಲಭ್ಯದಾನೇ ಪುಣ್ಯಂ ಸ್ಯಾದಿತ್ಯವಾದೀತ್ಸಯುಕ್ತಿಕಂ ॥ ೯ ॥
ಸ ಆನರ್ಚ ದ್ವಿಜಾನ್ವ್ಯಂಗಾನ್ದರಿದ್ರಾನ್ವೃತ್ತಿಕರ್ಶಿತಾನ್ ।
ನಾನರ್ಚ ಶ್ರೋತ್ರಿಯಾನ್ವಿಪ್ರಾನ್ಬ್ರಹ್ಮಜ್ಞಾನ್ಬ್ರಹ್ಮವಾದಿನಃ ॥ ೧೦ ॥

---

ನೀರಿನ ಹನಿಗಳಿರುವುವೋ, ಆಕಾಶದಲ್ಲಿ ಎಷ್ಟು ನಕ್ಷತ್ರಗಳಿರುವುವೋ, ಅಷ್ಟು ಗೋವುಗಳನ್ನು ಆತನು ಬ್ರಾಹ್ಮಣರಿಗೆ ದಾನಮಾಡಿದ್ದನು.

೬. ಆತನು ಮಾಡಿದ ಯಜ್ಞಶಾಲೆಗಳಲ್ಲಿ ಚೆಲ್ಲಿದ ದರ್ಭೆಗಳಿಂದ ಭೂಮಿಯು ಬರ್ಹಿಷ್ಮತಿಯೆಂದು ವಿಖ್ಯಾತಳಾದಳು. ಅನೇಕ ಬ್ರಾಹ್ಮಣರು ಆತನಿಂದ ಗೋವುಗಳು, ಭೂಮಿ, ತಿಲಪ್ರಸ್ಥಗಳು, ಹಿರಣ್ಯ ಮುಂತಾದ ದಾನಗಳನ್ನು ಪಡೆದು ಸಂತೋಷಗೊಂಡರು.

೭. ಆತನಿಂದ ಆಚರಿಸಲ್ಪಡದ ದಾನಕ್ರಿಯೆಗಳೇ ಶಾಸ್ತ್ರಗಳಲ್ಲಿಲ್ಲವೆಂದು ನಾವು ಕೇಳಿರುವೆವು. ಎಲೈ ಬ್ರಾಹ್ಮಣರೆ! ಆದರೆ ಸುಲಭವಾಗಿ ಎಲ್ಲೆಲ್ಲಿಯೂ ಸಿಕ್ಕುವುದೆಂಬ ಉದಾಸೀನತೆಯಿಂದ ಆತನು ಜಲವನ್ನು ಮಾತ್ರ ಎಂದೂ ದಾನ ಮಾಡಲಿಲ್ಲ.

೮–೯. ಬ್ರಹ್ಮಪುತ್ರನೂ ಮಹಾತ್ಮನೂ ಆದ ವಸಿಷ್ಠಮಹರ್ಷಿಯು ಅನೇಕವೇಳೆ ಎಚ್ಚರಿಸಿದರೂ ಕೂಡ ಆ ದುರ್ಬುದ್ಧಿಯು "ಜಲವು ಸಾಧಾರಣವಾದುದು; ಎಲ್ಲೆಲ್ಲಿಯೂ ಸಿಕ್ಕುವುದು; ಅದನ್ನು ದಾನಮಾಡುವವನಿಗೆ ಯಾವ ಸತ್ಫಲವುಂಟಾದೀತು?" ಎಂದು ಮೊದಲಾದ ಹೇತುವಾದಗಳಿಂದ ಸ್ವಾಮಿತ್ವದ ಹೆಮ್ಮೆಯಿಂದ ಜಲವನ್ನು ಮಾತ್ರ ದಾನಮಾಡುತ್ತಿರಲಿಲ್ಲ. ಅಲ್ಲದೆ "ಅಲಭ್ಯವೂ ಅಪೂರ್ವವೂ ಆದ ವಸ್ತುವನ್ನು ದಾನಮಾಡುವುದರಿಂದಲ್ಲವೆ ಪುಣ್ಯವು ಲಭಿಸುವುದು" ಎಂಬುದಾಗಿ ಯುಕ್ತಿಯಿಂದ ಉತ್ತರವನ್ನು ಹೇಳುತ್ತಿದ್ದನು.

೧೦. ಅಲ್ಲದೆ ಅವನು ಅಂಗಹೀನರೂ, ದರಿದ್ರರೂ, ಜೀವನೋಪಾಯರಹಿತರೂ ಆದ ಬ್ರಾಹ್ಮಣರನ್ನು ಮಾತ್ರ ಸತ್ಕರಿಸುತ್ತಿದ್ದನು. ಶ್ರೋತ್ರಿಯರೂ, ಬ್ರಹ್ಮಜ್ಞಾನಿಗಳೂ, ವೇದವಾದಿಗಳೂ ಆದ ಬ್ರಾಹ್ಮಣರನ್ನೆಂದೂ ಪೂಜಿಸಲಿಲ್ಲ.

ಪ್ರಖ್ಯಾತಾನ್ಪೂಜಯಿಷ್ಯಂತಿ ಸರ್ವಲೋಕಾಃ ಸಹಾರ್ಹಣೈಃ ।
ಅನಾಥಾನಾಮವಿದ್ಯಾನಾಂ ವ್ಯಂಗಾನಾಂ ಚ ಕುಟುಂಬಿನಾಂ ॥ ೧೧ ॥
ದರಿದ್ರಾಣಾಂ ಗತಿಃ ಕಾವಾ ತಸ್ಮಾತ್ತೇ ಮದ್ದಯಾಸ್ಪದಾಃ ।
ಇತಿ ದುಷ್ಟೇಷು ಪಾತ್ರೇಷು ದತ್ತವಾನ್ನಿಕಮಪಿ ಸ್ವಕಂ ॥ ೧೨ ॥
ತೇನ ದೋಷೇಣ ಮಹತಾ ಚಾತಕತ್ವಂ ತ್ರಿಜನ್ಮಸು ।
ಏಕಜನ್ಮನಿ ಗೃಧ್ರತ್ವಂ ಶ್ವತ್ವಂ ವಾ ಸಪ್ತಜನ್ಮಸು ॥ ೧೩ ॥
ಪ್ರಾಪ್ಯ ಪಶ್ಚಾದ್ಗೃಹೇ ಜಾತೋ ಭೂಪೋಽಯಂ ಗೃಹಗೋಧಿಕಾ ।
ಶ್ರುತಕೀರ್ತೇಸ್ತು ಭೂಪಸ್ಯ ಮಿಥಿಲಾಧಿಪತೇರ್ದ್ವಿಜಾಃ ॥ ೧೪ ॥
ಗೃಹದ್ವಾರಪ್ರತೋಲ್ಯಾಂ ಸ್ಮ ವರ್ತತೇ ಕೀಟಕಾಶನಃ ।
ಅಷ್ಟಾಶೀತಿಷು ವರ್ಷೇಷು ಸ್ಥಿತಂ ತೇನ ದುರಾತ್ಮನಾ ॥ ೧೫ ॥
ವಿದೇಹಾಧಿಪತೇರ್ಗೇಹಂ ಕದಾಚಿದ್ಋಷಿಸತ್ತಮಃ ।
ಶ್ರುತದೇವ ಇತಿ ಖ್ಯಾತಃ ಶ್ರಾಂತೋ ಮಧ್ಯಾಹ್ನ ಆಗಮತ್ ॥ ೧೬ ॥
ತಂ ದೃಷ್ಟ್ವಾ ಸಹಸೋತ್ಥಾಯ ಜಾತಹರ್ಷೋ ನರಾಧಿಪಃ ।
ಮಧುಪರ್ಕೈಃ ಸುಸಂಪೂಜ್ಯ ತಸ್ಯ ಪಾದಾವನೇಜನೀಃ ॥ ೧೭ ॥

---

೧೧–೧೨. ಪ್ರಸಿದ್ಧ ಪುರುಷರನ್ನು ಸಕಲ ಲೋಕಗಳೂ ದಾನಾದಿಗಳಿಂದ ಪೂಜಿಸುವುವಲ್ಲವೆ! ಅನಾಥರೂ, ಅಜ್ಞಾನಿಗಳೂ, ಅಂಗವಿಕಲರೂ, ಬಹು ಕುಟುಂಬಿಗಳೂ, ದರಿದ್ರರೂ ಆದವರಿಗೆ ಗತಿಯಾವುದು? ಆದುದರಿಂದ ಅವರೇ ನನ್ನ ದಯೆಗೆ ಸತ್ಪಾತ್ರರಾದವರು. ಇಂತೆಂದು ಆ ಹೇಮಾಂಗನು ತನ್ನ ಸರ್ವಸ್ವವನ್ನೂ ದುಷ್ಟಪಾತ್ರಗಳಲ್ಲಿಯೇ ವಿನಿಯೋಗಿಸಿದನು.

೧೩–೧೪. ಎಲೈ ಬ್ರಾಹ್ಮಣರಿರಾ! ಮಹತ್ತರವಾದ ಈ ದೋಷದಿಂದ ಅವನು ಚಾತಕಪಕ್ಷಿಯಾಗಿ ಮೂರು ಜನ್ಮಗಳನ್ನೂ, ಗೃಧ್ರನಾಗಿ ಒಂದು ಜನ್ಮವನ್ನೂ, ನಾಯಿಯಾಗಿ ಏಳು ಜನ್ಮಗಳನ್ನೂ ಪಡೆದು ಬಾಳಿದ ಬಳಿಕ ಮಿಥಿಲಾನಗರದ ಶ್ರುತಕೀರ್ತಿಯೆಂಬ ಭೂಪಾಲಕನ ಮನೆಯಲ್ಲಿ ಒಂದು ಹಲ್ಲಿಯ ಜನ್ಮವನ್ನು ಪಡೆದನು.

೧೫. ಇಂತು ಆತನ ಗೃಹದ ಹೆಬ್ಬಾಗಿಲಿನಲ್ಲಿ ಕೀಟಗಳನ್ನು ಭಕ್ಷಿಸಿ ಜೀವಿಸುತ್ತ ಆ ದುರಾತ್ಮನು ಎಂಬತ್ತೆಂಟು ವರ್ಷಗಳನ್ನು ಅಲ್ಲಿಯೇ ಕಳೆದನು.

೧೬. ಒಂದಾನೊಂದು ದಿನ ಮಧ್ಯಾಹ್ನಸಮಯದಲ್ಲಿ ಶ್ರುತದೇವನೆಂಬ ಮಹರ್ಷಿಯು ಮಾರ್ಗಾಯಾಸಗೊಂಡವನಾಗಿ ಆ ವಿದೇಹರಾಜನ ಅರಮನೆಗೆ ಪ್ರಾಪ್ತನಾದನು.

೧೭–೧೮. ಆತನನ್ನು ಕಂಡು ಮಹಾರಾಜನು ಸಂಭ್ರಮದಿಂದ ಎದ್ದು ಸಂತುಷ್ಟಾಂತರಂಗನಾಗಿ ಮಧುಪರ್ಕಾದಿಗಳಿಂದ ಅತಿಥಿಪೂಜೆಯನ್ನು ಮಾಡಿ

ಆಪೋ ಮೂರ್ಧ್ನಾರ್ಣವಹಸ್ತಿಪ್ರಂ ತದೋತ್ಕ್ಷಿಪ್ತೈಶ್ಚ ಬಿಂದುಭಿಃ ।
ದೈವೋಪದಿಷ್ಟಕಾಲೇನ ಪ್ರೋಕ್ಷಿತಾ ಗೃಹಗೋಧಿಕಾ ॥ ೧೮ ॥
ಸದ್ಯೋ ಜಾತಿಸ್ಮೃತಿರಭೂತ್ಕೃತಕರ್ಮಾತಿದುಃಖಿತಾ ।
ತ್ರಾಹಿ ತ್ರಾಹೀತಿ ಚುಕ್ರೋಶ ಬ್ರಾಹ್ಮಣಂ ಗೃಹಮಾಗತಂ ॥ ೧೯ ॥
ತಿರ್ಯಗ್ಜಂತುರವಂ ಶ್ರುತ್ವಾ ಬ್ರಾಹ್ಮಣೋ ವಿಸ್ಮಿತೋಽಭವತ್ ।
ಕುತಃ ಕ್ರೋಶಸಿ ಗೋಧೇ ತ್ವಂ ದಶೇಯಂ ಕೇನ ಕರ್ಮಣಾ ॥ ೨೦ ॥
ಉಪದೇವೋಽಥ ದೇವೋ ವಾ ತ್ವಂ ನೃಪೋಽಥ ದ್ವಿಜೋತ್ತಮಃ ।
ಕಸ್ತ್ವಂ ಬ್ರೂಹಿ ಮಹಾಭಾಗ ತ್ವಾಮುದ್ಧ್ಯಾಹಂ ಸಮುದ್ಧರೇ ॥ ೨೧ ॥
ಇತ್ಯುಕ್ತಃ ಸ ನೃಪಃ ಪ್ರಾಹ ಶ್ರುತದೇವಂ ಮಹಾಪ್ರಭುಃ ।
ಅಹಮಿಕ್ಷ್ವಾಕುಕುಲಜಃ ಶಾಸ್ತ್ರವಿದ್ಯಾವಿಶಾರದಃ ॥ ೨೨ ॥
ಯಾವಂತೋ ಭೂಮಿಕಣಿಕಾ ಯಾವಂತಸ್ತೋಯಬಿಂದವಃ ।
ಯಾವಂತ್ಯುಡೂನಿ ಗಗನೇ ತಾವತೀರ್ಗಾ ಅದಾಮಹಂ ॥ ೨೩ ॥

---

ಆತನ ಪಾದಗಳನ್ನು ತೊಳೆದು ಆ ಪಾದೋದಕವನ್ನು ತನ್ನ ತಲೆಯಮೇಲೆ ಪ್ರೋಕ್ಷಿಸಿಕೊಂಡನು. ಅದೃಷ್ಟಬಲದಿಂದ ಸುಸಮಯವೊದಗಲು ಪ್ರೋಕ್ಷಣೆ ಮಾಡಿಕೊಂಡ ಆ ಜಲದ ಬಿಂದುಗಳು ಬಾಗಿಲಿನಲ್ಲಿದ್ದ ಹಲ್ಲಿಯಮೇಲೂ ಬಿದ್ದವು.

೧೯. ಆ ಹಲ್ಲಿಯು ತಕ್ಷಣದಲ್ಲಿಯೇ ಪೂರ್ವಜನ್ಮಗಳ ಸ್ಮರಣೆಯನ್ನು ಹೊಂದಿತು. ಅಲ್ಲದೆ ತಾನು ಹಿಂದೆ ಮಾಡಿದ ದುಷ್ಕರ್ಮಕ್ಕಾಗಿ ಅತಿಯಾಗಿ ದುಃಖಗೊಳ್ಳುತ್ತ ಮನೆಗೆ ಬಂದ ಬ್ರಾಹ್ಮಣನನ್ನು ಕುರಿತು "ಕಾಪಾಡು! ಕಾಪಾಡು!!" ಎಂದು ಕೂಗಿಕೊಂಡಿತು.

೨೦–೨೨. ಇಂತು ಕೂಗುತ್ತಿರುವ ಆ ನೀಚಪ್ರಾಣಿಯ ಧ್ವನಿಯನ್ನು ಕೇಳಿ ಬ್ರಾಹ್ಮಣನು ಆಶ್ಚರ್ಯಗೊಂಡನು. "ಎಲೈ ಹಲ್ಲಿಯೆ! ನೀನೇತಕ್ಕೆಂತು ಕೂಗಿ ಕೊಳ್ಳುತ್ತಿರುವೆ? ಯಾವ ಪಾಪಕರ್ಮದ ಫಲವಾಗಿ ಈ ದೆಶೆಯು ನಿನಗೆ ಪ್ರಾಪ್ತ ವಾಯಿತು? ನೀನು ಗಂಧರ್ವಾದಿಗಳಲ್ಲಿ ಒಬ್ಬನೋ? ಅಥವಾ ದೇವತೆಯೊ? ಮಹಾರಾಜನೊ? ಬ್ರಾಹ್ಮಣೋತ್ತಮನೊ? ಎಲೈ ಮಹಾತ್ಮನೆ! ನೀನು ಯಾರೆಂಬುದನ್ನು ತಿಳಿಸಿದರೆ ಈಗಲೇ ನಿನ್ನನ್ನು ಉದ್ಧರಿಸುವೆನು." ಇಂತೆನ್ನಲು ಹಲ್ಲಿಯ ರೂಪದಿಂದಿದ್ದ ಸಾರ್ವಭೌಮನಾದ ಆ ಹೇಮಾಂಗನು ಶ್ರುತದೇವನನ್ನು ಕುರಿತು ಹೇಳತೊಡಗಿದನು. "ನಾನು ಇಕ್ಷ್ವಾಕುವಂಶೋತ್ಪನ್ನನು. ಸಕಲ ಶಾಸ್ತ್ರಗಳಲ್ಲಿಯೂ, ವಿದ್ಯೆಗಳಲ್ಲಿಯೂ ಪಾರಂಗತನಾಗಿದ್ದೆನು.

೨೩. ಭೂಮಂಡಲದಲ್ಲಿ ಎಷ್ಟು ರೇಣುಗಳಿರುವುವೊ, ಮಳೆಯಲ್ಲಿ ಎಷ್ಟು ನೀರಿನ ಹನಿಗಳಿರುವುವೊ, ಆಕಾಶದಲ್ಲೆಷ್ಟು ನಕ್ಷತ್ರಗಳು ಕಾಣುವುವೊ, ಅಷ್ಟು ಗೋವುಗಳನ್ನು ನಾನು ದಾನಮಾಡಿರುವೆನು.

ಸರ್ವೈರ್ಯಜ್ಞೈರ್ಮಯಾ ಚೇಷ್ಟಂ ಪೂರ್ತಾನ್ಯಾಚರಿತಾನಿ ಮೇ ।
ದಾನಾನ್ಯಪಿ ಚ ದತ್ತಾನಿ ಧರ್ಮಜಾತಂ ಸ್ವನುಷ್ಠಿತಂ ॥ ೨೪ ॥
ತಥಾಪಿ ದುರ್ಗತಿರ್ಜಾತಾ ನ ಮೇ ಚೋರ್ಧ್ವಗತಿರ್ವಿಭೋ ।
ತ್ರಿವಾರಂ ಚಾತಕತ್ವಂ ಮೇ ಗೃಧ್ರತ್ವಂ ಚೈಕಜನ್ಮನಿ ॥ ೨೫ ॥
ಸಪ್ತಜನ್ಮಸು ಚ ಶ್ವತ್ವಂ ಪ್ರಾಪ್ತಂ ಪೂರ್ವಂ ಮಯಾ ದ್ವಿಜ ।
ಧರತಾನೇನ ಭೂಪೇನ ಚಾಪಃ ಪಾದಾವನೇ ಜನಿಃ ॥ ೨೬ ॥
ಬಿಂದವೋ ದೂರಮುತ್ಸಿಪ್ತಾಸ್ತೈಃ ಸಿಕ್ತೋಽಹಂ ಕಥಂಚನ ।
ತದಾ ಜನ್ಮಸ್ಮೃತಿರಭೂತ್ತೇನ ಮೇ ಹತಪಾಪ್ಮನಃ ॥ ೨೭ ॥
ಗೋಧಾಜನ್ಮಾನಿ ಭಾವ್ಯಾನೀತ್ಯಷ್ಟಾವಿಂಶತಿ ಮೇ ದ್ವಿಜ ।
ದೃಶ್ಯಂತೇ ದೈವದಿಷ್ಟಾನಿ ಬಿಭ್ಯತೇ ಜನ್ಮಭಿರ್ಭೃಶಂ ॥ ೨೮ ॥
ನ ಕಾರಣಂ ಪ್ರಪಶ್ಯಾಮಿ ತನ್ಮೇ ವಿಸ್ತರತೋ ವದ ।
ಇತ್ಯುಕ್ತಃ ಸ ದ್ವಿಜಃ ಪ್ರಾಹ ಜ್ಞಾತಂ ವಿಜ್ಞಾನಚಕ್ಷುಷಾ ॥ ೨೯ ॥

---

೨೪. ನಾನು ಸಮಸ್ತ ಯಜ್ಞಗಳನ್ನೂ ಸಾಂಗವಾಗಿ ನೆರವೇರಿಸಿದ್ದೇನೆ. ಪೂರ್ತಕರ್ಮಗಳನ್ನೂ ಮಾಡಿರುತ್ತೇನೆ. ಅನೇಕ ದಾನಗಳೂ ಕೊಡಲ್ಪಟ್ಟುವು. ಧರ್ಮಮಾರ್ಗವೇ ಚೆನ್ನಾಗಿ ಅನುಷ್ಠಾನಮಾಡಲಾಯಿತು.

೨೫–೨೭. ಎಲೈ ಮಹಾತ್ಮನೆ! ಹಾಗಾದರೂ ನನಗೆ ಈ ದುರ್ಗತಿ ಯುಂಟಾಯಿತೆ ಹೊರತು ಉತ್ತಮ ಜನ್ಮವು ಲಭಿಸಲಿಲ್ಲ. ಮೂರು ಜನ್ಮಗಳಲ್ಲಿ ಚಾತಕವೂ, ಒಂದರಲ್ಲಿ ಗೃಧ್ರವೂ, ಏಳು ಜನ್ಮಗಳಲ್ಲಿ ನಾಯಿಯೂ ಆಗಿದ್ದೆನು. ಎಲೈ ಬ್ರಾಹ್ಮಣನೆ! ಇಂತು ನಾನು ಪೂರ್ವದಲ್ಲಿ ನೀಚಜನ್ಮಗಳನ್ನು ಹೊಂದಿ ದ್ದೆನು. ನಿಮ್ಮ ಪಾದಗಳನ್ನು ತೊಳೆದ ನೀರನ್ನು ಈ ರಾಜನು ತಲೆಯಲ್ಲಿ ಪ್ರೋಕ್ಷಿಸಿಕೊಳ್ಳುತ್ತಿರಲು ಕೆಲವು ಹನಿಗಳು ದೂರಕ್ಕೆ ಹಾರಿ ಅವುಗಳಿಂದ ನನ್ನ ದೇಹವು ಯಾದೃಚ್ಛಿಕವಾಗಿ ಅವಸಿಕ್ತವಾಯಿತು. ಅದರಿಂದ ನನ್ನ ಪಾಪ ಗಳೆಲ್ಲವೂ ದೂರವಾಗಿ ನನಗೆ ಪೂರ್ವಜನ್ಮಗಳ ಸ್ಮರಣೆಯುಂಟಾಯಿತು.

೨೮. ಓ ಬ್ರಾಹ್ಮಣೋತ್ತಮ! ಮುಂದೆ ನನಗೆ ಇಪ್ಪತ್ತೆಂಟು ಹಲ್ಲಿಯ ಜನ್ಮಗಳುಂಟಾಗಬೇಕಾದುದು ದೈವನಿಯಮದಂತೆ ಕಾಣುತ್ತಿರುವುದು. ಆ ಜನ್ಮ ಗಳಿಗಾಗಿ ನಾನು ಬಹಳ ಹೆದರುತ್ತಿದ್ದೇನೆ.

೨೯. ಈ ನನ್ನ ಅವಗತಿಗೆ ಯಾವ ಕಾರಣವನ್ನೂ ಕಾಣೆನು. ಅದನ್ನು ನನಗೆ ವಿಸ್ತಾರವಾಗಿ ತಿಳಿಸುವವನಾಗು.'' ಇಂತೆಂದ ಹಲ್ಲಿಯ ಮಾತುಗಳನ್ನು ಕೇಳಿ ಆ ಬ್ರಾಹ್ಮಣನು ಜ್ಞಾನದೃಷ್ಟಿಯಿಂದ ವೃತ್ತಾಂತವೆಲ್ಲವನ್ನೂ ತಿಳಿದು ಹೇಳ ತೊಡಗಿದನು.

ಶೃಣು ಭೂಪ ಪ್ರವಕ್ಷ್ಯಾಮಿ ತವ ದುರ್ಗತಿಕಾರಣಂ ।
ನ ಜಲಂ ತು ತ್ವಯಾ ದತ್ತಂ ವೇಂಕಟಾಹ್ವಯ ಭೂಧರೇ ॥ ೩೦ ॥
ತಜ್ಜಲಂ ಸುಲಭಂ ಮತ್ವಾ ನ ಮೌಲ್ಯಮಿತಿ ನಿಶ್ಚಿತಃ ।
ನಾಧ್ವಗಾನಾಂ ದ್ವಿಜಾದೀನಾಂ ಧರ್ಮಕಾಲೇಽಪ್ಯಜಾನತಾ ॥ ೩೧ ॥
ತಥಾಪಾತ್ರಂ ಸಮುತ್ಸೃಜ್ಯ ಹ್ಯಪಾತ್ರೇ ಪ್ರತಿಪಾದಿತಂ ।
ಜಲ್ವಂತಮಗ್ನಿಮುತ್ಸೃಜ್ಯ ನ ಹಿ ಭಸ್ಮನಿ ಹೂಯತೇ ॥ ೩೨ ॥
ತುಲಸೀಂ ತು ಸಮುತ್ಸೃಜ್ಯ ಬೃಹತೀ ಪೂಜ್ಯತೇ ನು ಕಿಂ ।
ಅನಾಥ ವ್ಯಂಗಪಂಗುತ್ವಂ ನ ಪ್ರಯೋಜಕತಾಮಿಯಾತ್ ॥ ೩೩ ॥
ಪಂಗ್ವಾದ್ಯಾ ಯೇಽಪ್ಯನಾಥಾ ಹಿ ದಯಾಪಾತ್ರಂ ಹಿ ಕೇವಲಂ ।
ತಪೋನಿಷ್ಠಾ ಜ್ಞಾನನಿಷ್ಠಾಃ ಶ್ರುತಿಶಾಸ್ತ್ರಪರಾಯಣಾಃ ॥ ೩೪ ॥
ವಿಷ್ಣುರೂಪಾಃ ಸದಾ ಪೂಜ್ಯಾ ನೇತರೇ ತು ಕದಾಚನ ।
ತತ್ರಾಪಿ ಜ್ಞಾನಿನೋಽತ್ಯರ್ಥಂ ಪ್ರಿಯಾ ವಿಷ್ಣೋಃ ಸದೈವ ಹಿ ॥ ೩೫ ॥

---

೩೦. ಎಲೈ ಮಹಾರಾಜನೆ! ಕೇಳು. ನಿನ್ನ ದುರ್ಗತಿಗೆ ಕಾರಣವನ್ನು ಹೇಳುವೆನು. ವೇಂಕಟಾಚಲವೆಂಬ ಪರ್ವತದಲ್ಲಿ ನೀನು ಯಾರಿಗೂ ಜಲವನ್ನು ದಾನಮಾಡಲಿಲ್ಲ.

೩೧. ಧರ್ಮಗಳನ್ನು ಮಾಡುವ ಕಾಲದಲ್ಲಿಯೂ ಕೂಡ ನೀನು ತಿಳಿಯದೆಯೇ ಜಲವು ಸುಲಭವಾಗಿ ಸಿಕ್ಕುವ ವಸ್ತುವೆಂದೂ ಬೆಲೆಯಿಲ್ಲದುದೆಂದೂ ನಿಶ್ಚಯಿಸಿ ದಾರಿಯಲ್ಲಿ ಸಂಚರಿಸುವ ಬ್ರಾಹ್ಮಣರೇ ಮೊದಲಾದವರಿಗೆ ನೀರನ್ನು ನೀಡಲಿಲ್ಲ.

೩೨. ಅಲ್ಲದೆ ಸತ್ಪಾತ್ರವನ್ನು ದೂರಮಾಡಿ ಅಪಾತ್ರದಲ್ಲಿಯೇ ದಾನಗಳನ್ನು ಮಾಡಿರುವೆ. ಜ್ವಲಿಸುತ್ತಿರುವ ಅಗ್ನಿಯನ್ನು ಬಿಟ್ಟು ಯಾರಾದರೂ ಬೂದಿಯಲ್ಲಿ ಹೋಮವನ್ನು ಮಾಡುವರೆ?

೩೩. ಶ್ರೇಷ್ಠವಾದ ತುಲಸಿಯನ್ನು ತೊರೆದು ಬದನೆಯ ಗಿಡದೆಲೆಯನ್ನು ಯಾರಾದರೂ ದೊಡ್ಡದು ಮಾಡುವರೆ? ದಾನಕ್ರಿಯೆಗಳಲ್ಲಿ ಅನಾಥತೆಯಾಗಲಿ, ಅಂಗವೈಕಲ್ಯವಾಗಲಿ, ಪಂಗುತ್ವವಾಗಲಿ ಪ್ರಯೋಜನವಾಗಲಾರದು.

೩೪–೩೫. ಪಂಗುಗಳೂ ಅನಾಥರೂ ಕೂಡ ಕೇವಲ ದಯೆಗೆ ಪಾತ್ರರಾದವರೇ ಹೊರತು ದಾನಕ್ಕೆ ಸತ್ಪಾತ್ರರಲ್ಲ. ತಪೋನಿಷ್ಠರೂ, ಜ್ಞಾನನಿಷ್ಠರೂ ವೇದಶಾಸ್ತ್ರ ಪಾರಂಗತರೂ ಆದ ವಿಷ್ಣುಸ್ವರೂಪರೇ ಯಾವಾಗಲೂ ಪೂಜ್ಯರು. ಇತರರೆಂದಿಗೂ ಪೂಜಾರ್ಹರಲ್ಲ. ಅವರಲ್ಲಿಯೂ ಕೂಡ ಯಾವಾಗಲೂ ವಿಷ್ಣುವಿಗೆ ಜ್ಞಾನಿಗಳೇ ಪರಮಪ್ರಿಯರಾಗಿರುವರಲ್ಲವೆ!

ಜ್ಞಾನಿನಾಮಪಿ ಭೂಪಾಲ ವಿಷ್ಣುರೇವ ಸದಾಪ್ರಿಯಃ ।
ತಸ್ಮಾದ್ಜ್ಞಾನೀ ಸದಾ ಪೂಜ್ಯಃ ಪೂಜ್ಯಾತ್ಪೂಜ್ಯತರಃ ಸ್ಮೃತಃ ॥ ೩೬ ॥
ನ ಜಲಂ ತು ತ್ವಯಾ ದತ್ತಂ ಸಾಧವೋ ವಾ ನ ಸೇವಿತಾಃ ।
ತೇನ ತೇ ದುರ್ಗತಿಶ್ಚೇಯಂ ಪ್ರಾಪ್ತಾ ಚೇಕ್ಷ್ವಾಕುನಂದನ ॥ ೩೭ ॥
ವೇಂಕಟಾದ್ರೌ ಕೃತಂ ಪುಣ್ಯಂ ತುಭ್ಯಂ ದಾಸ್ಯಾಮಿ ಶಾಂತಯೇ ।
ಭೂತಂ ಭವ್ಯಂ ಭವತ್ತೇನ ಕರ್ಮಜಾತಂ ವಿಜೇಷ್ಯಸಿ ॥ ೩೮ ॥
ಇತ್ಯುಕ್ತ್ವಾಪ ಉಪಸ್ಪೃಶ್ಯ ದದೌ ಪುಣ್ಯಮನುತ್ತಮಂ ।
ಯದ್ದತ್ತಂ ಬ್ರಾಹ್ಮಣೇನಾಪಿ ಸ್ನಾನಂ ಚೈಕದಿನೇ ಕೃತಂ ॥ ೩೯ ॥
ತೇನ ಧ್ವಸ್ತಾಖಿಲಾಗಾಸ್ತು ತ್ಯಕ್ತ್ವಾ ಚ ಗೃಹಗೋಧಿಕಾ ।
ರೂಪಂ ಕರ್ಮೋಚಿತಂ ಘೋರಂ ಸದ್ಯೋಽದೃಶ್ಯತ ಪೂರುಷಃ ॥ ೪೦ ॥
ದಿವ್ಯಂ ವಿಮಾನಮಾರೂಢೋ ದಿವ್ಯಸ್ರಗ್ವಸ್ತ್ರಭೂಷಣಃ ।
ಪಶ್ಯತಾಮೇವ ಸಾಧೂನಾಂ ಮೈಥಿಲಸ್ಯ ಗೃಹಾಂತರೇ ॥ ೪೧ ॥
ಬದ್ಧಾಂಜಲಿಪುಟೋ ಭೂತ್ವಾ ಪರಿಕ್ರಮ್ಯ ಪ್ರಣಮ್ಯ ಚ ।
ಅನುಜ್ಞಾತೋ ಯಯೌ ರಾಜಾ ಸ್ತೂಯಮಾನೋಽಮರೈರ್ದಿವಂ ॥

---

೩೬. ಎಲೈ ಮಹಾರಾಜನೆ! ಜ್ಞಾನಿಗಳಿಗೂ ಮಹಾವಿಷ್ಣುವೇ ಪರಮ ಪ್ರಿಯನಾದ ದೇವತೆಯು. ಆದುದರಿಂದ ಜ್ಞಾನಿಯೇ ಸದಾ ಪೂಜ್ಯನು. ಆತನೇ ಪೂಜ್ಯವಸ್ತುಗಳಲ್ಲೆಲ್ಲ ಉತ್ತಮನು.

೩೭. ಅಂತಹ ಜ್ಞಾನಿಗಳಿಗೆ ನೀನು ಜಲವನ್ನು ದಾನಮಾಡಲಿಲ್ಲ. ಸಾಧುಗಳೂ ನಿನ್ನಿಂದ ಸೇವೆಯನ್ನು ಕೈಗೊಳ್ಳಲಿಲ್ಲ. ಎಲೈ ಇಕ್ಷ್ವಾಕುವಂಶೋದ್ಭವನೆ! ಆದುದರಿಂದಲೇ ನಿನಗೆ ಇಂತಹ ದುರ್ಗತಿಯು ಪ್ರಾಪ್ತವಾಯಿತು.

೩೮–೪೦. ನಿನ್ನ ಶಾಂತಿಗಾಗಿ ನಾನು ವೇಂಕಟಾಚಲದಲ್ಲಿ ಮಾಡಿರುವ ಪುಣ್ಯವೆಲ್ಲವನ್ನೂ ಕೊಡುವೆನು. ಅದರಿಂದ ನಿನ್ನ ಹಿಂದಿನ, ಈಗಿನ ಮತ್ತು ಮುಂದೆ ಬರಲಿರುವ ಕರ್ಮಬಂಧವನ್ನೂ ಕಳೆದುಕೊಳ್ಳುವೆ.'' ಇಂತೆಂದು ಆ ಮುನಿಯು ಆಚಮನವನ್ನು ಮಾಡಿ ಅತ್ಯುತ್ತಮವಾದ ತನ್ನ ಪುಣ್ಯವನ್ನು ಆತನಿಗೆ ಧಾರೆ ಯೆರೆದನು. ಆ ಬ್ರಾಹ್ಮಣನು ಒಂದು ದಿನ ಮಾತ್ರ ಮಾಡಿದ ಸ್ನಾನದ ಪುಣ್ಯವನ್ನು ಕೊಟ್ಟುದರಿಂದಲೇ ಹೇಮಾಂಗನು ಘೋರಕರ್ಮಕ್ಕನುಗುಣವಾದ ಹಲ್ಲಿಯ ರೂಪವನ್ನು ತ್ಯಜಿಸಿ ತಕ್ಷಣದಲ್ಲಿಯೇ ಮನುಷ್ಯನಾಗಿ ಎದುರಿಗೆ ನಿಂತನು.

೪೧–೪೨. ಆತನು ದಿವ್ಯವಾದ ವಿಮಾನವನ್ನೇರಿ ಸ್ವರ್ಗಯೋಗ್ಯಗಳಾದ ಪುಷ್ಪಗಳಿಂದಲೂ, ವಸ್ತ್ರಗಳಿಂದಲೂ, ಭೂಷಣಗಳಿಂದಲೂ ಅಲಂಕೃತನಾಗಿ ಶ್ರುತಕೀರ್ತಿ ಮಹಾರಾಜನ ಅಂಗಳದಲ್ಲಿ ನೆರೆದಿದ್ದ ಸಾಧುಗಳೆಲ್ಲರೂ ನೋಡುತ್ತಿದ್ದಂತೆಯೇ ಅಂಜಲಿಬಂಧವನ್ನು ಮಾಡಿಕೊಂಡು ಅವರೆಲ್ಲರಿಗೂ ಪ್ರದಕ್ಷಿಣೆ

ತತ್ರ ಭುಕ್ತ್ವಾ ಮಹಾಭೋಗಾನ್ವರ್ಷಾಯುತಮತಂದ್ರಿತಃ ।
ಸ ಏವ ಚೇಕ್ಷ್ವಾಕುಕುಲೇ ಕಕುತ್ಸ್ಥೋಽಭೂನ್ಮಹಾರಥಃ ॥ ೪೩ ॥
ಸಪ್ತದ್ವೀಪಪ್ರತೀಪಾಲೋ ಬ್ರಹ್ಮಣ್ಯಃ ಸಾಧುಸಂಮತಃ ।
ದೇವೇಂದ್ರಸ್ಯ ಸಮೋ ವಿಷ್ಣೋರಂಶ ಏವಂ ಮಹಾಪ್ರಭುಃ ॥ ೪೪ ॥
ಬೋಧಿತಸ್ತು ವಸಿಷ್ಠೇನ ಸರ್ವಾನ್ಧರ್ಮಾನ್ಮನೋಹರಾನ್ ।
ಅನುಷ್ಠಾಯಾಖಿಲಾನ್ರಾಜಾ ತೇನ ಧ್ವಸ್ತಾಶುಭಾಧಿಕಃ ॥ ೪೫ ॥
ದಿವ್ಯಂ ಜ್ಞಾನಂ ಸಮಾಸಾದ್ಯ ವಿಷ್ಣೋಃ ಸಾಯುಜ್ಯಮಾಪ್ತವಾನ್ ।
ತಸ್ಮಾದ್ವೇಂಕಟಶೈಲೇಂದ್ರಃ ಪುಣ್ಯಃ ಪಾಪವಿನಾಶನಃ ॥ ೪೬ ॥
ತಸ್ಮಿಂಶ್ಚ ಜಲದಾನಂ ತು ವಿಷ್ಣುಲೋಕಪ್ರದಾಯಕಂ ।
ಏವಂ ವಃ ಕಥಿತಂ ವಿಪ್ರಾ ಜಲದಾನಸ್ಯ ವೈಭವಂ ।
ವೇಂಕಟಾದ್ರೌ ಮಹಾಪುಣ್ಯೇ ಸರ್ವಪಾತಕನಾಶನೇ ॥ ೪೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀ ವೇಂಕಟಾಚಲಮಹಾತ್ಮ್ಯೇ ಧರಣೀವರಾಹ ಸಂವಾದೇ "ಜಲದಾನವೈಭವವರ್ಣನಂ" ನಾಮ ಷೋಡಶೋಽಧ್ಯಾಯಃ

---

ಯನ್ನು ಮಾಡಿ ನಮಸ್ಕರಿಸಿ ಅವರ ಅಪ್ಪಣೆಯನ್ನು ಪಡೆದು ದೇವತೆಗಳು ಸ್ತೋತ್ರ ಮಾಡುತ್ತಿರಲು ಸ್ವರ್ಗವನ್ನು ಕುರಿತು ಪ್ರಯಾಣವನ್ನು ಮಾಡಿದನು.

೪೩–೪೪. ಅಲ್ಲಿ ಹತ್ತುಸಾವಿರವರ್ಷಗಳವರೆಗೂ ತಡೆಯಿಲ್ಲದೆ ಅನೇಕ ಭೋಗಗಳನ್ನನುಭವಿಸಿ ಮತ್ತೆ ಇಕ್ಷ್ವಾಕು ವಂಶದಲ್ಲಿಯೇ ಮಹಾರಥನಾದ ಕಕುತ್ಸ್ಥನೆಂಬ ರಾಜನಾಗಿ ಅವತರಿಸಿದನು. ಭೂಮಂಡಲದ ಸಪ್ತದ್ವೀಪಗಳನ್ನೂ ಏಕಚ್ಛತ್ರದಿಂದಾಳುತ್ತ ಬ್ರಾಹ್ಮಣಪ್ರಿಯನೂ ಸಾಧುಪರಿಗೃಹೀತನೂ, ದೇವೇಂದ್ರಸಮಾನನೂ ಆಗಿ ಆ ಮಹಾರಾಜನು ಮಹಾವಿಷ್ಣುವಿನ ಅಂಶವೆಂದೇ ಎಣಿಸಲ್ಪಟ್ಟಿದ್ದನು.

೪೫–೪೬. ವಸಿಷ್ಠನಿಂದ ಕಾಲಕಾಲದಲ್ಲಿ ಸರಿಯಾದ ಬುದ್ಧಿವಾದಗಳನ್ನು ಕೇಳುತ್ತ ಮನೋಹರಗಳಾದ ಸಕಲ ಧರ್ಮಗಳನ್ನೂ ಅನುಷ್ಠಾನಮಾಡಿ ಆ ಮಹಾರಾಜನು ತನ್ನ ಸಕಲ ಪಾಪಗಳನ್ನೂ ಕಳೆದುಕೊಂಡನು. ಕಡೆಗೆ ದಿವ್ಯ ಜ್ಞಾನವನ್ನು ಪಡೆದು ವಿಷ್ಣುಸಾಯುಜ್ಯ ಮೋಕ್ಷವನ್ನು ಹೊಂದಿದನು. ಆದುದರಿಂದ ಈ ವೇಂಕಟಾಚಲವು ಪುಣ್ಯಪ್ರದವೂ ಪಾಪನಾಶಕವೂ ಆಗಿರುವುದು.

೪೭. ಅಲ್ಲಿ ಜಲದಾನವೂ ವಿಷ್ಣುಲೋಕವನ್ನು ಸಂಪಾದಿಸಿ ಕೊಡುವುದು. ಎಲೈ ಬ್ರಾಹ್ಮಣರಿರಾ! ಈ ರೀತಿಯಾಗಿ ಮಹಾಪುಣ್ಯಪ್ರದವೂ ಸಕಲ ಪಾಪಾಪನೋದಕವೂ ಆದ ವೇಂಕಟಾಚಲದಲ್ಲಿ ಜಲದಾನವನ್ನು ಮಾಡುವುದರ ವೈಭವವನ್ನು ನಿಮಗೆ ವರ್ಣಿಸಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ವೈಷ್ಣವಖಂಡದ ಎರಡನೆಯ ಶ್ರೀ ವೇಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹ ಸಂವಾದದಲ್ಲಿ "ಜಲದಾನವೈಭವವರ್ಣನ"ವೆಂಬ ಹದಿನಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಸಪ್ತದಶೋಽಧ್ಯಾಯಃ

## ಕ್ಷೇತ್ರಮಹಿಮಾನುವರ್ಣನಂ

ಶ್ರೀ ಸೂತ ಉವಾಚ:—

ವೇಂಕಟಾದ್ರೇಸ್ತು ಮಾಹಾತ್ಮ್ಯಂ ಭೂಯೋಽಪಿ ಪ್ರವದಾಮ್ಯಹಂ ।
ಯುಷ್ಮಾಕಂ ಸಾವಧಾನೇನ ಶ್ರುಣುಧ್ವಂ ಸುಸಮಾಹಿತಾಃ ॥ ೧ ॥
ಪೃಥಿವ್ಯಾಂ ಯಾನಿ ತೀರ್ಥಾನಿ ಬ್ರಹ್ಮಾಂಡಾಂತರ್ಗತಾನಿ ಚ ।
ತಾನಿ ಸರ್ವಾಣಿ ವರ್ತಂತೇ ವೇಂಕಟಾಹ್ವಯಭೂಧರೇ ॥ ೨ ॥
ತಸ್ಮಿನ್ನಗೋತ್ತಮೇ ಪುಣ್ಯೇ ವಸಂತಂ ಪುರುಷೋತ್ತಮಂ ।
ಶಂಖಚಕ್ರಧರಂ ದೇವಂ ಪೀತಾಂಬರಧರಂ ಶುಭಂ ॥ ೩ ॥
ಕೌಸ್ತುಭಾಲಂಕೃತೋರಸ್ಕಂ ಭಕ್ತಾನಾಮಭಯಪ್ರದಂ ।
ದೇವದೇವಂ ವಿಶಾಲಾಕ್ಷಂ ವೇದವೇದ್ಯಂ ಸನಾತನಂ ॥ ೪ ॥
ಅಂಗಕೋಸಲಕರ್ಣಾಟಕಾಶೀಗುರ್ಜರದೇಶಗಾಃ ।
ಚೋಲಕೇರಲ ಪಾಂಡ್ಯಾದಿಸರ್ವದೇಶಸಮುದ್ಭವಾಃ ॥ ೫ ॥

---

## ಕನ್ನಡದ ಅನುವಾದ

### ಕ್ಷೇತ್ರಮಹಿಮಾನುವರ್ಣನ

೧. ಸೂತನು ಹೇಳುತ್ತಾನೆ:—ಎಲೈ ಮುನಿಗಳಿರಾ! ನಿಮಗೆ ವೇಂಕಟಾಚಲದ ಮಾಹಾತ್ಮ್ಯೆಯನ್ನು ಇನ್ನೂ ವಿವರಿಸಿ ಹೇಳುತ್ತೇನೆ ಸಾವಧಾನದಿಂದಲೂ, ಸಮಾಹಿತಮನಸ್ಕರಾಗಿಯೂ ಎಲ್ಲರೂ ಕೇಳಿರಿ.

೨. ಭೂಮಂಡಲದಲ್ಲಿಯೂ, ಬ್ರಹ್ಮಾಂಡದ ಇತರ ಲೋಕಗಳಲ್ಲಿಯೂ ಯಾವ ತೀರ್ಥಗಳು ಪ್ರಸಿದ್ಧಗಳಾಗಿರುವುವೊ, ಅವುಗಳೆಲ್ಲವೂ ವೇಂಕಟವೆಂಬ ಶೈಲದಲ್ಲಿ ಸನ್ನಿಹಿತಗಳಾಗಿರುವುವು.

೩. ಪುಣ್ಯಭೂಮಿಯಾದ ಆ ಪರ್ವತೋತ್ತಮದಲ್ಲಿ ಪುರುಷೋತ್ತಮನಾದ ಶ್ರೀಹರಿಯು ಶಂಖಚಕ್ರಧಾರಿಯಾಗಿ ಪೀತಾಂಬರವನ್ನುಟ್ಟು ಮಂಗಳವಿಗ್ರಹನಾಗಿರುವನು.

೪. ಆತನ ಎದೆಯಲ್ಲಿ ಕೌಸ್ತುಭಮಣಿಯು ಶೋಭಿಸುತ್ತಿರುವುದು. ಆತನೇ ಭಕ್ತರಿಗೆ ಅಭಯವನ್ನು ಕೊಡುತ್ತಿರುವನು. ಆತನೇ ದೇವತಾಸಾರ್ವಭೌಮನೂ, ವಿಶಾಲಾಕ್ಷನೂ, ವೇದಪ್ರತಿಪಾದ್ಯನಾದ ಅನಾದಿಮೂರ್ತಿಯೂ ಆಗಿರುವನು.

೫–೬. ಅಂಗ, ಕೋಸಲ, ಕರ್ಣಾಟ, ಕಾಶಿ, ಗೂರ್ಜರ, ಚೋಲ, ಕೇರಲ, ಪಾಂಡ್ಯಗಳೇ ಮುಂತಾದ ಸಕಲ ದೇಶಗಳಲ್ಲಿ ಹುಟ್ಟಿದ ಜನರೆಲ್ಲರೂ ತಮ್ಮ

ಸಕುಟುಂಬಾಶ್ಚ ಸೇವಾರ್ಥಮಾಯಾಂತಿ ಪ್ರತಿವತ್ಸರಂ ।
ದೇವಾಶ್ಚ ಋಷಯಃ ಸಿದ್ಧಾ ಯೋಗಿನಃ ಸನಕಾದಯಃ ॥ ೬ ॥
ಯೇ ಭಾದ್ರಪದಮಾಸೇ ತು ವೇಂಕಟೇಶಮಹೋತ್ಸವೇ ।
ಸೇವಾಂ ಕುರ್ವಂತಿ ತೇ ಸರ್ವೇ ನಿಷ್ಪಾಪಾ ಉತ್ತಮೋತ್ತಮಾಃ ॥ ೭ ॥
ತತ್ರ ಶ್ರೀವೇಂಕಟೇಶಸ್ಯ ಬ್ರಹ್ಮಾ ಲೋಕಪಿತಾಮಹಃ ।
ಚಕಾರ ಕನ್ಯಾಮಾಸೇ ತು ಧ್ವಜಾರೋಪಮಹೋತ್ಸವಂ ॥ ೮ ॥
ಪ್ರತಿವರ್ಷಂ ಚ ತತ್ಸೇವಾನಿಮಿತ್ತಂ ಸರ್ವಮಾನವಾಃ ।
ಸರ್ವೇ ದೇವಾಶ್ಚ ಗಂಧರ್ವಾಃ ಸಿದ್ಧಾಃ ಸಾಧ್ಯಾ ಮಹೌಜಸಃ ॥ ೯ ॥
ಬ್ರಹ್ಮೋತ್ಸವೇ ಭಗವತಃ ಸಮಾಯಾಂತಿ ದ್ವಿಜೋತ್ತಮಾಃ ।
ವಿದ್ಯಾನಾಂ ವೇದವಿದ್ಯೇವ ಮಂತ್ರಾಣಾಂ ಪ್ರಣವೋ ಯಥಾ ॥ ೧೦ ॥
ಪ್ರಾಣವತ್ಪ್ರಿಯವಸ್ತೂನಾಂ ಧೇನೂನಾಂ ಕಾಮಧೇನುವತ್ ।
ತಥಾ ವೇಂಕಟಶೈಲೇಂದ್ರಃ ಕ್ಷೇತ್ರಾಣಾಮುತ್ತಮೋತ್ತಮಃ ॥ ೧೧ ॥
ಶೇಷವತ್ಸರ್ವನಾಗಾನಾಂ ಪಕ್ಷಿಣಾಂ ಗರುಡೋ ಯಥಾ ।
ದೇವಾನಾಂ ತು ಯಥಾ ವಿಷ್ಣುರ್ವರ್ಣಾನಾಂ ಬ್ರಾಹ್ಮಣೋ ಯಥಾ ॥

---

ಕುಟುಂಬಗಳೊಡನೆ ಪ್ರತಿವರ್ಷದಲ್ಲಿಯೂ ವೇಂಕಟೇಶ್ವರನಿಗೆ ಸೇವೆಯನ್ನು ಮಾಡಲು ಬರುತ್ತಿರುವರು. ಹಾಗೆಯೇ ದೇವತೆಗಳೂ, ಮಹರ್ಷಿಗಳೂ, ಸಿದ್ಧರೂ, ಯೋಗಿಗಳೂ, ಸನಕಾದಿ ಮುನಿಗಳೂ ಅಲ್ಲಿಗೈತರುತ್ತಾರೆ.

೭. ಭಾದ್ರಪದ ಮಾಸದಲ್ಲಿ ನಡೆಯುವ ವೇಂಕಟೇಶ್ವರನ ಮಹೋತ್ಸವ ದಲ್ಲಿ ಯಾರು ಸೇವೆಯನ್ನು ಮಾಡುವರೋ, ಅವರು ಪಾಪಲೇಪವಿಲ್ಲದವರಾಗಿ ಉತ್ತಮೋತ್ತಮರೆನಿಸುವರು.

೮. ಆ ಪರ್ವತದಲ್ಲಿ ಲೋಕಗಳ ಸೃಷ್ಟಿಕರ್ತನಾದ ಬ್ರಹ್ಮನು ಕನ್ಯಾಮಾಸ ದಲ್ಲಿ ಶ್ರೀ ವೇಂಕಟೇಶ್ವರನಿಗೆ ಧ್ವಜಾರೋಹಣ ಮಹೋತ್ಸವವನ್ನು ಮಾಡಿದನು.

೯–೧೪. ಎಲೈ ಬ್ರಾಹ್ಮಣೋತ್ತಮರಿರಾ! ಪ್ರತಿವರ್ಷದಲ್ಲಿಯೂ ಭಗ ವಂತನಿಗೆ ನಡೆಯುವ ಬ್ರಹ್ಮೋತ್ಸವದ ಸಮಯದಲ್ಲಿ ಸೇವೆಯನ್ನು ಮಾಡಲು ಸಕಲ ದೇಶಗಳ ಮನುಷ್ಯರೂ, ಸರ್ವದೇವತೆಗಳೂ, ಗಂಧರ್ವರೂ, ಸಿದ್ಧರೂ, ಮಹಾತಪಸ್ಸಂಪನ್ನರಾದ ಸಾಧ್ಯರೂ ಬಂದು ನೆರೆಯುವರು. ವಿದ್ಯೆಗಳಲ್ಲಿ ವೇದ ವಿದ್ಯೆಯಂತೆಯೂ, ಮಂತ್ರಗಳಲ್ಲಿ ಪ್ರಣವದಂತೆಯೂ, ಪ್ರಿಯ ಪದಾರ್ಥಗಳಲ್ಲಿ ಪ್ರಾಣದಂತೆಯೂ, ಗೋವುಗಳಲ್ಲಿ ಕಾಮಧೇನುವಿನಂತೆಯೂ ಈ ಉತ್ತಮವಾದ ವೇಂಕಟಾಚಲಕ್ಷೇತ್ರವು ಸಕಲ ಕ್ಷೇತ್ರಗಳಲ್ಲಿಯೂ ಉತ್ತಮೋತ್ತಮವೆನಿಸಿರು ವುದು. ಸಕಲ ನಾಗರಲ್ಲಿ ಶೇಷನೆಂತೊ, ಪಕ್ಷಿಗಳಲ್ಲಿ ಗರುಡನು ಹೇಗೊ, ದೇವತೆಗಳಲ್ಲಿ ಮಹಾವಿಷ್ಣುವೆಂತೊ, ವರ್ಣಗಳಲ್ಲಿ ಬ್ರಾಹ್ಮಣನೆಂತೊ, ಅಂತೆಯೇ

ತಥಾ ವೇಂಕಟಶೈಲೇಂದ್ರಃ ಕ್ಷೇತ್ರಾಣಾಮುತ್ತಮೋತ್ತಮಃ ।
ಭೂರುಹಾಣಾಂ ಸುರತರುರ್ಭಾರ್ಯೇವ ಸುಹೃದಾಂ ಯಥಾ ॥ ೧೩ ॥
ತೀರ್ಥಾನಾಂ ತು ಯಥಾ ಗಂಗಾ ತೇಜಸಾಂ ತು ರವಿರ್ಯಥಾ ।
ತಥಾ ವೇಂಕಟಶೈಲೇಂದ್ರಃ ಕ್ಷೇತ್ರಾಣಾಮುತ್ತಮೋತ್ತಮಃ ॥ ೧೪ ॥
ಆಯುಧಾನಾಂ ಯಥಾ ವಜ್ರಂ ಲೋಹಾನಾಂ ಕಾಂಚನಂ ಯಥಾ ।
ವೈಷ್ಣವಾನಾಂ ಯಥಾ ರುದ್ರೋ ರತ್ನಾನಾಂ ಕೌಸ್ತುಭೋ ಯಥಾ ॥
ತಥಾ ವೇಂಕಟಶೈಲೇಂದ್ರಃ ಕ್ಷೇತ್ರಾಣಾಮುತ್ತಮೋತ್ತಮಃ ।
ನಾನೇನ ಸದೃಶೋ ಲೋಕೇ ವಿಷ್ಣುಪ್ರೀತಿವಿವರ್ಧನಃ ॥ ೧೬ ॥
ನ ಮಾಧವಸಮೋ ಮಾಸೋ ನ ಕೃತೇನ ಸಮಂ ಯುಗಂ ।
ನ ಚ ವೇದಸಮಾ ಶಾಸ್ತ್ರಂ ನ ತೀರ್ಥಂ ಗಂಗಯಾ ಸಮಂ ॥ ೧೭ ॥
ನ ಜಲೇನ ಸಮಂ ದಾನಂ ನ ಸುಖಂ ಭಾರ್ಯಯಾ ಸಮಂ ।
ನ ಕೃಷೇಸ್ತು ಸಮಂ ವಿತ್ತಂ ನ ಲಾಭೋ ಜೀವಿತಾತ್ಪರಃ ॥ ೧೮ ॥
ನ ತಪೋಽನಶನಾದನ್ಯನ್ನ ದಾನಾತ್ಪರಮಂ ಸುಖಂ ।
ನ ಧರ್ಮಸ್ತು ದಯಾತುಲ್ಯೋ ನ ಜ್ಯೋತಿಶ್ಚಕ್ಷುಷಾ ಸಮಂ ॥ ೧೯ ॥

---

ಸಕಲ ಕ್ಷೇತ್ರಗಳಲ್ಲಿಯೂ ವೇಂಕಟಶೈಲವು ಉತ್ತಮೋತ್ತಮವಾಗಿರುವುದು. ಸಕಲ ವೃಕ್ಷಗಳಲ್ಲಿ ಕಲ್ಪವೃಕ್ಷವೂ, ಸ್ನೇಹಿತರಲ್ಲಿ ಹೆಂಡತಿಯೂ, ತೀರ್ಥಗಳಲ್ಲಿ ಗಂಗೆಯೂ, ಜ್ಯೋತಿಗಳಲ್ಲಿ ಸೂರ್ಯನೂ ಹೇಗೆ ಉತ್ತಮ ವಸ್ತುಗಳೊ, ಹಾಗೆಯೇ ಕ್ಷೇತ್ರಗಳಲ್ಲೆಲ್ಲ ವೇಂಕಟಶೈಲೇಂದ್ರವು ಉತ್ತಮವೆನಿಸಿರುವುದು.

೧೫–೧೬. ಆಯುಧಗಳಲ್ಲಿ ವಜ್ರಾಯುಧದಂತೆಯೂ, ಲೋಹಗಳಲ್ಲಿ ಸ್ವರ್ಣದಂತೆಯೂ, ವೈಷ್ಣವರಲ್ಲಿ ಶಂಭುವಿನಂತೆಯೂ, ರತ್ನಗಳಲ್ಲಿ ಕೌಸ್ತುಭದಂತೆಯೂ ವೇಂಕಟಾಚಲವೆಂಬ ಪರ್ವತವು ಸಕಲ ಕ್ಷೇತ್ರಗಳಲ್ಲಿಯೂ ಉತ್ತಮವೆಂದೆಣಿಸಲ್ಪಟ್ಟಿರುವುದು. ಭೂಮಂಡಲದಲ್ಲೆಲ್ಲ ಮಹಾವಿಷ್ಣುವಿಗೆ ಸಂತೋಷವನ್ನುಂಟುಮಾಡುವ ಇದಕ್ಕೆ ಸಮಾನವಾದ ಕ್ಷೇತ್ರವು ಮತ್ತೊಂದಿಲ್ಲ.

೧೭. ಚೈತ್ರಕ್ಕೆ ಸಮಾನವಾದ ಮಾಸವೂ, ಕೃತಯುಗಕ್ಕೆ ಸಮಾನವಾದ ಯುಗವೂ, ವೇದಕ್ಕೆ ಸಮಾನವಾದ ಶಾಸ್ತ್ರವೂ, ಗಂಗೆಗೆ ಸಮಾನವಾದ ತೀರ್ಥೋದಕವೂ ಮತ್ತೆಲ್ಲಿಯೂ ದೊರೆಯಲಾರದು.

೧೮. ತೃಷ್ಣಾರ್ತರಿಗೆ ಕೊಡುವ ಜಲದಾನಕ್ಕೆ ಸಮಾನವಾದ ದಾನವೂ, ಹೆಂಡತಿಗೆ ಸಮಾನವಾದ ಸುಖಭೋಗ್ಯ ವಸ್ತುವೂ, ಕೃಷಿಗೆ ಸಮಾನವಾದ ಧನವೂ, ಜೀವನಲಾಭಕ್ಕೆ ಸಮಾನವಾದ ಲಾಭವೂ ಮತ್ತೊಂದಿಲ್ಲ.

೧೯. ಉಪವಾಸಕ್ಕಿಂತ ಉತ್ತಮವಾದ ತಪಸ್ಸಿಲ್ಲ. ದಾನಕ್ಕಿಂತ ಉತ್ತಮವಾದ ಸುಖಸಾಧನವಿಲ್ಲ. ದಯೆಗೆ ಸದೃಶವಾದ ಧರ್ಮವೆಂಬುದಿಲ್ಲ. ನೇತ್ರಗಳಿಗೆ ಸಮಾನವಾದ ತೇಜೋಮಂಡಲವಿಲ್ಲ.

ನ ತೃಪ್ತಿರಶನಾತುಲ್ಯಾ ನ ವಾಣಿಜ್ಯಂ ಕೃಷೇಃ ಸಮಂ ।
ನ ಧರ್ಮೇಣ ಸಮಂ ಮಿತ್ರಂ ನ ಸತ್ಯೇನ ಸಮಂ ಯಶಃ ॥ ೨೦ ॥
ಯಥಾ ತಥಾ ಭಗವತಃ ಸ್ಥಾನೇನ ಸದೃಶಂ ನ ಹಿ ॥ ೨೧ ॥
ಯತ್ಕೀರ್ತನಂ ಸಕಲಪಾಪಹರಂ ಮುನೀಂದ್ರಾ
ಯದ್ವಂದನಂ ಸಕಲಸೌಖ್ಯದಮೇವ ಲೋಕೇ ।
ಯತ್ರಾಪಿ ಯಂ ಪ್ರತಿ ಸುರೈರಪಿ ಪೂಜನೀಯಾ
ತಾದೃಙ್ಮಹಾನ್ಭವತಿ ವೇಂಕಟಶೈಲಮುಖ್ಯಃ ॥ ೨೨ ॥
ತಸ್ಯಾನುಭಾವಂ ಪ್ರವದಾಮಿ ಭೂಯಃ
ಸಮಸ್ತತೀರ್ಥಾನಿ ವಸಂತಿ ತತ್ರ ।
ಏವಂ ಸಮಸ್ತೇಷು ಚ ಮುಖ್ಯತೀರ್ಥಂ
ಶ್ರೀಸ್ವಾಮಿನಾಮಾಸ್ತಿ ಸರೋವರಂ ತತ್ ॥ ೨೩ ॥
ಮಾಹಾತ್ಮ್ಯಮೇತಸ್ಯ ಮಯೋಚ್ಯತೇ ಕಥಂ
ಯತ್ಪಶ್ಚಿಮೇ ರೋಧಸಿ ಭೂವರಾಹಃ ।

---

೨೦. ಊಟದ ಸುಖಕ್ಕೆ ಸಮಾನವಾದ ತೃಪ್ತಿಯಿಲ್ಲ. ವ್ಯವಸಾಯಕ್ಕೆ ಸಮಾನವಾದ ವ್ಯಾಪಾರವಿಲ್ಲ. ಇಹಪರಗಳೆರಡಕ್ಕೂ ಧರ್ಮಕ್ಕೆ ಸರಿಯಾದ ಸ್ನೇಹಿತನು ಸಿಕ್ಕಲಾರನು. ಸತ್ಯಕ್ಕೆ ಸಮಾನವಾದ ಯಶಸ್ಸು ದೊರೆಯಲಾರದು.

೨೧. ಇವುಗಳಂತೆಯೇ ಭಗವಂತನ ನಿವಾಸಭೂಮಿಯಾದ ವೇಂಕಟಾಚಲಕ್ಕೆ ಸಮಾನವಾದ ಕ್ಷೇತ್ರವು ಮತ್ತೊಂದಿಲ್ಲವು.

೨೨. ಎಲೈ ಮುನೀಂದ್ರರೆ! ಯಾವುದರ ನಾಮ ಸಂಕೀರ್ತನವೇ ಸಕಲ ಪಾಪಗಳನ್ನೂ ದೂರಮಾಡುವುದೊ, ಯಾವುದಕ್ಕೆ ಮಾಡಿದ ನಮಸ್ಕಾರವು ಸಕಲ ಸೌಖ್ಯಗಳನ್ನೂ ಇಹಲೋಕದಲ್ಲಿ ಒದಗಿಸಿಕೊಡುವುದೊ, ಯಾವುದರಲ್ಲಿ ವಾಸಿಸುವ ಗಾಂಪನೂ ಸಹ ದೇವತೆಗಳಿಗೂ ಸಂಪೂಜ್ಯನಾಗುವನೊ, ಅಂತಹ ಮಹಾಮಹಿಮೆಯುಳ್ಳದ್ದಾಗಿ ಮುಖ್ಯಕ್ಷೇತ್ರವಾದ ವೇಂಕಟಾಚಲವು ವಿರಾಜಿಸುತ್ತಿರುವುದು.

೨೩. ಇನ್ನೂ ಹೆಚ್ಚಾಗಿ ಅದರ ಮಾಹಾತ್ಮ್ಯೆಯನ್ನು ಹೇಳುವೆನು. ಭೂಮಂಡಲದ ಸಕಲ ತೀರ್ಥಗಳೂ ಅಲ್ಲಿ ವಾಸಿಸುತ್ತಿರುವುವು. ಇಂತು ಸಮಸ್ತ ತೀರ್ಥಗಳಲ್ಲಿಯೂ ಮುಖ್ಯತೀರ್ಥವೆನಿಸಿ ಶ್ರೀ ಸ್ವಾಮಿಪುಷ್ಕರಿಣಿಯು ಅಲ್ಲಿ ಸರೋವರವಾಗಿ ನೆಲಸಿರುವುದು.

೨೪. ಯಾವುದರ ಪಶ್ಚಿಮ ತೀರದಲ್ಲಿ ಭೂವರಾಹಸ್ವಾಮಿಯು ತನ್ನ ಪತ್ನಿಯಾದ ಭೂದೇವಿಯನ್ನಾಲಿಂಗಿಸಿಕೊಂಡು ಪ್ರಸನ್ನಮೂರ್ತಿಯಾಗಿ ಸಕಲರಿಗೂ

ಆಲಿಂಗ್ಯ ಕಾಂತಾಮತಿಸೌಮ್ಯಮೂರ್ತಿ
ರ್ವಿರಾಜತೇ ವಿಶ್ವಜನೋಪಕಾರೀ ॥ ೨೪ ॥
ಶ್ರೀಸ್ವಾಮಿಪುಷ್ಕರಿಣ್ಯಾಂ ಚ ದಕ್ಷಿಣೇ ವೇಂಕಟೇಶ್ವರಃ ।
ಆಲಿಂಗಿತವಪುರ್ಲಕ್ಷ್ಮ್ಯಾ ವರದೋ ವರ್ತತೇ ಚಿರಂ ॥ ೨೫ ॥
ಏವಂ ವಃ ಕಥಿತಂ ವಿಪ್ರಾಃ ಕ್ಷೇತ್ರಮಾಹಾತ್ಮ್ಯಮುತ್ತಮಂ ।
ಯಃ ಶೃಣೋತಿ ಸದಾ ಭಕ್ತ್ಯಾ ವಿಷ್ಣುಲೋಕೇ ಮಹೀಯತೇ ॥ ೨೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹ ಸಂವಾದೇ "ಕ್ಷೇತ್ರಮಹಿಮಾನುವರ್ಣನಂ"ನಾಮ ಸಪ್ತದಶೋಽಧ್ಯಾಯಃ

---

ಇಷ್ಟಾರ್ಥಗಳನ್ನು ನೆರವೇರಿಸಿಕೊಡುತ್ತ ನೆಲಸಿರುವನೊ, ಅಂತಹ ಸರೋವರದ ಮಾಹಾತ್ಮ್ಯೆಯನ್ನು ನಾನು ಹೇಗೆ ವರ್ಣಿಸಲಿ?

೨೫. ಆ ಸ್ವಾಮಿಪುಷ್ಕರಿಣಿಯ ದಕ್ಷಿಣ ತೀರದಲ್ಲಿಯೇ ವೇಂಕಟೇಶ್ವರನು ಮಹಾಲಕ್ಷ್ಮಿಯಿಂದ ಆಲಿಂಗಿತವಾದ ದೇಹವುಳ್ಳವನಾಗಿ ಭಕ್ತರಿಗೆ ವರಗಳನ್ನು ಕೊಡುತ್ತ ಸನಾತನನಾಗಿ ನೆಲಸಿರುವನು.

೨೬. ಎಲೈ ಬ್ರಾಹ್ಮಣರಿರಾ! ಇಂತು ನಿಮಗೆ ವೇಂಕಟೇಶ್ವರ ಕ್ಷೇತ್ರದ ಉತ್ತಮವಾದ ಮಾಹಾತ್ಮ್ಯೆಯನ್ನು ಹೇಳಿದೆನು. ಇದನ್ನು ಯಾವನು ನಿತ್ಯವೂ ಭಕ್ತಿಯಿಂದ ಕೇಳುವನೊ, ಅವನು ವಿಷ್ಣುಲೋಕದಲ್ಲಿ ಪೂಜ್ಯತೆಯನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ವೈಷ್ಣವಖಂಡದ ಎರಡನೆಯ ಶ್ರೀ ವೆಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹ ಸಂವಾದದಲ್ಲಿ "ಕ್ಷೇತ್ರಮಹಿಮಾನುವರ್ಣನ"ವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಽಷ್ಟಾದಶೋಽಧ್ಯಾಯಃ

### ವೇಂಕಟೇಶ್ವರವೈಭವಾನುವರ್ಣನಂ

ಶ್ರೀ ಸೂತ ಉವಾಚ :—

ಅಥೇದಾನೀಂ ಪ್ರವಕ್ಷ್ಯಾಮಿ ವೇಂಕಟೇಶ್ವರವೈಭವಂ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೧ ॥
ಶ್ರೀವೇಂಕಟೇಶ್ವರಂ ದೇವಂ ಯಃ ಪಶ್ಯತಿ ಸಕೃನ್ನರಃ ।
ಸ ನರೋ ಮುಕ್ತಿಮಾಪ್ನೋತಿ ವಿಷ್ಣುಸಾಯುಜ್ಯಮಾಪ್ನುಯಾತ್ ॥ ೨ ॥
ದಶವರ್ಷೈಸ್ತು ಯತ್ಪುಣ್ಯಂ ಕ್ರಿಯತೇ ತು ಕೃತೇ ಯುಗೇ ।
ತ್ರೇತಾಯಾಮೇಕವರ್ಷೇಣ ತತ್ಪುಣ್ಯಂ ಸಾಧ್ಯತೇ ನೃಭಿಃ ॥ ೩ ॥
ದ್ವಾಪರೇ ಪಂಚಮಾಸೇನ ತದ್ದಿನೇನ ಕೃತೌ ಯುಗೇ ।
ತತ್ಫಲಂ ಕೋಟಿಗುಣಿತಂ ನಿಮಿಷೇ ನಿಮಿಷೇ ನೃಣಾಂ ॥ ೪ ॥
ನಿಃಸಂದೇಹಂ ಭವೇದೇವಂ ಶ್ರೀನಿವಾಸವಿಲೋಕಿನಾಂ ।
ಶ್ರೀವೇಂಕಟೇಶ್ವರೇ ದೇವೇ ತೀರ್ಥಾನಿ ಸಕಲಾನ್ಯಪಿ ॥ ೫ ॥

---

### ಕನ್ನಡದ ಅನುವಾದ

#### ವೆಂಕಟೇಶ್ವರವೈಭವವರ್ಣನ

೧. ಸೂತನು ಹೇಳುತ್ತಾನೆ:—ಎಲೈ ಮುನಿಗಳಿರಾ! ಈಗ ವೆಂಕಟೇಶ್ವರನ ವೈಭವವನ್ನು ವರ್ಣಿಸುವೆನು. ಅದನ್ನು ಕೇಳುವ ಮಾತ್ರದಿಂದಲೇ ಸಮಸ್ತ ಪಾಪಗಳಿಂದಲೂ ಮನುಷ್ಯನು ಮುಕ್ತನಾಗುವುದರಲ್ಲಿ ಸಂಶಯವಿಲ್ಲ.

೨. ವೇಂಕಟೇಶ್ವರನೆಂಬ ದೇವನನ್ನು ಯಾವ ಮನುಷ್ಯನು ಒಮ್ಮೆ ನೋಡುವನೊ, ಅವನು ಸಂಸಾರದಿಂದ ಬಿಡುಗಡೆಯನ್ನು ಹೊಂದಿ ವಿಷ್ಣು ಸಾಯುಜ್ಯವನ್ನನುಭವಿಸುವನು.

೩. ಕೃತಯುಗದಲ್ಲಿ ಹತ್ತು ವರ್ಷಗಳಲ್ಲಿ ಸಂಪಾದಿಸಬಹುದಾದ ಪುಣ್ಯವು ಮನುಷ್ಯರಿಂದ ತ್ರೇತಾಯುಗದಲ್ಲಿ ಒಂದು ವರ್ಷದಲ್ಲಿಯೇ ಸಾಧಿಸಲ್ಪಡುವುದು.

೪–೮. ಅದೇ ಪುಣ್ಯವು ದ್ವಾಪರಯುಗದಲ್ಲಿ ಐದು ತಿಂಗಳುಗಳಿಂದಲೂ, ಕಲಿಯುಗದಲ್ಲಿ ಒಂದೇ ದಿವಸದಿಂದಲೂ ಲಭಿಸುವುದು. ಆ ಫಲದ ಕೋಟಿ ಯಷ್ಟು ಪುಣ್ಯವು ಶ್ರೀನಿವಾಸನನ್ನು ದರ್ಶನಮಾಡುವ ಮಾನವರಿಗೆ ಪ್ರತಿ ನಿಮಿಷ ದಲ್ಲಿಯೂ ನಿಸ್ಸಂದೇಹವಾಗಿ ಲಭಿಸುವುದು. ದೈವತವಾದ ವೇಂಕಟೇಶ್ವರ ನಲ್ಲಿಯೇ ಸಕಲ ತೀರ್ಥಾಭಿಮಾನಿದೇವತೆಗಳೂ, ಸರ್ವದೈವಗಳೂ, ಮುನಿಗಳೂ, ಪಿತೃಗಳೂ ಕಾಣುವರು. ಪ್ರತಿನಿತ್ಯದಲ್ಲಿಯೂ ಒಮ್ಮೆಯಾಗಲಿ, ಎರಡುಸಲ

ವಿದ್ಯಂತೀ ಸರ್ವದೇವಾಶ್ಚ ಮುನಯಃ ಪಿತರಸ್ತದಾ ।
ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ಸರ್ವದೈವ ವಾ ॥ ೬ ॥
ಯೇ ಸ್ಮರಂತಿ ಮಹಾದೇವಂ ಶ್ರೀನಿವಾಸಂ ವಿಮುಕ್ತಿದಂ ।
ಕೀರ್ತಯಂತ್ಯಥವಾ ವಿಪ್ರಾಸ್ತೇ ಮುಕ್ತಾಃ ಪಾಪಪಂಜರಾತ್ ॥ ೭ ॥
ನಾರಾಯಣಂ ಪರಂ ದೇವಂ ವೇಂಕಟೇಶಂ ಪ್ರಯಾಂತಿ ವೈ ।
ಪೂಜಿತಂ ಶಂಖರಾಜೇನ ಸಚ್ಚಿದಾನಂದವಿಗ್ರಹಂ ॥ ೮ ॥
ತಸ್ಯ ಸ್ಮರಣಮಾತ್ರೇಣ ಯಮಪೀಡಾಪಿ ನೋ ಭವೇತ್ ।
ಶ್ರೀನಿವಾಸಂ ಮಹಾದೇವಂ ಯೇಽರ್ಚಯಂತಿ ಸಕೃನ್ನರಾಃ ॥ ೯ ॥
ಕಿಂ ದಾನೈಃ ಕಿಂ ವ್ರತೈಸ್ತೇಷಾಂ ಕಿಂ ತಪೋಭಿಃ ಕಿಮಧ್ವರೈಃ ।
ವೇಂಕಟೇಶಂ ಪರಂ ದೇವಂ ಯೋ ನ ಚಿಂತಯತಿ ಕ್ಷಣಂ ॥ ೧೦ ॥
ಅಜ್ಞಾನೀ ಸ ಚ ಪಾಪೀ ಸ್ಯಾತ್ಸ ಮೂಕೋ ಬಧಿರಸ್ತಥಾ ।
ಸ ಜಡೋಽಂಧಶ್ಚ ವಿಜ್ಞೇಯಶ್ಛಿದ್ರಂ ತಸ್ಯ ಸದಾ ಭವೇತ್ ॥ ೧೧ ॥
ಶ್ರೀನಿವಾಸೇ ಮಹಾದೇವೇ ಸಕೃದ್ದೃಷ್ಟೇ ಮುನೀಶ್ವರಾಃ ।
ಕಿಂ ಕಾಶ್ಯಾ ಗಯಯಾ ಚೈವ ಪ್ರಯಾಗೇನಾಪಿ ಕಿಂ ಫಲಂ ॥ ೧೨ ॥

---

ವಾಗಲಿ, ತ್ರಿಕಾಲಗಳಲ್ಲಾಗಲಿ, ನಿರಂತರವಾಗಿಯಾಗಲಿ ಯಾರು ದೇವ ದೇವೋತ್ತಮನೂ, ಮುಕ್ತಿಪ್ರದಾಯಕನೂ ಆದ ಶ್ರೀನಿವಾಸನನ್ನು ಸ್ಮರಿಸುವರೊ, ಅಥವಾ ಸ್ತುತಿಸುವರೊ ಆ ಬ್ರಾಹ್ಮಣರು ಪಾಪಬಂಧನಗಳಿಂದ ಮುಕ್ತರಾಗು ವರು. ಮಹಾವಿಷ್ಣುವೂ, ಪರಾತ್ಪರದೈವವೂ, ಶಂಖರಾಜನಿಂದ ಪೂಜಿತನೂ, ಸಚ್ಚಿದಾನಂದ ಸ್ವರೂಪನೂ ಆದ ಶ್ರೀ ವೇಂಕಟೇಶ್ವರನನ್ನೇ ಅವರು ಹೊಂದು ವರು.

೯–೧೧. ಆತನನ್ನು ಸ್ಮರಿಸುವ ಮಾತ್ರದಿಂದಲೇ ಯಮನ ಬಾಧೆಯೂ ಕೂಡ ಉಂಟಾಗಲಾರದು. ಮಹಾದೇವನಾದ ಶ್ರೀನಿವಾಸನನ್ನು ಒಮ್ಮೆ ಯಾದರೂ ಯಾವ ಮನುಷ್ಯರು ಪೂಜಿಸುವರೊ, ಅವರಿಗೆ ದಾನಗಳಿಂದಾಗಲಿ, ವ್ರತನಿಯಮಗಳಿಂದಾಗಲಿ, ತಪಸ್ಸುಗಳಿಂದಾಗಲಿ, ಯಜ್ಞಯಾಗಾದಿಗಳಿಂದಾಗಲಿ ಆಗಬೇಕಾದುದೇನು? ಪರಾತ್ಪರನಾದ ವೇಂಕಟೇಶ್ವರದೈವವನ್ನು ಕ್ಷಣ ಮಾತ್ರವೂ ಯಾವನು ಚಿಂತಿಸುವುದಿಲ್ಲವೊ ಅವನೇ ಜ್ಞಾನಹೀನನು; ಪಾಪಿಯು; ಮೂಕನು ; ಬಧಿರನು ; ಜಡ ಮತ್ತು ಅಂಧನೆಂದೂ ತಿಳಿಯಬೇಕು. ಅವನಿಗೆ ಸರ್ವಕಾಲಗಳಲ್ಲಿಯೂ ಆಪತ್ತುಗಳು ಸಂಭವಿಸುತ್ತಿರುವುವು.

೧೨. ಎಲೈ ಮುನೀಶ್ವರರೆ! ಮಹಾದೇವನಾದ ಶ್ರೀನಿವಾಸನನ್ನು ಒಮ್ಮೆ ನೋಡಿದವನಿಗೆ ಕಾಶಿಯಿಂದಾಗಲಿ, ಗಯೆಯಿಂದಾಗಲಿ, ಪ್ರಯಾಗಕ್ಷೇತ್ರ ದಿಂದಾಗಲಿ ಆಗಬೇಕಾದ ಫಲವೇನೂ ಇರುವುದಿಲ್ಲ?

ದುರ್ಲಭಂ ಪ್ರಾಪ್ಯ ಮಾನುಷ್ಯಂ ಮಾನವಾ ಇಹ ಭೂತಲೇ ।
ವೇಂಕಟೇಶಂ ಪರಂ ದೇವಂ ಯೇ ಪಶ್ಯಂತ್ಯರ್ಚಯಂತಿ ವಾ ॥ ೧೩ ॥
ಜನ್ಮ ತೇಷಾಂ ಹಿ ಸಫಲಂ ತೇ ಕೃತಾರ್ಥಾಶ್ಚ ನೇತರೇ ।
ವೆಂಕಟೇಶೇ ಪರೇ ದೇವೇ ದೃಷ್ಟೇ ವಾ ಪೂಜಿತೇಽಪಿ ವಾ ॥ ೧೪ ॥
ಶಂಭುನಾ ಬ್ರಹ್ಮಣಾ ಕಿಂ ವಾ ಶಕ್ರೇಣಾಪ್ಯಖಿಲಾಮರೈಃ ।
ವೆಂಕಟೇಶೇ ಮಹಾದೇವೇ ಭಕ್ತಿಯುಕ್ತಾಶ್ಚ ಯೇ ನರಾಃ ॥ ೧೫ ॥
ತೇಷಾಂ ಪ್ರಣಾಮಸ್ಮರಣಪೂಜಾಯುಕ್ತಾಸ್ತು ಯೇ ನರಾಃ ।
ನ ತೇ ಪಶ್ಯಂತಿ ದುಃಖಾನಿ ನೈವ ಯಾಂತಿ ಯಮಾಲಯಂ ॥ ೧೬ ॥
ಬ್ರಹ್ಮಹತ್ಯಾಸಹಸ್ರಾಣಿ ಸುರಾಪಾನಾಯುತಾನಿ ಚ ।
ದೃಷ್ಟೇ ನಾರಾಯಣೇ ದೇವೇ ವಿಲಯಂ ಯಾಂತಿ ಕೃತ್ಸ್ನಶಃ ॥ ೧೭ ॥
ಯೇ ವಾಂಛಂತಿ ಸದಾ ಭೋಗಂ ರಾಜ್ಯಂ ಚ ತ್ರಿದಶಾಲಯೇ ।
ವೇಂಕಟಾದ್ರಿನಿವಾಸಂ ತೇ ಪ್ರಣಮಂತು ಸಕೃನ್ಮುದಾ ॥ ೧೮ ॥
ಯಾನಿ ಕಾನಿ ಚ ಪಾಪಾನಿ ಜನ್ಮಕೋಟಿಕೃತಾನಿ ಚ ।
ತಾನಿ ಸರ್ವಾಣಿ ನಶ್ಯಂತಿ ವೇಂಕಟೇಶ್ವರದರ್ಶನಾತ್ ॥ ೧೯ ॥

---

೧೩–೧೬. ಭೂಲೋಕದಲ್ಲಿ ಅತ್ಯಂತ ದುರ್ಲಭವಾದ ಮನುಷ್ಯ ಜನ್ಮವನ್ನು ಪಡೆದು ಪರದೇವತೆಯಾದ ವೇಂಕಟೇಶನನ್ನು ಯಾರು ನೋಡುವರೊ, ಯಾರು ಪೂಜಿಸುವರೊ, ಅವರ ಜನ್ಮವೇ ಸಫಲವು. ಇತರರು ಕೃತಾರ್ಥರಾಗಲಾರರು. ಪರಾತ್ಪರ ದೈವವಾದ ವೇಂಕಟೇಶ್ವರನನ್ನು ನೋಡಿದರಾಗಲಿ, ಅರ್ಚಿಸಿದರಾಗಲಿ, ರುದ್ರ ಬ್ರಹ್ಮೇಂದ್ರರಿಂದಲೂ, ಸಕಲ ದೇವತೆಗಳಿಂದಲೂ ಹೊಂದಬೇಕಾದು ದೇನೂ ಇರುವುದಿಲ್ಲವು. ಮಹಾಮಹಿಮನಾದ ವೇಂಕಟೇಶ್ವರನಲ್ಲಿ ಯಾವ ಮನುಷ್ಯರು ಭಕ್ತಿಯುಕ್ತರಾಗಿರುವರೊ, ಅಂತಹ ಭಗವದ್ಭಕ್ತರಿಗೆ ನಮಸ್ಕರಿಸಿ ಸ್ಮರಿಸಿ ಪೂಜೆಯನ್ನು ಮಾಡುವ ಭಾಗವತರು ದುಃಖಗಳನ್ನೆಂದಿಗೂ ಕಾಣುವು ದಿಲ್ಲವು. ಅಲ್ಲದೆ ಯಮಲೋಕದ ದರ್ಶನವನ್ನೂ ಮಾಡುವುದಿಲ್ಲವು.

೧೭. ಒಂದು ಸಾವಿರ ಬ್ರಹ್ಮಹತ್ಯೆಗಳೂ, ಹತ್ತು ಸಾವಿರ ಸುರಾಪಾನಗಳೂ ದೇವ ದೇವನಾದ ನಾರಾಯಣನನ್ನು ನೋಡಿದ ಮಾತ್ರದಿಂದಲೇ ಮೂಲ ಸಹಿತ ವಾಗಿ ನಷ್ಟವಾಗುವುವು.

೧೮. ಯಾವ ಮಾನವರು ಸ್ವರ್ಗಾದಿ ಲೋಕಗಳಲ್ಲಿ ನಿತ್ಯವೂ ಭೋಗ ಗಳನ್ನೂ ರಾಜ್ಯಸೌಖ್ಯವನ್ನೂ ಅಪೇಕ್ಷಿಸುವರೊ, ಅವರು ಒಮ್ಮೆಯಾದರೂ ಸಂತೋಷದಿಂದ ವೇಂಕಟಾಚಲವನ್ನು ಕುರಿತು ಪ್ರಣಾಮವನ್ನು ಮಾಡಲಿ.

೧೯. ಅನೇಕ ಕೋಟಿ ಜನ್ಮಗಳಲ್ಲಿ ಮಾಡಿದ ಬಹುವಿಧಗಳಾದ ಪಾಪ ಗಳೆಲ್ಲವೂ ವೇಂಕಟೇಶ್ವರನ ದರ್ಶನದಿಂದಲೇ ನಾಶವನ್ನೈದುವುವು.

ಸಂಪರ್ಕಾತ್ಕೌತುಕಾಲ್ಲೋಭಾದ್ಭಯಾದ್ವಾಪಿ ಚ ಸಂಸ್ಮರನ್ ।
ವೇಂಕಟೇಶಂ ಮಹಾದೇವಂ ನೇಹಾಮುತ್ರ ಚ ದುಃಖಭಾಕ್ ॥ ೨೦ ॥
ವೇಂಕಟಾಚಲದೇವೇಶಂ ಕೀರ್ತಯನ್ನರ್ಚಯನ್ನಪಿ ।
ಅವಶ್ಯಂ ವಿಷ್ಣುಸಾರೂಪ್ಯಂ ಲಭತೇ ನಾತ್ರ ಸಂಶಯಃ ॥ ೨೧ ॥
ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇ ಕ್ಷಣಾತ್ ।
ತಥಾ ಪಾಪಾನಿ ಸರ್ವಾಣಿ ವೇಂಕಟೇಶ್ವರದರ್ಶನಾತ್ ॥ ೨೨ ॥
ವೇಂಕಟೇಶ್ವರದೇವಸ್ಯ ಭಕ್ತಿರಷ್ಟವಿಧಾ ಸ್ಮೃತಾ ।
ತದ್ಭಕ್ತಜನವಾತ್ಸಲ್ಯಂ ತತ್ಪೂಜಾಪರಿತೋಷಣಂ ॥ ೨೩ ॥
ಸ್ವಯಂ ತತ್ಪೂಜನಂ ಭಕ್ತ್ಯಾ ತದರ್ಥೇ ದೇಹಚೇಷ್ಟಿತಂ ।
ತನ್ಮಾಹಾತ್ಮ್ಯಕಥಾವಾಂಛಾಶ್ರವಣೇಷ್ವಾದರಸ್ತಥಾ ॥ ೨೪ ॥
ಸ್ವರನೇತ್ರಶರೀರೇಷು ವಿಕಾರಸ್ಫುರಣಂ ತಥಾ ।
ಶ್ರೀನಿವಾಸಸ್ಯ ದೇವಸ್ಯ ಸ್ಮರಣಂ ಸಂತತಂ ತಥಾ ॥ ೨೫ ॥
ವೇಂಕಟಾದ್ರಿನಿವಾಸಂ ತಮಾಶ್ರಿತ್ಯೈವೋಪಜೀವನಂ ।
ಏವಮಷ್ಟವಿಧಾ ಭಕ್ತಿರ್ಯಸ್ಮಿನ್ಮ್ಲೇಚ್ಛೇಽಪಿ ವರ್ತತೇ ॥ ೨೬ ॥

---

೨೦. ಸಹವಾಸ ಬಲದಿಂದಾಗಲಿ, ಕೌತುಕದಿಂದಾಗಲಿ, ಲೋಭದಿಂದಾಗಲಿ, ಭಯದಿಂದಾಗಲಿ, ಮಹಾದೇವನಾದ ವೇಂಕಟೇಶ್ವರನನ್ನು ಸ್ಮರಿಸಿದ ಮನುಷ್ಯನು ಇಹದಲ್ಲಿಯೂ ಪರದಲ್ಲಿಯೂ ದುಃಖವನ್ನನುಭವಿಸುವುದಿಲ್ಲವು.

೨೧. ವೇಂಕಟಾಚಲದಲ್ಲಿ ನೆಲಸಿರುವ ಶ್ರೀನಿವಾಸನನ್ನು ಸ್ತುತಿಸುವುದರಿಂದಲೂ, ಪೂಜಿಸುವುದರಿಂದಲೂ ಮನುಷ್ಯನು ಖಂಡಿತವಾಗಿಯೂ ವಿಷ್ಣು ಸಾರೂಪ್ಯವನ್ನು ಪಡೆಯುವುದರಲ್ಲಿ ಸಂಶಯವಿಲ್ಲವು.

೨೨. ಉರಿಯುತ್ತಿರುವ ಬೆಂಕಿಯು ಕಟ್ಟಿಗೆಗಳನ್ನು ಕ್ಷಣಮಾತ್ರದಲ್ಲಿ ಹೇಗೆ ಬೂದಿಯನ್ನಾಗಿ ಮಾಡುವುದೊ, ಹಾಗೆಯೇ ವೇಂಕಟೇಶ್ವರನ ದರ್ಶನವೂ ಸಕಲ ಪಾಪಗಳನ್ನೂ ನಿರ್ಮೂಲಗೊಳಿಸುವುದು.

೨೩–೨೯. ವೇಂಕಟೇಶ್ವರನಲ್ಲಿ ಭಕ್ತಿಯು ಎಂಟು ವಿಧಗಳುಳ್ಳದ್ದೆಂದು ಹೇಳಲ್ಪಟ್ಟಿರುವುದು. ಆತನ ಭಕ್ತಜನರಲ್ಲಿ ವಾತ್ಸಲ್ಯ, ಆತನ ಪೂಜೆಯನ್ನು ಸಂತೋಷದಿಂದ ನೋಡುವುದು, ತಾನೇ ಭಕ್ತಿಯುಕ್ತನಾಗಿ ಪೂಜೆಯನ್ನು ಮಾಡುವುದು, ಅದಕ್ಕೆ ಸಲಕರಣೆಗಳನ್ನೊದಗಿಸಲು ಶರೀರವನ್ನು ಕ್ಲೇಶಗೊಳಿಸುವುದು, ಪರಮಾತ್ಮನ ಮಾಹಾತ್ಮ್ಯೆಯನ್ನು ಪ್ರತಿಪಾದಿಸುವ ಕಥೆಗಳನ್ನು ಆದರದಿಂದ ಕೇಳುವುದು, ಭಕ್ತಿಯಿಂದ ಧ್ವನಿನೇತ್ರ ಗಾತ್ರಗಳಲ್ಲಿ ಉಂಟಾಗುವ ವಿಕಾರಗಳು, ದೇವನಾದ ಶ್ರೀನಿವಾಸನನ್ನು ನಿರಂತರದಲ್ಲಿಯೂ ಸ್ಮರಿಸುವುದು, ವೇಂಕಟಾಚಲದಲ್ಲಿ ವಾಸಮಾಡುತ್ತ ಅದರಲ್ಲಿ ಸಿಕ್ಕುವ ವಸ್ತುಗಳಿಂದಲೇ

ಸ ಏವ ಮುಕ್ತಿಮಾಪ್ನೋತಿ ಶೌನಕಾದ್ಯಾ ಮಹೌಜಸಃ ।
ಭಕ್ತ್ಯಾ ತ್ವನನ್ಯಯಾ ಮುಕ್ತಿರ್ಬ್ರಹ್ಮಜ್ಞಾನೇನ ನಿಶ್ಚಿತಾ ॥ ೨೭ ॥
ವೇದಾಂತಶಾಸ್ತ್ರಶ್ರವಣಾದ್ಯತೀನಾಮೂರ್ಧ್ವರೇತಸಾಂ ।
ಸಾ ಚ ಮುಕ್ತಿರ್ವಿನಾ ಜ್ಞಾನಂ ವೇದಾಂತಶ್ರವಣೋದ್ಭವಂ ।
ಯತ್ಯಾಶ್ರಮಂ ವಿನಾ ವಿಪ್ರಾ ವಿರಕ್ತಿಂ ಚ ವಿನಾ ತಥಾ ॥ ೨೮ ॥
ಸರ್ವೇಷಾಂ ಚೈವ ವರ್ಣಾನಾಮಖಿಲಾಶ್ರಮಿಣಾಮಪಿ ।
ವೇಂಕಟೇಶ್ವರದೇವಸ್ಯ ದರ್ಶನಾದೇವ ಕೇವಲಂ ।
ಅಪುನರ್ಭವದಾ ಮುಕ್ತಿರ್ಭವಿಷ್ಯತ್ಯವಿಲಂಬಿತಂ ॥ ೨೯ ॥
ಕ್ರಿಮಿಕೀಟಾಶ್ಚ ದೇವಾಶ್ಚ ಮುನಯಶ್ಚ ತಪೋಧನಾಃ ।
ತುಲ್ಯಾ ವೇಂಕಟಶೈಲೇಂದ್ರೇ ಶ್ರೀನಿವಾಸಪ್ರಸಾದತಃ ॥ ೩೦ ॥
ಪಾಪಂ ಕೃತಂ ಮಯಾನೇಕಮಿತಿ ಮಾ ಕ್ರಿಯತಾಂ ಭಯಂ ।
ಮಾ ಗರ್ವಃ ಕ್ರಿಯತಾಂ ಪುಣ್ಯಂ ಮಯಾಕಾರೀತಿ ವಾ ಜನೈಃ ॥ ೩೧ ॥
ವೇಂಕಟೇಶೇ ಮಹಾದೇವೇ ಶ್ರೀನಿವಾಸೇ ವಿಲೋಕಿತೇ ।
ನ ನ್ಯೂನಾ ನಾಧಿಕಾಶ್ಚ ಸ್ಯುಃ ಕಿಂ ತು ಸರ್ವೇ ಮಹಾಜನಾಃ ॥ ೩೨ ॥

---

ಜೀವನವನ್ನು ನಡೆಸುವುದು — ಇದೇ ಅಷ್ಟವಿಧ ಭಕ್ತಿಯು. ಎಲೈ ಶೌನಕಾದಿ ಮಹರ್ಷಿಗಳಿರಾ! ಈ ವಿಧವಾದ ಭಕ್ತಿಯು ಯಾವನಲ್ಲಿರುವುದೊ, ಅವನು ಮ್ಲೇಚ್ಛನಾದರೂ ಮೋಕ್ಷವನ್ನು ಪಡೆಯುತ್ತಾನೆ. ಅನನ್ಯವಾದ ಭಕ್ತಿಯಿಂದಲೂ, ಬ್ರಹ್ಮಜ್ಞಾನದಿಂದಲೂ, ವೇದಾಂತ ಶಾಸ್ತ್ರಗಳ ಶ್ರವಣದಿಂದಲೂ ಊರ್ಧ್ವರೇತಸ್ಕರಾದ ಯತಿಗಳಿಗೆ ಮುಕ್ತಿಯುಂಟಾಗುವುದು. ವೇದಾಂತ ಶ್ರವಣಜನ್ಯವಾದ ಜ್ಞಾನವಿಲ್ಲದೆ, ಸನ್ನ್ಯಾಸಾಶ್ರಮದ ಸ್ವೀಕಾರವಿಲ್ಲದೆ, ವೈರಾಗ್ಯ ವಿಲ್ಲದೆ, ಸಕಲ ವರ್ಣಗಳವರಿಗೂ ಸರ್ವಾಶ್ರಮಿಗಳಿಗೂ ವೇಂಕಟೇಶ್ವರ ದೇವನ ಕೇವಲ ದರ್ಶನದಿಂದಲೇ ಪುನರಾವೃತ್ತಿರಹಿತವಾದ ಮೋಕ್ಷವು ಕ್ಷಿಪ್ರದಲ್ಲಿಯೇ ಪ್ರಾಪ್ತವಾಗುವುದು.

೩೦. ಕ್ರಿಮಿಕೀಟಗಳೂ, ದೇವತೆಗಳೂ, ಮಹರ್ಷಿಗಳೂ, ತಪಸ್ಸಂಪನ್ನರೂ ವೇಂಕಟಾಚಲದಲ್ಲಿ ಶ್ರೀನಿವಾಸನ ಪ್ರಸಾದಬಲದಿಂದ ಸಮಾನರಾಗಿರುವರು.

೩೧. "ನಾನು ಬಹುವಿಧವಾದ ಪಾಪಗಳನ್ನು ಮಾಡಿದೆನು" ಎಂದು ಯಾರೂ ಭಯಪಡಲಾಗದು. "ನಾನು ಪುಣ್ಯವನ್ನು ಮಾಡಿರುವೆನು" ಎಂದು ಯಾವ ಮನುಷ್ಯನೂ ಗರ್ವವನ್ನು ಹೊಂದಕೂಡದು.

೩೨. ಮಹಾದೇವನೂ, ವೇಂಕಟಾಚಲವಾಸಿಯೂ ಆದ ಶ್ರೀನಿವಾಸನನ್ನು ಒಮ್ಮೆಯಾದರೂ ನೋಡಿದವರಲ್ಲಿ ಹೆಚ್ಚಿನವರು ಕಡಿಮೆಯವರೆಂಬ ಭೇದ ವಿಲ್ಲ. ಅವರೆಲ್ಲರೂ ಮಹಾಪುರುಷರೇ ಸರಿ.

ವೇಂಕಟಾಖ್ಯೇ ಮಹಾಪುಣ್ಯೇ ಸರ್ವಪಾತಕನಾಶನೇ ।
ಶ್ರೀನಿವಾಸಂ ಪರಂ ದೇವಂ ಯಃ ಪಶ್ಯತಿ ಸಭಕ್ತಿಕಂ ॥ ೩೩ ॥
ನ ತೇನ ತುಲ್ಯತಾಮೇತಿ ಚತುರ್ವೇದ್ಯಪಿ ಭೂತಲೇ ॥ ೩೪ ॥
ವೇಂಕಟೇಶ್ವರದೇವೇಶಂ ಯಃ ಪೂಜಯತಿ ಭಕ್ತಿತಃ ।
ಸ ಕೋಟಿಕುಲಸಂಯುಕ್ತಃ ಪ್ರಯಾತಿ ಹರಿಮಂದಿರಂ ॥ ೩೫ ॥
ಶ್ರೀನಿವಾಸಾಚ್ಚ ನ ಸಮಂ ನಾಧಿಕಂ ಪುಣ್ಯಮಸ್ತಿ ವೈ ।
ವೇಂಕಟಾದ್ರಿನಿವಾಸಂ ತಂ ದ್ವೇಷ್ಟಿ ಯೋ ಮೋಹಮಾಸ್ಥಿತಃ ॥ ೩೬ ॥
ಬ್ರಹ್ಮಹತ್ಯಾಯುತಂ ತೇನ ಕೃತಂ ನರಕಕಾರಣಂ ।
ತತ್ಸಂಭಾಷಣಮಾತ್ರೇಣ ಮಾನವೋ ನರಕಂ ವ್ರಜೇತ್ ॥ ೩೭ ॥
ಶ್ರೀನಿವಾಸಪರಾ ವೇದಾಃ ಶ್ರೀನಿವಾಸಪರಾ ಮಖಾಃ ।
ಶ್ರೀನಿವಾಸಪರಾಃ ಸರ್ವೇ ತಸ್ಮಾದನ್ಯನ್ನ ವಿದ್ಯತೇ ॥ ೩೮ ॥
ಅನ್ಯತ್ಸರ್ವಂ ಪರಿತ್ಯಜ್ಯ ಶ್ರೀನಿವಾಸಂ ಸಮಾಶ್ರಯೇತ್ ।
ಸರ್ವಯಜ್ಞತಪೋದಾನತೀರ್ಥಸ್ನಾನೇ ತು ಯತ್ಫಲಂ ।
ತತ್ಫಲಂ ಕೋಟಿಗುಣಿತಂ ಶ್ರೀನಿವಾಸಸ್ಯ ಸೇವಯಾ ॥ ೩೯ ॥

---

೩೩–೩೫. ಮಹಾಪುಣ್ಯಪ್ರದವೂ, ಸಕಲ ಕಲ್ಮಷನಾಶಕವೂ ಆದ ವೇಂಕಟಶೈಲದಲ್ಲಿ ಯಾವನು ಭಕ್ತಿಭರಿತನಾಗಿ ಶ್ರೀನಿವಾಸನಾದ ಪರದೈವವನ್ನು ನೋಡುವನೊ, ಆತನಿಗೆ ನಾಲ್ಕೂವೇದಗಳನ್ನು ಸಾಂಗವಾಗಿ ಅಧ್ಯಯನ ಮಾಡಿದವನೂ ಸಮಾನನಾಗಲಾರನು. ದೇವೋತ್ತಮನಾದ ವೇಂಕಟೇಶ್ವರನನ್ನು ಯಾವನು ಭಕ್ತಿಯಿಂದ ಪೂಜಿಸುವನೊ, ಅವನು ಕುಲಕೋಟಿಗಳೊಡನೆ ವಿಷ್ಣುಮಂದಿರವಾದ ವೈಕುಂಠವನ್ನು ಸೇರುವನು.

೩೬–೩೭. ಶ್ರೀನಿವಾಸನ ಕೃಪೆಗೆ ಸಮಾನವೂ ಅಧಿಕವೂ ಆದ ಪುಣ್ಯವು ಇಲ್ಲವೇ ಇಲ್ಲ. ಯಾವ ಮನುಷ್ಯನು ಮೋಹಕ್ಕೊಳಗಾಗಿ ವೇಂಕಟಾಚಲನಿವಾಸಿಯಾದ ಸ್ವಾಮಿಯನ್ನು ದ್ವೇಷಿಸುವನೊ ಆತನು ಹತ್ತುಸಾವಿರ ಬ್ರಹ್ಮಹತ್ಯೆಗಳನ್ನು ಮಾಡಿದವನಂತೆ ಘೋರನರಕಭಾಜನನಾಗುವನು. ಅಂತಹನೊಡನೆ ಮಾತನಾಡುವುದರಿಂದಲೇ ಮನುಷ್ಯನು ನರಕವನ್ನು ಸೇರುವನು.

೩೮–೩೯. ಸಕಲ ವೇದಗಳೂ ಶ್ರೀನಿವಾಸನನ್ನೇ ಸ್ತುತಿಸುತ್ತವೆ. ಸಕಲ ಯಜ್ಞಗಳೂ ಶ್ರೀನಿವಾಸನ ಪ್ರೀತಿಗಾಗಿಯೇ ಮಾಡಲ್ಪಡುತ್ತವೆ. ಸಕಲ ಸತ್ಕರ್ಮಗಳೂ ಶ್ರೀನಿವಾಸನಿಗಾಗಿಯೇ ಅರ್ಪಿಸಲ್ಪಡುತ್ತವೆ. ಆತನಿಗಿಂತ ಮಿಗಿಲಾದ ವಸ್ತುವು ಮತ್ತೊಂದಿಲ್ಲ. ಇತರ ಸಕಲ ಕರ್ಮಗಳನ್ನೂ ಬಿಟ್ಟು ಶ್ರೀನಿವಾಸನನ್ನೇ ಆಶ್ರಯಿಸಬೇಕು. ಸಕಲ ಯಜ್ಞಗಳು, ತಪಸ್ಸುಗಳು, ದಾನಗಳು, ತೀರ್ಥಸ್ನಾನಗಳು ಮುಂತಾದುವುಗಳಿಂದ ಯಾವ ಫಲವು ಲಭಿಸುವುದೊ, ಅದಕ್ಕೆ ಕೋಟಿಗುಣಿತವಾದ ಪುಣ್ಯವು ಶ್ರೀನಿವಾಸನ ಸೇವೆಯಿಂದ ಲಭಿಸುವುದು.

ವೇಂಕಟಾದ್ರಿನಿವಾಸಂ ತಂ ಚಿಂತಯನ್ಘಟಿಕಾದ್ವಯಂ ।
ಕುಲೈಕವಿಂಶತಿಂ ಧೃತ್ವಾ ವಿಷ್ಣುಲೋಕೇ ಮಹೀಯತೇ ॥ ೪೦ ॥
ಸ್ವಾಮಿಪುಷ್ಕರಿಣೀತೀರ್ಥೇ ಸ್ನಾನಂ ದೇವಸ್ಯ ದರ್ಶನಂ ।
ಯದಿ ಲಭ್ಯೇತ ವೈ ಪುಂಸಾಂ ಕಿಂ ಗಂಗಾಜಲಸೇವಯಾ ॥ ೪೧ ॥
ವೇಂಕಟೇಶಂ ಪರಂ ದೇವಂ ಯಃ ಕದಾಪಿ ನ ಪಶ್ಯತಿ ।
ಸಂಕರಃ ಸ ತು ವಿಜ್ಞೇಯೋ ನ ಪಿತುರ್ಬೀಜಸಂಭವಃ ॥ ೪೨ ॥
ತಸ್ಮಾತ್ಸರ್ವಪ್ರಯತ್ನೇನ ವೇಂಕಟೇಶೋ ದಯಾನಿಧಿಃ ।
ದ್ರಷ್ಟವ್ಯೋಽತಿಪ್ರಯತ್ನೇನ ಪರಲೋಕೇಚ್ಛಯಾ ದ್ವಿಜಾಃ ॥ ೪೩ ॥
ಏವಂ ವಃ ಕಥಿತಂ ವಿಪ್ರಾ ವೇಂಕಟೇಶಸ್ಯ ವೈಭವಂ ॥ ೪೪ ॥
ಯಸ್ತ್ವೇತಚ್ಛೃಣುಯಾನ್ನಿತ್ಯಂ ಪಠತೇ ಚ ಸಭಕ್ತಿಕಂ ।
ಸ ವೈ ವೇಂಕಟನಾಥಸ್ಯ ಸೇವಾಫಲಮವಾಪ್ನುಯಾತ್ ॥ ೪೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹ ಸಂವಾದೇ ''ವೇಂಕಟೇಶ್ವರವೈಭವಾನುವರ್ಣನಂ''ನಾಮ ಅಷ್ಟಾದಶೋಽಧ್ಯಾಯಃ

---

೪೦–೪೨. ವೇಂಕಟಾಚಲ ನಿವಾಸಿಯನ್ನು ಎರಡುಘಳಿಗೆಯಾದರೂ ಚಿಂತಿಸಿದರೆ ಮನುಷ್ಯನು ಇಪ್ಪತ್ತೊಂದು ಕುಲಗಳನ್ನುದ್ಧರಿಸಿ ವಿಷ್ಣುಲೋಕದಲ್ಲಿ ಮರ್ಯಾದೆಯನ್ನು ಹೊಂದುವನು. ಸ್ವಾಮಿಪುಷ್ಕರಿಣೀ ತೀರ್ಥದಲ್ಲಿ ಸ್ನಾನವೂ ಶ್ರೀನಿವಾಸದೇವರ ದರ್ಶನವೂ ಜನರಿಗೆ ಲಭಿಸಿದಮೇಲೆ ಗಂಗಾದಿ ತೀರ್ಥಗಳ ಸೇವೆಯಿಂದಾಗಬೇಕಾದುದೇನು? ಪರದೈವವಾದ ವೇಂಕಟೇಶ್ವರನನ್ನು ಯಾವನು ಒಮ್ಮೆಯಾದರೂ ನೋಡುವುದಿಲ್ಲವೊ, ಅವನನ್ನು ಸಂಕರಜಾತನೆಂದೂ ತಂದೆಯ ಮಗನಲ್ಲವೆಂದೂ ತಿಳಿಯಬೇಕು.

೪೩–೪೪. ಎಲೈ ಬ್ರಾಹ್ಮಣರಿರಾ! ಆದುದರಿಂದ ಪರಲೋಕದ ಸೌಖ್ಯಗಳನ್ನಪೇಕ್ಷಿಸುವವರು ಸರ್ವಪ್ರಯತ್ನಗಳಿಂದಲೂ ದಯಾಸಮುದ್ರನಾದ ವೇಂಕಟೇಶ್ವರನ್ನು ನೋಡಲೇ ಬೇಕು. ಇಂತು ನಿಮಗೆ ವೇಂಕಟೇಶ್ವರನ ವೈಭವವನ್ನು ವರ್ಣಿಸಿರುವೆನು.

೪೫. ಯಾವನು ಈ ಅಧ್ಯಾಯವನ್ನು ಭಕ್ತಿಯಿಂದ ಕೇಳುವನೊ, ಮತ್ತು ಪಠಿಸುವನೊ, ಅವನು ನಿಜವಾಗಿಯೂ ವೇಂಕಟೇಶ್ವರನ ಸೇವೆಯನ್ನು ಮಾಡಿದ ಫಲವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ವೈಷ್ಣವಖಂಡದ ಎರಡನೆಯ ಶ್ರೀ ವೇಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹ ಸಂವಾದದಲ್ಲಿ "ಶ್ರೀ ವೇಂಕಟೇಶ್ವರವೈಭವಾನುವರ್ಣನ"ವೆಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನವಿಂಶತಿತಮೋಽಧ್ಯಾಯಃ

### ಪಾಪವಿನಾಶನತೀರ್ಥಮಹಿಮಾನುವರ್ಣನಂ

ಶ್ರೀ ಸೂತ ಉವಾಚ:—

ಅಥಾತಃ ಸಂಪ್ರವಕ್ಷ್ಯಾಮಿ ವೇಂಕಟಾಚಲವೈಭವಂ ।
ಯುಷ್ಮಾಕಂ ಸಾವಧಾನೇನ ಶೃಣುಧ್ವಂ ಸುಸಮಾಹಿತಾಃ ॥ ೧ ॥
ಲಕ್ಷಕೋಟಿಸಹಸ್ರಾಣಿ ಸರಾಂಸಿ ಸರಿತಸ್ತಥಾ ।
ಸಮುದ್ರಾಶ್ಚ ಮಹಾಪುಣ್ಯಾ ವನಾನ್ಯಪ್ಯಾಶ್ರಮಾ ಅಪಿ ॥ ೨ ॥
ಪುಣ್ಯಾನಿ ಕ್ಷೇತ್ರಜಾತಾನಿ ವೇದಾರಣ್ಯಾದಿಕಾನಿ ಚ ।
ಮುನಯಶ್ಚ ವಸಿಷ್ಠಾದ್ಯಾಃ ಸಿದ್ಧಚಾರಣಕಿನ್ನರಾಃ ॥ ೩ ॥
ಲಕ್ಷ್ಮ್ಯಾ ಸಹ ಧರಣ್ಯಾಚ ಭಗವಾನ್ಮಧುಸೂದನಃ ।
ಸಾವಿತ್ರ್ಯಾ ಚ ಸರಸ್ವತ್ಯಾ ಸಹೈವ ಚತುರಾನನಃ ॥ ೪ ॥
ಪಾರ್ವತ್ಯಾ ಸಹ ದೇವೇಶಸ್ತ್ರ್ಯಂಬಕಸ್ತ್ರಿಪುರಾಂತಕಃ ।
ಹೇರಂಬಷಣ್ಮುಖಾದ್ಯಾಶ್ಚ ದೇವಾಃ ಸೇಂದ್ರಪುರೋಗಮಾಃ ॥ ೫ ॥
ಆದಿತ್ಯಾದಿ ಗ್ರಹಾಶ್ಚೈವ ತಥಾಷ್ಟವಸವೋ ದ್ವಿಜಾಃ ।
ಪಿತರೋ ಲೋಕಪಾಲಾಶ್ಚ ತಥಾನ್ಯೇ ದೇವತಾಗಣಾಃ ॥ ೬ ॥

---

### ಕನ್ನಡದ ಅನುವಾದ

#### ಪಾಪವಿನಾಶನತೀರ್ಥಮಹಿಮಾನುವರ್ಣನ

೧. ಸೂತನು ಹೇಳುತ್ತಾನೆ:— ಇನ್ನು ಮುಂದೆಯೂ ನಿಮಗೆ ವೇಂಕಟಾಚಲದ ವೈಭವವನ್ನು ಹೇಳುವೆನು. ಸಾವಧಾನದಿಂದಲೂ ಸಮಾಹಿತವಾದ ಮನಸ್ಸಿನಿಂದಲೂ ನೀವೆಲ್ಲರೂ ಕೇಳಿರಿ.

೨–೭. ಲಕ್ಷ, ಕೋಟಿ, ಸಾವಿರಾರು ಸರೋವರ ತೀರ್ಥಗಳೂ, ನದಿಗಳೂ, ಸಮುದ್ರಗಳೂ, ಮಹಾಪುಣ್ಯ ಪ್ರದೇಶಗಳಾದ ಅರಣ್ಯಗಳೂ, ಆಶ್ರಮಗಳೂ, ವೇದಾರಣ್ಯವೇ ಮೊದಲಾದ ಪುಣ್ಯಕ್ಷೇತ್ರ ಗಣಗಳೂ, ವಸಿಷ್ಠ ಪ್ರಮುಖರಾದ ಮಹಾಮುನಿಗಳೂ, ಸಿದ್ಧರೂ, ಚಾರಣರೂ, ಕಿನ್ನರರೂ, ಶ್ರೀದೇವಿ ಭೂದೇವಿಯರೊಡನೆ ಭಗವಂತನಾದ ಶ್ರೀಮನ್ನಾರಾಯಣನೂ, ಸಾವಿತ್ರೀ ಸರಸ್ವತಿಯರೊಡನೆ ಬ್ರಹ್ಮದೇವನೂ, ಪಾರ್ವತಿಯೊಡನೆ ದೇವದೇವನೂ, ತ್ರಿಪುರಧ್ವಂಸಿಯೂ ಆದ ಪರಮೇಶ್ವರನೂ, ಗಣಪತಿ ಷಣ್ಮುಖಾದಿಗಳೂ, ಮಹೇಂದ್ರನೇ ಮೊದಲಾದ ದೇವತೆಗಳೂ, ಸೂರ್ಯಾದಿ ನವಗ್ರಹಗಳೂ, ಅಷ್ಟವಸುಗಳೂ, ಪಿತೃದೇವತೆಗಳೂ, ಲೋಕಪಾಲಕರೂ, ಇತರ ದೇವತಾಸಮೂಹಗಳೂ ಕೂಡ ಸಕಲ

ಮಹಾಪಾತಕಸಂಘಾನಾಂ ನಾಶನೇ ಲೋಕಪಾವನೇ ।
ದಿವಾನಿಶಂ ವಸಂತ್ಯಂತರ್ವೇಂಕಟಾಚಲಮೂರ್ಧನಿ ॥ ೭ ॥
ತಸ್ಯ ದರ್ಶನಮಾತ್ರೇಣ ಬುದ್ಧಿಸೌಖ್ಯಂ ನೃಣಾಂ ಭವೇತ್ ।
ತನ್ಮೂರ್ಧನಿ ಕೃತಾವಾಸಾಃ ಸಿದ್ಧಚಾರಣಯೋಷಿತಃ ॥ ೮ ॥
ಪೂಜಯಂತಿ ಸದಾಕಾಲಂ ವೇಂಕಟೇಶಂ ಕೃಪಾನಿಧಿಂ ।
ಕೋಟಿಯೋ ಬ್ರಹ್ಮಹತ್ಯಾನಾಮಗಮ್ಯಾಗಮ್ಯ ಕೋಟಯಃ ॥ ೯ ॥
ಅಂಗಲಗ್ನಾ ವಿನಶ್ಯಂತಿ ವೇಂಕಟಾಚಲಮಾರುತೈಃ ॥ ೧೦ ॥
ವೇಂಕಟಾದ್ರಿಂ ಗಿರಿಂ ತಂ ತು ಪ್ರಾರ್ಥಯೇತ್ಪುಣ್ಯವರ್ಧನಂ ।
ಸ್ವರ್ಣಾಚಲ ಮಹಾಪುಣ್ಯ ಸರ್ವದೇವ ನಿಷೇವಿತ ॥ ೧೧ ॥
ಬ್ರಹ್ಮಾದಯೋಽಪಿ ಯಂ ದೇವಾಃ ಸೇವಂತೇ ಶ್ರದ್ಧಯಾ ಸಹ ।
ತಂ ಭವಂತಮಹಂ ಪದ್ಭ್ಯಾಮಾಕ್ರಮೇಽಯಂ ನಗೋತ್ತಮ ॥ ೧೨ ॥
ಕ್ಷಮಸ್ವ ತದಘಂ ಮೇಽದ್ಯ ದಯಯಾ ಪಾಪಚೇತಸಃ ।
ತ್ವನ್ಮೂರ್ಧನಿ ಕೃತಾವಾಸಂ ಮಾಧವಂ ದರ್ಶಯಸ್ವ ಮೇ ॥ ೧೩ ॥

---

ಪಾಪಗಳನ್ನು ನಿರ್ಮೂಲಗೊಳಿಸುವುದೂ, ಲೋಕಕಲ್ಯಾಣಪ್ರದವೂ ಆದ ವೇಂಕಟಾಚಲದ ಶಿಖರದಲ್ಲಿ ಸಂತತವಾಗಿ ವಾಸಮಾಡುತ್ತಿರುವರು.

೮–೧೦. ಆ ಪರ್ವತದ ದರ್ಶನ ಮಾತ್ರದಿಂದಲೇ ಮನುಷ್ಯರಿಗೆ ಬುದ್ಧಿ ಸೌಖ್ಯವುಂಟಾಗುವುದು. ಅದರ ಮೇಲ್ಗಡೆಯಲ್ಲಿ ವಾಸಮಾಡಿಕೊಂಡಿರುವ ಸಿದ್ಧ ಚಾರಣ ಕನ್ಯೆಯರು ನಿರಂತರದಲ್ಲಿಯೂ ದಯಾಸಮುದ್ರನಾದ ವೇಂಕಟೇಶ್ವರ ನನ್ನು ಪೂಜಿಸುತ್ತಿರುವರು. ಮನುಷ್ಯನಿಗೆ ಅಂಟಿಕೊಂಡಿರುವ ಅನೇಕ ಕೋಟಿ ಬ್ರಹ್ಮಹತ್ಯೆಗಳೂ, ಕೋಟಿ ಸಂಖ್ಯೆಯ ಅಗಮ್ಯ ಸ್ತ್ರೀ ಗಮನಗಳೂ ಸಹ ವೇಂಕಟಾಚಲದಿಂದ ಬೀಸುವ ಗಾಳಿಯಿಂದಲೇ ನಾಶವನ್ನು ಹೊಂದುವುವು.

೧೧–೧೨. ಪರ್ವತಾರೋಹಣವನ್ನು ಮಾಡಲೆಳಸುವವನು ಪುಣ್ಯವರ್ಧಕ ವಾದ ಆ ಗಿರಿಯನ್ನು ಮೊದಲು ಇಂತು ಪ್ರಾರ್ಥಿಸಬೇಕು. "ಮಹಾಪುಣ್ಯ ಪ್ರದವೂ, ಸಕಲ ದೇವ ಸೇವಿತವೂ ಆದ ಎಲೈ ಸ್ವರ್ಣಾಚಲವೆ! ಬ್ರಹ್ಮಾದಿ ದೇವತೆ ಗಳೂ ಕೂಡ ನಿನ್ನನ್ನು ಭಕ್ತಿಶ್ರದ್ಧೆಗಳಿಂದ ಸೇವಿಸುತ್ತಿರುವರು. ಅಂತಹ ಪರ್ವತೋತ್ತಮವಾದ ನಿನ್ನನ್ನು ನಾನು ಕಾಲುಗಳಿಂದ ತುಳಿಯಲು ಪ್ರಯತ್ನಿ ಸಿರುವೆನು.

೧೩. ಪಾಪಮನಸ್ಕನಾದ ನನ್ನ ಈ ಅಪರಾಧವನ್ನು ದಯೆಯಿಂದ ಕ್ಷಮಿಸು. ನಿನ್ನ ಶಿಖರಪ್ರದೇಶದಲ್ಲಿ ನೆಲಸಿರುವ ಮಾಧವನ ದರ್ಶನವನ್ನು ನನಗೆ ಮಾಡಿಸು.

ಪ್ರಾರ್ಥಯಿತ್ವಾ ನರಸ್ತ್ವೇವಂ ವೇಂಕಟಾದ್ರಿಂ ನಗೋತ್ತಮಂ ।
ತತೋ ಮೃದುಪದಂ ಗಚ್ಛೇತ್ಪಾವನಂ ವೇಂಕಟಾಚಲಂ ॥ ೧೪ ॥
ವೇಂಕಟಾದ್ರೌ ಮಹಾಪುಣ್ಯೇ ಸರ್ವಪಾತಕನಾಶನೇ ।
ಸ್ವಾಮಿಪುಷ್ಕರಿಣೀತೀರ್ಥೇ ಸ್ನಾತ್ವಾ ನಿಯಮಪೂರ್ವಕಂ ॥ ೧೫ ॥
ಪಿಂಡದಾನಂ ತತಃ ಕುರ್ಯಾದಪಿ ಸರ್ಷಪಮಾತ್ರಕಂ ।
ಶಮೀದಲಸಮಾನಾನ್ವಾ ದದ್ಯಾತ್ಪಿಂಡಾನ್ಪಿತೄನ್ಪ್ರತಿ ॥ ೧೬ ॥
ಸ್ವರ್ಗಸ್ಥಾ ಮೋಕ್ಷಮಾಯಾಂತಿ ಸ್ವರ್ಗಂ ನರಕವಾಸಿನಃ ॥ ೧೭ ॥
ತತಸ್ತಸ್ಯೋಪರಿ ಮಹತ್ಸರ್ವಲೋಕೇಷು ವಿಶ್ರುತಂ ।
ಸರ್ವತೀರ್ಥೋತ್ತಮಂ ಪುಣ್ಯಂ ನಾಮ್ನಾ ಪಾಪವಿನಾಶನಂ ॥ ೧೮ ॥
ಅಸ್ತಿ ಪುಣ್ಯತಮೇ ವಿಪ್ರಾಃ ಪವಿತ್ರೇ ವೇಂಕಟಾಚಲೇ ।
ಯಸ್ಯ ಸಂಸ್ಮರಣಾದೇವ ಗರ್ಭವಾಸೋ ನ ವಿದ್ಯತೇ ॥ ೧೯ ॥
ತತ್ಪ್ರಾಪ್ಯ ತು ನರಃ ಸ್ನಾಯಾತ್ಸ್ವಾಮಿತೀರ್ಥಸ್ಯ ಚೋತ್ತರೇ ।
ತತ್ರ ಸ್ನಾನಾನ್ನರಾ ಯಾಂತಿ ವೈಕುಂಠಂ ನಾತ್ರ ಸಂಶಯಃ ॥ ೨೦ ॥

---

೧೪. ಇಂತು ಪ್ರಾರ್ಥನೆಯನ್ನು ಮಾಡಿದ ಬಳಿಕ ಪಾವನವೂ ನಗೋತ್ತಮವೂ ಆದ ವೇಂಕಟಾಚಲವನ್ನು ಮೆಲ್ಲಡಿಗಳಿಂದ ಹತ್ತಬೇಕು.

೧೫–೧೬. ಮಹಾಪುಣ್ಯವೂ, ಸರ್ವಪಾತಕ ನಾಶಕವೂ ಆದ ವೇಂಕಟಾದ್ರಿಯಲ್ಲಿರುವ ಸ್ವಾಮಿಪುಷ್ಕರಿಣೀತೀರ್ಥದಲ್ಲಿ ನಿಯಮದಿಂದ ಸ್ನಾನವನ್ನು ಮಾಡಿಕೊಂಡು ಸಾಸುವೆಯ ಕಾಳಿನ ಗಾತ್ರಗಳ ಪಿಂಡಗಳನ್ನಾದರೂ ದಾನಮಾಡಬೇಕು. ಅಥವಾ ಶಮೀಪತ್ರಪ್ರಮಾಣದ ಪಿಂಡಗಳನ್ನಾದರೂ ಪಿತೃಗಳನ್ನುದ್ದೇಶಿಸಿ ಕೊಡಬೇಕು.

೧೭. ಇದರಿಂದ ಸ್ವರ್ಗದಲ್ಲಿರುವ ಪಿತೃಗಳು ಮೋಕ್ಷವನ್ನು ಹೊಂದುವರು; ನರಕವಾಸಿಗಳಾದವರು ಸ್ವರ್ಗವನ್ನು ಸೇರುವರು.

೧೮–೧೯. ಎಲೈ ಬ್ರಾಹ್ಮಣರಿರಾ! ಬಳಿಕ ಅದಕ್ಕೂ ಮೇಲಾಗಿ ಮಹತ್ತರವಾದುದೂ ಸಕಲ ಲೋಕವಿಖ್ಯಾತವಾದುದೂ ಸಮಸ್ತ ತೀರ್ಥಶ್ರೇಷ್ಠವಾದುದೂ ಪುಣ್ಯತಮವಾದುದೂ ಆದ ಪಾಪವಿನಾಶನವೆಂಬ ತೀರ್ಥವು ಪುಣ್ಯಪ್ರದವೂ ಪಾವನವೂ ಆದ ವೇಂಕಟಾಚಲದಲ್ಲಿರುವುದು. ಅದನ್ನು ಸ್ಮರಿಸಿದ ಮಾತ್ರದಿಂದಲೇ ಮನುಷ್ಯನಿಗೆ ಮತ್ತೆ ಗರ್ಭವಾಸವು ಸಂಭವಿಸುವುದಿಲ್ಲ.

೨೦. ಸ್ವಾಮಿಪುಷ್ಕರಿಣಿಗೆ ಉತ್ತರದಲ್ಲಿರುವ ಆ ತೀರ್ಥವನ್ನು ಸೇರಿ ಅದರಲ್ಲಿ ಪ್ರತಿಮಾನವನೂ ಸ್ನಾನವನ್ನು ಮಾಡಬೇಕು. ಆ ಸ್ನಾನದಿಂದ ಮನುಷ್ಯರು ವೈಕುಂಠಲೋಕವನ್ನೇ ಹೊಂದುವರು. ಈ ವಿಷಯದಲ್ಲಿ ಸಂಶಯವಿಲ್ಲ.

ಋಷಯ ಊಚುಃ:—

ಸೂತ ಪಾಪವಿನಾಶಾಖ್ಯತೀರ್ಥಸ್ಯ ಬ್ರೂಹಿ ವೈಭವಂ ।
ವ್ಯಾಸೇನ ಬೋಧಿತಸ್ತ್ವಂ ಹಿ ವೇತ್ಸಿ ಸರ್ವಂ ಮಹಾಮುನೇ ॥ ೨೧ ॥

ಶ್ರೀ ಸೂತ ಉವಾಚ:—

ಬ್ರಹ್ಮಾಶ್ರಮಪದೇ ವೃತ್ತಾಂ ಪಾರ್ಶ್ವೇ ಹಿಮವತಃ ಶುಭೇ ।
ವಕ್ಷ್ಯಾಮಿ ಬ್ರಾಹ್ಮಣಶ್ರೇಷ್ಠಾ ಯುಷ್ಮಾಕಂ ತು ಕಥಾಂ ಶುಭಾಂ ॥ ೨೨ ॥
ತದಾಶ್ರಮಪದಂ ಪುಣ್ಯಂ ಬ್ರಹ್ಮಾಶ್ರಮಪದಂ ಶುಭಂ ।
ನಾನಾವೃಕ್ಷಸಮಾಕೀರ್ಣಂ ಪಾರ್ಶ್ವೇ ಹಿಮವತಃ ಶುಭೇ ॥ ೨೩ ॥
ಬಹುಗುಲ್ಮಲತಾಕೀರ್ಣಂ ಮೃಗದ್ವಿಪನಿಷೇವಿತಂ ।
ಸಿದ್ಧಚಾರಣಸಂಘುಷ್ಟಂ ರಮ್ಯಂ ಪುಷ್ಪಿತಕಾನನಂ ॥ ೨೪ ॥
ಯತಿಭಿರ್ಬಹುಭಿಃ ಕೀರ್ಣಂ ತಾಪಸೈರುಪಶೋಭಿತಂ ।
ಬ್ರಾಹ್ಮಣೈಶ್ಚ ಮಹಾಭಾಗೈಃ ಸೂರ್ಯಜ್ವಲನಸನ್ನಿಭೈಃ ॥ ೨೫ ॥
ನಿಯಮವ್ರತಸಂಪನ್ನೈಃ ಸಮಾಕೀರ್ಣಂ ತಪಸ್ವಿಭಿಃ ।
ದೀಕ್ಷಿತೈರ್ಯಾಗಶೀಲೈಶ್ಚ ಯತಾಹಾರೈಃ ಕೃತಾತ್ಮಭಿಃ ॥ ೨೬ ॥

---

೨೧. ಋಷಿಗಳು ಕೇಳುತ್ತಾರೆ:—ಎಲೈ ಸೂತನೆ! ಪಾಪವಿನಾಶನವೆಂಬ ತೀರ್ಥದ ವೈಭವವನ್ನು ನಮಗೆ ತಿಳಿಸು. ನೀನು ಮಹಾಮುನಿಯು. ವ್ಯಾಸರಿಂದ ಉಪದೇಶವನ್ನು ಪಡೆದವನಾಗಿ ಸಕಲವನ್ನೂ ತಿಳಿದಿರುವೆಯಷ್ಟೆ.

೨೨. ಸೂತನು ಹೇಳುತ್ತಾನೆ:—ಎಲೈ ಬ್ರಾಹ್ಮಣೋತ್ತಮರಿರಾ! ಪವಿತ್ರವಾದ ಹಿಮವತ್ಪರ್ವತದ ಪಾರ್ಶ್ವದಲ್ಲಿರುವ ಬ್ರಹ್ಮಾಶ್ರಮವೆಂಬ ಪ್ರದೇಶದಲ್ಲಿ ನಡೆದ ಪವಿತ್ರ ಚರಿತ್ರೆಯೊಂದನ್ನು ನಿಮಗೆ ವಿವರಿಸುವೆನು.

೨೩. ಬ್ರಹ್ಮಾಶ್ರಮವೆಂಬ ಆ ಪ್ರದೇಶವು ಪುಣ್ಯಪ್ರದವೂ, ಮಂಗಳಕರವೂ ಆಗಿ ವಿವಿಧವೃಕ್ಷಗಳಿಂದೊಡಗೂಡಿ ಹಿಮವತ್ಪರ್ವತದ ತಪ್ಪಲಿನಲ್ಲಿ ಶೋಭಿಸುತ್ತಿರುವುದು;

೨೪. ಬಹು ವಿಧಗಳಾದ ಗುಲ್ಮಗಳಿಂದಲೂ, ಲತೆಗಳಿಂದಲೂ ನಿಬಿಡವಾಗಿ ಜಿಂಕೆಗಳು, ಆನೆಗಳು ಮುಂತಾದ ಮೃಗಗಳಿಂದಲೂ, ಸಿದ್ಧಚಾರಣರ ಸಮೂಹಗಳಿಂದಲೂ ಮನೋಹರವಾಗಿ, ಹೂ ಮೊಳೆತ ಕಾನನವೃಕ್ಷಗಳಿಂದ ರಂಜಿಸುತ್ತಿರುವುದು;

೨೫. ಅನೇಕ ಯತಿಗಳಿಂದಲೂ ತಪಸ್ಸಂಪನ್ನರಿಂದಲೂ ಸೂರ್ಯಾಗ್ನಿ ಸಮಾನ ತೇಜಸ್ಸಿನಿಂದ ಮೆರೆಯುತ್ತಿರುವ ಮಹಾತ್ಮರಾದ ಬ್ರಾಹ್ಮಣರಿಂದಲೂ ತುಂಬಿ ಶೋಭಿಸುತ್ತಿರುವುದು;

೨೬. ನಿಯಮಗಳನ್ನೂ ವ್ರತಗಳನ್ನೂ ಕೈಗೊಂಡಿರುವ ತಪಸ್ವಿಗಳಿಂದಲೂ,

ವೇದಾಧ್ಯಯನಸಂಪನ್ನೈರ್ವೈದಿಕೈಃ ಪರಿವೇಷ್ಟಿತಂ ।
ವರ್ಣಿಭಿಶ್ಚ ಗೃಹಸ್ಥೈಶ್ಚ ವಾನಪ್ರಸ್ಥೈಶ್ಚ ಭಿಕ್ಷುಭಿಃ ॥ ೨೭ ॥
ಸ್ವಾಶ್ರಮಾಚಾರನಿರತೈಃ ಸ್ವವರ್ಣೋಕ್ತವಿಧಾಯಿಭಿಃ ।
ವಾಲಖಿಲ್ಯೈಶ್ಚ ಋಷಿಭಿಃ ಸಮಂತಾತ್ಪರಿವೇಷ್ಟಿತಂ ॥ ೨೮ ॥
ತತ್ರಾಶ್ರಮೇ ಪುರಾ ಕಶ್ಚಿಚ್ಛೂದ್ರೋ ದೃಢಮತಿರ್ದ್ವಿಜಾಃ ।
ಸಾಹಸೀ ಬ್ರಾಹ್ಮಣಾಭ್ಯಾಶಮಾಜಗಾಮ ಮುದಾನ್ವಿತಃ ॥ ೨೯ ॥
ಆಗತೋ ಹ್ಯಾಶ್ರಮಪದಂ ಪೂಜಿತಶ್ಚ ತಪಸ್ವಿಭಿಃ ।
ನಾಮ್ನಾ ದೃಢಮತಿಃ ಶೂದ್ರಃ ಸಾಷ್ಟಾಂಗಂ ಪ್ರಣನಾಮ ವೈ ॥ ೩೦ ॥
ತಾನ್ಸ ದೃಷ್ಟ್ವಾ ಮುನಿಗಣಾನ್ದೇವಕಲ್ಪಾನ್ಮಹೌಜಸಃ ।
ಕುರ್ವತೋ ವಿವಿಧಾನ್ಯಜ್ಞಾನ್ಸಂಪ್ರಾಹೃಷ್ಯತ ಶೂದ್ರಕಃ ॥ ೩೧ ॥
ಅಥಾಸ್ಯ ಬುದ್ಧಿರಭವತ್ತಪಃ ಕರ್ತುಮನುತ್ತಮಂ ।
ತತೋಽಬ್ರವೀತ್ಕುಲಪತಿಂ ಮುನಿಮಾಗತ್ಯ ತಾಪಸಂ ॥ ೩೨ ॥

---

ಯಾಗಗಳಲ್ಲಿ ನಿರತರಾಗಿ ದೀಕ್ಷೆಯನ್ನು ಕೈಕೊಂಡು ಆಹಾರ ನಿಯಮಗಳನ್ನು ಪಾಲಿಸುತ್ತಿರುವ ಪುಣ್ಯಾತ್ಮರಿಂದಲೂ ಕೂಡಿದ್ದಿತು.

೨೭. ವೇದಾಧ್ಯಯನಸಂಪನ್ನರಾದ ವೈದಿಕೋತ್ತಮರಿಂದೂ, ಚಾತುರ್ವರ್ಣ್ಯಕ್ಕೆ ಸೇರಿದ ಗೃಹಸ್ಥರಿಂದಲೂ ವಾನಪ್ರಸ್ಥರಿಂದಲೂ ಸನ್ಯಾಸಿಗಳಿಂದಲೂ ಸುತ್ತುವರೆಯಲ್ಪಟ್ಟಿದ್ದಿತು.

೨೮. ತಮ್ಮ ತಮ್ಮ ಆಚಾರಗಳಲ್ಲಿ ನಿರತರಾಗಿ ತಮ್ಮ ವರ್ಣಧರ್ಮಗಳಲ್ಲಿ ಹೇಳಿರುವಂತೆ ನಡೆದುಕೊಳ್ಳುವವರಿಂದಲೂ, ವಾಲಖಿಲ್ಯರಿಂದಲೂ, ಮಹರ್ಷಿಗಳಿಂದಲೂ, ಎಲ್ಲೆಡೆಯಲ್ಲೂ ತುಂಬಿದ್ದಿತು.

೨೯. ಎಲೈ ಬ್ರಾಹ್ಮಣರಿರಾ! ಒಮ್ಮೆ ಇಂತಹ ಆಶ್ರಮಕ್ಕೆ ನಿಶ್ಚಿತ ಬುದ್ಧಿಯೂ ಸಾಹಸಿಯೂ ಆದ ಶೂದ್ರನೊಬ್ಬನು ಸಂತೋಷಗೊಂಡು ಬ್ರಾಹ್ಮಣರ ಸಮೀಪಕ್ಕೆ ಬಂದನು.

೩೦. ದೃಢಮತಿಯೆಂಬ ಹೆಸರುಳ್ಳ ಆ ಶೂದ್ರನು ಆಶ್ರಮವನ್ನು ಪ್ರವೇಶಿಸಿ ತಪಸ್ವಿಗಳಿಂದ ಉಚಿತ ಸತ್ಕಾರವನ್ನು ಪಡೆದು ಅವರಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿದನು.

೩೧. ದೇವಸಮಾನರೂ, ಮಹಾತೇಜಸ್ವಿಗಳೂ ಆಗಿ ವಿಧವಿಧಗಳಾದ ಯಜ್ಞಗಳನ್ನು ಮಾಡುತ್ತಿರುವ ಆ ಮುನಿಸಮೂಹಗಳನ್ನು ಕಂಡು ಶೂದ್ರನು ಅತ್ಯಂತ ಸಂತೋಷಗೊಂಡನು.

೩೨. ಆಗ ಅವನಿಗೆ ಉತ್ತಮೋತ್ತಮವಾದ ತಪಸ್ಸನ್ನು ಮಾಡಬೇಕೆಂಬ

ದೃಢಮತಿರುವಾಚ :—

ತಪೋಧನ ನಮಸ್ತೇಽಸ್ತು ರಕ್ಷ ಮಾಂ ಕರುಣಾನಿಧೇ ।
ತವ ಪ್ರಸಾದಾದಿಚ್ಛಾಮಿ ಯಾಗಂ ಕರ್ತುಂ ಪ್ರಸೀದ ಮೇ ॥ ೩೩ ॥
ಏವಮುಕ್ತಸ್ತು ಶೂದ್ರೇಣ ತಮಾಹ ಬ್ರಾಹ್ಮಣಸ್ತದಾ ॥ ೩೪ ॥

ಕುಲಪತಿರುವಾಚ :—

ಯಾಗೇ ದೀಕ್ಷಯಿತುಂ ಶಕ್ಯೋ ನ ಶೂದ್ರೋ ಹೀನಜನ್ಮಭಾಕ್ ।
ಶ್ರೂಯತೇ ಯದಿ ತೇ ಬುದ್ಧಿಃ ಶುಶ್ರೂಷಾನಿರತೋ ಭವ ॥ ೩೫ ॥
ಉಪದೇಶೋ ನ ಕರ್ತವ್ಯೋ ಜಾತಿಹೀನಸ್ಯ ಕರ್ಹಿಚಿತ್ ।
ಉಪದೇಶೇ ಮಹಾನ್ದೋಷ ಉಪಾಧ್ಯಾಯಸ್ಯ ವಿದ್ಯತೇ ॥ ೩೬ ॥
ನಾಧ್ಯಾಪಯೇದ್ಬುಧಃ ಶೂದ್ರಂ ತಥಾ ನೈವ ಚ ಯಾಜಯೇತ್ ।
ನ ಪಾಠಯೇತ್ತಥಾ ಶೂದ್ರಂ ಶಾಸ್ತ್ರಂ ವ್ಯಾಕರಣಾದಿಕಂ ॥ ೩೭ ॥

---

ಅಭಿಲಾಷೆಯುಂಟಾಯಿತು. ಅವನು ತಾಪಸನೂ ಮಹಾಮುನಿಯೂ ಆದ ಕುಲಪತಿಯನ್ನು ಸಮೀಪಿಸಿ ಇಂತೆಂದನು.

೩೩. ದೃಢಮತಿಯು ಹೇಳುತ್ತಾನೆ:— "ಎಲೈ ತಪೋಧನನೆ! ನಿನಗೆ ನಮಸ್ಕರಿಸುವೆನು. ಕರುಣಾಸಮುದ್ರನಾದ ನೀನೇ ನನ್ನನ್ನು ಕಾಪಾಡಬೇಕು. ನಿನ್ನ ಪ್ರಸಾದದಿಂದ ನಾನೊಂದು ಯಾಗವನ್ನು ಮಾಡಬೇಕೆಂದು ಅಪೇಕ್ಷಿಸುತ್ತಿರುವೆನು. ನನ್ನಲ್ಲಿ ಪ್ರಸನ್ನನಾಗು.

೩೪. ಇಂತೆಂದ ಶೂದ್ರನ ಮಾತುಗಳನ್ನು ಕೇಳಿ ಆ ಬ್ರಾಹ್ಮಣನು ಉತ್ತರವನ್ನು ಹೇಳತೊಡಗಿದನು.

೩೫. ಕುಲಪತಿಯು ಹೇಳುತ್ತಾನೆ:—ಶೂದ್ರನು ಹೀನಜನ್ಮದಲ್ಲಿ ಹುಟ್ಟಿದವನಾದುದರಿಂದ ಯಾಗದಲ್ಲಿ ದೀಕ್ಷಿತನಾಗುವುದು ಅಶಕ್ಯವು. ನೀನು ಶ್ರದ್ಧೆಯಿಂದ ಕೇಳುತ್ತಿರುವೆಯಾದರೆ ಹೇಳುವೆನು. ಜ್ಯೇಷ್ಠ ವರ್ಣಗಳವರ ಶುಶ್ರೂಷೆಯಲ್ಲಿಯೇ ನಿರತನಾಗಿರು.

೩೬. ಹೀನಜಾತಿಯವನಿಗೆಂದಿಗೂ ಮಂತ್ರೋಪದೇಶಗಳನ್ನು ಮಾಡಬಾರದು. ಅಂತಹವನಿಗೆ ಉಪದೇಶವನ್ನು ಕೊಟ್ಟರೆ ಉಪಾಧ್ಯಾಯನಿಗೆ ಮಹತ್ತರವಾದ ದೋಷವು ಪ್ರಾಪ್ತವಾಗುವುದು.

೩೭. ನೀತಿಜ್ಞನಾದವನು ಶೂದ್ರನಿಗೆ ವೇದಾಧ್ಯಯನವನ್ನು ಮಾಡಿಸಬಾರದು. ಅವನ ಕಡೆಯಿಂದ ಯಜ್ಞಯಾಗಾದಿಗಳನ್ನು ಮಾಡಿಸಬಾರದು. ಶೂದ್ರನಿಗೆ ವ್ಯಾಕರಣಾದಿ ಶಾಸ್ತ್ರಗಳನ್ನೂ ಕೂಡ ಪಾಠಹೇಳಬಾರದು.

ಕಾವ್ಯಂ ವಾ ನಾಟಕಂ ವಾಪಿ ತಥಾಲಂಕಾರಮೇವ ವಾ ।
ಪುರಾಣಮಿತಿಹಾಸಂ ಚ ಶೂದ್ರಂ ನೈವ ತು ಪಾಠಯೇತ್ ॥ ೩೮ ॥
ಯದಿ ಚೋಪದಿಶೇದ್ವಿಪ್ರಃ ಶೂದ್ರಸ್ಯೈತಾನಿ ಕರ್ಹಿಚಿತ್ ।
ತ್ಯಜೇಯುರ್ಬ್ರಾಹ್ಮಣಾ ವಿಪ್ರಂ ತಂ ಗ್ರಾಮಾದ್ಬ್ರಹ್ಮಸಂಕುಲಾತ್ ॥ ೩೯॥
ಶೂದ್ರಾಯ ಚೋಪದೇಷ್ಟಾರಂ ದ್ವಿಜಂ ಚಂಡಾಲವತ್ತ್ಯಜೇತ್ ।
ಶೂದ್ರಂ ಚಾಕ್ಷರಸಂಯುಕ್ತಂ ದೂರತಃ ಪರಿವರ್ಜಯೇತ್ ॥ ೪೦ ॥
ತಚ್ಛುಶ್ರೂಷಸ್ವ ಭದ್ರಂ ತೇ ಬ್ರಾಹ್ಮಣಾನ್ಶ್ರದ್ಧಯಾ ಸಹ ।
ಶೂದ್ರಸ್ಯ ದ್ವಿಜಶುಶ್ರೂಷಾ ಮನ್ವಾದಿಭಿರುದೀರಿತಾ ॥ ೪೧ ॥
ನ ಹಿ ನೈಸರ್ಗಿಕಂ ಕರ್ಮ ಪರಿತ್ಯಕ್ತುಂ ತ್ವಮರ್ಹಸಿ ।
ಏವಮುಕ್ತಃ ಸ ಮುನಿನಾ ಸ ಶೂದ್ರೋಽಚಿಂತಯತ್ತದಾ ॥ ೪೨ ॥
ಕಿಂ ಕರ್ತವ್ಯಂ ಮಯಾ ತ್ವದ್ಯ ವ್ರತೇ ಶ್ರದ್ಧಾ ಹಿ ಮೇ ಪರಾ ।
ಯಥಾಸ್ಯಾನ್ಮಮ ಸುಜ್ಞಾನಂ ಯತಿಷ್ಯೇಽಹಂ ತಥಾದ್ಯ ವೈ ॥ ೪೩ ॥
ಇತಿ ನಿಶ್ಚಿತ್ಯ ಮನಸಾ ಶೂದ್ರೋ ದೃಢಮತಿಸ್ತದಾ ।
ಗತ್ವಾಶ್ರಮಪದಾದ್ದೂರಂ ಕೃತವಾನುಟಜಂ ಶುಭಂ ॥ ೪೪ ॥

---

೩೮. ಕಾವ್ಯ ನಾಟಕಗಳನ್ನೂ, ಅಲಂಕಾರ ಗ್ರಂಥಗಳನ್ನೂ, ಇತಿಹಾಸ ಪುರಾಣಗಳನ್ನೂ ಶೂದ್ರನಿಗೆಂದಿಗೂ ಕಲಿಸಬಾರದು.

೩೯. ಯಾವ ಬ್ರಾಹ್ಮಣನಾದರೂ ಶೂದ್ರನಿಗೆ ಎಂದಾದರೂ ಇವುಗಳನ್ನು ಉಪದೇಶಿಸಿದ್ದಾದರೆ ಇತರ ಬ್ರಾಹ್ಮಣರು ಬ್ರಾಹ್ಮಣನಿವಾಸವಾದ ತಮ್ಮ ಗ್ರಾಮದಿಂದ ಅಂತಹ ಬ್ರಾಹ್ಮಣನನ್ನು ದೂರಗೊಳಿಸಬೇಕು.

೪೦–೪೧. ಶೂದ್ರನಿಗೆ ಉಪದೇಶಕನಾದ ಬ್ರಾಹ್ಮಣನನ್ನು ಚಂಡಾಲನಂತೆ ತ್ಯಜಿಸಬೇಕು. ಅಂತಹ ವಿದ್ಯೆಯನ್ನು ಕಲಿತ ಶೂದ್ರನನ್ನೂ ದೂರದಲ್ಲಿಯೇ ವರ್ಜಿಸಬೇಕು. ಆದುದರಿಂದ ನೀನು ಬ್ರಾಹ್ಮಣರನ್ನೇ ಶ್ರದ್ಧಾಭಕ್ತಿಗಳಿಂದ ಶುಶ್ರೂಷೆಮಾಡು. ನಿನಗೆ ಮಂಗಳವುಂಟಾಗುವುದು. ದ್ವಿಜಶುಶ್ರೂಷೆಯೇ ಶೂದ್ರನ ಸರ್ವಕರ್ತವ್ಯವೆಂದು ಮನ್ವಾದಿಧರ್ಮಜ್ಞರಿಂದಲೂ ಹೇಳಲ್ಪಟ್ಟಿರುವುದು.

೪೨. ನಿನಗೆ ಸ್ವಭಾವಾನುಗುಣವಾದ ಕರ್ಮವನ್ನು ಬಿಟ್ಟುಬಿಡುವುದು ಉಚಿತವಲ್ಲ. ಇಂತೆಂದು ಮಹಾಮುನಿಯಿಂದ ಹೇಳಲ್ಪಟ್ಟವನಾಗಿ ಆ ಶೂದ್ರನು ತನ್ನಲ್ಲಿಯೇ ಯೋಚಿಸತೊಡಗಿದನು.

೪೩. "ಈಗ ನಾನು ಮಾಡಬೇಕಾದ ಕಾರ್ಯವೇನು? ವ್ರತನಿಯಮಗಳಲ್ಲಿ ನನಗೆ ಅಪಾರವಾದ ಶ್ರದ್ಧೆಯುಂಟಾಗಿರುವುದು. ನನಗೆ ಶಾಸ್ತ್ರಜ್ಞಾನವುಂಟಾಗುವ ರೀತಿಯಲ್ಲಿ ಇಂದಿನಿಂದ ಪ್ರಯತ್ನವನ್ನು ಮಾಡುತ್ತೇನೆ."

೪೪. ಇಂತೆಂದು ಶೂದ್ರನಾದ ದೃಢಮತಿಯು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿ

ತತ್ರ ವೈ ದೇವತಾಗಾರಂ ಪುಣ್ಯಾನ್ಯಾಯತನಾನಿ ಚ ।
ಪುಷ್ಪಾರಾಮಾದಿಕಂ ಚಾಪಿ ತಟಾಕಖನನಾದಿಕಂ ॥ ೪೫ ॥
ಶ್ರದ್ಧಯಾ ಕಾರಯಾಮಾಸ ತಪಃಸಿದ್ಧ್ಯರ್ಥಮಾತ್ಮನಃ ।
ಅಭಿಷೇಕಾಂಶ್ಚ ನಿಯಮಾನುಪವಾಸಾದಿಕಾನಪಿ ॥ ೪೬ ॥
ಬಲಿಂ ಕೃತ್ವಾ ಚ ಹುತ್ವಾ ಚ ದೈವತಾನ್ಯಭ್ಯಪೂಜಯತ್ ।
ಸಂಕಲ್ಪನಿಯಮೋಪೇತಃ ಫಲಾಹಾರೋ ಜಿತೇಂದ್ರಿಯಃ ॥ ೪೭ ॥
ನಿತ್ಯಂ ಕಂದೈಶ್ಚ ಮೂಲೈಶ್ಚ ಪುಷ್ಪೈರಪಿ ತಥಾ ಫಲೈಃ ।
ಅತಿಥೀನ್ಪೂಜಯಾಮಾಸ ಯಥಾವತ್ಸಮುಪಾಗತಾನ್ ॥ ೪೮ ॥
ಏವಂ ಹಿ ಸುಮಹಾನ್ಕಾಲೋ ವ್ಯತಿಚಕ್ರಾಮ ತಸ್ಯ ವೈ ॥ ೪೯ ॥
ಅಥಾಶ್ರಮಮುಗಾತ್ತಸ್ಯ ಸುಮತಿರ್ನಾಮ ನಾಮತಃ ।
ದ್ವಿಜೋ ಗರ್ಗಕುಲೋದ್ಭೂತಃ ಸತ್ಯವಾದೀ ಜಿತೇಂದ್ರಿಯಃ ॥ ೫೦ ॥
ಸ್ವಾಗತೈರ್ಮುನಿಮಾರಾಧ್ಯ ತೋಷಯಿತ್ವಾ ಫಲಾದಿಕೈಃ ।
ಕಥಯನ್ಸ್ವೈ ಕಥಾಃ ಪುಣ್ಯಾಃ ಕುಶಲಂ ಪರ್ಯಪೃಚ್ಛತ ॥ ೫೧ ॥

---

ಕೊಂಡು ಆ ಆಶ್ರಮದಿಂದ ದೂರಕ್ಕೆ ಹೋಗಿ ಒಂದು ಶುಭ್ರವಾದ ಕುಟೀರವನ್ನು ಕಟ್ಟಿಕೊಂಡನು.

೪೫–೪೭. ಅಲ್ಲಿ ದೇವಗೃಹವನ್ನೂ ಪವಿತ್ರಗಳಾದ ವಾಸಗೃಹಗಳನ್ನೂ ಸುತ್ತಲೂ ಹೂದೋಟಗಳನ್ನೂ, ಕೊಳಗಳನ್ನೂ ಶ್ರದ್ಧೆಯಿಂದ ಮಾಡಿಸಿದನು. ತನ್ನ ತಪಸ್ಸು ಸಿದ್ಧಿಸುವುದಕ್ಕಾಗಿ ದೇವತಾಭಿಷೇಕಗಳನ್ನೂ, ಉಪವಾಸಾದಿ ನಿಯಮಗಳನ್ನೂ ಅನುಸರಿಸುತ್ತ ಬಲಿಹರಣಾದಿಗಳಿಂದಲೂ ಹೋಮಗಳಿಂದಲೂ ದೇವತೆಗಳನ್ನು ಪೂಜಿಸುತ್ತಿದ್ದನು. ಸಂಕಲ್ಪಪೂರ್ವಕವಾಗಿ ದೇಹದಂಡನೆಯನ್ನು ಮಾಡುತ್ತ ಫಲಭಕ್ಷಕನೂ ಜಿತೇಂದ್ರಿಯನೂ ಆಗಿದ್ದನು.

೪೮. ಪ್ರತಿದಿನದಲ್ಲಿಯೂ ಕಂದಮೂಲಗಳಿಂದಲೂ, ಫಲಪುಷ್ಪಗಳಿಂದಲೂ ಆಶ್ರಮಕ್ಕೆ ಬಂದ ಅತಿಥಿಗಳನ್ನು ವಿಧ್ಯುಕ್ತರೀತಿಯಿಂದ ಪೂಜಿಸುತ್ತಿದ್ದನು.

೪೯. ಇಂತು ಅವನು ವಾಸಮಾಡುತ್ತಿದ್ದಂತೆಯೇ ಬಹಳಕಾಲವು ಕಳೆದು ಹೋಯಿತು.

೫೦. ಒಂದಾನೊಂದು ದಿನ ಗರ್ಗಕುಲಸಂಭೂತನೂ, ಸತ್ಯಸಂಕಲ್ಪನೂ ಜಿತೇಂದ್ರಿಯನೂ ಆದ ಸುಮತಿನಾಮಕನಾದ ಬ್ರಾಹ್ಮಣನೊಬ್ಬನು ಆ ಆಶ್ರಮಕ್ಕೆ ಬಂದನು.

೫೧. ದೃಢಮತಿಯು ಆ ಮುನಿಯನ್ನು ಸ್ವಾಗತವಾಕ್ಯಗಳಿಂದ ಬರಮಾಡಿಕೊಂಡು ಫಲಾದ್ಯುಪಹಾರಗಳಿಂದ ಸಂತೋಷಗೊಳಿಸಿ ವಿವಿಧಗಳಾದ ಪುಣ್ಯಕಥೆಗಳನ್ನು ಹೇಳಿ ಕೇಳುತ್ತ ಆತನ ಕುಶಲವನ್ನು ಕುರಿತು ಪ್ರಶ್ನೆಮಾಡಿದನು.

ಇತ್ಥಂ ವಿಪ್ರಃ ಸ ಪಾದ್ಯಾದ್ಯೈರುಪಚಾರೈಸ್ತು ಪೂಜಿತಃ ।
ಆಶೀರ್ಭಿರಭಿನಂದ್ಯೈನಂ ಪ್ರತಿಗೃಹ್ಯ ಚ ಸತ್ಕ್ರಿಯಾಂ ॥ ೫೨ ॥
ತಮಾಪೃಚ್ಛ್ಯ ಪ್ರಹೃಷ್ಟಾತ್ಮಾ ಸ್ವಾಶ್ರಮಂ ಪುನರಾಯಯೌ ।
ಏವಂ ದಿನೇ ದಿನೇ ವಿಪ್ರಃ ಶೂದ್ರೇಽಸ್ಮಿನ್ ಪಕ್ಷಪಾತವಾನ್ ॥ ೫೩ ॥
ಆಗಚ್ಛದಾಶ್ರಮಂ ತಸ್ಯ ದ್ರಷ್ಟುಂ ತಂ ಶೂದ್ರಯೋನಿಜಂ ।
ಬಹುಕಾಲಂ ದ್ವಿಜಸ್ಯಾಭೂತ್ಸಂಸರ್ಗಃ ಶೂದ್ರಯೋನಿನಾ ॥ ೫೪ ॥
ಸ್ನೇಹಸ್ಯ ವಶಮಾಪನ್ನಃ ಶೂದ್ರೋಕ್ತಂ ನಾತಿಚಕ್ರಮೇ ।
ಅಥಾಗತಂ ದ್ವಿಜಂ ಶೂದ್ರಃ ಪ್ರಾಹ ಸ್ನೇಹವಶೀಕೃತಂ ॥ ೫೫ ॥
ಹವ್ಯಕವ್ಯವಿಧಾನಂ ಮೇ ಬ್ರೂಹಿ ತ್ವಂ ತು ಗುರುರ್ಮತಃ ।
ಏವಮುಕ್ತಃ ಸ ಶೂದ್ರೇಣ ಸರ್ವಮೇತದುಪಾದಿಶತ್ ॥ ೫೬ ॥
ಕಾರಯಾಮಾಸ ಶೂದ್ರಸ್ಯ ಪಿತೃಕಾರ್ಯಾದಿಕಂ ತದಾ ।
ಪಿತೃಕಾರ್ಯೇ ಕೃತೇ ತೇನ ವಿಸೃಷ್ಟಃ ಸ ದ್ವಿಜೋತ್ತಮಃ ॥ ೫೭ ॥

---

೫೨–೫೩. ಇಂತು ಆ ಬ್ರಾಹ್ಮಣನು ಅರ್ಘ್ಯಪಾದ್ಯಾದ್ಯುಪಚಾರಗಳನ್ನು ಸ್ವೀಕರಿಸಿ ಅವನನ್ನು ಆಶೀರ್ವಚನಗಳಿಂದ ಹರಸಿ ಆ ಶೂದ್ರನ ಅತಿಥಿಪೂಜೆಯನ್ನು ಕೈಕೊಂಡು ಅವನನ್ನು ಬೀಳ್ಕೊಟ್ಟು ತನ್ನ ಆಶ್ರಮಕ್ಕೆ ಹಿಂದಿರುಗಿದನು. ಇಂತು ಪ್ರತಿದಿನವೂ ನಡೆಯುತ್ತಿರಲು ಆ ಬ್ರಾಹ್ಮಣನು ಶೂದ್ರನ ವಿಷಯದಲ್ಲಿ ಪಕ್ಷಪಾತವುಳ್ಳವನಾದನು.

೫೪. ಅಲ್ಲದೆ ಶೂದ್ರನಾದ ಅವನನ್ನು ನೋಡಲು ಆಶ್ರಮಕ್ಕೆ ಬಹಳಕಾಲದ ವರೆಗೂ ಬಂದು ಹೋಗುತ್ತಿದ್ದನು. ಇಂತು ಆ ಬ್ರಾಹ್ಮಣೋತ್ತಮನಿಗೆ ಆ ಶೂದ್ರನೊಡನೆ ಸಹವಾಸವು ಬೆಳೆದುಬಂದಿತು.

೫೫. ಈ ಸ್ನೇಹದ ಪಾಶಕ್ಕೆ ಸಿಕ್ಕಿದವನಾಗಿ ಅವನು ಶೂದ್ರನು ಹೇಳಿದ ಮಾತನ್ನು ಉಲ್ಲಂಘಿಸುತ್ತಿರಲಿಲ್ಲ. ಇಂತು ಸ್ನೇಹದಿಂದ ಆ ಬ್ರಾಹ್ಮಣನನ್ನು ವಶಪಡಿಸಿಕೊಂಡು ದೃಢಮತಿಯು ಒಂದು ದಿನ ಆತನೊಡನಿಂತೆಂದನು.

೫೬. "ನೀನು ಬ್ರಾಹ್ಮಣನಾದುದರಿಂದ ನಮಗೆಲ್ಲ ಗುರುಸ್ಥಾನೀಯನೆಂದು ತಿಳಿಯುವೆನು. ಆದುದರಿಂದ ನನಗೆ ಹವ್ಯಕವ್ಯಗಳನ್ನು ಮಾಡುವ ವಿಧಾನವನ್ನು ಹೇಳಿಕೊಡು." ಇಂತೆಂದು ಶೂದ್ರನಿಂದ ಕೇಳಲ್ಪಟ್ಟವನಾಗಿ ಆ ಬ್ರಾಹ್ಮಣನು ಎಲ್ಲವನ್ನೂ ಉಪದೇಶಮಾಡಿದನು.

೫೭. ಆ ಶೂದ್ರನ ಕೈಯಿಂದಲೇ ಪಿತೃಕಾರ್ಯಾದಿಗಳನ್ನು ಮಾಡಿಸಿದನು. ತನ್ನ ಕಾರ್ಯವಾದಮೇಲೆ ದೃಢಮತಿಯು ಆತನನ್ನು ಬೀಳ್ಕೊಟ್ಟನು.

ಅಥ ದೀರ್ಘೇಣ ಕಾಲೇನ ಪ್ರೋಕ್ಷಿತಃ ಶೂದ್ರಯೋನಿನಾ ।
ತ್ಯಕ್ತೋ ವಿಪ್ರಗಣೈಃ ಸೋಽಯಂ ಪಂಚತ್ವಮಗಮದ್ದ್ವಿಜಃ ॥ ೫೮ ॥
ವೈವಸ್ವತಭಟೈರ್ನೀತ್ವಾ ಪಾತಿತೋ ನರಕೇಷ್ವಪಿ ।
ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ॥ ೫೯ ॥
ಭುಕ್ತ್ವಾ ಕ್ರಮೇಣ ನರಕಾಂಸ್ತದಂತೇ ಸ್ಥಾವರೋಽಭವತ್ ।
ಗರ್ದಭಸ್ತು ತತೋ ಜಜ್ಞೇ ವಿಡ್ವರಾಹಸ್ತತಃ ಪರಂ ॥ ೬೦ ॥
ಜಜ್ಞೇಽಥ ಸಾರಮೇಯೋಽಸೌ ಪಶ್ಚಾದ್ವಾಯಸತಾಂ ಗತಃ ।
ಅಥ ಚಂಡಾಲತಾಂ ಪ್ರಾಪ್ಯ ಶೂದ್ರಯೋನಿಮಗಾತ್ತತಃ ॥ ೬೧ ॥
ಗತವಾನ್ವೈಶ್ಯತಾಂ ಪಶ್ಚಾತ್ಕ್ಷತ್ರಿಯಸ್ತದನಂತರಂ ।
ಪ್ರಬಲೈರ್ಬಾಧ್ಯಮಾನೋಽಸೌ ಬ್ರಾಹ್ಮಣೋ ವೈ ತದಾಭವತ್ ॥ ೬೨ ॥
ಉಪನೀತಃ ಸ ಪಿತ್ರಾ ತು ವರ್ಷೇ ಗರ್ಭಾಷ್ಟಮೇ ದ್ವಿಜಃ ।
ವರ್ತಮಾನಃ ಪಿತುರ್ಗೇಹೇ ಸ್ವಾಚಾರಾಭ್ಯಾಸತತ್ಪರಃ ॥ ೬೩ ॥

---

೫೮. ಇಂತು ಬಹಳ ಕಾಲವಾದ ಮೇಲೆ ಆ ಶೂದ್ರನಿಂದ ಪ್ರೋಕ್ಷಿತನಾಗಿದ್ದುದರಿಂದ ಬ್ರಾಹ್ಮಣಸಮೂಹವೆಲ್ಲವೂ ಅವನನ್ನು ದೂರಮಾಡಿತು. ಅವನೂ ಕಾಲಕ್ರಮದಲ್ಲಿ ದೇಹವನ್ನು ತ್ಯಜಿಸಿದನು.

೫೯. ಬಳಿಕ ಅನೇಕ ಸಹಸ್ರಕೋಟಿಕಲ್ಪಗಳವರೆಗೂ ಯಮಭಟರಿಂದ ಎಳೆಯಲ್ಪಟ್ಟು ವಿವಿಧ ನರಕಗಳಲ್ಲಿ ತಳ್ಳಲ್ಪಟ್ಟನು:

೬೦. ಕ್ರಮವಾಗಿ ಆ ನರಕಗಳನ್ನೆಲ್ಲ ಅನುಭವಿಸಿಕೊಂಡು ಕೊನೆಯಲ್ಲಿ ಭೂಲೋಕದಲ್ಲಿ ಸ್ಥಾವರಜನ್ಮವನ್ನು ಪಡೆದನು. ಬಳಿಕ ಕತ್ತೆಯಾಗಿಯೂ ಆಮೇಲೆ ಪುರೀಷಭಕ್ಷಕವಾದ ಹಂದಿಯಾಗಿಯೂ ಜನಿಸಿದನು.

೬೧. ನಾಯಿಯಾಗಿ ಜನಿಸಿದನು. ಬಳಿಕ ಕಾಗೆಯ ಜನ್ಮವನ್ನೂ ತಾಳಿದನು. ಆಮೇಲೆ ಚಂಡಾಲನಾಗಿದ್ದು ಶೂದ್ರಯೋನಿಯಲ್ಲಿ ಮತ್ತೆ ಶರೀರವನ್ನು ಪಡೆದನು.

೬೨. ಬಳಿಕ ಕ್ರಮವಾಗಿ ವೈಶ್ಯತ್ವವನ್ನೂ ಕ್ಷತ್ರಿಯತ್ವವನ್ನೂ ಹೊಂದಿದನು. ಆ ಜನ್ಮದಲ್ಲಿ ಪ್ರಬಲ ಶತ್ರುಗಳಿಂದ ಕೊಲ್ಲಲ್ಪಟ್ಟು ಕಡೆಗೆ ಬ್ರಾಹ್ಮಣನಾಗಿ ಜನಿಸಿದನು.

೬೩. ಗರ್ಭಾಷ್ಟಮದ ವಯಸ್ಸಿನಲ್ಲೇ ತಂದೆಯಿಂದ ಉಪನಯನ ಸಂಸ್ಕಾರವನ್ನು ಪಡೆದು ದ್ವಿಜನಾದನು. ಮತ್ತು ತನ್ನ ವರ್ಣಾಶ್ರಮಗಳಿಗುಚಿತಗಳಾದ ಆಚಾರಾಭ್ಯಾಸಗಳಲ್ಲಿಯೇ ನಿರತನಾಗಿ ತಂದೆಯ ಮನೆಯಲ್ಲಿಯೇ ಬೆಳೆಯುತ್ತಿದ್ದನು.

ಗಚ್ಛನ್ಕದಾಚಿದ್ಗಹನೇ ಗೃಹೀತೋ ಬ್ರಹ್ಮರಕ್ಷಸಾ ।
ರುದನ್ಭ್ರಮನ್ಸ್ಖಲನ್ಮೂಢಃ ಪ್ರಲಪನ್ಪ್ರಹಸನ್ನಸೌ ॥ ೬೪ ॥
ಶಶ್ವದ್ಧಾಹೇತಿ ಚ ವದನ್ವೈದಿಕಂ ಕರ್ಮ ಸೋಽತ್ಯಜತ್ ।
ದೃಷ್ಟ್ವಾ ಸುತಂ ತಥಾಭೂತಂ ಪಿತಾ ದುಃಖೇನ ಪೀಡಿತಃ ॥ ೬೫ ॥
ಸುತಮಾದಾಯ ಚ ಸ್ನೇಹಾದಗಸ್ತ್ಯಂ ಶರಣಂ ಯಯೌ ।
ಸುವರ್ಣಮುಖರೀತೀರೇ ತಪಸ್ಯಂತಂ ಶಿವಾಗ್ರತಃ ॥ ೬೬ ॥
ಭಕ್ತ್ಯಾ ಮುನಿಂ ಪ್ರಣಮ್ಯಾಸೌ ಪಿತಾ ತಸ್ಯ ಸುತಸ್ಯ ವೈ ।
ತಸ್ಮೈ ನಿವೇದಯಾಮಾಸ ಸ್ವಪುತ್ರಸ್ಯ ವಿಚೇಷ್ಟಿತಂ ॥ ೬೭ ॥
ಅಬ್ರವೀಚ್ಚ ತದಾ ವಿಪ್ರಃ ಕುಂಭಜಂ ಮುನಿಪುಂಗವಂ ।
ಏಷ ಮೇ ತನಯೋ ಬ್ರಹ್ಮನ್ಗೃಹೀತೋ ಬ್ರಹ್ಮರಕ್ಷಸಾ ॥ ೬೮ ॥
ಸುಖಂ ನ ಲಭತೇ ಬ್ರಹ್ಮನ್ರಕ್ಷ ತಂ ಕರುಣಾದೃಶಾ ।
ನಾಸ್ತಿ ಮೇ ತನಯೋಽಪ್ಯನ್ಯಃ ಪಿತೄಣಾಮೃಣಮುಕ್ತಯೇ ॥ ೬೯ ॥

---

೬೪. ಒಮ್ಮೆ ಆ ಹುಡುಗನು ಕಾಡಿನಲ್ಲಿ ಓಡಾಡುತ್ತಿರಲು ಬ್ರಹ್ಮರಾಕ್ಷಸನಿಂದ ಗೃಹೀತನಾದನು. ಅಂದಿನಿಂದ ನಿಷ್ಕಾರಣವಾಗಿಯೇ ಅಳುತ್ತಲೂ, ಓಡಿಹೋಗುತ್ತಲೂ, ಎಡವಿ ಬೀಳುತ್ತಲೂ, ಬುದ್ಧಿಭ್ರಮಣೆಯಿಂದ ಪ್ರಲಾಪವನ್ನು ಮಾಡುತ್ತಲೂ, ಗಟ್ಟಿಯಾಗಿ ನಗುತ್ತಲೂ ಇರುತ್ತಿದ್ದನು.

೬೫–೬೬. ನಿರಂತರದಲ್ಲಿಯೂ ಹಾಹಾಕಾರಗಳನ್ನು ಮಾಡುತ್ತ ವೈದಿಕಗಳಾದ ತನ್ನ ನಿತ್ಯನೈಮಿತ್ತಿಕ ಕರ್ಮಗಳನ್ನೆಲ್ಲ ತ್ಯಜಿಸಿದನು. ಮಗನ ಈ ದುರವಸ್ಥೆಯನ್ನು ಕಂಡು ತಂದೆಯು ಬಹಳ ದುಃಖಗೊಂಡವನಾಗಿ ಅವನನ್ನು ಕರೆದುಕೊಂಡು ಸುವರ್ಣಮುಖರೀನದಿಯ ತೀರದಲ್ಲಿ ಶಿವಸಾನ್ನಿಧ್ಯದಲ್ಲಿ ತಪಸ್ಸನ್ನು ಮಾಡುತ್ತಿದ್ದ ಅಗಸ್ತ್ಯಮಹಾಮುನಿಯನ್ನು ಶರಣುಹೊಕ್ಕನು.

೬೭. ಪುತ್ರಸಹಿತನಾದ ಆ ಬ್ರಾಹ್ಮಣನು ಭಕ್ತಿಯಿಂದ ಆತನಿಗೆ ನಮಸ್ಕರಿಸಿ ತನ್ನ ಮಗನಿಗಾದ ಗ್ರಹಚೇಷ್ಟೆಯನ್ನೆಲ್ಲ ಹೇಳಿಕೊಂಡನು.

೬೮. ಬ್ರಾಹ್ಮಣನು ಕುಂಭಸಂಭವನಾದ ಮಹಾಮುನಿಯನ್ನು ಕುರಿತು ಹೇಳತೊಡಗಿದನು. "ಸ್ವಾಮಿ! ಇವನೇ ನನ್ನ ಮಗನು. ಬ್ರಹ್ಮರಾಕ್ಷಸನ ಹಿಡಿತಕ್ಕೆ ಸಿಕ್ಕಿ ನರಳುತ್ತಿರುವನು.

೬೯. ಇವನಿಗೆ ಸುಖವೆಂಬುದೇ ಇಲ್ಲವಾಗಿದೆ. ನಿನ್ನ ಕರುಣಾವಲೋಕನದಿಂದ ಇವನನ್ನು ಕಾಪಾಡು. ನನ್ನ ಪಿತೃಗಳನ್ನು ಋಣಮುಕ್ತರನ್ನಾಗಿ ಮಾಡಲು ನನಗೆ ಮತ್ತೊಬ್ಬ ಮಗನೂ ಇಲ್ಲ.

ತಸ್ಯ ಪೀಡಾವಿನಾಶಾರ್ಥಮುಪಾಯಂ ಬ್ರೂಹಿ ಕುಂಭಜ ।
ತ್ವತ್ಸಮಸ್ತ್ರಿಷು ಲೋಕೇಷು ತಪಃಶೀಲೋ ನ ವಿದ್ಯತೇ ॥ ೭೦ ॥
ತ್ವಾಂ ವಿನಾಸ್ಯ ಪರಿತ್ರಾತಾ ನ ಮೇ ಪುತ್ರಸ್ಯ ವಿದ್ಯತೇ ।
ಪುತ್ರೇ ದಯಾಂ ಕುರು ಗುರೋ ದಯಾಶೀಲಾ ಹಿ ಸಾಧವಃ ॥ ೭೧ ॥

ಶ್ರೀ ಸೂತ ಉವಾಚ :—

ಏವಮುಕ್ತಸ್ತದಾ ತೇನ ಕುಂಭಜೋ ಧ್ಯಾನಮಾಸ್ಥಿತಃ ।
ಧ್ಯಾತ್ವಾ ತು ಸುಚಿರಂ ಕಾಲಮಬ್ರವೀದ್ಬ್ರಾಹ್ಮಣಂ ತತಃ ॥ ೭೨ ॥

ಅಗಸ್ತ್ಯ ಉವಾಚ :—

ಪೂರ್ವಜನ್ಮನಿ ತೇ ಪುತ್ರೋ ಬ್ರಾಹ್ಮಣೋಽಯಂ ಮಹಾಮತೇ ।
ಸುಮತಿರ್ನಾಮ ವಿಪ್ರೋಽಯಂ ಮತಿಂ ಶೂದ್ರಾಯ ವೈ ದದೌ ॥ ೭೩ ॥
ಕರ್ಮಾಣಿ ವೈದಿಕಾನ್ಯೇಷ ಸರ್ವಾಣ್ಯುಪದಿದೇಶ ವೈ ।
ಅತೋಽಯಂ ನರಕಾನ್ಭುಕ್ತ್ವಾ ಕಲ್ಪಕೋಟಿಸಹಸ್ರಕಂ ॥ ೭೪ ॥
ಜಾತೋ ಭುವಿ ತದಂತೇಷು ಸ್ಥಾವರಾದಿಷು ಯೋನಿಷು ।
ಇದಾನೀಂ ಬ್ರಾಹ್ಮಣೋ ಜಾತಃ ಕರ್ಮಶೇಷೇಣ ತೇ ಸುತಃ ॥ ೭೫ ॥

---

೭೦. ಎಲೈ ಕುಂಭಜನ್ಮನೆ! ಇವನ ಗ್ರಹಪೀಡೆಯು ಕಳೆದುಹೋಗುವುದಕ್ಕೆ ಉಪಾಯವನ್ನು ಹೇಳುವವನಾಗು. ನಿನಗೆ ಸಮಾನರಾದ ತಪಸ್ಸಂಪನ್ನರು ಮೂರು ಲೋಕಗಳಲ್ಲಿಯೂ ಯಾರೂ ಇಲ್ಲವಷ್ಟೆ.

೭೧. ಈ ನನ್ನ ಮಗನನ್ನು ಕಾಪಾಡುವುದಕ್ಕೆ ನೀನಲ್ಲದೆ ಮತ್ತೊಬ್ಬ ರಕ್ಷಕನು ಯಾರೂ ಗತಿಯಿಲ್ಲ. ಗುರುವರ್ಯನೆ! ನನ್ನ ಮಗನಲ್ಲಿ ದಯೆಯನ್ನು ತೋರು. ಸಾಧುಗಳೆಲ್ಲರೂ ದಯಾಳುಗಳಾಗಿರುವರಲ್ಲವೆ!"

೭೨. ಸೂತನು ಹೇಳುತ್ತಾನೆ:—ಇಂತು ಬ್ರಾಹ್ಮಣನಿಂದ ಪ್ರಾರ್ಥಿಸಲ್ಪಟ್ಟವನಾಗಿ ಅಗಸ್ತ್ಯಮಹಾಮುನಿಯು ಧ್ಯಾನದಲ್ಲಿ ನಿರತನಾದನು. ಬಹಳ ಕಾಲದವರೆಗೂ ಧ್ಯಾನಾಸಕ್ತನಾಗಿದ್ದು ಬಹಿರ್ಮುಖನಾದಮೇಲೆ ಬ್ರಾಹ್ಮಣನನ್ನು ಕುರಿತು ಹೇಳತೊಡಗಿದನು.

೭೩. ಅಗಸ್ತ್ಯನು ಹೇಳುತ್ತಾನೆ:—"ಎಲೈ ಮಹಾಮತಿಯೆ! ಅನೇಕ ಜನ್ಮಗಳ ಹಿಂದೆ ನಿನ್ನ ಮಗನು ಬ್ರಾಹ್ಮಣನಾಗಿದ್ದನು. ಸುಮತಿಯೆಂಬ ಹೆಸರಿನಿಂದ ಬ್ರಾಹ್ಮಣ ಜನ್ಮವನ್ನು ಪಡೆದಿದ್ದರೂ ಶೂದ್ರನಿಗೆ ಜ್ಞಾನೋಪದೇಶವನ್ನು ಮಾಡಿದನು.

೭೪—೭೫. ಅವನಿಗೆ ಸಕಲ ವೈದಿಕಕರ್ಮಗಳನ್ನೂ ಉಪದೇಶಮಾಡಿದನು. ಆದುದರಿಂದ ಅನೇಕಸಾವಿರಕೋಟಿ ಕಲ್ಪಗಳವರೆಗೂ ವಿಧವಿಧಗಳಾದ ನರಕಗಳ ಯಾತನೆಯನ್ನನುಭವಿಸುತ್ತಿದ್ದು, ಕರ್ಮವಿಪಾಕದಿಂದ ಭೂಲೋಕದಲ್ಲಿ ಸ್ಥಾವ

ಯಮೇನ ಪ್ರೇಷಿತೇನಾತ್ರ ಗೃಹೀತೋ ಬ್ರಹ್ಮರಕ್ಷಸಾ ।
ಕ್ರೂರೇಣ ಪಾತಕೇನಾದ್ಯ ಪೂರ್ವಜನ್ಮಕೃತೇನ ವೈ ॥ ೨೬ ॥
ಉಪಾಯಂ ತೇ ಪ್ರವಕ್ಷ್ಯಾಮಿ ಬ್ರಹ್ಮರಕ್ಷೋವಿನಾಶನೇ ।
ಶೃಣುಷ್ವ ಶ್ರದ್ಧಯಾ ಯುಕ್ತಃ ಸಮಾಧಾಯ ಚ ಮಾನಸಂ ॥ ೨೭ ॥
ಸುವರ್ಣಮುಖರೀತೀರೇ ಋಷಿಸಂಘನಿಷೇವಿತೇ ।
ವರ್ತತೇ ದೈವತೈಃ ಸೇವ್ಯಃ ಪಾವನೋ ವೇಂಕಟಾಚಲಃ ॥ ೨೮ ॥
ತಸ್ಯೋಪರಿ ಮಹಾತೀರ್ಥಂ ನಾಮ್ನಾ ಪಾಪವಿನಾಶನಂ ।
ಅಸ್ತಿ ಪುಣ್ಯಂ ಪ್ರಸಿದ್ಧಂ ಚ ಮಹಾಪಾತಕನಾಶನಂ ॥ ೨೯ ॥
ಭೂತಪ್ರೇತಪಿಶಾಚಾನಾಂ ವೇತಾಲಬ್ರಹ್ಮರಕ್ಷಸಾಂ ।
ಮಹತಾಂ ಚೈವ ರೋಗಾಣಾಂ ತೀರ್ಥಂ ತನ್ನಾಶಕಂ ಸ್ಮೃತಂ ॥ ೩೦ ॥
ಸುತಮಾದಾಯ ಗಚ್ಛ ತ್ವಂ ತತ್ತೀರ್ಥಂ ಗಿರಿಮಧ್ಯಗಂ ।
ಪ್ರಯತಃ ಸ್ನಾಪಯ ಸುತಂ ತೀರ್ಥೇ ಪಾಪವಿನಾಶನೇ ॥ ೩೧ ॥

---

ರಾದಿ ಯೋನಿಗಳಲ್ಲಿ ಜನ್ಮವನ್ನು ಪಡೆದನು. ಈಗ ತನ್ನ ಕರ್ಮಶೇಷದಿಂದ ನಿನ್ನ ಮಗನಾಗಿ ಬ್ರಾಹ್ಮಣಜನ್ಮವನ್ನು ಪಡೆದಿರುವನು.

೨೬–೨೭. ಪೂರ್ವಜನ್ಮದಲ್ಲಿ ಮಾಡಿದ ಭಯಂಕರವಾದ ಪಾಪದ ಫಲವಾಗಿಯೇ ಈಗ ಅವನು ಯಮಧರ್ಮನಿಂದ ಪ್ರೇರಿತನಾದ ಬ್ರಹ್ಮರಾಕ್ಷಸನ ಪೀಡೆಗೊಳಗಾಗಿರುವನು. ಈ ಬ್ರಹ್ಮರಾಕ್ಷಸನ ಪೀಡೆಯನ್ನು ಕಳೆದುಕೊಳ್ಳಲು ನಿನಗೊಂದು ಉಪಾಯವನ್ನು ಹೇಳಿಕೊಡುವೆನು. ಶ್ರದ್ಧೆಯಿಂದಲೂ ಮನಸ್ಸಮಾಧಾನದಿಂದಲೂ ಕೇಳುವವನಾಗು.

೨೮. ಮಹರ್ಷಿಸಮೂಹಗಳಿಂದ ನಿರಂತರಸೇವಿತವಾಗಿರುವ ಈ ಸುವರ್ಣಮುಖರಿಯ ತೀರದಲ್ಲಿಯೇ ಸಕಲದೇವತೆಗಳಿಂದಲೂ ಸೇವೆಗೊಳ್ಳುತ್ತಿರುವ ಪಾವನವಾದ ವೇಂಕಟಾಚಲವು ಶೋಭಿಸುತ್ತಿರುವುದು.

೨೯. ಅದರಮೇಲೆ ಪುಣ್ಯಪ್ರದವೂ, ಸುಪ್ರಸಿದ್ಧವೂ, ಸಕಲ ಮಹಾಪಾತಕಗಳನ್ನು ನಾಶಗೊಳಿಸುವುದೂ ಆದ ಪಾಪವಿನಾಶನವೆಂಬ ಮಹಾತೀರ್ಥವೊಂದಿರುವುದು.

೩೦. ಆ ತೀರ್ಥೋತ್ತಮವು ಭೂತ, ಪ್ರೇತ, ಪಿಶಾಚ, ಭೇತಾಳ, ಬ್ರಹ್ಮರಾಕ್ಷಸರ ಪೀಡೆಗಳನ್ನೂ ಭಯಂಕರಗಳಾದ ರೋಗಗಳನ್ನೂ ನಾಶಗೊಳಿಸುವುದೆಂದು ಹೇಳಲ್ಪಟ್ಟಿರುವುದು.

೩೧. ನೀನು ಮಗನನ್ನು ಕರೆದುಕೊಂಡು ಪರ್ವತಮಧ್ಯದಲ್ಲಿ ನೆಲಸಿರುವ ಆ ತೀರ್ಥಕ್ಕೆ ಹೊರಡು. ಪಾಪನಾಶಕವಾದ ಆ ತೀರ್ಥದಲ್ಲಿ ನಿನ್ನ ಪುತ್ರನಿಗೆ ಬಲವಂತವಾಗಿಯಾದರೂ ಸ್ನಾನಮಾಡಿಸು.

ಸ್ನಾನೇನ ತ್ರಿದಿನಂ ತತ್ರ ಬ್ರಹ್ಮರಕ್ಷೋ ವಿನಶ್ಯತಿ ।
ನೈವೋಪಾಯಾಂತರಂ ತಸ್ಯ ವಿನಾಶೇ ವಿದ್ಯತೇ ಭುವಿ ॥ ೮೨ ॥
ತಸ್ಮಾಚ್ಛೀಘ್ರಂ ಪ್ರಯಾಹಿ ತ್ವಂ ವೇಂಕಟಾಹ್ವಯಪರ್ವತಂ ।
ತತ್ರ ಪಾಪವಿನಾಶಾಖ್ಯತೀರ್ಥೇ ಸ್ನಾಪಯ ತೇ ಸುತಂ ॥ ೮೩ ॥
ಮಾ ವಿಲಂಬಂ ಕುರುಷ್ವಾತ್ರ ತ್ವರಯಾ ಯಾಹಿ ವೈ ದ್ವಿಜ ।
ಇತ್ಯುಕ್ತಃ ಸ ದ್ವಿಜೋಽಗಸ್ತ್ಯಂ ಪ್ರಣಮ್ಯ ಭುವಿ ದಂಡವತ್ ॥ ೮೪ ॥
ಅನುಜ್ಞಾತಶ್ಚ ತೇನಾಸೌ ಪ್ರಯಯೌ ವೇಂಕಟಾಚಲಂ ।
ಸುತೇನ ಸಾಕಂ ವಿಪ್ರೋಽಸೌ ಗತ್ವಾ ಪಾಪವಿನಾಶನಂ ॥ ೮೫ ॥
ಸಂಕಲ್ಪಪೂರ್ವಂ ಸಂಸ್ನಾಪ್ಯ ದಿನತ್ರಯಮಸೌ ಸುತಂ ।
ಸಸ್ನೌ ಸ್ವಯಂ ಚ ವಿಪ್ರೇಂದ್ರಃ ಪಿತಾ ಪಾಪವಿನಾಶನೇ ॥ ೮೬ ॥
ಸಮಾಗತಃ ಪಪೌ ತೋಯಂ ಕೃತ್ವಾ ಚಾಪ್ಯಾಹ್ನಿಕಕ್ರಮಂ ।
ಅಥ ತಸ್ಯ ಸುತಸ್ತತ್ರ ವಿಮುಕ್ತೋ ಬ್ರಹ್ಮರಕ್ಷಸಾ ॥ ೮೭ ॥

---

೮೨. ಅಲ್ಲಿ ಮೂರು ದಿನಗಳು ಸ್ನಾನಮಾಡುವುದರಿಂದ ಬ್ರಹ್ಮರಾಕ್ಷಸನ ಬಾಧೆಯು ಬಿಡುಗಡೆಯಾಗುವದು. ಅದನ್ನು ಕಳೆದುಕೊಳ್ಳುವುದಕ್ಕೆ ಭೂಲೋಕ ದಲ್ಲಿ ಮತ್ತೆ ಯಾವ ಉಪಾಯವೂ ಇಲ್ಲವೇ ಇಲ್ಲ.

೮೩. ಆದುದರಿಂದ ನೀನು ಬೇಗನೆ ವೆಂಕಟಾಚಲವೆಂಬ ಪರ್ವತವನ್ನು ಕುರಿತು ಹೊರಡು. ಅಲ್ಲಿರುವ ಪಾಪವಿನಾಶ ತೀರ್ಥದಲ್ಲಿ ನಿನ್ನ ಮಗನಿಗೆ ಸ್ನಾನ ಮಾಡಿಸು.

೮೪–೮೬. ಎಲೈ ಬ್ರಾಹ್ಮಣೋತ್ತಮನೆ! ಈ ವಿಷಯದಲ್ಲಿ ನೀನು ವಿಳಂಬ ವನ್ನು ಮಾಡಬೇಡ. ತ್ವರೆಯಾಗಿಹೊರಡು.'' ಇಂತು ಅಪ್ಪಣೆಯನ್ನು ಮಾಡಲು ಬ್ರಾಹ್ಮಣನು ಆಗಸ್ತ್ಯಮಹರ್ಷಿಗೆ ಭೂಮಿಯಲ್ಲಿಬಿದ್ದು ದಂಡಪ್ರಣಾಮವನ್ನು ಮಾಡಿ ಆತನ ಅನುಜ್ಞೆಯನ್ನು ಪಡೆದು ವೆಂಕಟಾಚಲಕ್ಕೆ ಹೊರಡುವವನಾದನು. ಮಗನೊಡನೆ ಆ ಬ್ರಾಹ್ಮಣನು ಪಾಪವಿನಾಶನ ತೀರ್ಥವನ್ನು ಸೇರಿ ಮೂರು ದಿನಗಳ ಪರ್ಯಂತವೂ ಸಂಕಲ್ಪಪೂರ್ವಕವಾಗಿ ತನ್ನ ಮಗನಿಗೆ ಸ್ನಾನಗಳನ್ನು ಮಾಡಿಸಿ ತಂದೆಯಾದ ತಾನೂ ಆ ಪಾಪನಾಶಕವಾದ ತೀರ್ಥದಲ್ಲಿ ಸ್ನಾನ ಮಾಡಿದನು.

೮೭. ಬಳಿಕ ಆಹ್ನಿಕಕ್ರಿಯೆಯನ್ನು ಮುಗಿಸಿಕೊಂಡು ಬಂದು ಮತ್ತೆ ತೀರ್ಥೋದಕವನ್ನು ಪಾನಮಾಡಿದನು. ತತ್‌ಕ್ಷಣದಲ್ಲಿಯೇ ಆ ಬ್ರಾಹ್ಮಣ ಪುತ್ರನು ಬ್ರಹ್ಮರಾಕ್ಷಸನಿಂದ ಬಿಡುಗಡೆಯನ್ನು ಹೊಂದಿದನು.

ಸಮುಜಾಯುತ ನೀರೋಗಃ ಸ್ವಸ್ಥಃ ಸುಂದರರೂಪಧೃಕ್ ।
ಸರ್ವಸಂಪತ್ಸಮೃದ್ಧೋಽಸೌ ಭುಕ್ತ್ವಾ ಭೋಗಾನನೇಕಶಃ ॥ ೮೮ ॥
ದೇಹಾಂತೇ ಪ್ರಯಯೌ ಮುಕ್ತಿಂ ಸ್ನಾನಾತ್ಪಾಪವಿನಾಶನೇ ।
ಪಿತಾಪಿ ತತ್ರ ಸ್ನಾನೇನ ದೇಹಾಂತೇ ಮುಕ್ತಿಮಾಪ್ತವಾನ್ ॥ ೮೯ ॥
ತೇನೋಪದಿಷ್ಟೋಽಯಂ ಶೂದ್ರಃ ಸ ಭುಕ್ತ್ವಾ ನರಕಾನ್ಕ್ರಮಾತ್ ।
ಅನೇಕಾಸು ಜನಿತ್ವಾ ಚ ಕುತ್ಸಿತಾಸ್ವಪಿ ಯೋನಿಷು ॥ ೯೦ ॥
ಗೃಧ್ರಜನ್ಮಾಭವತ್ಪಶ್ಚಾದ್ವೇಂಕಟಾಚಲಭೂಧರೇ ।
ಸ ಕದಾಚಿಜ್ಜಲಂ ಪಾತುಂ ತೀರ್ಥೇ ಪಾಪವಿನಾಶನೇ ॥ ೯೧ ॥
ಸಮಾಗತಃ ಪಪೌ ತೋಯಂ ಸಿಷಿಚೇ ಚಾತ್ಮನಸ್ತನುಂ ।
ತದೈವ ದಿವ್ಯದೇಹಃ ಸನ್ಸರ್ವಾಭರಣಭೂಷಿತಃ ॥ ೯೨ ॥
ದಿವ್ಯಂ ವಿಮಾನಮಾರುಹ್ಯ ಪ್ರಯಯಾವಮರಾಲಯಂ ॥ ೯೩ ॥

ಶ್ರೀ ಸೂತ ಉವಾಚ :—

ಏವಂ ಪ್ರಭಾವಮೇತದ್ಧಿ ತೀರ್ಥಂ ಪಾಪವಿನಾಶನಂ ।
ಪಾಪಾನಾಂ ನಾಶನಾದ್ವಿಪ್ರಾ ಪಾಪನಾಶಾಭಿಧಂ ಹಿ ತತ್ ॥ ೯೪ ॥

---

೮೮–೮೯. ಮತ್ತು ರೋಗರಹಿತನೂ ಸ್ವಸ್ಥಚಿತ್ತನೂ ಆಗಿ ಸುಕುಮಾರ ಸುಂದರ ರೂಪದಿಂದ ಕಂಗೊಳಿಸುತ್ತಿದ್ದನು. ಇಂತು ಆ ಬ್ರಾಹ್ಮಣನು ಪಾಪವಿನಾಶನ ತೀರ್ಥದಲ್ಲಿ ಸ್ನಾನವನ್ನು ಮಾಡಿದ ಪುಣ್ಯದ ಫಲವಾಗಿ ಸಕಲೈಶ್ವರ್ಯಗಳಿಂದ ಯುಕ್ತನಾಗಿ ಅನೇಕ ಭೋಗಗಳನ್ನನುಭವಿಸುತ್ತ ದೇಹಾವಸಾನಸಮಯದಲ್ಲಿ ಮೋಕ್ಷವನ್ನು ಪಡೆದನು. ತಂದೆಯೂ ಸ್ನಾನದ ಫಲವಾಗಿ ದೇಹಾಂತದಲ್ಲಿ ಮುಕ್ತನಾದನು.

೯೦–೯೩. ಸುಮತಿಯಿಂದ ಮಂತ್ರೋಪದೇಶವನ್ನು ಹೊಂದಿದ ಆ ಶೂದ್ರನಾದ ದೃಢಮತಿಯೂ ತನ್ನ ಪಾಪದ ಫಲವಾಗಿ ಅನೇಕ ನರಕಗಳನ್ನು ಕ್ರಮವಾಗಿ ಅನುಭವಿಸಿ ಭೂಲೋಕದಲ್ಲಿಯೂ ಅನೇಕ ನೀಚಯೋನಿಗಳಲ್ಲಿ ಜನ್ಮವನ್ನು ಪಡೆದು ಕಡೆಗೆ ವೇಂಕಟಾಚಲಪ್ರದೇಶದಲ್ಲಿ ಗೃಧ್ರಪಕ್ಷಿಯಾಗಿ ಜನಿಸಿದನು. ಮತ್ತೆ ಒಮ್ಮೆ ನೀರನ್ನು ಕುಡಿಯಲು ಪಾಪವಿನಾಶನ ತೀರ್ಥವನ್ನು ಸಮೀಪಿಸಿ ನೀರನ್ನು ಕುಡಿಯುತ್ತಿರಲು ತನ್ನ ರೆಕ್ಕೆಗಳಿಂದ ನೀರಿನ ಹನಿಗಳನ್ನು ಎರಚಿ ಶರೀರವನ್ನು ನೆನಸಿಕೊಂಡನು. ತತ್‌ಕ್ಷಣದಲ್ಲಿಯೇ ದಿವ್ಯವಾದ ದೇಹವನ್ನು ಪಡೆದು ಸಕಲಾಭರಣಭೂಷಿತನಾಗಿ ದಿವ್ಯವಿಮಾನವನ್ನೇರಿ ಸ್ವರ್ಗಲೋಕವನ್ನು ಕುರಿತು ಪ್ರಯಾಣಮಾಡಿದನು.

೯೪. ಸೂತನು ಹೇಳುತ್ತಾನೆ:—ಎಲೈ ಬ್ರಾಹ್ಮಣರಿರಾ! ಪಾಪವಿನಾಶನವೆಂಬ ಈ ತೀರ್ಥವು ಇಂತಹ ಮಹತ್ತ್ವವುಳ್ಳುದಾಗಿರುವುದು. ಸಮಸ್ತಪಾಪ

ಇತ್ಥಂ ರಹಸ್ಯಂ ಕಥಿತಂ ಮುನೀಂದ್ರಾ
ಸ್ತ್ವದ್ವೈಭವಂ ಪಾಪವಿನಾಶನಸ್ಯ ।
ಯತ್ರಾಭಿಷೇಕಾತ್ಸಹಸಾ ವಿಮುಕ್ತೌ
ದ್ವಿಜಶ್ಚ ಶೂದ್ರಶ್ಚ ವಿನಿಂದ್ಯಕೃತ್ಯೌ ॥ ೯೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ "ಪಾಪವಿನಾಶನತೀರ್ಥಮಹಿಮಾನುವರ್ಣನಂ" ನಾಮ ಏಕೋನವಿಂಶತಿತಮೋಽಧ್ಯಾಯಃ

---

ಗಳನ್ನೂ ನಾಶಗೊಳಿಸುವುದರಿಂದ ಈ ತೀರ್ಥಕ್ಕೆ ಪಾಪವಿನಾಶನವೆಂಬ ಹೆಸರು ಬಂದಿರುವುದು.

೯೫. ಮುನೀಂದ್ರರೆ! ಇಂತು ಪಾಪವಿನಾಶನ ತೀರ್ಥದ ವೈಭವವನ್ನು ಕುರಿತು ರಹಸ್ಯವನ್ನು ನಿಮಗೆ ತಿಳಿಸಿರುವೆನು. ಅದರಲ್ಲಿ ಸ್ನಾನವನ್ನು ಮಾಡಿದುದರಿಂದ ಪರಮನೀಚಕೃತ್ಯಗಳನ್ನುಮಾಡಿದ್ದ ಬ್ರಾಹ್ಮಣ ಶೂದ್ರರಿಬ್ಬರೂ ತತ್‌ಕ್ಷಣದಲ್ಲಿಯೇ ಮೋಕ್ಷವನ್ನು ಪಡೆದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೇಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹ ಸಂವಾದದಲ್ಲಿ "ಪಾಪನಾಶನತೀರ್ಥ ಮಹಿಮಾನುರ್ಣನ"ವೆಂಬ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ವಿಂಶತಿತಮೋಽಧ್ಯಾಯಃ

### ಪಾಪವಿನಾಶನತೀರ್ಥೇ ಭೂದಾನಫಲಾನುವರ್ಣನಂ

ಶ್ರೀ ಸೂತ ಉವಾಚ :—

ಪುನಶ್ಚಾಹಂ ಪ್ರವಕ್ಷ್ಯಾಮಿ ಪಾಪನಾಶನವೈಭವಂ ।
ಭಗವದ್ಭಕ್ತಿಭಾವೇನ ಶ್ರುಣುಧ್ವಂ ಸುಸಮಾಹಿತಾಃ ॥ ೧ ॥
ಇತಿಹಾಸಂ ಪ್ರವಕ್ಷ್ಯಾಮಿ ಸರ್ವಪಾಪವಿನಾಶನಂ ।
ಯಚ್ಛೃತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೨ ॥
ಆಸೀತ್ಪುರಾ ದ್ವಿಜವರೋ ವೇದವೇದಾಂಗಪಾರಗಃ ।
ದರಿದ್ರೋ ವೃತ್ತಿಹೀನಶ್ಚ ನಾಮ್ನಾ ಭದ್ರಮತಿರ್ದ್ವಿಜಃ ॥ ೩ ॥
ಶ್ರುತಾನಿ ಸರ್ವಶಾಸ್ತ್ರಾಣಿ ತೇನ ವಿಪ್ರೇಣ ಧೀಮತಾ ।
ಶ್ರುತಾನಿ ಚ ಪುರಾಣಾನಿ ಧರ್ಮಶಾಸ್ತ್ರಾಣಿ ಸರ್ವಶಃ ॥ ೪ ॥
ಅಭವಂಸ್ತಸ್ಯ ಷಟ್ಪತ್ನ್ಯಃ ಕೃತಾ ಸಿಂಧುರ್ಯಶೋವತೀ ।
ಕಾಮಿನೀ ಮಾಲಿನೀ ಚೈವ ಶೋಭಾ ಚೈವ ಪ್ರಕೀರ್ತಿತಾಃ ॥ ೫ ॥

---

## ಕನ್ನಡದ ಅನುವಾದ

### ಪಾಪನಾಶನ ತೀರ್ಥದಲ್ಲಿ ಭೂದಾನಫಲವರ್ಣನ

೧. ಸೂತನು ಹೇಳುತ್ತಾನೆ:— ಪಾಪವಿನಾಶನತೀರ್ಥದ ಮಾಹಾತ್ಮ್ಯೆ ಯನ್ನು ನಾನು ಮತ್ತೆಯೂ ವಿಸ್ತರಿಸುವೆನು. ಭಗವಂತನಲ್ಲಿ ಭಕ್ತಿಯುಳ್ಳ ಮನಸ್ಸಿಂದ ಸಮಾಹಿತರಾಗಿ ಕೇಳುವವರಾಗಿರಿ.

೨. ಸಕಲ ಪಾಪಗಳನ್ನೂ ನಾಶಗೊಳಿಸುವಂತಹ ಇತಿಹಾಸವೊಂದನ್ನು ಹೇಳುವೆನು. ಅದನ್ನು ಕೇಳಿದ ಮಾತ್ರದಿಂದಲೇ ಮನುಷ್ಯನು ಸಮಸ್ತಪಾಪಗಳಿಂದಲೂ ಮುಕ್ತನಾಗುವನು. ಈ ವಿಷಯದಲ್ಲಿ ಸಂಶಯವಿಲ್ಲ.

೩. ಪೂರ್ವದಲ್ಲಿ ಷಡಂಗಸಹಿತಗಳಾದ ವೇದಗಳನ್ನು ಆಮೂಲಾಗ್ರವಾಗಿ ತಿಳಿದವನೂ, ದರಿದ್ರನೂ, ಜೀವನೋಪಾಯರಹಿತನೂ ಆದ ಭದ್ರಮತಿಯೆಂಬ ಬ್ರಾಹ್ಮಣೋತ್ತಮನೊಬ್ಬನು ವಾಸಿಸುತ್ತಿದ್ದನು.

೪. ಬುದ್ಧಿಶಾಲಿಯಾದ ಆತನು ಸಕಲ ಶಾಸ್ತ್ರಗಳನ್ನೂ, ಪುರಾಣಗಳನ್ನೂ, ಸಮಗ್ರಧರ್ಮಶಾಸ್ತ್ರಗಳನ್ನೂ ಸಾಂಗವಾಗಿ ಅಭ್ಯಸಿಸಿದ್ದನು.

೫. ಆತನಿಗೆ ಕೃತೆ, ಸಿಂಧು, ಯಶೋವತಿ, ಕಾಮಿನಿ, ಮಾಲಿನಿ, ಶೋಭೆ ಎಂಬ ಹೆಸರುಗಳಿಂದ ಪ್ರಸಿದ್ಧರಾದ ಆರು ಜನ ಮಡದಿಯರು ಇದ್ದರು.

ತಾಸು ಪತ್ನೀಷು ತಸ್ಯಾಸೀತ್ಪುತ್ರಾಣಾಂ ಚ ಶತದ್ವಯಂ ।
ತೇ ಸರ್ವೇ ತಸ್ಯ ಪುತ್ರಾದ್ಯಾಃ ಕ್ಷುಧಯಾ ಪರಿಪೀಡಿತಾಃ ॥ ೬ ॥
ಅಕಿಂಚನೋ ಭದ್ರಮತಿಃ ಕ್ಷುಧಾರ್ತಾನಾತ್ಮಜಾನ್ಪ್ರಿಯಾನ್ ।
ಪಶ್ಯನ್ಪ್ರಿಯಾಃ ಕ್ಷುಧಾರ್ತಾಶ್ಚ ವಿಲಲಾಪಾಕುಲೇಂದ್ರಿಯಃ ॥ ೭ ॥
ಧಿಗ್ಜನ್ಮ ಭಾಗ್ಯರಹಿತಂ ಧಿಗ್ಜನ್ಮ ಧನವರ್ಜಿತಂ ।
ಧಿಗ್ಜನ್ಮ ಕೀರ್ತಿರಹಿತಂ ದಿಗ್ಜನ್ಮಾತಿಥ್ಯವರ್ಜಿತಂ ॥ ೮ ॥
ಧಿಗ್ಜನ್ಮಾಚಾರರಹಿತಂ ಧಿಗ್ಜನ್ಮ ಜ್ಞಾನವರ್ಜಿತಂ ।
ಧಿಗ್ಜನ್ಮ ಯತ್ನರಹಿತಂ ಧಿಗ್ಜನ್ಮ ಸುಖವರ್ಜಿತಂ ॥ ೯ ॥
ಧಿಗ್ಜನ್ಮ ಬಂಧುರಹಿತಂ ಧಿಗ್ಜನ್ಮ ಖ್ಯಾತಿವರ್ಜಿತಂ ।
ನರಸ್ಯ ಬಹ್ವಪತ್ಯಸ್ಯ ಧಿಗ್ಜನ್ಮೈಶ್ವರ್ಯವರ್ಜಿತಂ ॥ ೧೦ ॥
ಅಹೋ ಗುಣಾಃ ಸೌಮ್ಯತಾ ಚ ವಿದ್ವತ್ತಾ ಜನ್ಮ ಸತ್ಕುಲೇ ।
ದಾರಿದ್ರ್ಯಾಂಬುಧಿಮಗ್ನಸ್ಯ ಸರ್ವಮೇತನ್ನ ಶೋಭತೇ ॥ ೧೧ ॥
ವಿಪ್ರಾಃ ಪುತ್ರಾಶ್ಚ ಪೌತ್ರಾಶ್ಚ ಬಾಂಧವಾ ಭ್ರಾತರಸ್ತಥಾ ।
ಶಿಷ್ಯಾಶ್ಚ ಸರ್ವೇ ಮನುಜಾಸ್ತ್ಯಕ್ಷ್ಯಂತ್ಯೈಶ್ವರ್ಯವರ್ಜಿತಂ ॥ ೧೨ ॥

---

೬. ಆ ಪತ್ನಿಯರಲ್ಲಿ ಅವನಿಗೆ ಇನ್ನೂರು ಮಕ್ಕಳು ಹುಟ್ಟಿದ್ದರು. ಪುತ್ರರೇ ಮೊದಲಾದ ಮನೆಯವರೆಲ್ಲರೂ ಹಸಿವಿನಿಂದ ಬಹಳವಾಗಿ ಬಾಧೆಗೊಳ್ಳುತ್ತಿದ್ದರು.

೭. ಕೇವಲ ದರಿದ್ರನಾದ ಭದ್ರಮತಿಯು ಪ್ರಿಯರಾದ ತನ್ನ ಮಕ್ಕಳೂ ಹೆಂಡತಿಯರೂ ಹಸಿವಿನಿಂದ ಬಳಲುತ್ತಿರುವುದನ್ನು ಕಂಡು ಮನಸ್ಸಿನ ದುಃಖದಿಂದ ಬಹುವಿಧವಾಗಿ ಪ್ರಲಾಪವನ್ನು ಮಾಡತೊಡಗಿದನು.

೮. ಸೌಭಾಗ್ಯರಹಿತವೂ, ಧನಹೀನವೂ, ಸತ್ಕೀರ್ತಿವರ್ಜಿತವೂ, ಆತಿಥ್ಯರಹಿತವೂ ಆದ ಮನುಷ್ಯನ ಜನ್ಮಕ್ಕೆ ಧಿಕ್ಕಾರವಿರಲಿ.

೯. ಸದಾಚಾರರಹಿತವೂ, ಪರಮಾತ್ಮಜ್ಞಾನವರ್ಜಿತವೂ, ಪುರುಷಪ್ರಯತ್ನಹೀನವೂ, ಸುಖವರ್ಜಿತವೂ ಆದ ಜೀವನಕ್ಕೆ ಧಿಕ್ಕಾರವಿರಲಿ.

೧೦. ಏಕಾಕಿಯಾದವನ, ಕೀರ್ತಿವರ್ಜಿತವಾದವನ ಜೀವನಕ್ಕೆ ಧಿಕ್ಕಾರವು. ಬಹುಸಂತತಿಯುಳ್ಳವನಾದರೂ ಐಶ್ವರ್ಯವರ್ಜಿತನಾದ ಮನುಷ್ಯನ ಜನ್ಮಕ್ಕೆ ಧಿಕ್ಕಾರವಿರಲಿ.

೧೧. ಆಶ್ಚರ್ಯ! ಸದ್ಗುಣಗಳೂ, ಸೌಮ್ಯವೃತ್ತಿಯೂ, ಸಂಪೂರ್ಣಜ್ಞಾನವೂ, ಸತ್ಕುಲದಲ್ಲಿ ಜನನವೂ ಮನುಷ್ಯನಿಗಿದ್ದರೂ, ದಾರಿದ್ರ್ಯವೆಂಬ ಸಮುದ್ರದಲ್ಲಿ ಮುಳುಗಿದವನಲ್ಲಿ ಯಾವುದೂ ಶೋಭಿಸುವುದಿಲ್ಲ.

೧೨. ಬ್ರಾಹ್ಮಣರೂ, ಮಕ್ಕಳೂ, ಮೊಮ್ಮಕ್ಕಳೂ, ಬಂಧುಬಳಗಗಳೂ,

ಇತಿ ನಿಶ್ಚಿತ್ಯ ಮತಿಮಾನ್ಧೀರೋ ಭದ್ರಮತಿರ್ದ್ವಿಜಃ
ಚಂಡಾಲೋ ವಾ ದ್ವಿಜೋ ವಾಪಿ ಭಾಗ್ಯವಾನೇವ ಪೂಜ್ಯತೇ ॥ ೧೩ ॥
ದರಿದ್ರಃ ಪುರುಷೋ ಲೋಕೇ ಶವವಲ್ಲೋಕನಿಂದಿತಃ ।
ಅಹೋ ಸಂಪತ್ಸಮಾಯುಕ್ತೋ ನಿಷ್ಠುರೋ ವಾಪ್ಯನಿಷ್ಠುರಃ ॥ ೧೪ ॥
ಗುಣಹೀನೋಽಪಿ ಗುಣವಾನ್ಮೂರ್ಖೋ ವಾಪಿ ಸ ಪಂಡಿತಃ ।
ನಿಷ್ಠುರೋ ವಾ ಗುಣೀ ವಾಪಿ ಧರ್ಮಹೀನೋಽಥವಾ ನರಃ ॥ ೧೫ ॥
ಐಶ್ವರ್ಯಗುಣಯುಕ್ತಶ್ಚೇತ್ಪೂಜ್ಯ ಏವ ನ ಸಂಶಯಃ ।
ಅಹೋ ದರಿದ್ರತಾ ದುಃಖಂ ತತ್ರಾಪ್ಯಾಶಾತಿದುಃಖದಾ ॥ ೧೬ ॥
ಅಶಾಭಿಭೂತಾಃ ಪುರುಷಾ ದುಃಖಮಶ್ನುವತೇ ಕ್ಷಣಾತ್ ॥ ೧೭ ॥
ಆಶಾಯಾ ಯೇ ದಾಸಾ ದಾಸಾಸ್ತೇ ಸರ್ವಲೋಕಸ್ಯ ।
ಆಶಾ ಯೇಷಾಂ ದಾಸೀ ತೇಷಾಂ ದಾಸಾಯತೇ ಲೋಕಃ ॥ ೧೮ ॥
ಸರ್ವಶಾಸ್ತ್ರಾರ್ಥವೇತ್ತಾಪಿ ದರಿದ್ರೋ ಭಾತಿ ಮೂರ್ಖವತ್ ।
ಆಕಿಂಚನ್ಯಮಹಾಗ್ರಾಹಗ್ರಸ್ತಾನಾಂ ನಾಸ್ತಿ ಮೋಚಕಃ ॥ ೧೯ ॥

---

ಸಹೋದರರೂ, ಶಿಷ್ಯರೂ ಇದ್ದರೂ ಸಂಪದ್ವರ್ಜಿತನಾದ ಮನುಷ್ಯನನ್ನು ಎಲ್ಲರೂ ತ್ಯಜಿಸುವರು.

೧೩–೧೪. ಇಂತೆಂದು ಬುದ್ಧಿವಂತನೂ, ಧೀರನೂ ಆದ ಭದ್ರಮತಿಯೆಂಬ ಬ್ರಾಹ್ಮಣನು ಮನಸ್ಸಿನಲ್ಲಿ ನಿಶ್ಚಯಿಸಿದನು. ಚಂಡಾಲನಾಗಲಿ ಬ್ರಾಹ್ಮಣನಾಲಿ ಐಶ್ವರ್ಯವಂತನೇ ಪೂಜೆಯನ್ನು ಹೊಂದುವನು. ದರಿದ್ರನಾದ ಮಾನವನು ಪ್ರಪಂಚದಲ್ಲಿ ಹೆಣದಂತೆ ಲೋಕನಿಂದಿತನಾಗುವನು. ಅಹೋ! ಸಂಪದ್ಯುಕ್ತನಾದ ಮನುಷ್ಯನು ನಿಷ್ಠುರಸ್ವಭಾವದವನಾದರೂ ಸೌಮ್ಯನೆನಿಸುವನು.

೧೫–೧೭. ಸದ್ಗುಣಹೀನನಾದರೂ ಗುಣವಂತನೆನಿಸುವನು. ಮೂರ್ಖನಾದರೂ ಪಂಡಿತಪ್ರವರನೆನಿಸುವನು. ಮನುಷ್ಯನು ನಿಷ್ಠುರನಾಗಲಿ, ಗುಣವಂತನಾಗಲಿ ಅಥವಾ ಧರ್ಮವರ್ಜಿತನಾಗಲಿ ಐಶ್ವರ್ಯವೆಂಬ ಒಂದು ಗುಣವುಳ್ಳವನಾಗಿದ್ದರೆ ಅವನು ಲೋಕಪೂಜ್ಯನೆಂಬುದರಲ್ಲಿ ಸಂದೇಹವಿಲ್ಲ. ದಾರಿದ್ರ್ಯವೆಂಬುದೇ ದುಃಖಪ್ರದವು. ಅದರಲ್ಲಿಯೂ ಆಶೆಯೆಂಬುದು ಅತಿದುಃಖವನ್ನು ಉಂಟುಮಾಡುವುದು. ಆಶಾಪಿಶಾಚಗ್ರಸ್ತರಾದ ಮಾನವರು ಕ್ಷಣಕ್ಷಣಕ್ಕೂ ದುಃಖವನ್ನನುಭವಿಸುತ್ತಲೇ ಇರುವರು.

೧೮. ಆಶೆಗೆ ಯಾರು ದಾಸರಾಗುವರೊ, ಅವರು ಸಕಲ ಪ್ರಪಂಚಕ್ಕೂ ದಾಸರಾಗುವರು. ಆಶೆಯೇ ಯಾರಿಗೆ ದಾಸಿಯಂತೆ ವಶದಲ್ಲಿರುವುದೊ, ಅವರಿಗೆ ಲೋಕವೆಲ್ಲವೂ ದಾಸೀಭೂತವಾಗಿರುವುದು.

೧೯. ಸಕಲಶಾಸ್ತ್ರಾರ್ಥಗಳನ್ನು ತಿಳಿದವನಾದರೂ ದರಿದ್ರನಾದ ಮನು

ಅಹೋ ದುಃಖಮಹೋ ದುಃಖಮಹೋ ದುಃಖಂ ದರಿದ್ರತಾ ।
ತತ್ರಾಪಿ ಪುತ್ರದಾರಾಣಾಂ ಬಾಹುಲ್ಯಮತಿದುಃಖದಂ ॥ ೨೦ ॥
ಏವಮುಕ್ತ್ವಾ ಭದ್ರಮತಿಃ ಸರ್ವಶಾಸ್ತ್ರಾರ್ಥಪಾರಗಃ ।
ಅತ್ಯೈಶ್ವರ್ಯಪ್ರದಂ ಧರ್ಮಂ ಮನಸಾ ಚಿಂತಯಂಸ್ತದಾ ।
ತೂಷ್ಣೀಂ ಸ್ಥಿತೋ ಭದ್ರಮತಿರ್ಮಹಾಕ್ಲೇಶಸಮನ್ವಿತಃ ॥ ೨೧ ॥
ತದಾನೀಂ ತಾಸು ಭಾರ್ಯಾಸು ಕಾಮಿನೀ ಪತಿದೇವತಾ ॥ ೨೨ ॥
ಭಾರ್ಯಾ ಸಾಧುಗುಣೈರ್ಯುಕ್ತಾ ಪತಿಂ ತಂ ಪ್ರತ್ಯಭಾಷತ ॥ ೨೩ ॥

ಕಾಮಿನ್ಯುವಾಚ :—

ಭಗವನ್ಸರ್ವಧರ್ಮಜ್ಞ ಸರ್ವಶಾಸ್ತ್ರಾರ್ಥಪಾರಗ ।
ಮಮ ನಾಥ ಮಹಾಭಾಗ ವಾಕ್ಯಂ ಶೃಣು ಮಹಾಮತೇ ॥ ೨೪ ॥
ಸುವರ್ಣಮುಖರೀತೀರೇ ಋಷಿಸಂಘನಿಷೇವಿತೇ ।
ವರ್ತತೇ ದೈವತೈಃ ಸೇವ್ಯಃ ಪಾವನೋ ವೇಂಕಟಾಚಲಃ ॥ ೨೫ ॥

---

ಷ್ಯನು ಮೂರ್ಖನಂತೆ ನಿಂದಿತನಾಗುತ್ತಾನೆ. ದಾರಿದ್ರ್ಯವೆಂಬ ದೊಡ್ಡ ಮೊಸ ಳೆಯ ಸೆಳೆತಕ್ಕೆ ಸಿಕ್ಕಿರುವವರನ್ನು ಬಿಡಿಸುವವನೇ ಇಲ್ಲ.

೨೦. ದಾರಿದ್ರ್ಯವೆಂಬುದೇ ದುಃಖವೆಂಬುದನ್ನು ಮತ್ತೆ ಮತ್ತೆ ಹೇಳ ಬೇಕು. ಅದರಲ್ಲಿಯೂ ಅನೇಕ ಹೆಂಡಿರು ಮಕ್ಕಳಿದ್ದವನ ಪಾಡು ಅತ್ಯಂತ ದುಃಖಪ್ರದವಾದುದು.

೨೧. ಇಂತೆಂದು ಸಕಲ ಶಾಸ್ತ್ರಾರ್ಥಗಳನ್ನು ತಿಳಿದ ಭದ್ರಮತಿಯು ಅತ್ಯಂತ ದುಃಖದಿಂದ ತೊಳಲುತ್ತ ತನಗೆ ಅಮಿತವಾದ ಸಂಪತ್ತನ್ನು ಕೊಡುವ ಧರ್ಮಕಾರ್ಯವಾವುದೆಂದು ಮನಸ್ಸಿನಲ್ಲಿಯೇ ಯೋಚಿಸುತ್ತ ಸುಮ್ಮನೆ ಕುಳಿ ತ್ತಿದ್ದನು.

೨೨–೨೩. ಆಗ ಆತನ ಹೆಂಡತಿಯರಲ್ಲೆಲ್ಲ ಪತಿವ್ರತಾಪರಾಯಣೆಯೂ ಸಕಲಸದ್ಗುಣಭೂಷಿತೆಯೂ ಆದ ಕಾಮಿನಿಯೆಂಬುವಳು ಆತನನ್ನು ಕುರಿತು ಇಂತೆಂದಳು.

೨೪. ಕಾಮಿನಿಯು ಹೇಳುತ್ತಾಳೆ:—"ಭಗವಂತನೂ, ಸಕಲಧರ್ಮ ಸೂಕ್ಷ್ಮಗಳನ್ನು ತಿಳಿದವನೂ, ಸರ್ವಶಾಸ್ತ್ರಗಳ ಅರ್ಥಜ್ಞಾನದಲ್ಲಿ ನಿಷ್ಣಾತನಾದ ವನೂ ಮಹಾಭಾಗ್ಯವಂತನೂ ಮಹಾಬುದ್ಧಿಯೂ ಆದ ಎಲೈ ಪತಿದೇವನೆ! ನನ್ನ ಮಾತುಗಳನ್ನು ಲಾಲಿಸು.

೨೫. ಮಹರ್ಷಿಗಳಿಂದ ಸ್ನಾನಪಾನಾದಿಗಳಿಗಾಗಿ ಸೇವಿಸಲ್ಪಡುತ್ತಿರುವ ಸುವರ್ಣಮುಖರಿಯ ತೀರದಲ್ಲಿ ದೇವತೆಗಳಿಂದ ಸೇವ್ಯವಾಗಿರುವುದೂ, ಪವಿ ತ್ರವೂ ಆದ ವೇಂಕಟಾಚಲವೆಂಬ ಪರ್ವತವೊಂದಿರುವುದು.

ತಸ್ಮಿನ್ವೇಂಕಟಶೈಲೇಂದ್ರೇ ಸುರಾಸುರನಮಸ್ಕೃತೇ ।
ವರ್ತತೇ ಪಾವನಂ ತೀರ್ಥಂ ಪಾಪಾನಾಂ ದಾಹಕಂ ಶುಭಂ ॥ ೨೬ ॥
ತತ್ರ ಗತ್ವಾ ಮಹಾಭಾಗ ಪಾಪನಾಶೇ ಮಹಾಮತೇ ।
ಕುರು ಸ್ನಾನಂ ಪ್ರಯತ್ನೇನ ಭಾರ್ಯಾಪುತ್ರಸಮನ್ವಿತಃ ॥ ೨೭ ॥
ತಸ್ಯ ತೀರ್ಥಸ್ಯ ಮಾಹಾತ್ಮ್ಯಂ ನಾರದಾಚ್ಚ ಶ್ರುತಂ ಮಯಾ ।
ಬಾಲಭಾವೇ ಮಮ ಪಿತುರಂತಿಕೇ ಪ್ರೋಕ್ತವಾನ್ಮುನಿಃ ॥ ೨೮ ॥
ವೇಂಕಟಾದ್ರೌ ಮಹಾಪುಣ್ಯೇ ಸರ್ವಪಾತಕನಾಶನೇ ।
ಸರ್ವದುಃಖಪ್ರಶಮನೇ ಸರ್ವಸಂಪತ್ಪ್ರದಾಯಕೇ ॥ ೨೯ ॥
ಪಾಪನಾಶೇ ಮಹಾತೀರ್ಥೇ ಸ್ನಾತ್ವಾ ಸಂಕಲ್ಪಪೂರ್ವಕಂ ।
ಅತ್ಯೈಶ್ವರ್ಯಪ್ರದಂ ಧರ್ಮಂ ಮನಸಾ ಚಿಂತಯಂಸ್ತದಾ ॥ ೩೦ ॥
ಭೂಮಿದಾನಂ ವಿನಿಶ್ಚಿತ್ಯ ಸರ್ವದಾನೋತ್ತಮೋತ್ತಮಂ ।
ಪ್ರಾಪಕಂ ಪರಲೋಕಸ್ಯ ಸರ್ವಕಾಮಫಲಪ್ರದಂ ॥ ೩೧ ॥
ದಾನಾನಾಮುತ್ತಮಂ ದಾನಂ ಭೂದಾನಂ ಪರಿಕೀರ್ತಿತಂ ।
ತದ್ದತ್ವಾ ಸಮವಾಪ್ನೋತಿ ಯದ್ಯದಿಷ್ಟತಮಂ ನರಃ ॥ ೩೨ ॥

---

೨೬. ಸುರಾಸುರರಿಂದ ನಮಸ್ಕರಿಸಲ್ಪಡುತ್ತಿರುವ ಉತ್ತಮವಾದ ಆ ವೇಂಕಟಗಿರಿಯಲ್ಲಿ ಪವಿತ್ರವೂ ಪಾಪದಾಹಕವೂ ಮಂಗಳಪ್ರದವೂ ಆದ ತೀರ್ಥವು ಶೋಭಿಸುತ್ತಿರುವುದು.

೨೭. ಎಲೈ ಮಹಾಭಾಗನೆ! ಮಹಾಬುದ್ಧಿಯೇ! ಅಲ್ಲಿಗೆ ಹೋಗಿ ಪ್ರಯತ್ನಪೂರ್ವಕವಾಗಿ ಹೆಂಡಿರುಮಕ್ಕಳೊಡನೆ ಆ ಪಾಪವಿನಾಶನವೆಂಬ ತೀರ್ಥದಲ್ಲಿ ಸ್ನಾನವನ್ನು ಮಾಡುವವನಾಗು.

೨೮. ಆ ತೀರ್ಥದ ಮಹಾತ್ಮ್ಯವನ್ನು ನಾನು ನಾರದರ ಮುಖದಿಂದ ಕೇಳಿರುವೆನು. ನಾನು ಎಳಗುವರಿಯಾಗಿರಲು ನನ್ನ ತಂದೆಗೆ ಆ ಮುನಿಯು ಅದನ್ನು ವಿವರಿಸುತ್ತಿದ್ದನು.

೨೯-೩೨. ಮಹಾಪುಣ್ಯಪ್ರದವೂ, ಸಕಲಪಾತಕನಾಶಕವೂ, ಸಮಸ್ತ ದುಃಖಾಪನೋದಕವೂ, ಸರ್ವಸಂಪತ್ಪ್ರದಾಯಕವೂ ಆದ ವೇಂಕಟಾಚಲದಲ್ಲಿರುವ ಪಾಪವಿನಾಶನವೆಂಬ ಉತ್ತಮ ತೀರ್ಥದಲ್ಲಿ ಸಂಕಲ್ಪಪೂರ್ವಕವಾಗಿ ಸ್ನಾನವನ್ನು ಮಾಡಿ ಅತುಲೈಶ್ವರ್ಯವನ್ನು ಕೊಡುವ ಧರ್ಮವು ಯಾವುದೆಂದು ಮನಸ್ಸಿನಲ್ಲಿಯೇ ಚಿಂತಿಸುತ್ತ ಭೂಮಿದಾನವೇ ಸಕಲದಾನಗಳಲ್ಲಿಯೂ ಉತ್ತಮೋತ್ತಮವೆಂದೂ, ಪರಲೋಕಸಾಧಕವೆಂದೂ, ಸಮಸ್ತೇಷ್ಟಾರ್ಥಗಳನ್ನೂ ಕಲ್ಪಿಸಿಕೊಡುವುದೆಂದೂ ನಿಶ್ಚಯವನ್ನು ಮಾಡಿರುವುದರಿಂದ ಭೂದಾನವೇ ದಾನಗಳಲ್ಲೆಲ್ಲ ಉತ್ತಮದಾನವೆಂದು ಶಾಸ್ತ್ರಗಳಲ್ಲಿ ಉಕ್ತವಾಗಿರುವುದು. ಆ ಪಾಪವಿನಾಶನ

ಇತ್ಯೇವಂ ನಾರದೇನೋಕ್ತಂ ಶ್ರುತ್ವಾ ಮೇ ಜನಕೋ ದ್ವಿಜಃ ।
ಸಂಪ್ರಹೃಷ್ಟಮನಾ ಭೂತ್ವಾ ಶೇಷಾದ್ರಿಂ ಪ್ರಾಪ್ತವಾಂಸ್ತದಾ ॥ ೩೩ ॥
ತತ್ರ ಗತ್ವಾ ಮಹಾಭಾಗಃ ಸರ್ವಸಂಪತ್ಪ್ರದಾಯಕಂ ।
ಭೂದಾನಂ ವಿಪ್ರವರ್ಯಾಯ ಶ್ರೋತ್ರಿಯಾಯ ಪ್ರದತ್ತವಾನ್ ॥ ೩೪ ॥
ತತೋ ಮೇ ಜನಕೋ ವಿದ್ವನ್ಸರ್ವಭಾಗ್ಯಸಮನ್ವಿತಃ ।
ಇಹಲೋಕೇ ಸುಖಂ ಪ್ರಾಪ್ಯ ಚಾಂತೇ ವಿಷ್ಣುಪುರಂ ಯಯೌ ॥ ೩೫ ॥
ತ್ವಂ ಚ ಗತ್ವಾ ಮಹಾಭಾಗ ವೇಂಕಟಾದ್ರಿಂ ನಗೋತ್ತಮಂ ।
ಕುರು ದಾನಂ ಪ್ರಯತ್ನೇನ ಭೂದಾನಂ ಸರ್ವಕಾಮದಂ ॥ ೩೬ ॥
ಭೂಮಿದಾನಸ್ಯ ಮಾಹಾತ್ಮ್ಯಂ ಶೃಣುಷ್ವ ಸುಸಮಾಹಿತಃ ।
ನ ಕೋಽಪಿ ಗದಿತುಂ ಶಕ್ತೋ ಲೋಕೇಽಸ್ಮಿನ್ಜಗವನ್ಪ್ರಭೋ ॥ ೩೭ ॥
ಭೂಮಿದಾನಾತ್ಪರಂ ದಾನಂ ನ ಭೂತಂ ನ ಭವಿಷ್ಯತಿ ।
ಪರಂ ನಿರ್ವಾಣಮಾಪ್ನೋತಿ ಭೂಮಿದೋ ನಾತ್ರ ಸಂಶಯಃ ॥ ೩೮ ॥

---

ತೀರ್ಥದಲ್ಲಿ ಭೂದಾನವನ್ನು ಮಾಡುವುದರಿಂದ ಮನುಷ್ಯನು ತನ್ನ ಇಷ್ಟಾರ್ಥಗಳೆಲ್ಲವನ್ನೂ ಪಡೆಯುವನು.

೩೩. ಇಂತೆಂದು ನಾರದನು ಹೇಳಿದ ಮಾತುಗಳನ್ನು ಕೇಳಿ ಬ್ರಾಹ್ಮಣೋತ್ತಮನಾದ ನಮ್ಮ ತಂದೆಯು ಮನಸ್ಸಿನಲ್ಲಿ ಪರಮಾನಂದವನ್ನು ಹೊಂದಿ ಶೇಷಾಚಲವನ್ನು ಕುರಿತು ಹೊರಟನು.

೩೪. ಅಲ್ಲಿ ಹೋಗಿ ಮಹಾಭಾಗ್ಯಶಾಲಿಯಾದ ಆತನು ಸಮಸ್ತೈಶ್ವರ್ಯಗಳನ್ನೂ ಕೊಡತಕ್ಕ ಭೂದಾನವನ್ನು ಶ್ರೋತ್ರಿಯನಾದ ಬ್ರಾಹ್ಮಣಶ್ರೇಷ್ಠನಿಗೆ ಕೊಟ್ಟನು.

೩೫. ಎಲೈ ಜ್ಞಾನಿಯೆ! ಅದರಿಂದ ನನ್ನ ತಂದೆಯು ಸಕಲಭೋಗಭಾಗ್ಯಗಳನ್ನು ಪಡೆದು ಇಹಲೋಕದಲ್ಲಿ ಸೌಖ್ಯವನ್ನೂ ದೇಹಾಂತದಲ್ಲಿ ವಿಷ್ಣುಲೋಕವನ್ನೂ ಪಡೆಯುವನಾದನು.

೩೬. ಮಹಾಶಯನೆ! ನೀನೂ ಸಹ ಆ ಪರ್ವತೋತ್ತಮಕ್ಕೆ ಹೋಗಿ ಸಕಲಕಾಮಪ್ರದವಾದ ಭೂದಾನವನ್ನು ಸರ್ವಪ್ರಯತ್ನದಿಂದಲೂ ಮಾಡುವವನಾಗು.

೩೭. ಭೂಮಿದಾನದ ಮಾಹಾತ್ಮ್ಯೆಯನ್ನು ಏಕಾಗ್ರಚಿತ್ತದಿಂದ ಕೇಳು. ಅದನ್ನು ಸಮಗ್ರವಾಗಿ ವರ್ಣಿಸಲು ಭೂಲೋಕದಲ್ಲಿ ಯಾರಿಗೂ ಸಾಧ್ಯವಿಲ್ಲ.

೩೮. ಭೂಮಿದಾನಕ್ಕೆ ಮಿಗಿಲಾದ ದಾನವು ಎಂದೂ ಇರಲಿಲ್ಲ ಮತ್ತು ಇರುವುದೂ ಇಲ್ಲ. ಭೂಮಿಯನ್ನು ದಾನಮಾಡಿದವನು ಶಾಶ್ವತವಾದ ಮೋಕ್ಷವನ್ನು ಪಡೆಯುವನೆಂಬುದರಲ್ಲಿ ಸಂಶಯವೇ ಇಲ್ಲ.

ಸ್ವಲ್ಪಾಮಪಿ ಮಹೀಂ ದತ್ವಾ ಶ್ರೋತ್ರಿಯಾಯಾಹಿತಾಗ್ನಯೇ ।
ಬ್ರಹ್ಮಲೋಕಮವಾಪ್ನೋತಿ ಪುನರಾವೃತ್ತಿವರ್ಜಿತಂ ॥ ೩೯ ॥
ಭೂಮಿದಃ ಸರ್ವದಃ ಪ್ರೋಕ್ತೋ ಭೂಮಿದೋ ಮೋಕ್ಷಭಾಗ್ಭವೇತ್ ।
ಭೂಮಿದಾನಂ ವೃಷಾದ್ರೌ ಚ ಸರ್ವಪಾಪಪ್ರಣಾಶನಂ ॥ ೪೦ ॥
ಮಹಾಪಾತಕಯುಕ್ತೋ ವಾ ಯುಕ್ತೋ ವಾ ಸರ್ವಪಾತಕೈಃ ।
ದಶಹಸ್ತಾಂ ಮಹೀಂ ದತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೪೧ ॥
ಸತ್ಪಾತ್ರೇ ಭೂಮಿದಾತಾ ಯಃ ಸರ್ವದಾನಫಲಂ ಲಭೇತ್ ।
ಭೂಮಿದಸ್ಯ ಸಮೋ ನಾನ್ಯಸ್ತ್ರಿಷು ಲೋಕೇಷು ವಿದ್ಯತೇ ॥ ೪೨ ॥
ದ್ವಿಜಸ್ಯ ವೃತ್ತಿಹೀನಸ್ಯ ಯಃ ಪ್ರದದ್ಯಾನ್ಮಹೀಂ ಶುಭಾಂ ।
ತಸ್ಯ ಪುಣ್ಯಫಲಂ ವಕ್ತುಂ ಶೇಷೋ ನಾರ್ಹಃ ಕದಾಚನ ॥ ೪೩ ॥
ವಿಪ್ರಸ್ಯ ವೃತ್ತಿಹೀನಸ್ಯ ಸದಾಚಾರಸ್ಯ ಕಸ್ಯಚಿತ್ ।
ಯೋಽಲ್ಪಾಮಪಿ ಮಹೀಂ ದದ್ಯಾತ್ಸ ವಿಷ್ಣುರ್ನಾತ್ರ ಸಂಶಯಃ ॥ ೪೪ ॥

---

೩೯. ಶ್ರೋತ್ರಿಯನೂ, ಆಹಿತಾಗ್ನಿಯೂ ಆದ ಬ್ರಾಹ್ಮಣನಿಗೆ ಸ್ವಲ್ಪವಾದ ಭೂಮಿಯನ್ನು ಕೊಟ್ಟರೂ ಪುನರಾವೃತ್ತಿರಹಿತವಾದ ಬ್ರಹ್ಮಲೋಕವನ್ನು ದಾತೃವು ಹೊಂದುವನು.

೪೦. ಭೂಮಿಯನ್ನು ಕೊಟ್ಟವನು ಸಕಲದಾನವನ್ನೂ ಮಾಡಿದವನೆಂದೆಣಿಸಲ್ಪಡುವನು. ಅವನೇ ಮೋಕ್ಷಸಾಮ್ರಾಜ್ಯಕ್ಕೆ ಭಾಗಿಯಾಗುವನು. ವೇಂಕಟಗಿರಿಯಲ್ಲಿ ಭೂಮಿದಾನವನ್ನು ಮಾಡುವುದರಿಂದ ಸಕಲ ಪಾಪಗಳೂ ನಾಶವನ್ನು ಹೊಂದುವುವು.

೪೧. ಬ್ರಹ್ಮಹತ್ಯಾದಿ ಮಹಾಪಾತಕಗಳಿಂದೊಡಗೂಡಿದವನಾಗಲಿ, ಸರ್ವಪಾಪಗಳಿಂದೊಡಗೂಡಿದವನಾಗಲಿ ಹತ್ತು ಮೊಳದಷ್ಟು ಭೂಮಿಯನ್ನು ದಾನಮಾಡಲು ಸಕಲ ಪಾಪಗಳಿಂದಲೂ ಮುಕ್ತನಾಗುವನು.

೪೨. ಸತ್ಪಾತ್ರದಲ್ಲಿ ಭೂಮಿಯನ್ನು ದಾನಮಾಡುವವನು ಸಕಲ ದಾನಗಳನ್ನು ಮಾಡಿದ ಪುಣ್ಯವನ್ನು ಪಡೆಯುವನು. ಮೂರು ಲೋಕಗಳಲ್ಲಿಯೂ ಭೂಮಿದಾನವನ್ನು ಮಾಡಿದವನಿಗೆ ಸಮಾನನಾದವನು ಯಾವನೂ ಕಾಣನು.

೪೩. ಜೀವನೋಪಾಯರಹಿತನಾದ ಬ್ರಾಹ್ಮಣನಿಗೆ ಯಾವನು ಉತ್ತಮ ಭೂಮಿಯನ್ನು ಕೊಡುವನೊ, ಅವನ ಪುಣ್ಯದ ಫಲವನ್ನು ಆದಿಶೇಷನೂ ಹೇಳಲು ಸಮರ್ಥನಲ್ಲ.

೪೪. ವೃತ್ತಿಹೀನನೂ, ಸ್ವಾಶ್ರಮಾಚಾರನಿರತನೂ ಆದ ಯಾವ ಬ್ರಾಹ್ಮಣನಿಗಾದರೂ ಸ್ವಲ್ಪವಾದ ಭೂಮಿಯನ್ನಾದರೂ ಕೊಡುವವನು ಮಹಾವಿಷ್ಣುವೆಂದೇ ತಿಳಿಯಬೇಕು. . ಈ ವಿಷಯದಲ್ಲಿ ಸಂಶಯವಿಲ್ಲ.

ಇಕ್ಷುಗೋಧೂಮಕೇದಾರಪೂಗವೃಕ್ಷಾದಿಸಂಯುತಾ ।
ಪೃಥ್ವೀ ಪ್ರದೀಯತೇ ಯೇನ ಸ ವಿಷ್ಣುರ್ನಾತ್ರ ಸಂಶಯಃ ॥ ೪೫ ॥
ವೃತ್ತಿಹೀನಸ್ಯ ವಿಪ್ರಸ್ಯ ದರಿದ್ರಸ್ಯ ಕುಟುಂಬಿನಃ ।
ಸ್ವಲ್ಪಾಮಪಿ ಮಹೀಂ ದತ್ವಾ ವಿಷ್ಣುಸಾಯುಜ್ಯಮಶ್ನುತೇ ॥ ೪೬ ॥
ಸಕ್ತಸ್ಯ ದೇವಪೂಜಾಸು ವಿಪ್ರಸ್ಯಾಟವಿಕಾ ಮಹೀ ।
ದತ್ತಾ ದದಾತಿ ಗಂಗಾಯಾಂ ತ್ರಿರಾತ್ರಸ್ನಾನಜಂ ಫಲಂ ॥ ೪೭ ॥
ವಿಪ್ರಸ್ಯ ವೃತ್ತಿಹೀನಸ್ಯ ಸದಾಚಾರರತಸ್ಯ ಚ ।
ದ್ರೋಣಿಕಾಂ ಪೃಥಿವೀಂ ದತ್ವಾ ಯತ್ಫಲಂ ಲಭತೇ ಶೃಣು ॥ ೪೮ ॥
ಗಂಗಾತೀರೇಽಶ್ವಮೇಧಾನಾಂ ಶತಾನಿ ವಿಧಿವನ್ನರಃ ।
ಕೃತ್ವಾ ಯತ್ಫಲಮಾಪ್ನೋತಿ ತದಾಪ್ನೋತಿ ಮಹತ್ಫಲಂ ॥ ೪೯ ॥
ದದಾತಿ ಭಾರಿಕಾಂ ಭೂಮಿಂ ದರಿದ್ರಾಯ ದ್ವಿಜಾತಯೇ ।
ತಸ್ಯ ಪುಣ್ಯಂ ಪ್ರವಕ್ಷ್ಯಾಮಿ ಮನ್ನಾಥ ಭಗವನ್ಪ್ರಭೋ ॥ ೫೦ ॥

---

೪೫. ಕಬ್ಬು, ಗೋಧಿ, ಭತ್ತ, ಅಡಿಕೆ ಮುಂತಾದುವುಗಳಿಂದ ತುಂಬಿರುವ ಭೂಮಿಯನ್ನು ಯಾವನು ಕೊಡುವನೊ, ಆತನೇ ವಿಷ್ಣುವೆಂಬುದರಲ್ಲಿ ಸಂದೇಹ ವಿರಲಾರದು.

೪೬. ಜೀವನೋಪಾಯಹೀನನೂ, ದರಿದ್ರನೂ, ಗೃಹಸ್ಥಾಶ್ರಮಿಯೂ ಆದ ಬ್ರಾಹ್ಮಣನಿಗೆ ಸ್ವಲ್ಪವಾದ ಭೂಮಿಯನ್ನು ದಾನಮಾಡಿದರೂ, ಕೊಟ್ಟವನು ವಿಷ್ಣುಸಾಯುಜ್ಯವನ್ನು ಪಡೆಯುವನು.

೪೭. ದೇವತಾರ್ಚನೆಯಲ್ಲಿ ನಿರತನಾಗಿರುವ ಬ್ರಾಹ್ಮಣನಿಗೆ ಕೊಟ್ಟ ಅಕೃಷ್ಟ ಭೂಮಿಯಾದರೂ ಗಂಗಾನದಿಯಲ್ಲಿ ಮೂರುದಿನ ಸ್ನಾನಮಾಡಿದ ಫಲವನ್ನು ಕೊಡುವುದು.

೪೮. ವೃತ್ತಿರಹಿತನೂ ಸದಾಚಾರತತ್ಪರನೂ ಆದ ಬ್ರಾಹ್ಮಣನಿಗೆ ದ್ರೋಣ ಪ್ರಮಾಣದ ಧಾನ್ಯವು ಬೆಳೆಯುವ ಭೂಮಿಯನ್ನು ಕೊಡುವುದರಿಂದ ಲಭಿಸುವ ಫಲವನ್ನು ಹೇಳುವೆನು, ಕೇಳು.

೪೯. ಗಂಗಾತೀರದಲ್ಲಿ ವಿಧ್ಯುಕ್ತರೀತಿಯಿಂದ ಒಂದು ನೂರು ಅಶ್ವಮೇಧ ಯಜ್ಞಗಳನ್ನು ಮಾಡಲು ಯಾವ ಮಹತ್ಪುಣ್ಯವು ಲಭಿಸುವುದೊ, ಆ ಫಲವೇ ದಾತೃವಿಗೂ ಲಭಿಸುವುದು.

೫೦. ದರಿದ್ರನಾದ ಬ್ರಾಹ್ಮಣನಿಗೆ ವೃತ್ತಿಯು ನಡೆಯುವಷ್ಟು ಭೂಮಿಯನ್ನು ಯಾವನು ಕೊಡುವನೊ, ಅವನ ಪುಣ್ಯವನ್ನು ವಿವರಿಸುವೆನು. ಪತಿಯೂ, ಪ್ರಭುವೂ ಆದ ಭಗವಂತನೆ! ಕೇಳು.

ಅಶ್ವಮೇಧಸಹಸ್ರಾಣಿ ವಾಜಪೇಯಶತಾನಿ ಚ ।
ವಿಧಾಯ ಜಾಹ್ನವೀತೀರೇ ಯತ್ಫಲಂ ತಲ್ಲಭೇತ ಸಃ ॥ ೫೧ ॥
ಭೂಮಿದಾನಂ ಮಹಾದಾನಮತಿದಾನಂ ಪ್ರಕೀರ್ತಿತಂ ।
ಸರ್ವಪಾಪಪ್ರಶಮನಮಪವರ್ಗಫಲಪ್ರದಂ ॥ ೫೨ ॥
ಯಚ್ಛ್ರುತ್ವಾ ಶ್ರದ್ಧಯಾ ಯುಕ್ತೋ ಭೂಮಿದಾನಫಲಂ ಲಭೇತ್ ।
ಭಾರ್ಯಾಯಾ ವಚನಂ ಶ್ರುತ್ವಾ ತ್ವಿತಿಹಾಸಸಮನ್ವಿತಂ ॥ ೫೩ ॥
ಸಂತುಷ್ಟೋ ಮನಸಿ ಧ್ಯಾತ್ವಾ ಶೇಷಾಚಲನಿವಾಸಿನಂ ।
ಗಂತುಂ ಪ್ರಚಕ್ರಮೇ ಬುದ್ಧ್ಯಾ ಕ್ರೀಡಾಚಲಮನುತ್ತಮಂ ॥ ೫೪ ॥
ತತೋ ಭದ್ರಮತಿಃ ಸೌಮ್ಯಃ ಸರ್ವಧರ್ಮಪರಾಯಣಃ ।
ಸುಶಾಲಿಂ ನಾಮ ನಗರೀಂ ಕಲತ್ರಸಹಿತೋ ಯಯೌ ॥ ೫೫ ॥
ಸುಘೋಷಂ ನಾಮ ವಿಪ್ರೇಂದ್ರಂ ಸರ್ವೈಶ್ವರ್ಯಸಮನ್ವಿತಂ ।
ಗತ್ವಾ ಯಾಚಿತವಾನ್ಭೂಮಿಂ ಪಂಚಹಸ್ತಾಯತಾಂ ದ್ವಿಜಃ ॥ ೫೬ ॥
ಸುಘೋಷೋ ಧರ್ಮನಿರತಸ್ತಂ ನಿರೀಕ್ಷ್ಯ ಕುಟುಂಬಿನಂ ।
ಮನಸಾ ಪ್ರೀತಿಮಾಪನ್ನಃ ಸಮಭ್ಯರ್ಚ್ಯೈನಮಬ್ರವೀತ್ ॥ ೫೭ ॥

---

೫೧. ಸಾವಿರಾರು ಅಶ್ವಮೇಧಗಳನ್ನೂ ನೂರಾರು ವಾಜಪೇಯಗಳನ್ನೂ ಗಂಗಾತೀರದಲ್ಲಿ ನಿರ್ವಹಿಸಿದ ಪುಣ್ಯವನ್ನು ಆ ದಾತೃವು ಹೊಂದುವನು.

೫೨. ಭೂಮಿದಾನವೇ ಮಹಾದಾನವೂ, ಅತಿದಾನವೂ, ಸಕಲಪಾಪ ನಾಶಕವೂ, ಮೋಕ್ಷಪದಪ್ರಾಪಕವೂ ಆದುದೆಂದು ಶಾಸ್ತ್ರಗಳಲ್ಲಿ ಹೊಗಳಲ್ಪಟ್ಟಿರುವುದು.

೫೩–೫೪. ಶ್ರದ್ಧೆಯಿಂದ ಕೂಡಿದವನಾಗಿ ಈ ದಾನದ ಮಾಹಾತ್ಮ್ಯೆಯನ್ನು ಕೇಳಿದವನೂ ಕೂಡ ಭೂಮಿದಾನದ ಫಲವನ್ನೇ ಹೊಂದುವನು.'' ಭದ್ರಮತಿಯು ಪೂರ್ವೇತಿಹಾಸದೊಡನೆ ಹೇಳಿದ ಹೆಂಡತಿಯ ಮಾತುಗಳನ್ನು ಕೇಳಿ ಸಂತೋಷ ಗೊಂಡು ಮನಸ್ಸಿನಲ್ಲಿಯೇ ಶೇಷಾದ್ರಿನಿವಾಸಿಯಾದ ಶ್ರೀನಿವಾಸನನ್ನು ಸ್ಮರಿಸುತ್ತ ಉತ್ತಮೋತ್ತಮವಾದ ಪರಮಾತ್ಮನ ಕ್ರೀಡಾಶೈಲಕ್ಕೆ ಹೋಗಲು ನಿಶ್ಚಯವನ್ನು ಮಾಡಿದನು.

೫೫. ಬಳಿಕ ಸಕಲ ಧರ್ಮಗಳನ್ನೂ ತಿಳಿದ ಭದ್ರಮತಿಯೆಂಬ ಬ್ರಾಹ್ಮಣನು ಹೆಂಡತಿಯೊಡನೆ ಸುಶಾಲಿಯೆಂಬ ಪಟ್ಟಣವನ್ನು ಸೇರಿದನು.

೫೬. ಆ ಬ್ರಾಹ್ಮಣನು ಸಕಲೈಶ್ವರ್ಯಸಮನ್ವಿತನಾದ ಸುಘೋಷನೆಂಬ ಬ್ರಾಹ್ಮಣನಲ್ಲಿಗೆ ಹೋಗಿ ಐದು ಮೊಳದಷ್ಟು ಭೂಮಿಯನ್ನು ಕೊಡುವಂತೆ ಯಾಚಿಸಿದನು.

೫೭. ಸ್ವಧರ್ಮನಿರತನಾದ ಸುಘೋಷನೂ ಕುಟುಂಬಿಯಾದ ಭದ್ರಮತಿ

ಕೃತಾರ್ಥೋಽಹಂ ಭದ್ರಮತೇ ಸಫಲಂ ಮಮ ಜನ್ಮ ಚ ।
ಮತ್ಕುಲಂ ಚಾನಘಂ ಜಾತಂ ತ್ವಂ ಹಿ ಗ್ರಾಹ್ಯೋಽಸಿ ಮೇ ಯತಃ ॥೫೮॥
ಇತ್ಯುಕ್ತ್ವಾ ತಂ ಸಮಭ್ಯರ್ಚ್ಯ ಸುಘೋಷೋ ಧರ್ಮತತ್ಪರಃ ।
ಪಂಚಹಸ್ತಪ್ರಮಾಣಾಂ ತಾಂ ದದೌ ತಸ್ಮೈ ಮಹಾಮತಿಃ ॥ ೫೯ ॥
ಪೃಥಿವೀ ವೈಷ್ಣವೀ ಪುಣ್ಯಾ ಪೃಥಿವೀ ವಿಷ್ಣುಪಾಲಿತಾ ।
ಪೃಥಿವ್ಯಾಸ್ತು ಪ್ರದಾನೇನ ಪ್ರೀಯತಾಂ ಮೇ ಜನಾರ್ದನಃ ॥ ೬೦ ॥
ಮಂತ್ರೇಣಾನೇನ ವಿಪ್ರೇಂದ್ರಾಃ ಸುಘೋಷಸ್ತಂ ದ್ವಿಜೇಶ್ವರಂ ।
ವಿಷ್ಣುಬುದ್ಧ್ಯಾ ಸಮಭ್ಯರ್ಚ್ಯ ತಾವತೀಂ ಪೃಥಿವೀಂ ದದೌ ॥ ೬೧ ॥
ಸ ಭದ್ರಮತಯೇ ವಿಪ್ರಾ ಧೀಮಾಂಸ್ತಾಂ ಯಾಚಿತಾಂ ಭುವಂ ।
ದತ್ತವಾನ್ಹರಿಭಕ್ತಾಯ ಶ್ರೋತ್ರಿಯಾಯ ಕುಟುಂಬಿನೇ ॥ ೬೨ ॥
ಸುಘೋಷೋ ಭೂಮಿದಾನೇನ ಕೋಟಿವಂಶಸಮನ್ವಿತಃ ।
ಪ್ರಪೇದೇ ವಿಷ್ಣುಭವನಂ ಯತ್ರ ಗತ್ವಾ ನ ಶೋಚತಿ ॥ ೬೩ ॥

---

ಯನ್ನು ಕಂಡು ತನ್ನಲ್ಲಿಯೇ ಸಂತೋಷಗೊಂಡವನಾಗಿ ಮನೆಗೆ ಬಂದ ಅತಿಥಿಯನ್ನು ಆದರದಿಂದ ಸತ್ಕರಿಸಿ ಇಂತೆಂದನು.

೫೮. "ಎಲೈ ಭದ್ರಮತಿಯೇ! ನಾನೇ ಕೃತಾರ್ಥನಾದೆನು. ನನ್ನ ಜನ್ಮವೂ ಇಂದು ಸಾರ್ಥಕವಾಯಿತು. ನನ್ನ ಕುಲವೂ ಪವಿತ್ರವಾಯಿತು. ನೀನೇ ನನ್ನಿಂದ ದಾನವನ್ನು ಪಡೆಯಲು ನನ್ನಲ್ಲಿಗೆ ಬಂದಿರುವೆಯಲ್ಲವೆ."

೫೯. ಇಂತೆಂದು ಧರ್ಮೈಕನಿರತನೂ ಮಹಾಮತಿಯೂ ಆದ ಸುಘೋಷನು ಭದ್ರಮತಿಗೆ ಅತಿಥಿಪೂಜೆಯನ್ನು ನೆರವೇರಿಸಿ ಐದು ಮೊಳದಷ್ಟು ಭೂಮಿಯನ್ನು ಆತನಿಗೆ ಕೊಟ್ಟನು.

೬೦. ಭೂಮಿಯೇ ವಿಷ್ಣುಪ್ರಿಯೆಯೂ ಪುಣ್ಯಪ್ರದೆಯೂ ವಿಷ್ಣು ಪಾಲಿತೆಯೂ ಆಗಿರುವಳು. ಈ ಭೂಮಿಯ ದಾನದಿಂದ ಜನಾರ್ದನನು ನನ್ನಲ್ಲಿ ಸುಪ್ರೀತನಾಗಲಿ.

೬೧. ಎಲೈ ಬ್ರಾಹ್ಮಣರಿರಾ! ಈ ಮಂತ್ರವನ್ನು ಹೇಳುತ್ತ ಸುಘೋಷನು ವಿಷ್ಣುಬುದ್ಧಿಯುಳ್ಳವನಾಗಿ ಆ ಬ್ರಾಹ್ಮಣನನ್ನು ಪೂಜಿಸಿ ಆತನು ಕೇಳಿದಷ್ಟು ಭೂಮಿಯನ್ನು ದಾನವಾಗಿ ಕೊಟ್ಟನು.

೬೨. ಶೌನಕಾದಿಗಳಿರಾ! ಬುದ್ಧಿವಂತನಾದ ಆತನು ವಿಷ್ಣುಭಕ್ತನೂ, ಶ್ರೋತ್ರಿಯನೂ, ಗೃಹಸ್ಥನೂ ಆದ ಭದ್ರಮತಿಗೆ ಯಾಚಿಸಿದಷ್ಟು ಭೂಮಿಯನ್ನು ಕೊಟ್ಟನು.

೬೩. ಈ ಭೂಮಿದಾನದ ಪುಣ್ಯದಿಂದ ಸುಘೋಷನು ಕೋಟಿವಂಶಜರೊಡನೆ ಶೋಕರಹಿತವಾದ ವಿಷ್ಣುಲೋಕವನ್ನು ಸೇರಿದನು.

ವಿಪ್ರೋ ಭದ್ರಮತಿಶ್ಚಾಪಿ ಪುತ್ರದಾರಸಮನ್ವಿತಃ ।
ಗತೋ ವೇಂಕಟಶೈಲೇಂದ್ರಂ ಸುರಾಸುರನಮಸ್ಕೃತಂ ॥ ೬೪ ॥
ಗಂಧರ್ವಯಕ್ಷಶೈಲಾದಿಸೇವಿತಂ ಮೇರುಪುತ್ರಕಂ ।
ವೈಕುಂಠಾದಾಗತಂ ದಿವ್ಯಂ ಕ್ರೀಡಾಚಲಮನುತ್ತಮಂ ॥ ೬೫ ॥
ತತ್ರ ಸ್ವಾಮಿಸರಸ್ತೋಯೇ ನಿರ್ಮಲೇ ಪಾವನೇ ಶುಭೇ ।
ದಾರಪುತ್ರಾದಿಸಂಯುಕ್ತಃ ಸ್ನಾತ್ವಾ ಸಂಕಲ್ಪಪೂರ್ವಕಂ ॥ ೬೬ ॥
ತತ್ಪಶ್ಚಿಮತಟೇ ಶ್ವೇತಸೂಕರಂ ವಸುಧಾಧರಂ ।
ನತ್ವಾ ತತ್ರ ವಿಧಾನೇನ ಶ್ರೀನಿವಾಸಾಲಯಂ ಗತಃ ॥ ೬೭ ॥
ತತ್ರ ಬ್ರಹ್ಮಾದಿದೇವೈಶ್ಚ ಸೇವಿತಂ ವೇಂಕಟೇಶ್ವರಂ ।
ದೃಷ್ಟವಾನ್ಸಹ ಪುತ್ರಾದ್ಯೈರ್ವಿಷ್ಣುಭಕ್ತೋ ಮಹಾಮತಿಃ ॥ ೬೮ ॥
ಭಕ್ತ್ಯಾ ಪ್ರಣಮ್ಯ ದೇವೇಶಂ ಶ್ರೀನಿವಾಸಂ ಕೃಪಾನಿಧಿಂ ।
ಪುತ್ರದಾರಾದಿಸಂಯುಕ್ತಃ ಪಾಪನಾಶನಮಾಯಯೌ ॥ ೬೯ ॥

---

೬೪. ಬ್ರಾಹ್ಮಣನಾದ ಭದ್ರಮತಿಯೂ ಪತ್ನೀಪುತ್ರರಿಂದೊಡಗೂಡಿ ಸುರಾಸುರರಿಂದ ನಮಸ್ಕರಿಸಲ್ಪಡುತ್ತಿರುವ ವೇಂಕಟಾಚಲವನ್ನು ಸೇರುವವನಾದನು.

೬೫. ಆ ಪರ್ವತವು ಗಂಧರ್ವರಿಂದಲೂ, ಯಕ್ಷರಿಂದಲೂ, ಶಿಲಾದಗಣಗಳಿಂದಲೂ ಸೇವಿಸಲ್ಪಡುತ್ತಿರುವುದು. ಮೇರು ಸಂಭೂತವಾಗಿರುವುದು. ವೈಕುಂಠದಿಂದಲೇ ಭೂಲೋಕಕ್ಕೆ ಬಂದಿರುವುದು. ದೇವತೆಗಳಿಗೆ ಉತ್ತಮವಾದ ಕ್ರೀಡಾಚಲವೆನಿಸಿರುವುದು.

೬೬–೬೭. ಅಲ್ಲಿ ನಿರ್ಮಲವೂ ಪವಿತ್ರವೂ ಶುಭವೂ ಆದ ಸ್ವಾಮಿಪುಷ್ಕರಿಣಿಯಲ್ಲಿ ಹೆಂಡಿರುಮಕ್ಕಳೊಡನೆ ಸಂಕಲ್ಪಪೂರ್ವಕವಾದ ಸ್ನಾನವನ್ನು ಮಾಡಿಕೊಂಡು ಪಶ್ಚಿಮತೀರದಲ್ಲಿ ಭೂದೇವಿಯೊಡನೆ ನೆಲಸಿರುವ ಶ್ವೇತವರಾಹಸ್ವಾಮಿಗೆ ನಮಸ್ಕರಿಸಿ ಬಳಿಕ ಕ್ರಮವಾಗಿ ಶ್ರೀನಿವಾಸನ ದೇವಾಲಯವನ್ನು ಪ್ರವೇಶಿಸಿದನು.

೬೮. ಅಲ್ಲಿ ವಿಷ್ಣುಭಕ್ತನೂ ಮಹಾಮತಿಯೂ ಆದ ಭದ್ರಮತಿಯು ಪತ್ನೀಪುತ್ರರಿಂದೊಡಗೂಡಿ ಬ್ರಹ್ಮಾದಿದೇವತೆಗಳಿಂದಲೂ ಸೇವೆಯನ್ನು ಕೈಗೊಳ್ಳುತ್ತಿರುವ ವೇಂಕಟೇಶ್ವರನ ದರ್ಶನವನ್ನು ಮಾಡಿದನು.

೬೯. ಕೃಪಾಸಮುದ್ರನೂ, ದೇವತಾಸಾರ್ವಭೌಮನೂ ಆದ ಶ್ರೀನಿವಾಸನಿಗೆ ಭಕ್ತಿಯಿಂದ ನಮಸ್ಕರಿಸಿ ಹೆಂಡತಿಯರೂ ಮಕ್ಕಳೂ ಹಿಂಬಾಲಿಸುತ್ತಿರಲು ಪಾಪನಾಶನತೀರ್ಥವನ್ನು ಸೇರಿದನು.

ತತ್ರ ಸ್ನಾತ್ವಾ ವಿಧಾನೇನ ಕೃತಧರ್ಮಾದಿಸತ್ಕ್ರಿಯಃ ।
ಕಸ್ಮೈಚಿದ್ವಿಷ್ಣುಭಕ್ತಾಯ ಶ್ರೋತ್ರಿಯಾಯ ಮಹಾಮತಿಃ ॥ ೭೦ ॥
ವಿಷ್ಣುಬುದ್ಧ್ಯಾ ಸ ಪ್ರದದೌ ಭೂದಾನಂ ಮೋಕ್ಷದಂ ಶುಭಂ ॥ ೭೧ ॥
ತದಾ ಪ್ರಾದುರಭೂದ್ದೇವಃ ಶಂಖಚಕ್ರಗದಾಧರಃ ॥ ೭೨ ॥
ವಿನತಾನಂದನಾರೂಢೋ ವನಮಾಲಾವಿಭೂಷಿತಃ ।
ಪಾಪನಾಶಸ್ಯ ತೀರೇ ತು ಭೂದಾನಸ್ಯ ಪ್ರಭಾವತಃ ॥ ೭೩ ॥
ತದಾ ಭದ್ರಮತಿಃ ಸೌಮ್ಯಃ ಸ್ತೋತುಂ ಸಮುಪಚಕ್ರಮೇ ॥ ೭೪ ॥

ನಮೋ ನಮಸ್ತೇಽಖಿಲಕಾರಣಾಯ
ನಮೋ ನಮಸ್ತೇಽಖಿಲಪಾಲಕಾಯ ।
ನಮೋ ನಮಸ್ತೇಽಮರನಾಯಕಾಯ
ನಮೋ ನಮೋ ದೈತ್ಯವಿಮರ್ದನಾಯ ॥ ೭೫ ॥
ನಮೋ ನಮೋ ಭಕ್ತಜನಪ್ರಿಯಾಯ
ನಮೋ ನಮಃ ಪಾಪವಿದಾರಣಾಯ ।
ನಮೋ ನಮೋ ದುರ್ಜನನಾಶಕಾಯ
ನಮೋಽಸ್ತು ತಸ್ಮೈ ಜಗದೀಶ್ವರಾಯ ॥ ೭೬ ॥

---

೭೦–೭೧. ಮಹಾಮತಿಯಾದ ಆತನು ವಿಧಿಯನ್ನನುಸರಿಸಿ ಸ್ನಾನವನ್ನು ಮಾಡಿ ದಾನಧರ್ಮಾದಿ ಸತ್ಕ್ರಿಯೆಗಳನ್ನು ನೆರವೇರಿಸಿ ವಿಷ್ಣುಭಕ್ತನಾದ ಒಬ್ಬಾನೊಬ್ಬ ಶ್ರೋತ್ರಿಯಬ್ರಾಹ್ಮಣನಲ್ಲಿ ವಿಷ್ಣುಬುದ್ಧಿಯನ್ನಿಟ್ಟು ಮೋಕ್ಷಪ್ರದವೂ ಮಂಗಳಕರವೂ ಆದ ಭೂದಾನವನ್ನು ಆತನಲ್ಲಿ ಮಾಡಿದನು.

೭೨–೭೪. ಆ ಭೂದಾನದ ಪ್ರಭಾವದಿಂದ ತಕ್ಷಣದಲ್ಲಿಯೇ ಶಂಖಚಕ್ರಗದಾಧಾರಿಯೂ ಗರುಡಾರೂಢನೂ ವನಮಾಲೆಯಿಂದ ವಿಭೂಷಿತನೂ ಆದ ಮಹಾವಿಷ್ಣುವು ಪಾಪನಾಶನತೀರ್ಥದ ತೀರದಲ್ಲಿ ಪ್ರತ್ಯಕ್ಷನಾದನು. ಆಗ ಭದ್ರಮತಿಯು ಶಾಂತಮನಸ್ಕನಾಗಿ ಪರಮಾತ್ಮನನ್ನು ಸ್ತೋತ್ರಮಾಡಲುಪಕ್ರಮಿಸಿದನು.

೭೫. "ಸಕಲ ಬ್ರಹ್ಮಾಂಡಕ್ಕೆ ಕಾರಣಭೂತನಾದವನೂ, ಸಕಲಲೋಕಪಾಲಕನೂ, ದೇವನಾಯಕನೂ, ರಾಕ್ಷಸಸಂಘವಿನಾಶಕನೂ ಆದ ನಿನಗೆ ಪುನಃ ಪುನಃ ನಮಸ್ಕಾರವನ್ನು ಮಾಡುವೆನು.

೭೬. ಭಕ್ತಜನರಲ್ಲಿ ವಿಶ್ವಾಸವುಳ್ಳವನೂ, ಜನರ ಪಾಪಗಳನ್ನು ಕಳೆಯುವವನೂ, ದುರ್ಜನರನ್ನು ನಾಶಗೊಳಿಸುವವನೂ ಜಗನ್ನಾಥನೂ ಆದ ನಿನಗೆ ನಮಸ್ಕರಿಸುವೆನು.

ನಮೋ ನಮಃ ಕಾರಣವಾಮನಾಯ
ನಾರಾಯಣಾಯಾಮಿತವಿಕ್ರಮಾಯ ।
ಶ್ರೀಶಾರ್ಙ್ಗಚಕ್ರಾಸಿಗದಾಧರಾಯ
ನಮೋಽಸ್ತು ತಸ್ಮೈ ಪುರುಷೋತ್ತಮಾಯ ॥ ೭೭ ॥
ನಮಃ ಪಯೋರಾಶಿನಿವಾಸಕಾಯ
ನಮೋಽಸ್ತು ಲಕ್ಷ್ಮೀಪತಯೇಽವ್ಯಯಾಯ ।
ನಮೋಽಸ್ತು ಸೂರ್ಯಾದ್ಯಮಿತಪ್ರಭಾಯ
ನಮೋ ನಮಃ ಪುಣ್ಯಗತಾಗತಾಯ ॥ ೭೮ ॥
ನಮೋ ನಮೋಽರ್ಕೇಂದುವಿಲೋಚನಾಯ
ನಮೋಽಸ್ತು ತೇ ಯಜ್ಞಫಲಪ್ರದಾಯ ।
ನಮೋಽಸ್ತು ಯಜ್ಞಾಂಗವಿರಾಜಿತಾಯ
ನಮೋಽಸ್ತು ತೇ ಸಜ್ಜನವಲ್ಲಭಾಯ ॥ ೭೯ ॥
ನಮೋ ನಮಃ ಕಾರಣಕಾರಣಾಯ
ನಮೋಽಸ್ತು ಶಬ್ದಾದಿವಿವರ್ಜಿತಾಯ ।
ನಮೋಽಸ್ತು ತೇಽಭೀಷ್ಟಸುಖಪ್ರದಾಯ
ನಮೋ ನಮೋ ಭಕ್ತಮನೋರಮಾಯ ॥ ೮೦ ॥

---

೭೭. ದೇವಲೋಕವನ್ನು ರಕ್ಷಿಸಲು ವಾಮನಾವತಾರವನ್ನು ಮಾಡಿದವನೂ, ನಾರಾಯಣನೂ, ಅಪರಿಮಿತಪರಾಕ್ರಮವುಳ್ಳವನೂ, ಶಾರ್ಙ್ಗ, ಸುದರ್ಶನ, ನಂದಕ, ಕೌಮೋದಕಿಗಳೆಂಬ ಆಯುಧಗಳನ್ನು ಧರಿಸಿದವನೂ, ಪುರುಷೋತ್ತಮನೂ ಆದ ನಿನಗೆ ನಮಸ್ಕಾರವು.

೭೮. ಕ್ಷೀರಸಾಗರದಲ್ಲಿ ವಾಸಿಸುವವನೂ, ಲಕ್ಷ್ಮೀಕಾಂತನೂ, ನಾಶರಹಿತನೂ, ಸೂರ್ಯಾದಿಗಳಿಗಿಂತಲೂ ಅಪರಿಮಿತವಾದ ತೇಜಸ್ಸುಳ್ಳವನೂ, ಪುಣ್ಯವಂತರಿಗೆ ಮಾತ್ರ ದರ್ಶನವನ್ನುಕೊಡುವವನೂ ಆದ ನಿನಗೆ ಮಣಿಯುವೆನು.

೭೯. ಸೂರ್ಯಚಂದ್ರರೆಂಬ ನೇತ್ರಗಳುಳ್ಳವನೂ, ಸಕಲಯಜ್ಞಗಳಿಗೆ ಫಲಗಳನ್ನು ಕೊಡುವವನೂ, ಯಜ್ಞಕ್ಕೆ ಮುಖ್ಯಾಂಗವಾದ ಉಪಾಸ್ಯದೇವತೆಯಾಗಿ ಶೋಭಿಸುವವನೂ, ಸಜ್ಜನರಿಗೆ ಸ್ವಾಮಿಯೂ ಆದ ನಿನಗೆ ನಮಸ್ಕಾರವು.

೮೦. ಜಗತ್ತಿಗೆ ಕಾರಣಗಳಾದ ಮಹದಾದಿಗಳಿಗೂ ಕಾರಣನೆನಿಸಿದವನೂ, ಶಬ್ದಾದಿ ಸಾಧನಗಳಿಗೆ ಅಗೋಚರನಾದವನೂ, ಅಪೇಕ್ಷಿಸಿದ ಸುಖಗಳನ್ನು ಕೊಡುವವನೂ, ಭಕ್ತರ ಮನಸ್ಸಿನಲ್ಲಿ ಆನಂದವನ್ನುಂಟುಮಾಡುವವನೂ ಆದ ನಿನಗೆ ನಮಸ್ಕಾರವು.

ನಮೋ ನಮಸ್ತೇಽದ್ಭುತಕಾರಣಾಯ
ನಮೋಽಸ್ತು ತೇ ಮಂದರಧಾರಕಾಯ ।
ನಮೋಽಸ್ತು ತೇ ಯಜ್ಞವರಾಹನಾಮ್ನೇ
ನಮೋ ಹಿರಣ್ಯಾಕ್ಷವಿದಾರಕಾಯ ॥ ೮೧ ॥
ನಮೋಽಸ್ತು ತೇ ವಾಮನರೂಪಭಾಜೇ
ನಮೋಽಸ್ತು ತೇ ಕ್ಷತ್ರಕುಲಾಂತಕಾಯ ।
ನಮೋಽಸ್ತು ತೇ ರಾವಣಮರ್ದನಾಯ
ನಮೋಽಸ್ತು ತೇ ನಂದಸುತಾಗ್ರಜಾಯ ॥ ೮೨ ॥
ನಮಸ್ತೇ ಕಮಲಾಕಾಂತ ನಮಸ್ತೇ ಸುಖದಾಯಿನೇ ।
ಶ್ರಿತಾರ್ತಿನಾಶಿನೇ ತುಭ್ಯಂ ಭೂಯೋ ಭೂಯೋ ನಮೋನಮಃ ॥ ೮೩ ॥
ವಿಪ್ರೇಣ ಸಂಸ್ತುತೋ ದೇವೋ ಭಗವಾನ್ಭಕ್ತವತ್ಸಲಃ ।
ವಾತ್ಸಲ್ಯೇನಾಬ್ರವೀದ್ವಾಕ್ಯಂ ಶ್ರೀನಿವಾಸೋ ದಯಾನಿಧಿಃ ॥ ೮೪ ॥
ತಾತ ತುಷ್ಟೋಽಸ್ಮಿ ಭದ್ರಂ ತೇ ಸ್ತೋತ್ರೇಣ ಮಹತಾ ದ್ವಿಜ ।
ಸರ್ವಭೋಗಸಮಾಯುಕ್ತಃ ಪುತ್ರ ಪೌತ್ರಾದಿಭಿರ್ಯುತಃ ॥ ೮೫ ॥

---

೮೧. ಅದ್ಭುತವಾದ ಕಾರಣಶರೀರವನ್ನು ಧರಿಸಿದವನೂ, ಮಂದರ ಪರ್ವತವನ್ನು ಧರಿಸಿದವನೂ, ಯಜ್ಞವರಾಹದ ರೂಪವನ್ನು ತಳೆದು ಹಿರಣ್ಯಾಕ್ಷ ನನ್ನು ಸೀಳಿದವನೂ ಆದ ನಿನಗೆ ನಮಸ್ಕರಿಸುವೆನು.

೮೨. ಬಲಿಯ ನಿಗ್ರಹಕ್ಕಾಗಿ ವಾಮನರೂಪವನ್ನು ಧರಿಸಿದವನೂ, ಕ್ಷತ್ರಿಯಕುಲವನ್ನು ನಿರ್ಮೂಲಗೊಳಿಸಲು ಪರಶುರಾಮನಾದವನೂ, ರಾವಣಾ ಸುರನನ್ನು ವಧಿಸಲು ಶ್ರೀರಾಮನಾಗಿ ಅವತರಿಸಿದವನೂ, ನಂದನ ಮಗನಾಗಿ ಕೃಷ್ಣಾವತಾರವನ್ನು ತಳೆದವನೂ ಆದ ನಿನಗೆ ಮತ್ತೆ ಮತ್ತೆ ನಮಸ್ಕರಿಸುವೆನು.

೮೩. ಕಮಲಾಕಾಂತನೂ, ಸುಖಪ್ರದಾತನೂ, ಆಶ್ರಿತರ ದುಃಖಗಳನ್ನು ಕಳೆಯುವವನೂ ಆದ ನಿನಗೆ ಮತ್ತೆ ಮತ್ತೆ ನಮಸ್ಕಾರವನ್ನು ಮಾಡುವೆನು.

೮೪. ಇಂತು ಬ್ರಾಹ್ಮಣನಿಂದ ಸ್ತೋತ್ರಮಾಡಲ್ಪಟ್ಟ ದೇವದೇವನೂ, ಭಗವಂತನೂ, ಭಕ್ತವತ್ಸಲನೂ, ದಯಾನಿಧಿಯೂ ಆದ ಶ್ರೀನಿವಾಸನು ಭಕ್ತನಲ್ಲಿ ವಾತ್ಸಲ್ಯದಿಂದ ಹೇಳತೊಡಗಿದನು.

೮೫–೮೬. "ಪ್ರಿಯನಾದ ಬ್ರಾಹ್ಮಣನೆ! ಮಹತ್ತರವಾದ ಈ ನಿನ್ನ ಸ್ತೋತ್ರ ದಿಂದ ಸಂತೋಷಗೊಂಡಿರುವೆನು. ನಿನಗೆ ಮಂಗಳವುಂಟಾಗಲಿ. ನೀನು ಮಕ್ಕಳು, ಮೊಮ್ಮಕ್ಕಳೊಡನೆ ಭೋಗಭಾಗ್ಯಗಳಿಂದೊಡಗೂಡಿ ಈ ಲೋಕದಲ್ಲಿ ಸೌಖ್ಯವನ್ನ ನುಭವಿಸಿ ದೇಹವನ್ನು ಬಿಟ್ಟಮೇಲೆ ಮೋಕ್ಷವನ್ನು ಹೊಂದು." ಇಂತೆಂದು ಹೇಳಿ ದೇವೇಶನಾದ ಶ್ರೀನಿವಾಸನು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.

ಇಹಲೋಕೇ ಸುಖಂ ಪ್ರಾಪ್ಯ ದೇಹಾಂತೇ ಮುಕ್ತಿಮಾಪ್ನುಹಿ ।
ಇತ್ಯುಕ್ತ್ವಾ ಭಗವಾನ್ವಿಷ್ಣುಸ್ತತ್ರೈವಾಂತರಧೀಯತ ॥ ೮೬ ॥
ಏವಂ ವಃ ಕಥಿತಂ ವಿಪ್ರಾಃ ಪಾಪನಾಶನವೈಭವಂ ।
ತತ್ತೀರೇ ಭೂಪ್ರದಾನಸ್ಯ ಮಾಹಾತ್ಮ್ಯಂ ಚಾಪಿ ವರ್ಣಿತಂ ॥ ೮೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ
"ಪಾಪವಿನಾಶನತೀರ್ಥೇ ಭೂದಾನಫಲಾನುವರ್ಣನಂ" ನಾಮ
ವಿಂಶತಿತಮೋಽಧ್ಯಾಯಃ

---

೮೭. ಶೌನಕಾದಿ ಬ್ರಾಹ್ಮಣರಿರಾ! ಇಂತು ನಿಮಗೆ ಪಾಪವಿನಾಶನ ತೀರ್ಥದ ವೈಭವವನ್ನು ವಿಸ್ತರಿಸಿರುವೆನು. ಆ ತೀರ್ಥದ ತೀರದಲ್ಲಿ ಭೂದಾನವನ್ನು ಮಾಡುವುದರ ಮಾಹಾತ್ಮ್ಯವೂ ವರ್ಣಿತವಾಗಿರುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೇಂಕಟಾಚಲ
ಮಹಾತ್ಮ್ಯೆಯ ಧರಣೀವರಾಹ ಸಂವಾದದಲ್ಲಿ
"ಪಾಪವಿನಾಶನತೀರ್ಥದಲ್ಲಿ ಭೂದಾನಫಲಾನುವರ್ಣನ"ವೆಂಬ
ಇಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕವಿಂಶತಿತಮೋಽಧ್ಯಾಯಃ

### ಆಕಾಶಗಂಗಾಮಾಹಾತ್ಮ್ಯ ರಾಮಾನುಜವಿಪ್ರವ್ರತಚರ್ಯಾದಿವರ್ಣನ

ಸೂತ ಉವಾಚ :—

ಭೋಭೋಸ್ತಪೋಧನಾಃ ಸರ್ವೇ ನೈಮಿಷಾರಣ್ಯವಾಸಿನಃ ।
ಆಕಾಶಗಂಗಾತೀರ್ಥಸ್ಯ ಮಾಹಾತ್ಮ್ಯಂ ಪ್ರವದಾಮ್ಯಹಂ ॥ ೧ ॥
ಆಕಾಶಗಂಗಾನಿಕಟೇ ಸರ್ವಶಾಸ್ತ್ರಾರ್ಥಪಾರಗಃ ।
ರಾಮಾನುಜ ಇತಿ ಖ್ಯಾತೋ ವಿಷ್ಣುಭಕ್ತೋ ಜಿತೇಂದ್ರಿಯಃ ॥ ೨ ॥
ತಪಶ್ಚಕಾರ ಧರ್ಮಾತ್ಮಾ ವೈಖಾನಸಮತೇ ಸ್ಥಿತಃ ।
ಗ್ರೀಷ್ಮೇ ಪಂಚಾಗ್ನಿಮಧ್ಯಸ್ಥೋ ವಿಷ್ಣುಧ್ಯಾನಪರಾಯಣಃ ॥ ೩ ॥
ಜಪನ್ನಷ್ಟಾಕ್ಷರಂ ಮಂತ್ರಂ ಧ್ಯಾಯನ್ಹೃದಿ ಜನಾರ್ದನಂ ।
ವರ್ಷಾಸ್ವಾಕಾಶಗೋ ನಿತ್ಯಂ ಹೇಮಂತೇಷು ಜಲಾಶಯಃ ॥ ೪ ॥
ಸರ್ವಭೂತಹಿತೋ ದಾಂತಃ ಸರ್ವದ್ವಂದ್ವವಿವರ್ಜಿತಃ ।
ವರ್ಷಾಣಿ ಕತಿಚಿತ್ಸೋಽಯಂ ಜೀರ್ಣಪರ್ಣಾಶನೋಽಭವತ್ ॥ ೫ ॥

---

### ಕನ್ನಡದ ಅನುವಾದ

#### ಆಕಾಶಗಂಗಾಮಾಹಾತ್ಮ್ಯ—ರಾಮಾನುಜವಿಪ್ರವ್ರತಚರ್ಯಾದಿವರ್ಣನ

೧. ಸೂತನು ಹೇಳುತ್ತಾನೆ:—ಎಲೈ ನೈಮಿಷಾರಣ್ಯನಿವಾಸಿಗಳಾದ ತಪೋನಿಷ್ಠರೆ! ಕೇಳಿರಿ. ಆಕಾಶಗಂಗೆಯೆಂಬ ತೀರ್ಥದ ಮಾಹಾತ್ಮ್ಯೆಯನ್ನು ಹೇಳುವೆನು.

೨. ಆ ಆಕಾಶಗಂಗೆಯೆಂಬ ತೀರ್ಥದ ಸಮೀಪದಲ್ಲಿ ಸಕಲ ಶಾಸ್ತ್ರಾರ್ಥಗಳನ್ನರಿತವನೂ, ವಿಷ್ಣುಭಕ್ತನೂ, ಜಿತೇಂದ್ರಿಯನೂ ಆದ ರಾಮಾನುಜನೆಂಬ ಬ್ರಾಹ್ಮಣೋತ್ತಮನಿದ್ದನು.

೩. ಆ ಧರ್ಮಾತ್ಮನು ನಿರಂತರವೂ ವಿಷ್ಣುಧ್ಯಾನವನ್ನು ಮಾಡುವವನಾಗಿ ವಾನಪ್ರಸ್ಥಾಶ್ರಮದ ನಿಯಮಗಳನ್ನು ಪಾಲಿಸುತ್ತ ಗ್ರೀಷ್ಮಋತುವಿನಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ತಪಸ್ಸನ್ನು ಮಾಡುತ್ತಿದ್ದನು.

೪–೫. ಬಾಯಿಂದ ಅಷ್ಟಾಕ್ಷರೀ ಮಂತ್ರವನ್ನು ಜಪಿಸುತ್ತ ಹೃದಯದಲ್ಲಿ ಶ್ರೀಮನ್ನಾರಾಯಣನನ್ನು ಧ್ಯಾನಿಸಿ ವರ್ಷಾಕಾಲದಲ್ಲಿ ಬಯಲಿನಲ್ಲಿ ನಿಂತೂ, ಚಳಿಗಾಲದಲ್ಲಿ ನೀರಿನಲ್ಲಿ ನಿಂತೂ ತಪಸ್ಸನ್ನು ಮಾಡುತ್ತಿದ್ದನು. ಆತನು ಸಕಲ ಪ್ರಾಣಿಗಳಿಗೂ ಹಿತವನ್ನಾಚರಿಸುತ್ತ ರಾಗದ್ವೇಷಾದಿ ಸಕಲ ದ್ವಂದ್ವಗಳನ್ನೂ ತ್ಯಜಿಸಿ ಕೆಲವು ವರ್ಷಗಳವರೆಗೂ ತರಗೆಲೆಗಳನ್ನು ಸೇವಿಸಿ ಕಾಲವನ್ನು ಕಳೆದನು.

ಕಂಚಿತ್ಕಾಲಂ ಜಲಾಹಾರೋ ವಾಯುಭಕ್ಷಃ ಕಿಯತ್ಸಮಾಃ ॥ ೬ ॥
ಅಥ ತತ್ತಪಸಾ ತುಷ್ಟೋ ಭಗವಾನ್ಭಕ್ತವತ್ಸಲಃ ।
ಪ್ರತ್ಯಕ್ಷತಾಮುಗಾತ್ತಸ್ಯ ಶಂಖಚಕ್ರಗದಾಧರಃ ॥ ೭ ॥
ವಿಕಚಾಂಬುಜಪತ್ರಾಕ್ಷಃ ಸೂರ್ಯಕೋಟಿಸಮಪ್ರಭಃ ।
ವಿನತಾನಂದನಾರೂಢಶ್ಛತ್ರಚಾಮರಶೋಭಿತಃ ॥ ೮ ॥
ಹಾರಕೇಯೂರಮುಕುಟಕಟಕಾದಿವಿಭೂಷಿತಃ ।
ವಿಷ್ವಕ್ಸೇನಸುನಂದಾದಿಕಿಂಕರೈಃ ಪರಿವಾರಿತಃ ॥ ೯ ॥
ವೀಣಾವೇಣುಮೃದಂಗಾದಿವಾದಕೈರ್ನಾರದಾದಿಭಿಃ ।
ಗೀಯಮಾನಃ ಸುವಿಭವಃ ಪೀತಾಂಬರವಿರಾಜಿತಃ ॥ ೧೦ ॥
ಲಕ್ಷ್ಮೀವಿರಾಜಿತೋರಸ್ಕೋ ನೀಲಮೇಘನಿಭಚ್ಛವಿಃ ।
ಸನಕಾದಿಮಹಾಯೋಗಿ ಸೇವಿತಃ ಪಾರ್ಶ್ವಯೋರ್ದ್ವಯೋಃ ॥ ೧೧ ॥
ಮಂದಸ್ಮಿತೇನ ಸಕಲಂ ಮೋಹಯನ್ಭುವನತ್ರಯಂ ।
ಸ್ವಭಾಸಾ ಮಾನಯನ್ಸರ್ವಾನ್ ದಿಶೋ ದಶ ವಿರಾಜಯನ್ ॥ ೧೨ ॥

---

೬–೭. ಕೆಲವು ಕಾಲವನ್ನು ಜಲಸೇವನೆಯಿಂದಲೂ ಹಲವು ವರ್ಷಗಳನ್ನು ವಾಯುಸೇವನೆಯಿಂದಲೂ ಕಳೆದನು. ಕಾಲಕ್ರಮದಲ್ಲಿ ಆತನ ತಪಸ್ಸಿಗೆ ಸಂತೋಷಗೊಂಡು ಭಕ್ತವತ್ಸಲನಾದ ಭಗವಂತನು ಶಂಖ ಚಕ್ರ ಗದಾದ್ಯಾಯುಧಗಳಿಂದೊಡಗೂಡಿ ಆತನಿಗೆ ಪ್ರತ್ಯಕ್ಷ ದರ್ಶನವನ್ನು ಕೊಟ್ಟನು.

೮. ಅರಳಿದ ಕಮಲದ ದಳದಂತಿರುವ ಕಣ್ಣುಗಳನ್ನು ಹೊಂದಿ ಕೋಟಿ ಸೂರ್ಯರಿಗೆ ಸಮಾನವಾದ ತೇಜಸ್ಸಿನಿಂದ ಪ್ರಕಾಶಿಸುತ್ತ ವೈನತೇಯನನ್ನೇರಿಕೊಂಡು ಭಗವಂತನು ಛತ್ರಚಾಮರಗಳಿಂದ ಶೋಭಿಸುತ್ತಿದ್ದನು.

೯. ಹಾರ, ಭಾಪುರಿ, ಕಟಕ, ಕಿರೀಟಾದಿ ಭೂಷಣಗಳನ್ನು ಧರಿಸಿ ವಿಷ್ವಕ್ಸೇನ, ಸುನಂದರೇ ಮೊದಲಾದ ಕಿಂಕರರಿಂದ ಸುತ್ತುವರೆಯಲ್ಪಟ್ಟಿದ್ದನು.

೧೦. ವೀಣೆ, ವೇಣು, ಮೃದಂಗಗಳೇ ಮುಂತಾದ ವಾದ್ಯಗಳನ್ನು ಬಾಜಿಸುತ್ತಿರುವ ನಾರದಾದಿ ಗಾಯಕರಿಂದ ಸ್ತುತಿಸಲ್ಪಟ್ಟ ವೈಭವವುಳ್ಳವನಾಗಿ ಪೀತಾಂಬರವನ್ನುಟ್ಟು ವಿರಾಜಿಸುತ್ತಿದ್ದನು.

೧೧. ಲಕ್ಷ್ಮಿಯು ವಿರಾಜಿಸುತ್ತಿರುವ ವಕ್ಷಸ್ಥಳದಿಂದಲೂ ನೀಲಮೇಘವನ್ನು ಹೋಲುವ ಮೈಬಣ್ಣದಿಂದಲೂ ಕೂಡಿದವನಾಗಿ ಸನಕಾದಿ ಮಹಾಯೋಗಿಗಳಿಂದ ಎರಡು ಪಕ್ಕಗಳಲ್ಲಿಯೂ ಸೇವೆಯನ್ನು ಸ್ವೀಕರಿಸುತ್ತಿದ್ದನು.

೧೨. ತನ್ನ ಮುಗುಳ್ನಗೆಯಿಂದ ಮೂರು ಲೋಕಗಳೆಲ್ಲವನ್ನೂ ಮೋಹಗೊಳಿಸುತ್ತ ತನ್ನ ಕಾಂತಿಯಿಂದ ಎಲ್ಲರನ್ನೂ ಸಮ್ಮಾನಿಸಿ ಹತ್ತು ದಿಕ್ಕುಗಳನ್ನೂ ಬೆಳಗಿಸುತ್ತಿದ್ದನು.

ಸುಭಕ್ತಸುಲಭೋ ದೇವೋ ವೇಂಕಟೇಶೋ ದಯಾನಿಧಿಃ ।
ಪುರಃ ಸನ್ನಿದಧೇ ತಸ್ಯ ರಾಮಾನುಜಮಹಾಮುನೇಃ ॥ ೧೩ ॥
ಆವಿರ್ಭೂತಂ ತದಾ ದೃಷ್ಟ್ವಾ ಶ್ರೀನಿವಾಸಂ ಕೃಪಾನಿಧಿಂ ।
ಪೀತಾಂಬರಧರಂ ದೇವಂ ತುಷ್ಟಿಂ ಪ್ರಾಪ ಮಹಾಮುನಿಃ ॥ ೧೪ ॥
ಭಕ್ತ್ಯಾ ಪರಮಯಾಯುಕ್ತಸ್ತುಷ್ಟಾವ ಜಗದೀಶ್ವರಂ ॥ ೧೫ ॥

ರಾಮಾನುಜ ಉವಾಚ :—

ನಮೋ ದೇವಾಧಿದೇವಾಯ ಶಂಖಚಕ್ರಗದಾಭೃತೇ ।
ನಮೋ ನಿತ್ಯಾಯ ಶುದ್ಧಾಯ ವೇಂಕಟೇಶಾಯ ತೇ ನಮಃ ॥ ೧೬ ॥
ನಮೋ ಭಕ್ತಾರ್ತಿಹಂತ್ರೇ ತೇ ಹವ್ಯಕವ್ಯಸ್ವರೂಪಿಣೇ ।
ನಮಸ್ತ್ರಿಮೂರ್ತಯೇ ತುಭ್ಯಂ ಸೃಷ್ಟಿಸ್ಥಿತ್ಯಂತಕಾರಿಣೇ ॥ ೧೭ ॥
ನಮಃ ಪರೇಶಾಯ ನಮೋಽತಿಭೂಮ್ನೇ
ನಮೋಽಸ್ತು ಲಕ್ಷ್ಮೀಪತಯೇ ವಿಧಾತ್ರೇ ।
ನಮೋಽಸ್ತು ಸೂರ್ಯೇಂದುವಿಲೋಚನಾಯ
ನಮೋ ವಿರಿಂಚಾದ್ಯಭಿವಂದಿತಾಯ ॥ ೧೮ ॥

---

೧೩. ಇಂತು ತನ್ನ ಭಕ್ತರಿಗೆ ಅತ್ಯಂತ ಸುಲಭನಾದ ದೇವನೂ, ಕೃಪಾ ಸಮುದ್ರನೂ ಆದ ವೇಂಕಟೇಶ್ವರನು ಆ ರಾಮಾನುಜ ಮಹಾಮುನಿಯ ಮುಂದುಗಡೆಯಲ್ಲಿ ಸಾನ್ನಿಧ್ಯವನ್ನು ದಯೆಪಾಲಿಸಿದನು.

೧೪. ಕೃಪಾನಿಧಿಯೂ ಪೀತಾಂಬರಧಾರಿಯೂ ಆದ ಶ್ರೀನಿವಾಸ ದೇವನು ತನ್ನ ಮುಂದೆ ಆವಿರ್ಭೂತನಾದುದನ್ನು ಕಂಡು ಆ ರಾಮಾನುಜಮುನಿಯು ಸಂತೋಷವನ್ನು ಹೊಂದಿದನು.

೧೫. ಹಿರಿದಾದ ಭಕ್ತಿಯಿಂದೊಡಗೂಡಿದವನಾಗಿ ಅವನು ಜಗನ್ನಾಯಕ ನಾದ ಶ್ರೀನಿವಾಸನನ್ನು ಸ್ತೋತ್ರಮಾಡಿದನು.

೧೬. ರಾಮಾನುಜನು ಹೇಳುತ್ತಾನೆ :—"ದೇವಾಧಿದೇವನೂ, ಶಂಖಚಕ್ರ ಗದಾಪಾಣಿಯೂ, ಅನಾದಿನಿಧನನೂ, ಪರಿಶುದ್ಧನೂ, ವೇಂಕಟಾಚಲದ ಅಧಿ ಪತಿಯೂ ಆದ ನಿನಗೆ ನಮಸ್ಕಾರವು.

೧೭. ಭಕ್ತರ ಕಷ್ಟಗಳನ್ನು ನಿವಾರಿಸುವವನೂ, ಹವ್ಯಕವ್ಯ ಸ್ವರೂಪನೂ, ಸೃಷ್ಟಿಸ್ಥಿತಿ ಲಯಗಳನ್ನು ಮಾಡುವುದಕ್ಕಾಗಿ ಬ್ರಹ್ಮವಿಷ್ಣು ಮಹೇಶ್ವರರಾಗಿರು ವವನೂ ಆದ ನಿನಗೆ ನಮಸ್ಕಾರವು.

೧೮. ಪರಾತ್ಪರನೂ, ಮಹತ್ತಿಗಿಂತ ಮಹತ್ತೆನಿಸಿದವನೂ, ಲಕ್ಷ್ಮೀ ರಮಣನೂ, ಲೋಕನಾಯಕನೂ, ಸೂರ್ಯಚಂದ್ರರೆಂಬ ನೇತ್ರಗಳುಳ್ಳವನೂ, ಬ್ರಹ್ಮಾದಿ ದೇವತೆಗಳಿಂದ ನಮಸ್ಕೃತನೂ ಆದ ನಿನಗೆ ನಮಸ್ಕರಿಸುವೆನು.

ಯೋ ನಾಮಜಾತ್ಯಾದಿವಿಕಲ್ಪಹೀನಃ
ಸಮಸ್ತದೋಷೈರಪಿ ವರ್ಜಿತೋ ಯಃ ।
ಸಮಸ್ತಸಂಸಾರಭಯಾಪಹಾರಿಣೇ
ತಸ್ಮೈ ನಮೋ ದೈತ್ಯವಿನಾಶಕಾಯ ॥ ೧೯ ॥
ವೇದಾಂತವೇದ್ಯಾಯ ರಮೇಶ್ವರಾಯ
ವೃಷಾದ್ರಿವಾಸಾಯ ವಿಧಾತೃಪಿತ್ರೇ ।
ನಮೋ ನಮಸ್ಸರ್ವಜನಾರ್ತಿಹಾರಿಣೇ
ನಾರಾಯಣಾಯಾಮಿತವಿಕ್ರಮಾಯ ॥ ೨೦ ॥
ನಮಸ್ತುಭ್ಯಂ ಭಗವತೇ ವಾಸುದೇವಾಯ ಶಾರ್ಙ್ಗಿಣೇ ।
ಭೂಯೋ ಭೂಯೋ ನಮಸ್ತುಭ್ಯಂ ವೇಂಕಟಾದ್ರಿನಿವಾಸಿನೇ ॥ ೨೧ ॥
ಇತಿ ಸ್ತುತ್ವಾ ವೆಂಕಟೇಶಂ ಶ್ರೀನಿವಾಸಂ ಜಗದ್ಗುರುಂ ।
ರಾಮಾನುಜೋ ಮುನಿಸ್ತೂಷ್ಣೀಮಾಸ್ತೇ ವಿಪ್ರವರೋತ್ತಮಃ ॥ ೨೨ ॥
ಶ್ರುತ್ವಾ ಸ್ತುತಿಂ ಶ್ರುತಿಸುಖಾಂ ಸ್ತುತಸ್ತಸ್ಯ ಮಹಾತ್ಮನಃ ।
ಅವಾಪ ಪರಮಂ ತೋಷಂ ವೇಂಕಟಾಚಲನಾಯಕಃ ॥ ೨೩ ॥

---

೧೯. ನಾಮ ಜಾತಿಗಳೇ ಮೊದಲಾದ ವಿಕಲ್ಪಗಳಿಲ್ಲದವನೂ, ಸಕಲ ದೋಷವರ್ಜಿತನೂ, ಅಶೇಷಸಂಸಾರದ ಭಯವನ್ನು ದೂರಮಾಡುವವನೂ, ರಾಕ್ಷಸ ಸಂಘ ವಿನಾಶಕನೂ ಆದ ನಿನಗೆ ನಮಸ್ಕಾರವು.

೨೦. ವೇದಾಂತವಾಕ್ಯಗಳ ಲಕ್ಷ್ಯಾರ್ಥವೂ, ಲಕ್ಷ್ಮೀಶ್ವರನೂ, ಶೇಷಾಚಲ ನಿವಾಸಿಯೂ, ಬ್ರಹ್ಮನಿಗೆ ತಂದೆಯಾದವನೂ, ಸಕಲ ಜನರ ಕ್ಲೇಶಗಳನ್ನು ಕಳೆಯುವವನೂ, ಜ್ಞಾನಮಾರ್ಗೋಪದೇಶಕನೂ, ಅಪರಿಮಿತ ಪರಾಕ್ರಮಿಯೂ ಆದ ನಿನಗೆ ನಮಸ್ಕಾರವು.

೨೧. ಷಡ್ಗುಣೈಶ್ವರ್ಯ ಸಹಿತನೂ, ವಸುದೇವ ಪುತ್ರನೂ, ಶಾರ್ಙ್ಗವೆಂಬ ಧನುಸ್ಸನ್ನು ಹಿಡಿದವನೂ, ವೇಂಕಟಾಚಲನಿವಾಸಿಯೂ ಆದ ನಿನಗೆ ಮತ್ತೆ ಮತ್ತೆ ಸಾಷ್ಟಾಂಗಪ್ರಣಾಮವನ್ನು ಮಾಡುವೆನು."

೨೨. ಇಂತು ವೇಂಕಟೇಶ್ವರನೂ ಲೋಕನಾಯಕನೂ ಆದ ಶ್ರೀನಿವಾಸನನ್ನು ಸ್ತೋತ್ರಮಾಡಿ ಬ್ರಾಹ್ಮಣಸಮೂಹದಲ್ಲಿ ಅಗ್ರಗಣ್ಯನಾದ ರಾಮಾನುಜ ಮಹಾಮುನಿಯು ಸುಮ್ಮನೆ ನಿಂತನು.

೨೩. ಕಿವಿಗಳಿಗಿಂಪಾದ ಆ ಮಹಾತ್ಮನ ಸ್ತೋತ್ರವನ್ನು ಕೇಳಿ ವೇಂಕಟಾಚಲಾಧಿಪತಿಯು ಆತನ ಸ್ತುತಿಗೆ ಪರಮ ಸಂತೋಷವನ್ನು ಹೊಂದಿದನು.

ಅಥಾಲಿಂಗ್ಯ ಮುನಿಂ ಶೌರಿಶ್ಚತುರ್ಭಿರ್ಬಾಹುಭಿಸ್ತದಾ ।
ಬಭಾಷೇ ಪ್ರೀತಿಸಂಯುಕ್ತೋ ವರಂ ವೈ ವ್ರಿಯತಾಮಿತಿ ॥ ೨೪ ॥
ತುಷ್ಟೋಽಸ್ಮಿ ತಪಸಾ ತೇಽದ್ಯ ಸ್ತೋತ್ರೇಣಾಪಿ ಮಹಾಮುನೇ ।
ನಮಸ್ಕಾರೇಣ ಚ ಪ್ರೀತೋ ವರದೋಽಹಂ ತವಾಗತಃ ॥ ೨೫ ॥

ರಾಮಾನುಜ ಉವಾಚ :—

ನಾರಾಯಣ ರಮಾನಾಥ ಶ್ರೀನಿವಾಸ ಜಗನ್ಮಯ ।
ಜನಾರ್ದನ ಜಗದ್ಧಾಮ ಗೋವಿಂದ ನರಕಾಂತಕ ॥ ೨೬ ॥
ತ್ವದ್ದರ್ಶನಾತ್ಕೃತಾರ್ಥೋಽಸ್ಮಿ ವೇಂಕಟಾದ್ರಿಶಿರೋಮಣೇ ।
ತ್ವಾಂ ನಮಸ್ಯಂತಿ ಧರ್ಮಿಷ್ಠಾ ಯತಸ್ತ್ವಂ ಧರ್ಮಪಾಲಕಃ ॥ ೨೭ ॥
ಯಂ ನ ವೇತ್ತಿ ಭವೋ ಬ್ರಹ್ಮಾ ಯಂ ನ ವೇತ್ತಿ ತ್ರಯೀ ತಥಾ ।
ತ್ವಾಂ ವೇದ್ಮಿ ಪರಮಾತ್ಮಾನಂ ಕಿಮಸ್ಮಾದಧಿಕಂ ಪರಂ ॥ ೨೮ ॥
ಯೋಗಿನೋ ಯಂ ನ ಪಶ್ಯಂತಿ ಯಂ ನ ಪಶ್ಯಂತಿ ಕರ್ಮಠಾಃ ।
ಪಶ್ಯಾಮಿ ಪರಮಾತ್ಮಾನಂ ಕಿಮಸ್ಮಾದಧಿಕಂ ಪರಂ ॥ ೨೯ ॥

---

೨೪. ಬಳಿಕ ತನ್ನ ನಾಲ್ಕು ಬಾಹುಗಳಿಂದಲೂ ರಾಮಾನುಜನನ್ನು ಆಲಿಂಗನೆ ಮಾಡಿಕೊಂಡು ಆ ನಾರಾಯಣನು ವಾತ್ಸಲ್ಯದಿಂದೊಡಗೂಡಿ ಹೇಳ ತೊಡಗಿದನು. "ಎಲೈ ಮಹಾಮುನಿಯೆ! ನಿನಗೆ ಬೇಕಾದ ವರವನ್ನು ಕೇಳು.

೨೫. ಮಹರ್ಷಿಯೆ! ನಿನ್ನ ತಪಸ್ಸಿನಿಂದಲೂ ಸ್ತೋತ್ರದಿಂದಲೂ ಸಂತುಷ್ಟನಾಗಿರುವೆನು. ನಿನ್ನ ನಮಸ್ಕಾರದಿಂದ ಸುಪ್ರೀತನಾಗಿ ನಿನಗೆ ವರಗಳನ್ನು ಕೊಡಲು ನಾನು ಬಂದಿರುವೆನು."

೨೬. ರಾಮಾನುಜನು ಹೇಳುತ್ತಾನೆ:—"ನಾರಾಯಣನೆ! ಲಕ್ಷ್ಮೀರಮಣನೆ! ಶ್ರೀನಿವಾಸನೆ! ಜಗನ್ಮಯನೆ! ಜನಾರ್ದನನೆ! ಜಗನ್ನಿಲಯನೆ! ಗೋವಿಂದನೆ! ನರಕಾಸುರಸಂಹಾರಕನೆ!

೨೭. ವೇಂಕಟಾಚಲದ ಮೇಲೆ ನೆಲಸಿರುವವನೆ! ನಿನ್ನ ದರ್ಶನದಿಂದ ನಾನು ಈಗ ಕೃತಕೃತ್ಯನಾದೆನು. ನೀನೇ ಧರ್ಮರಕ್ಷಣತತ್ಪರನೆಂದು ತಿಳಿದು ಧರ್ಮಿಷ್ಠರು ನಿನ್ನನ್ನೇ ನಮಸ್ಕರಿಸುವರು.

೨೮. ಯಾವನನ್ನು ರುದ್ರಬ್ರಹ್ಮರೂ ತಿಳಿಯಲಾರರೊ, ಯಾವನು ವೇದಗಳಿಗೂ ಅಗೋಚರನಾಗಿರುವನೊ, ಅಂತಹ ಪರಮಾತ್ಮನಾದ ನಿನ್ನನ್ನು ಕಾಣುತ್ತಿರುವೆನು. ಇದಕ್ಕಿಂತಲೂ ಹೆಚ್ಚಿನದೇನನ್ನು ಕೇಳಲಿ?

೨೯. ಯೋಗಿಗಳೂ ಯಾವನನ್ನು ಕಾಣಲಾರರೊ, ಕೇವಲ ಕರ್ಮನಿಷ್ಠರೂ ಯಾವನನ್ನು ನೋಡಲಾರರೊ, ಅಂತಹ ಪರಮಾತ್ಮನನ್ನೇ ನಾನು ನೋಡುತ್ತಿರುವೆನು. ಇದಕ್ಕಿಂತಲೂ ಅಧಿಕವೂ ಪರವೂ ಆದುದೇನಿರುವುದು?

ಏತೇನ ಚ ಕೃತಾರ್ಥೋಽಸ್ಮಿ ವೇಂಕಟೇಶ ಜಗತ್ಪತೇ ।
ಯನ್ನಾಮಸ್ಮೃತಿಮಾತ್ರೇಣ ಮಹಾಪಾತಕಿನೋಽಪಿ ಚ ॥ ೩೦ ॥
ಮುಕ್ತಿಂ ಪ್ರಯಾಂತಿ ಮನುಜಾಸ್ತಂ ಪಶ್ಯಾಮಿ ಜನಾರ್ದನಂ ।
ತ್ವತ್ಪಾದಪದ್ಮಯುಗಳೇ ನಿಶ್ಚಲಾ ಭಕ್ತಿರಸ್ತು ಮೇ ॥ ೩೧ ॥

ಶ್ರೀ ಭಗವಾನುವಾಚ :—

ಮಯಿ ಭಕ್ತಿರ್ದೃಢಾ ತೇಽಸ್ತು ರಾಮಾನುಜ ಮಹಾಮತೇ ।
ಶೃಣು ಚಾಪ್ಯಪರಂ ವಾಕ್ಯಮುಚ್ಯತೇ ತೇ ಮಯಾ ದ್ವಿಜ ॥ ೩೨ ॥
ಮೇಷಸಂಕ್ರಮಣೇ ಭಾನೋಶ್ಚಿತ್ರಾನಕ್ಷತ್ರಸಂಯುತೇ ।
ಪೌರ್ಣಮಸ್ಯಾಂ ಚ ಗಂಗಾಯಾ ಸ್ನಾನಂ ಕುರ್ವಂತಿ ಯೇ ಜನಾಃ ॥ ೩೩ ॥
ತೇ ಯಾಂತಿ ಪರಮಂ ಧಾಮ ಪುನರಾವೃತ್ತಿವರ್ಜಿತಂ ॥ ೩೪ ॥
ವಿಯದ್ಗಂಗಾಸಮೀಪೇ ತ್ವಂ ವಸ ರಾಮಾನುಜ ದ್ವಿಜ ।
ಏತತ್ಪ್ರಾರಬ್ಧದೇಹಾಂತೇ ಮತ್ಸ್ವರೂಪಮವಾಪ್ಸ್ಯಸಿ ॥ ೩೫ ॥
ಬಹುನಾ ಕಿಮಿಹೋಕ್ತೇನ ವಿಯದ್ಗಂಗಾಜಲೇ ಶುಭೇ ।
ಸ್ನಾಂತಿ ಯೇ ವೈ ನರಾಃ ಸರ್ವೇ ತೇ ವೈ ಭಾಗವತೋತ್ತಮಾಃ ।
ಭವಂತಿ ಮುನಿಶಾರ್ದೂಲ ನಾತ್ರ ಕಾರ್ಯಾ ವಿಚಾರಣಾ ॥ ೩೬ ॥

---

೩೦–೩೧. ಜಗನ್ನಾಯಕನಾದ ವೇಂಕಟೇಶ್ವರನೆ! ಇಷ್ಟರಿಂದಲೇ ನಾನು ಕೃತಾರ್ಥನಾಗಿರುವೆನು. ಯಾವನ ನಾಮವನ್ನು ಸ್ಮರಿಸುವ ಮಾತ್ರದಿಂದ ಮಹಾಪಾತಕಗಳನ್ನು ಮಾಡಿದ ಮನುಜರೂ ಕೂಡ ಮೋಕ್ಷಸಾಮ್ರಾಜ್ಯದಲ್ಲಿ ಭಾಗಿಗಳಾಗುವರೊ, ಅಂತಹ ಜನಾರ್ದನನನ್ನೇ ನೋಡುತ್ತಿರುವೆನು. ನಿನ್ನ ಪಾದಪದ್ಮಗಳಲ್ಲಿಯೇ ನನಗೆ ನಿಶ್ಚಲವಾದ ಭಕ್ತಿಯೆಂಬುದುಂಟಾಗಲಿ.''

೩೨. ಭಗವಂತನು ಹೇಳುತ್ತಾನೆ:—''ಮಹಾಮತಿಯಾದ ರಾಮಾನುಜನೆ! ನನ್ನಲ್ಲಿ ನಿನಗೆ ದೃಢವಾದ ಭಕ್ತಿಯುಂಟಾಗಲಿ. ಬ್ರಾಹ್ಮಣೋತ್ತಮನೆ! ನಾನು ಹೇಳುವ ಮತ್ತೊಂದು ಸಂದೇಶವನ್ನೂ ಕೇಳು.

೩೩–೩೪. ಮೇಷಸಂಕ್ರಮಣದ ಮಾಸದಲ್ಲಿ ಸೂರ್ಯನು ಚಿತ್ರಾನಕ್ಷತ್ರ ದಲ್ಲಿರಲು ಪೌರ್ಣಿಮೆಯ ದಿವಸ ಯಾವ ಜನರು ಆಕಾಶಗಂಗೆಯ ತೀರ್ಥದಲ್ಲಿ ಸ್ನಾನವನ್ನು ಮಾಡುವರೊ, ಅವರು ಪುನರಾವೃತ್ತಿರಹಿತವಾದ ಪರಮವೈಷ್ಣವ ಪದವನ್ನು ಹೊಂದುವರು.

೩೫. ರಾಮಾನುಜ ದ್ವಿಜನೆ! ನೀನು ಆಕಾಶಗಂಗೆಯ ಸಮೀಪದಲ್ಲಿಯೇ ವಾಸಮಾಡಿಕೊಂಡಿರು. ಈಗಿರುವ ದೇಹವು ನಾಶವಾಗಲು ನೀನು ನನ್ನ ಸಾರೂಪ್ಯ ಸಿದ್ಧಿಯನ್ನೇ ಹೊಂದುವೆ.

೩೬. ಎಲೈ ಮುನಿಪುಂಗವನೆ! ಅನೇಕ ಮಾತುಗಳನ್ನು ಹೇಳಿದುದ

ರಾಮಾನುಜ ಉವಾಚ :—

ಕಿಂ ಲಕ್ಷಣಾ ಭಾಗವತಾ ಜ್ಞಾಯಂತೇ ಕೇನ ಕರ್ಮಣಾ ।
ಏತದಿಚ್ಛಾಮ್ಯಹಂ ಶ್ರೋತುಂ ಕೌತೂಹಲಪರೋ ಯತಃ ॥ ೩೭ ॥

ಶ್ರೀ ವೇಂಕಟೇಶ ಉವಾಚ :—

ವಚ್ಮಿ ಭಾಗವತಾನಾಂ ತು ಶೃಣುಷ್ವ ಮುನಿಸತ್ತಮ ॥ ೩೮ ॥
ವಕ್ತುಂ ತೇಷಾಂ ಪ್ರಭಾವಂ ತು ಶಕ್ಯತೇ ನಾಬ್ದಕೋಟಿಭಿಃ ॥ ೩೯ ॥
ಯೇ ಹಿತಾಃ ಸರ್ವಜಂತೂನಾಂ ಗತಾಸೂಯಾ ವಿಮತ್ಸರಾಃ ।
ಜ್ಞಾನಿನೋ ನಿಃಸ್ಪೃಹಾಃ ಶಾಂತಾಸ್ತೇ ವೈ ಭಾಗವತೋತ್ತಮಾಃ ॥ ೪೦ ॥
ಕರ್ಮಣಾ ಮನಸಾ ವಾಚಾ ಪರಪೀಡಾಂ ನ ಕುರ್ವತೇ ।
ಅಪರಿಗ್ರಹಶೀಲಾಶ್ಚ ತೇ ವೈ ಭಾಗವತೋತ್ತಮಾಃ ॥ ೪೧ ॥
ಸತ್ಕಥಾಶ್ರವಣೇ ಯೇಷಾಂ ವರ್ತತೇ ಸಾತ್ವಿಕೀ ಮತಿಃ ।
ಮತ್ಪಾದಾಂಬುಜಭಕ್ತಾ ಯೇ ತೇ ವೈ ಭಾಗವತೋತ್ತಮಾಃ ॥ ೪೨ ॥

---

ರಿಂದೇನು ? ಪವಿತ್ರವಾದ ಆಕಾಶಗಂಗೆಯ ಜಲದಲ್ಲಿ ಯಾವ ಜನರು ಸ್ನಾನವನ್ನು ಮಾಡುವರೊ, ಅವರೆಲ್ಲರೂ ಭಾಗವತೋತ್ತಮರೆಂಬುವುದರಲ್ಲಿ ವಿಚಾರಿಸಬೇಕಾದ ಅವಶ್ಯಕತೆಯೇ ಇರುವುದಿಲ್ಲವು.''

೩೭. ರಾಮಾನುಜನು ಕೇಳುತ್ತಾನೆ :—''ಭಾಗವತರು ಯಾವ ಲಕ್ಷಣಗಳುಳ್ಳವರು ? ಅವರ ವ್ಯವಹಾರವೆಂತಹುದು ? ಈ ವಿಷಯದಲ್ಲಿ ನನಗೆ ಅತಿಶಯವಾದ ಕೌತೂಹಲವುಂಟಾಗಿರುವುದರಿಂದ ಅದನ್ನು ಕೇಳಲು ಇಚ್ಛಿಸುತ್ತಿರುವೆನು.''

೩೮–೩೯. ವೇಂಕಟೇಶ್ವರನು ಹೇಳುತ್ತಾನೆ :—'' ಎಲೈ ಮುನಿಸತ್ತಮನೆ! ಭಾಗವತರ ಲಕ್ಷಣಗಳನ್ನು ನಿನಗೆ ಹೇಳುವೆನು ಕೇಳು. ಅವರ ಮಾಹಾತ್ಮ್ಯೆಯನ್ನು ಹೇಳಲು ಕೋಟಿವರ್ಷಗಳಾದರೂ ಸಾಕಾಗುವುದಿಲ್ಲ.

೪೦. ಯಾರು ಸರ್ವಜಂತುಗಳ ಹಿತವನ್ನಾಚರಿಸುವರೊ, ಅಸೂಯಾರಹಿತರೊ, ಮಾತ್ಸರ್ಯವಿಲ್ಲದವರೊ, ಪರಮಾತ್ಮಜ್ಞಾನವುಳ್ಳವರೊ, ನಿರಾಶಾಪರರೊ, ಶಾಂತಸ್ವಭಾವದವರೊ ಅವರೇ ಭಾಗವತೋತ್ತಮರು.

೪೧. ಶರೀರದಿಂದಾಗಲಿ, ಮನಸ್ಸಿನಿಂದಾಗಲಿ, ಬಾಯಿಮಾತಿನಿಂದಾಗಲಿ ಯಾರು ಇತರರಿಗೆ ಹಿಂಸೆಯನ್ನು ಮಾಡುವುದಿಲ್ಲವೊ, ಯಾರು ಅಪರಿಗ್ರಹವೆಂಬ ವ್ರತದಿಂದಿರುವರೊ ಅವರೇ ಭಾಗವತೋತ್ತಮರು.

೪೨. ಯಾರಿಗೆ ನನ್ನ ಲೀಲೆಗಳ ಸತ್ಕಥೆಗಳನ್ನು ಕೇಳುವುದರಲ್ಲಿ ಸಾತ್ತ್ವಿಕಬುದ್ಧಿಯುಂಟಾಗುವುದೊ, ಯಾವ ಜನರು ನನ್ನ ಪಾದಕಮಲಗಳಲ್ಲಿ ಭಕ್ತಿಯನ್ನಿಟ್ಟಿರುವರೊ, ಅವರೇ ಭಾಗವತೋತ್ತಮರೆನಿಸಿರುವರು.

ಮಾತಾಪಿತ್ರೋಶ್ಚ ಶುಶ್ರೂಷಾಂ ಕುರ್ವತೇ ಯೇ ನರೋತ್ತಮಾಃ ।
ಯೇ ತು ದೇವಾರ್ಚನರತಾ ಯೇತು ತತ್ಸಾಧಕಾ ನರಾಃ ।
ಪೂಜಾಂ ದೃಷ್ಟ್ವಾ ತು ಮೋದಂತೇ ತೇ ವೈ ಭಾಗವತೋತ್ತಮಾಃ ॥ ೪೩ ॥
ವರ್ಣಿನಾಂ ಚ ಯತೀನಾಂ ಚ ಪರಿಚರ್ಯಾಪರಾಶ್ಚ ಯೇ ।
ಪರನಿಂದಾಮಕುರ್ವಾಣಾಸ್ತೇ ವೈ ಭಾಗವತೋತ್ತಮಾಃ ॥ ೪೪ ॥
ಸರ್ವೇಷಾಂ ಹಿತವಾಕ್ಯಾನಿ ಯೇ ವದಂತಿ ನರೋತ್ತಮಾಃ ।
ಯೇ ಗುಣಗ್ರಾಹಿಣೋ ಲೋಕೇ ತೇ ವೈ ಭಾಗವತೋತ್ತಮಾಃ ॥ ೪೫ ॥
ಆತ್ಮವತ್ಸರ್ವಭೂತಾನಿ ಯೇ ಪಶ್ಯಂತಿ ನರೋತ್ತಮಾಃ ।
ತುಲ್ಯಾಃ ಶತ್ರುಷು ಮಿತ್ರೇಷು ತೇ ವೈ ಭಾಗವತಾಃ ಸ್ಮೃತಾಃ ॥ ೪೬ ॥
ಧರ್ಮಶಾಸ್ತ್ರಪ್ರವಕ್ತಾರಃ ಸತ್ಯವಾಕ್ಯರತಾಶ್ಚ ಯೇ ।
ತೇಷಾಂ ಶುಶ್ರೂಷವೋ ಯೇ ಚ ತೇವ್ವೈ ಭಾಗವತೋತ್ತಮಾಃ ॥ ೪೭ ॥
ವ್ಯಾಕುರ್ವಂತಿ ಪುರಾಣಾನಿ ತಾನಿ ಶ್ರುಣ್ವಂತಿ ಯೇ ತಥಾ ।
ತದ್ವಕ್ತರಿ ಚ ಭಕ್ತ್ಯಾ ಯೇ ತೇವ್ವೈ ಭಾಗವತೋತ್ತಮಾಃ ॥ ೪೮ ॥

---

೪೩. ಯಾವ ಮನುಷ್ಯಶ್ರೇಷ್ಠರು ತಾಯಿತಂದೆಗಳ ಶುಶ್ರೂಷೆಯನ್ನು ಶ್ರದ್ಧೆಯಿಂದ ನಡೆಸುವರೊ, ಯಾರು ಪರಮಾತ್ಮನ ಪೂಜೆಯಲ್ಲಿ ನಿರತರಾಗಿರುವರೊ, ಯಾರು ಪೂಜೆಗೆ ಬೇಕಾದ ಸಲಕರಣೆಗಳನ್ನೊದಗಿಸಿ ಕೊಡುವರೊ, ಯಾರು ಭಗವಂತನ ಪೂಜೆಯನ್ನು ನೋಡಿ ಸಂತೋಷಪಡುವರೊ, ಅವರೇ ಭಾಗವತೋತ್ತಮರು.

೪೪. ಚಾತುರ್ವರ್ಣ್ಯದ ಜನರಿಗೂ, ಸನ್ನ್ಯಾಸಿಗಳಿಗೂ ಯಾರು ಪರಿಚರ್ಯೆಗಳನ್ನು ಮಾಡುವುದರಲ್ಲಿ ನಿರತರೊ, ಯಾರು ಇತರರ ನಿಂದೆಯನ್ನು ಮಾಡುವುದಿಲ್ಲವೊ ಅವರೇ ಭಾಗವತೋತ್ತಮರು.

೪೫. ಯಾವ ಮನುಷ್ಯೋತ್ತಮರು ಸಕಲರಿಗೂ ಹಿತವಾಕ್ಯಗಳನ್ನು ಬೋಧಿಸುತ್ತಿರುವರೊ, ಯಾರು ಎಲ್ಲರಲ್ಲಿಯೂ ಸದ್ಗುಣಗಳನ್ನೇ ಗ್ರಹಿಸುವ ಸ್ವಭಾವವುಳ್ಳವರೊ ಅವರೇ ಭಾಗತೋತ್ತಮರು.

೪೬. ಯಾವ ಮನುಜಶ್ರೇಷ್ಠರು ಸರ್ವಭೂತಗಳೂ ತಮ್ಮಂತೆಯೇ ಇರುವುವೆಂದು ತಿಳಿದುಕೊಂಡು ಶತ್ರುಗಳಲ್ಲಿಯೂ ಮಿತ್ರರಲ್ಲಿಯೂ ಒಂದೇ ವಿಧವಾಗಿ ನಡೆದುಕೊಳ್ಳುವರೊ, ಅವರೇ ಭಾಗವತರೆಂದು ಹೇಳಲ್ಪಟ್ಟಿರುವರು.

೪೭. ಧರ್ಮಶಾಸ್ತ್ರಗಳನ್ನು ಅನುವಾದ ಮಾಡುವವರೂ, ಸತ್ಯವಚನಕ್ಕೆ ತಪ್ಪಿ ನಡೆಯುದವರೂ, ಅಂತಹ ಜನರ ಶುಶ್ರೂಷೆಯಲ್ಲಿ ನಿರತರಾದವರೂ ಭಾಗವತೋತ್ತಮರೆಂದು ತಿಳಿಯಬೇಕು.

೪೮. ಯಾರು ಪುರಾಣಗಳ ಅರ್ಥಗಳನ್ನು ವಿಸ್ತರಿಸುವರೊ, ಯಾರು

ಯೇ ಗೋಬ್ರಾಹ್ಮಣಶುಶ್ರೂಷಾಂ ಕುರ್ವಂತಿ ಸತತಂ ನರಾಃ ।
ತೀರ್ಥಯಾತ್ರಾಪರಾ ಯೇ ಚ ತೇ ವೈ ಭಾಗವತೋತ್ತಮಾಃ ॥ ೪೯ ॥
ಅನ್ಯೇಷಾಮುದಯಂ ದೃಷ್ಟ್ವಾ ಯೇಽಭಿನಂದಂತಿ ಮಾನವಾಃ ।
ಹರಿನಾಮಪರಾ ಯೇ ಚ ತೇ ವೈ ಭಾಗವತೋತ್ತಮಾಃ ॥ ೫೦ ॥
ಆರಾಮಾರೋಪಣರತಾಸ್ತಟಾಕಪರಿರಕ್ಷಕಾಃ ।
ಕಾಸಾರಕೂಪಕರ್ತಾರಸ್ತೇ ವೈ ಭಾಗವತೋತ್ತಮಾಃ ॥ ೫೧ ॥
ಯೇ ವೈ ತಟಾಕಕರ್ತಾರೋ ದೇವಸದ್ಮಾನಿ ಕುರ್ವತೇ ।
ಗಾಯತ್ರೀ ನಿರತಾ ಯೇ ಚ ತೇ ವೈ ಭಾಗವತೋತ್ತಮಾಃ ॥ ೫೨ ॥
ಯೇಽಭಿನಂದಂತಿ ನಾಮಾನಿ ಹರೇಃ ಶ್ರುತ್ವಾಽತಿಹರ್ಷಿತಾಃ ।
ರೋಮಾಂಚಿತಶರೀರಾಶ್ಚ ತೇ ವೈ ಭಾಗವತೋತ್ತಮಾಃ ॥ ೫೩ ॥
ತುಲಸೀಕಾನನಂ ದೃಷ್ಟ್ವಾ ಯೇ ನಮಸ್ಕುರ್ವತೇ ನರಾಃ ।
ತತ್ಕಾಷ್ಠಾಂಕಿತಕರ್ಣಾ ಯೇ ತೇವೈ ಭಾಗವತೋತ್ತಮಾಃ ॥ ೫೪ ॥

---

ಅವುಗಳನ್ನು ಕೇಳುವರೊ, ಯಾರು ಪೌರಾಣಿಕರಲ್ಲಿ ಭಕ್ತಿವಿಶ್ವಾಸಗಳುಳ್ಳವರೊ ಅವರೇ ಭಾಗವತ್ತೋತ್ತಮರೆನಿಸುವರು.

೪೯–೫೦. ಯಾರು ಗೋವುಗಳನ್ನೂ ಬ್ರಾಹ್ಮಣರನ್ನೂ ನಿರಂತರದಲ್ಲಿಯೂ ಶುಶ್ರೂಷೆಮಾಡುವರೊ, ಯಾರು ತೀರ್ಥಯಾತ್ರೆಗಳನ್ನು ಮಾಡುವುದರಲ್ಲಿ ಆಸಕ್ತಿಯುಳ್ಳವರೊ, ಅವರೇ ಭಾಗವತೋತ್ತಮರು. ಯಾರು ಮತ್ತೊಬ್ಬರ ಐಶ್ವರ್ಯಾದಿ ಮಹೋದಯವನ್ನು ಕಂಡು ಶ್ಲಾಘಿಸುವರೊ, ಯಾರು ಹರಿನಾಮ ಸ್ಮರಣೆಯಲ್ಲಿಯೇ ಆಸಕ್ತರಾಗಿರುವರೊ ಅವರೇ ಭಾಗವತೋತ್ತಮರು.

೫೧. ಉದ್ಯಾನವೃಕ್ಷಗಳನ್ನು ನೆಡುವುದರಲ್ಲಿಯೂ, ತಟಾಕಗಳನ್ನು ಸರಿಪಡಿಸಿ ಕಾಪಾಡುವುದರಲ್ಲಿಯೂ, ಕೆರೆ ಭಾವಿಗಳನ್ನು ನಿರ್ಮಾಣಮಾಡುವುದರಲ್ಲಿಯೂ ಯಾರು ಆಸಕ್ತರಾಗಿರುವರೊ ಅವರೇ ಭಾಗವತೋತ್ತಮರು.

೫೨. ಯಾರು ತಟಾಕಗಳನ್ನು ಮಾಡಿಸುವರೊ, ಯಾರು ದೇವಾಲಯಗಳನ್ನು ಕಟ್ಟಿಸುವರೊ, ಯಾರು ತ್ರಿಸಂಧ್ಯೆಗಳಲ್ಲಿಯೂ ಗಾಯತ್ರೀ ಮಂತ್ರವನ್ನು ಜಪಿಸುವರೊ ಅವರೇ ಭಾಗವತೋತ್ತಮರೆನಿಸುವರು.

೫೩. ಯಾರು ಹರಿನಾಮಗಳನ್ನು ಕೇಳಿ ಅತ್ಯಂತ ಸಂತೋಷಗೊಂಡು ಶರೀರದಲ್ಲೆಲ್ಲ ರೋಮಾಂಚವನ್ನು ಹೊಂದಿ ಅವುಗಳನ್ನು ಶ್ಲಾಘಿಸುವರೊ ಅವರೇ ಭಾಗವತೋತ್ತಮರು.

೫೪. ತುಲಸೀ ವನವನ್ನು ಕಂಡು ಯಾವ ಮಾನವರು ನಮಸ್ಕಾರ ಮಾಡುವರೊ, ಯಾರು ಅದರ ದಳವಳನ್ನು ಕಿವಿಗಳಲ್ಲಿ ಧರಿಸುವರೊ ಅವರೇ ಭಾಗವತೋತ್ತಮರು.

ತುಲಸೀಗಂಧಮಾಘ್ರಾಯ ಸಂತೋಷಂ ಕುರ್ವತೇ ತು ಯೇ ।
ತನ್ಮೂಲಮೃದ್ಧರಾ ಯೇಚ ತೇ ವೈ ಭಾಗವತೋತ್ತಮಾಃ ॥ ೫೫ ॥
ಸ್ವಾಶ್ರಮಾಚಾರನಿರತಾಸ್ತಥೈವಾತಿಥಿಪೂಜಕಾಃ ।
ಯೇ ಚ ವೇದಾರ್ಥವಕ್ತಾರಸ್ತೇ ವೈ ಭಾಗವತೋತ್ತಮಾಃ ॥ ೫೬ ॥
ವಿದಿತಾನಿ ಚ ಶಾಸ್ತ್ರಾಣಿ ಪರಾರ್ಥಂ ಪ್ರವದಂತಿ ಯೇ ।
ಸರ್ವತ್ರ ಗುಣಭಾಜೋ ಯೇ ತೇ ವೈ ಭಾಗವತೋತ್ತಮಾಃ ॥ ೫೭ ॥
ಪಾನೀಯದಾನನಿರತಾಹ್ಯನ್ನದಾನರತಾಶ್ಚ ಯೇ ।
ಏಕಾದಶೀವ್ರತಪರಾಸ್ತೇ ವೈ ಭಾಗವತೋತ್ತಮಾಃ ॥ ೫೮ ॥
ಗೋದಾನನಿರತಾ ಯೇ ಚ ಕನ್ಯಾದಾನರತಾಶ್ಚ ಯೇ ।
ಮದರ್ಥಂ ಕರ್ಮಕರ್ತಾರಸ್ತೇ ವೈ ಭಾಗವತೋತ್ತಮಾಃ ॥ ೫೯ ॥
ಮನ್ಮಾನಸಾಶ್ಚ ಮದ್ಭಕ್ತಾ ಯೇ ಮದ್ಭಜನಲೋಲುಪಾಃ ।
ಮನ್ನಾಮಸ್ಮರಣಾಸಕ್ತಾ ತೇ ವೈ ಭಾಗವತೋತ್ತಮಾಃ ॥ ೬೦ ॥

---

೫೫. ತುಲಸಿಯ ಸುಗಂಧವನ್ನು ಸೇವಿಸಿ ಯಾರು ಸಂತೋಷಗೊಳ್ಳುವರೊ, ಆ ತುಲಸಿಯ ಬೇರಿನ ಮಣ್ಣನ್ನು ಯಾರು ಧರಿಸುವರೊ ಅವರೇ ಭಾಗವತೋತ್ತಮರು.

೫೬. ತಮ್ಮ ಆಶ್ರಮದ ಆಚಾರಗಳಲ್ಲಿ ನಿರತರಾಗಿ, ಅತಿಥಿ ಅಭ್ಯಾಗತರಿಗೆ ಸತ್ಕಾರಗಳನ್ನು ಮಾಡುತ್ತ, ವೇದಗಳ ಗೂಢಾರ್ಥಗಳನ್ನು ಸತ್ಪಾತ್ರರಿಗೆ ಬೋಧೆ ಮಾಡುತ್ತ ಯಾರು ಇರುತ್ತಾರೆಯೊ ಅವರೇ ಭಾಗವತೋತ್ತಮರು.

೫೭. ಯಾರು ತಮಗೆ ತಿಳಿದ ಶಾಸ್ತ್ರಾರ್ಥಗಳನ್ನು ಇತರರ ಉಪಯೋಗಕ್ಕಾಗಿ ಉಪನ್ಯಸಿಸುವರೊ, ಎಲ್ಲರಲ್ಲಿಯೂ, ಎಲ್ಲದರಲ್ಲಿಯೂ ಗುಣಗಳನ್ನೇ ಗ್ರಹಣಮಾಡುವ ಸ್ವಭಾವವುಳ್ಳವರೊ ಅವರೇ ಭಾಗವತೋತ್ತಮರು.

೫೮. ಬೇಸಿಗೆಯಲ್ಲಿ ತಂಪಾದ ಪಾನೀಯಗಳನ್ನು ಕೊಡುವುದರಲ್ಲಿಯೂ, ಕ್ಷುದಾತುರರಿಗೆ ಅನ್ನವನ್ನು ನೀಡುವುದರಲ್ಲಿಯೂ ಯಾರು ನಿರತರಾಗಿರುವರೊ, ಯಾರು ಏಕಾದಶೀ ವ್ರತವನ್ನು ನಿಯಮದಿಂದ ಪಾಲಿಸುವರೊ ಅವರೇ ಭಾಗವತೋತ್ತಮರು.

೫೯. ಯಾರು ಗೋದಾನಗಳನ್ನೂ, ಕನ್ಯಾದಾನಗಳನ್ನೂ ಮಾಡುವುದರಲ್ಲಿಯೇ ಆಸಕ್ತರಾಗಿರುವರೊ, ಯಾರು ನನ್ನ ಪ್ರೀತ್ಯರ್ಥವಾಗಿಯೇ ಸಕಲ ಕರ್ಮಗಳನ್ನೂ ಮಾಡುತ್ತಿರುವರೊ ಅವರೇ ಭಾಗವತೋತ್ತಮರು.

೬೦. ನನ್ನಲ್ಲಿಯೇ ಮನಸ್ಸನ್ನಿಟ್ಟು, ನನ್ನ ಭಕ್ತರಾಗಿ, ನನ್ನ ಭಜನೆಯಲ್ಲಿಯೇ ಮೈಮರೆತು, ನನ್ನ ನಾಮಗಳ ಸ್ಮರಣೆಯನ್ನೇ ನಿರಂತರದಲ್ಲಿಯೂ ಮಾಡುತ್ತಿರುವವರೊ ಅವರೇ ಭಾಢವತೋತ್ತಮರು.

ಬಹುನಾತ್ರ ಕಿಮುಕ್ತೇನ ಸಂಕ್ಷೇಪಾತ್ತೇ ಬ್ರವೀಮ್ಯಹಂ ।
ಸದ್ಗುಣಾಯ ಪ್ರವರ್ತಂತೇ ತೇ ವೈ ಭಾಗವತೋತ್ತಮಾಃ ॥ ೬೧ ॥
ಏತೇ ಭಾಗವತಾ ವಿಪ್ರಾಃ ಕೇಚಿದತ್ರ ಪ್ರಕೀರ್ತಿತಾಃ ।
ಮಮಾಪಿ ಗದಿತುಂ ಶಕ್ಯಾ ನಾಬ್ದಕೋಟಿಶತೈರಪಿ ॥ ೬೨ ॥
ರಾಮಾನುಜ ಮಹಾಭಾಗ ಮದ್ಭಕ್ತಾನಾಂ ಚ ಲಕ್ಷಣಂ ।
ಮಯಿ ಭಕ್ತೇ ತ್ವಯಿ ಪ್ರೀತ್ಯಾ ಯುಕ್ತಂ ಕಿಲ ಮಹಾಮತೇ ॥ ೬೩ ॥

ಶ್ರೀ ಸೂತ ಉವಾಚ :—

ಏವಂ ವಃ ಕಥಿತಂ ವಿಪ್ರಾಃ ಶೌನಕಾದ್ಯಾ ಮಹೌಜಸಃ ।
ವೃಷಾದ್ರೌ ಚ ವಿಯದ್ಗಂಗಾತೀರ್ಥಮಾಹಾತ್ಮ್ಯಮುತ್ತಮಂ ॥ ೬೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ "ಆಕಾಶಗಂಗಾಮಾಹಾತ್ಮ್ಯ—ರಾಮಾನುಜವಿಪ್ರವ್ರತಚರ್ಯಾದಿವರ್ಣನಂ" ನಾಮ ಏಕವಿಂಶತಿತಮೋಽಧ್ಯಾಯಃ

---

೬೧. ಈ ವಿಷಯದಲ್ಲಿ ಹೆಚ್ಚಾಗಿ ಹೇಳುವುದರಿಂದೇನು ಪ್ರಯೋಜನವು? ಸಂಕ್ಷೇಪವಾಗಿ ನಿನಗೆ ತಿಳಿಯ ಹೇಳುವೆನು. ಯಾವ ಯಾವ ಜನರು ಸದ್ಗುಣಗಳನ್ನೇ ಅಭ್ಯಾಸಮಾಡುತ್ತಿರುವರೊ ಅವರೇ ಭಾಗವತೋತ್ತಮರು.

೬೨. ಈ ಬ್ರಾಹ್ಮಣರೇ ಭಾಗವತರು. ಇವರಲ್ಲಿ ಕೆಲವರನ್ನು ನಿನಗೆ ನಿರೂಪಿಸಿರುವೆನು. ಇವರ ಸದ್ಗುಣಗಳನ್ನೆಲ್ಲ ಹೇಳಲು ನನಗೂ ಕೂಡ ನೂರಾರು ಕೋಟಿ ವರ್ಷಗಳಾದರೂ ಶಕ್ಯವಾಗುವುದಿಲ್ಲ.

೬೩. ಮಹಾಶಯನೂ, ಮಹಾಬುದ್ಧಿಶಾಲಿಯೂ ಆದ ಎಲೈ ರಾಮಾನುಜನೆ! ನನ್ನ ಭಕ್ತರ ಲಕ್ಷಣವು ನನ್ನಲ್ಲಿ ಆದರದಿಂದ ಭಕ್ತನಾಗಿರುವ ನಿನ್ನಲ್ಲಿ ಕಾಣುತ್ತಿರುವುದು."

೬೪. ಸೂತನು ಹೇಳುತ್ತಾನೆ:—ಮಹಾ ತೇಜಸ್ಸಂಪನ್ನರಾದ ಶೌನಕಾದಿ ಬ್ರಾಹ್ಮಣಶ್ರೇಷ್ಠರಿರಾ! ವೃಷಭಾಚಲದಲ್ಲಿರುವ ಆಕಾಶಗಂಗೆಯೆಂಬ ತೀರ್ಥದ ಮಾಹಾತ್ಮ್ಯೆಯನ್ನು ನಿಮಗೆ ವಿಸ್ತರಿಸಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೆಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ಆಕಾಶಗಂಗಾಮಾಹಾತ್ಮ್ಯ—ರಾಮಾನುಜ ವಿಪ್ರಚರ್ಯಾದಿವರ್ಣನ"ವೆಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾವಿಂಶತಿತಮೋಽಧ್ಯಾಯಃ

## ಆಕಾಶಗಂಗಾಮಾಹಾತ್ಮ್ಯವರ್ಣನಂ

ಋಷಯ ಊಚುಃ :—

ಭಗವನ್ಸೂತ ಸರ್ವಜ್ಞ ವೇದವೇದಾಂತಕೋವಿದ ।
ದಾನಾನಿ ಕಸ್ಮೈ ದೇಯಾನಿ ದಾನಕಾಲಶ್ಚ ಕೀದೃಶಃ ॥ ೧ ॥
ಕಶ್ಚ ತತ್ಪ್ರತಿಗೃಹ್ಣೀಯಾತ್ಸರ್ವಂ ನೋವಕ್ತುಮರ್ಹಸಿ ॥ ೨ ॥

ಶ್ರೀ ಸೂತ ಉವಾಚ :—

ಮಹಾಪುಣ್ಯಪ್ರದೇ ಕ್ಷೇತ್ರೇ ವೇಂಕಟಾಖ್ಯೇ ದ್ವಿಜೋತ್ತಮಾಃ ।
ಸರ್ವೇಷಾಮೇವ ವರ್ಣಾನಾಂ ಬ್ರಾಹ್ಮಣಃ ಪರಮೋ ಗುರುಃ ॥ ೩ ॥
ತಸ್ಮೈ ದಾನಾನಿ ದೇಯಾನಿ ಸ ತಾರಯತಿ ಪಂಡಿತಃ ।
ಬ್ರಾಹ್ಮಣಃ ಪ್ರತಿಗೃಹ್ಣೀಯಾದ್ವರ್ಜಯಿತ್ವಾ ತ್ವವರ್ಣಕಂ ॥ ೪ ॥
ಷಂಡಸ್ಯ ಪುತ್ರಹೀನಸ್ಯ ದಂಭಾಚಾರರತಸ್ಯ ಚ ।
ವೇದವಿದ್ವೇಷಿಣಶ್ಚೈವ ದ್ವಿಜವಿದ್ವೇಷಿಣಸ್ತಥಾ ॥ ೫ ॥

---

## ಕನ್ನಡದ ಅನುವಾದ

### ಆಕಾಶಗಂಗಾಮಾಹಾತ್ಮ್ಯ ವರ್ಣನ

೧. ಋಷಿಗಳು ಹೇಳುತ್ತಾರೆ:—ಸರ್ವಜ್ಞನೂ ವೇದವೇದಾಂತಗಳನ್ನು ತಿಳಿದಿರುವವರಲ್ಲಿ ಅಗ್ರೇಸರನೂ ಆದ ಸೂತನೆ! ದಾನಗಳನ್ನು ಯಾರಿಗೆ ಕೊಡಬೇಕು? ದಾನಕ್ಕೆ ಯಾವ ಕಾಲವು ಪ್ರಶಸ್ತವಾಗಿರುವುದು?

೨. ಯಾವನು ಅದನ್ನು ಪ್ರತಿಗ್ರಹಿಸಬೇಕು? ಈ ವಿಷಯವೆಲ್ಲವನ್ನೂ ನಮಗೆ ವಿಸ್ತಾರವಾಗಿ ತಿಳಿಸಲು ನೀನೇ ಶಕ್ತನಾಗಿರುವೆ.

೩. ಸೂತನು ಹೇಳುತ್ತಾನೆ:—ಮಹಾಪುಣ್ಯವನ್ನುಂಟುಮಾಡುವ ಕ್ಷೇತ್ರವಾದ ವೇಂಕಟಾಚಲದಲ್ಲಿ ಸಕಲ ವರ್ಣದ ಜನರಿಗೂ ಬ್ರಾಹ್ಮಣನೇ ಪರಮ ಗುರುವೆನಿಸಿರುವನು.

೪. ಆದುದರಿಂದ ಆತನಿಗೇ ದಾನಗಳನ್ನು ಕೊಡಬೇಕು. ಪಂಡಿತನಾದ ಆತನೇ ದಾತೃವನ್ನು ಸಂಸಾರದಿಂದ ಕಡೆಹಾಯಿಸುವನು. ಚಾತುರ್ವರ್ಣ್ಯ ಬಾಹಿರನಾದವನನ್ನು ಬಿಟ್ಟು ಮಿಕ್ಕೆಲ್ಲರಿಗಿಂತಲೂ ಬ್ರಾಹ್ಮಣನೇ ದಾನವನ್ನು ಸ್ವೀಕರಿಸಬೇಕು.

೫–೬. ನಿರ್ವೀರ್ಯನೂ, ಸಂತತಿರಹಿತನೂ, ದಂಭಕ್ಕಾಗಿ ಆಚಾರವಂತನೆಂದು ತೋರಿಸಿಕೊಳ್ಳುವವನೂ, ವೇದಗಳನ್ನು ದ್ವೇಷಿಸುವವನೂ,

ಸ್ವಕರ್ಮತ್ಯಾಗಿನಶ್ಚಾಪಿ ದತ್ತಂ ಭವತಿ ನಿಷ್ಫಲಂ ।
ಪರದಾರರತಸ್ಯಾಪಿ ಪರದ್ರವ್ಯರತಸ್ಯ ಚ ।
ಗಾಯಕಸ್ಯಾಪಿ ವಿಪ್ರಸ್ಯ ದತ್ತಂ ಭವತಿ ನಿಷ್ಫಲಂ ॥ ೬ ॥
ಅಸೂಯಾವಿಷ್ಟಮನಸಃ ಕೃತಘ್ನಸ್ಯ ಚ ಮಾಯಿನಃ ।
ಜ್ಞಾನಶೂನ್ಯಸ್ಯ ವಿಪ್ರಸ್ಯ ದತ್ತಂ ಭವತಿ ನಿಷ್ಫಲಂ ॥ ೭ ॥
ನಿತ್ಯಂ ಯಾಚ್ಯಾಪರಸ್ಯಾಪಿ ಹಿಂಸಕಸ್ಯಾಬಲಸ್ಯ ಚ ॥ ೮ ॥
ನಾಮವಿಕ್ರಯಿಣಶ್ಚೈವ ವೇದವಿಕ್ರಯಿಣಸ್ತಥಾ ।
ಸ್ಮೃತಿವಿಕ್ರಯಿಣಶ್ಚೈವ ಧರ್ಮವಿಕ್ರಯಿಣಸ್ತಥಾ ॥ ೯ ॥
ಪರೋಪತಾಪಶೀಲಸ್ಯ ದತ್ತಂ ಭವತಿ ನಿಷ್ಫಲಂ ।
ಯೇ ಕೇಚಿತ್ಪಾಪನಿರತಾ ನಿಂದಿತಾಃ ಸುಕೃತೈಸ್ತಥಾ ॥ ೧೦ ॥
ನ ತೇಭ್ಯಃ ಪ್ರತಿಗೃಹ್ಣೀಯಾನ್ನ ದೇಯಂ ವಾಪಿ ಕಿಂಚನ ।
ಸ್ವಕರ್ಮನಿರತಾಯೈವ ಶ್ರೋತ್ರಿಯಾಯಾಹಿತಾಗ್ನಯೇ ॥ ೧೧ ॥

---

ಬ್ರಾಹ್ಮಣರನ್ನು ದೂಷಿಸುವವನೂ, ತನ್ನ ವರ್ಣಾಶ್ರಮಗಳಿಗುಚಿತಗಳಾದ ಕರ್ಮಗಳನ್ನು ತ್ಯಜಿಸಿದವನೂ ಆದವರಿಗೆ ಕೊಟ್ಟ ದಾನವು ನಿಷ್ಫಲವಾಗುವುದು. ಪರಸ್ತ್ರೀಲಂಪಟನೂ, ಪರಸ್ವವನ್ನು ಹರಣಮಾಡುವವನೂ, ಗಾಯಕನೂ ಆದ ಬ್ರಾಹ್ಮಣನಿಗೆ ಕೊಟ್ಟ ದಾನವು ನಿಷ್ಫಲವು.

೭. ಅಸೂಯೆಯಿಂದ ತುಂಬಿದ ಮನಸ್ಸುಳ್ಳವನಿಗೂ, ಕೃತಘ್ನನಿಗೂ, ಮಾಯಾ ಜೀವಿಗೂ, ಜ್ಞಾನಹೀನನಾದ ಬ್ರಾಹ್ಮಣನಿಗೂ ಮಾಡಿದ ದಾನವು ನಿಷ್ಪ್ರಯೋಜನವು.

೮-೯. ಯಾವಾಗಲೂ ಯಾಚಿಸುತ್ತಿರುವವನಿಗೂ, ಪರಹಿಂಸೆಯನ್ನು ಮಾಡುವವನಿಗೂ, ದುರ್ಬಲನಿಗೂ, ನಾಮವಿಕ್ರಯಿ(ಕೂಟಸಾಕ್ಷಿ)ಗೂ, ವೇದ ವಿಕ್ರಯವನ್ನು ಮಾಡುವವನಿಗೂ, ಸ್ಮೃತಿಗಳನ್ನು ಮಾರುವವನಿಗೂ, ಧರ್ಮವನ್ನು ವಿಕ್ರಯಮಾಡುವವನಿಗೂ, ಪರರ ಹಿಂಸೆಯನ್ನೇ ವೃತ್ತಿಯನ್ನಾಗಿ ಮಾಡಿಕೊಂಡಿರುವವನಿಗೂ ಮಾಡಿದ ದಾನಗಳು ಫಲರಹಿತಗಳಾಗುವುವು.

೧೦. ಯಾರು ಪಾಪಕೃತ್ಯಗಳಲ್ಲಿಯೇ ನಿರತರಾಗಿರುವರೊ, ಯಾರು ಸಜ್ಜನರ ನಿಂದೆಗೊಳಗಾಗಿರುವರೊ ಅಂತಹರಿಂದ ದಾನವನ್ನು ಸ್ವೀಕರಿಸಬಾರದು. ಅಂತಹ ಜನರಿಗೆ ದಾನಗಳನ್ನು ಕೊಡಲೂ ಬಾರದು.

೧೧. ತನ್ನ ವರ್ಣಾಶ್ರಮಗಳ ಕರ್ಮಗಳಲ್ಲಿ ನಿರತನಾದವನೂ, ಶ್ರೋತ್ರಿಯನೂ, ವೈಶ್ವದೇವಾಗ್ನಿಯನ್ನುಪಚರಿಸುವವನೂ, ವೃತ್ತಿಹೀನನೂ, ದರಿದ್ರನೂ, ಗೃಹಸ್ಥಾಶ್ರಮಿಯೂ ಆದ ಬ್ರಾಹ್ಮಣನಿಗೆ ಮಾತ್ರ ದಾನಗಳನ್ನು ಕೊಡಬೇಕು.

ವೃತ್ತಿಹೀನಾಯ ವೈ ದೇಯಂ ದರಿದ್ರಾಯ ಕುಟುಂಬಿನೇ ।
ದೇವಪೂಜಾಸು ಸಕ್ತಾಯ ಪುರಾಣಕಥಕಾಯ ಚ ॥ ೧೨ ॥
ದೇಯಂ ಪ್ರಯತ್ನತೋ ವಿಪ್ರಾ ದರಿದ್ರಸ್ಯ ವಿಶೇಷತಃ ।
ಬಹುನಾ ಕಿಮಿಹೋಕ್ತೇನ ಶ್ರುಣುಧ್ವಂ ದ್ವಿಜಸತ್ತಮಾಃ ॥ ೧೩ ॥
ಸರ್ವೇಷಾಂ ಬ್ರಾಹ್ಮಣಾನಾಂ ಚ ಪ್ರದಾತುಂ ಶಕ್ಯತೇ ಸದಾ ।
ವಂಧ್ಯಾಭರ್ತ್ರೇ ಪ್ರದತ್ತಂ ಚೇದ್ರಾಸಭೋ ಜಾಯತೇ ನರಃ ॥ ೧೪ ॥
ನಾಸ್ತಿಕಂ ಭಿನ್ನಮರ್ಯಾದಂ ಪುತ್ರಹೀನಂ ಜಡಂ ಖಲಂ ।
ಸ್ತೇಯಿನಂ ಕಿತವಂ ಚೈವ ಕದಾಚಿನ್ನಾಭಿವಾದಯೇತ್ ॥ ೧೫ ॥
ಪಾಷಂಡಂ ಪತಿತಂ ವ್ರಾತ್ಯಂ ವೇದವಿಕ್ರಯಿಣಂ ತಥಾ ।
ಕೃತಘ್ನಂ ಪಾಪನಿರತಂ ಕದಾಚಿನ್ನಾಭಿವಾದಯೇತ್ ॥ ೧೬ ॥
ತಥಾ ಸ್ನಾನಂ ಪ್ರಕುರ್ವಂತಂ ಸಮಿತ್ಪುಷ್ಪಕರಂ ತಥಾ ।
ಉದಪಾತ್ರಧರಂ ಚೈವ ಭುಂಜಂತಂ ನಾಭಿವಾದಯೇತ್ ॥ ೧೭ ॥
ವಿವಾದಶಾಲಿನಂ ಚಂಡಂ ವಮಂತಂ ಜನಮಧ್ಯಗಂ ।
ಭಿಕ್ಷಾನ್ನಧಾರಿಣಂ ಚೈವ ಶಯಾನಂ ನಾಭಿವಾದಯೇತ್ ॥ ೧೮ ॥

---

೧೨. ಎಲೈ ಬ್ರಾಹ್ಮಣರಿರಾ! ದೇವರ ಪೂಜೆಯಲ್ಲಿ ನಿರತನಾದವನಿಗೂ, ಪುರಾಣ ಪ್ರವಚನಗಳನ್ನು ನಡೆಸುವವನಿಗೂ, ಅದರಲ್ಲಿಯೂ ವಿಶೇಷವಾಗಿ ದರಿದ್ರನಾದವನಿಗೂ ಯತ್ನವಿದ್ದಷ್ಟೂ ದಾನಮಾಡಬೇಕು.

೧೩–೧೪. ಎಲೈ ಬ್ರಾಹ್ಮಣೋತ್ತಮರಿರಾ! ಹೆಚ್ಚು ಹೇಳುವುದರಿಂದೇನು? ಒಂದು ಮಾತನ್ನು ಕೇಳಿರಿ. ಸಕಲ ಬ್ರಾಹ್ಮಣರಿಗೂ ಯಾವ ಸಮಯದಲ್ಲಿಯೂ ದಾನಗಳನ್ನು ಕೊಡಬಹುದು. ಆದರೆ ಬಂಜೆಯ ಗಂಡನಿಗೆ ಮಾತ್ರ ದಾನವನ್ನು ಕೊಡಲು ಮನುಷ್ಯನು ಕತ್ತೆಯಾಗಿ ಹುಟ್ಟುವನು.

೧೫. ನಾಸ್ತಿಕನೂ, ಶಾಸ್ತ್ರಮರ್ಯಾದೆಗಳನ್ನು ಮೀರಿದವನೂ, ಸಂತತಿ ಹೀನನೂ, ಮೂರ್ಖನೂ, ಕ್ರೂರಿಯೂ, ಕಳ್ಳನೂ, ಮೋಸಗಾರನೂ ಆದವರಿಗೆಂದಿಗೂ ಅಭಿವಾದನೆಯನ್ನು ಮಾಡಬಾರದು.

೧೬. ಪಾಷಂಡನೂ, ಸ್ವವರ್ಣಚ್ಯುತನೂ, ಸಂಸ್ಕಾರಹೀನನೂ, ವೇದ ವಿಕ್ರಯಿಯೂ, ಕೃತಘ್ನನೂ, ಪಾಪಕರ್ಮಾಸಕ್ತನೂ ಆದವರಿಗೆ ಯಾವಾಗಲೂ ನಮಸ್ಕರಿಸಬಾರದು.

೧೭. ಸ್ನಾನವನ್ನು ಮಾಡುತ್ತಿರುವವನನ್ನೂ, ಕೈಗಳಲ್ಲಿ ಸಮಿತ್ತು ಪುಷ್ಪಗಳುಳ್ಳವನನ್ನೂ, ತುಂಬಿದ ಕೊಡವನ್ನು ಹೊರುವವನನ್ನೂ, ಭೋಜನಾಸಕ್ತನನ್ನೂ ನಮಸ್ಕರಿಸಬಾರದು.

೧೮. ವಿವಾದ ಮಾಡುತ್ತಿರುವವನನ್ನೂ, ಕ್ರೂರನನ್ನೂ, ಓಕರಿಸುತ್ತಿರು

ವಂಧ್ಯಾಂ ಚ ಪುಷ್ಪಿಣೀಂ ಜಾರಾಂ ಸೂತಿಕಾಂ ಗರ್ಭಪಾತಿನೀಂ ।
ವ್ರತಘ್ನೀಂ ಚ ತಥಾ ಚಂಡೀಂ ಕದಾಚಿನ್ನಾಭಿವಾದಯೇತ್ ॥ ೧೯ ॥
ಸಭಾಯಾಂ ಯಜ್ಞಶಾಲಾಯಾಂ ದೇವತಾಯತನೇಷ್ವಪಿ ।
ಪ್ರತ್ಯೇಕಂ ತು ನಮಸ್ಕಾರೋ ಹಂತಿ ಪುಣ್ಯಂ ಪುರಾತನಂ ॥ ೨೦ ॥
ಶ್ರಾದ್ಧವ್ರತೇ ನಿಯುಕ್ತಂ ಚ ದೇವತಾಭ್ಯರ್ಚಕಂ ತಥಾ ।
ಯಜ್ಞಂ ಚ ತರ್ಪಣಂ ಚೈವ ಕುರ್ವಂತಂ ನಾಭಿವಾದಯೇತ್ ॥ ೨೧ ॥
ಕುರ್ವತೇ ವಂದನಂ ಯಸ್ತು ನ ಕುರ್ಯಾತ್ಪ್ರತಿವಂದನಂ ।
ನಾಭಿವಾದ್ಯಃ ಸ ವಿಜ್ಞೇಯೋ ಯಥಾ ಶೂದ್ರಸ್ತಥೈವ ಚ ॥ ೨೨ ॥
ತಸ್ಮಾತ್ಸರ್ವೇಷು ಕಾಲೇಷು ಬುದ್ಧಿಮಾನ್ಬ್ರಾಹ್ಮಣೋತ್ತಮಃ ।
ವಂಧ್ಯಾಪತಿಂ ದ್ವಿಜಂ ಕ್ರೂರಂ ಕದಾಚಿನ್ನಾಭಿವಾದಯೇತ್ ॥ ೨೩ ॥

ಶ್ರೀ ಸೂತ ಉವಾಚ:—

ಅತ್ರೇತಿಹಾಸಂ ವಕ್ಷ್ಯಾಮಿ ಪುಣ್ಯಶೀಲಸ್ಯ ಧೀಮತಃ ।
ಸನತ್ಕುಮಾರಮುನಯೇ ನಾರದೇನ ಪ್ರಭಾಷಿತಂ ॥ ೨೪ ॥

---

ವವನನ್ನೂ, ಜನರ ಗುಂಪಿನಲ್ಲಿರುವವನನ್ನೂ, ಭಿಕ್ಷಾನ್ನವನ್ನು ಕೈಯಲ್ಲಿಟ್ಟು ಕೊಂಡಿರುವವನನ್ನೂ, ಮಲಗಿರುವವನನ್ನೂ ನಮಸ್ಕರಿಸಬಾರದು.

೧೯. ಬಂಜೆಯನ್ನೂ, ರಜಸ್ವಲೆಯನ್ನೂ, ಜಾರಸ್ತ್ರೀಯನ್ನೂ, ಬಾಣಂತಿಯನ್ನೂ, ಪದೇ ಪದೇ ಗರ್ಭಪಾತವಾಗುವವಳನ್ನೂ, ವ್ರತಗೆಟ್ಟವಳನ್ನೂ, ಚಂಡಿಯಾದವಳನ್ನೂ ಎಂದಿಗೂ ನಮಸ್ಕರಿಸಬಾರದು.

೨೦–೨೧. ಸಭೆಯಲ್ಲಿಯೂ, ಯಜ್ಞಶಾಲೆಯಲ್ಲಿಯೂ, ದೇವಾಲಯಗಳಲ್ಲಿಯೂ ಒಬ್ಬರಿಗೆ ಮಾತ್ರ ನಮಸ್ಕಾರವನ್ನು ಮಾಡಲು ಪೂರ್ವದಲ್ಲಿ ಮಾಡಿದ ಪುಣ್ಯವು ನಷ್ಟವಾಗುವುದು. ಶ್ರಾದ್ಧಕ್ಕೆ ನಿಯಂತ್ರಿತನಾದವನನ್ನೂ, ದೇವರ ಪೂಜೆಯನ್ನು ಮಾಡುತ್ತಿರುವವನನ್ನೂ, ಯಜ್ಞದಲ್ಲಿ ಋತ್ವಿಜನಾಗಿರುವವನನ್ನೂ, ಪಿತೃತರ್ಪಣದಲ್ಲಿ ನಿರತನಾದವನನ್ನೂ ನಮಸ್ಕರಿಸಬಾರದು.

೨೨–೨೩. ನಮಸ್ಕರಿಸುವವನಿಗೆ ಯಾವನು ಪ್ರತಿನಮಸ್ಕಾರವನ್ನು ಮಾಡುವುದಿಲ್ಲವೊ, ಅವನು ಅಭಿವಾದನಕ್ಕೆ ಅರ್ಹನಲ್ಲವೆಂದೂ ಶೂದ್ರನಿಗೆ ಸಮಾನನೆಂದೂ ನಿಶ್ಚಯಿಸಬೇಕು. ಆದುದರಿಂದ ಸರ್ವಕಾಲಗಳಲ್ಲಿಯೂ ಬುದ್ಧಿವಂತನಾದ ಬ್ರಾಹ್ಮಣೋತ್ತಮನು ಬಂಜೆಯ ಗಂಡನಿಗೂ, ಕ್ರೂರನಾದ ಬ್ರಾಹ್ಮಣನಿಗೂ ಎಂದಿಗೂ ಅಭಿವಾದನವನ್ನು ಮಾಡಬಾರದು.

೨೪. ಸೂತನು ಹೇಳುತ್ತಾನೆ:—ಈ ವಿಷಯದಲ್ಲಿ ನಾರದಮಹರ್ಷಿಯು ಸನತ್ಕುಮಾರಮುನಿಗೆ ಹೇಳಿದ ಪುಣ್ಯಶೀಲನೆಂಬ ಪ್ರಾಜ್ಞನ ಇತಿಹಾಸವನ್ನು ನಿಮಗೆ ಹೇಳುವೆನು.

ತದ್ವಕ್ಷ್ಯಾಮಿ ಮುನಿಶ್ರೇಷ್ಠಾಃ ಶೃಣುಧ್ವಂ ಸುಸಮಾಹಿತಾಃ ।
ಪುರಾ ಗೋದಾವರೀತೀರೇ ಸರ್ವಧರ್ಮಪರಾಯಣಃ ॥ ೨೫ ॥
ಪುಣ್ಯಶೀಲೋ ದ್ವಿಜವರಃ ಸತ್ಯವಾದೀ ಜಿತೇಂದ್ರಿಯಃ ।
ದಯಾವಾನ್ಸರ್ವಭೂತೇಷು ದೇವಾಗ್ನಿದ್ವಿಜಪೂಜಕಃ ॥ ೨೬ ॥
ಕರ್ಮಣಾ ಜನ್ಮಶುದ್ಧಶ್ಚ ಮಾತಾಪಿತೃ ಹಿತೇ ರತಃ ।
ಗುರುಭಕ್ತಃ ಸದಾಕ್ಷಿಣ್ಯೋ ಬ್ರಹ್ಮಣ್ಯಃ ಸಾಧುಸಮ್ಮತಃ ॥ ೨೭ ॥
ಏತಾದೃಶಗುಣೈರ್ಯುಕ್ತಃ ಪುಣ್ಯಶೀಲಸ್ಯ ಧೀಮತಃ ॥ ೨೮ ॥
ಗೃಹಂ ಸಂಪ್ರಾಪ್ತವಾನ್ವಿಪ್ರೋ ವೇದವೇದಾಂಗಪಾರಗಃ ।
ಪ್ರಾರ್ಥಿತಃ ಪುಣ್ಯಶೀಲೇನ ಪಿತೃಶ್ರಾದ್ಧೇಽತಿವೇಗತಃ ॥ ೨೯ ॥
ತಂ ವಿಪ್ರಂ ಶ್ರೋತ್ರಿಯಂ ಶಾಂತಂ ಪಿತೃಶ್ರಾದ್ಧೇ ನಿಯೋಜ್ಯ ವೈ ।
ಶ್ರಾದ್ಧಂ ಚಕಾರ ಧರ್ಮಾತ್ಮಾ ಪ್ರತ್ಯಾಬ್ದಿಕಮನುತ್ತಮಂ ॥ ೩೦ ॥
ತತಃ ಕಾಲಾಂತರೇ ತಸ್ಯ ಪುಣ್ಯಶೀಲಸ್ಯ ಚಾನನೇ ।
ವೈರೂಪ್ಯಂ ಪ್ರಾಪ್ತಮತ್ಯುಗ್ರಂ ರಾಸಭಾನನವತ್ತದಾ ॥ ೩೧ ॥

---

೨೫. ಎಲೈ ಮುನಿಶ್ರೇಷ್ಠರಿರಾ! ನಾನು ಹೇಳುವುದನ್ನು ಸಾವಧಾನ ಮನಸ್ಕರಾಗಿ ಎಲ್ಲರೂ ಕೇಳಿರಿ. ಮುನ್ನು ಗೋದಾವರೀನದಿಯ ತೀರಪ್ರದೇಶ ದಲ್ಲಿ ಸಕಲ ಧರ್ಮಗಳಲ್ಲಿಯೂ ನಿಷ್ಣಾತನಾದ ಬ್ರಾಹ್ಮಣನೊಬ್ಬನಿದ್ದನು.

೨೬. ಪುಣ್ಯಶೀಲನೆಂಬ ಆ ಬ್ರಾಹ್ಮಣೋತ್ತಮನು ಸತ್ಯವಾದಿಯೂ, ಜಿತೇಂದ್ರಿಯನೂ, ಸಮಸ್ತ ಪ್ರಾಣಿಗಳಲ್ಲಿಯೂ ದಯಾಪರನೂ, ದೇವರು, ವೈಶ್ವದೇವಾಗ್ನಿ, ಬ್ರಾಹ್ಮಣರ ಪೂಜೆಗಳಲ್ಲಿ ಆಸಕ್ತನೂ ಆಗಿರುತ್ತಿದ್ದನು.

೨೭. ಆಚಾರದಿಂದಲೂ ಜನ್ಮದಿಂದಲೂ ಪರಿಶುದ್ಧನಾಗಿ, ತಾಯಿತಂದೆಗಳ ಶುಶ್ರೂಷೆಯಲ್ಲಿ ಆಸಕ್ತಿಯನ್ನು ವಹಿಸುತ್ತ, ಗುರುಭಕ್ತನೂ, ದಾಕ್ಷಿಣ್ಯವಂತನೂ, ಬ್ರಾಹ್ಮಣಪ್ರಿಯನೂ, ಸಾಧುಸಂತರಿಗೆ ಬೇಕಾದವನೂ ಆಗಿದ್ದನು.

೨೮–೩೦. ಇಂತಹ ಸದ್ಗುಣಗಳಿಂದ ಕೂಡಿದವನಾದ, ಪ್ರಾಜ್ಞನಾದ ಪುಣ್ಯಶೀಲನಿಂದ ಪಿತೃಶ್ರಾದ್ಧಕ್ಕಾಗಿ ನಿಮಂತ್ರಣವನ್ನು ಪಡೆದ ವೇದವೇದಾಂಗ ಪಾರಂಗತನಾದ ಬ್ರಾಹ್ಮಣನೊಬ್ಬನು ಒಂದಾನೊಂದು ದಿನ ಆತನ ಮನೆಗೆ ಬಂದನು. ಶ್ರೋತ್ರಿಯನೂ, ಶಾಂತಸ್ವಭಾವದವನೂ ಆದ ಆ ಬ್ರಾಹ್ಮಣನನ್ನು ಶ್ರಾದ್ಧಕಾರ್ಯದಲ್ಲಿ ನಿಯೋಜಿಸಿ ಧರ್ಮಸೂಕ್ಷ್ಮಗಳನ್ನರಿತ ಪುಣ್ಯಶೀಲನು ಪ್ರತಿವರ್ಷವೂ ಮಾಡಬೇಕಾದ ಪಿತೃಶ್ರಾದ್ಧವನ್ನು ಸಾಂಗೋಪವಾಗಿ ನೆರವೇರಿ ಸಿದನು.

೩೧. ಬಳಿಕ ಕೆಲವು ಕಾಲದ ಮೇಲೆ ಆ ಪುಣ್ಯಶೀಲನ ಮುಖದಲ್ಲಿ ಅತ್ಯುಗ್ರ ವಾದ ಕತ್ತೆಯ ಮುಖದಂತಿರುವ ವಿಕಾರರೂಪವುಂಟಾಯಿತು.

ತತಃ ಖಿನ್ನಮನಾ ಭೂತ್ವಾ ಪುಣ್ಯಶೀಲೋಽತಿಧಾರ್ಮಿಕಃ ।
ನಿಶ್ಶ್ವಸ್ಯ ಬಹುಧಾಖಿನ್ನಃ ಪ್ರಪೇದೇಽಗಸ್ತ್ಯಯೋಗಿನಃ ॥ ೩೨ ॥
ಸುವರ್ಣಮುಖರೀತೀರೇ ಋಷಿಸಂಘನಿಷೇವಿತೇ ।
ಆಶ್ರಮಂ ಪರಮಂ ದಿವ್ಯಂ ಸರ್ವಕಾಮಫಲಪ್ರದಂ ॥ ೩೩ ॥
ತತ್ರಾಶ್ರಮೇ ಮುನಿವರ್ಯೈಃ ಸೇವ್ಯಮಾನಮಹರ್ನಿಶಂ ।
ದೃಷ್ಟ್ವಾಽಗಸ್ತ್ಯಂ ಮಹಾತ್ಮಾನಂ ಸರ್ವಲೋಕಹಿತೈಷಿಣಂ ॥ ೩೪ ॥
ಪ್ರಣಾಮಮಕರೋತ್ತಸ್ಮೈ ಗಾರ್ದಭಾಸ್ಯೋಽತಿದುಃಖಿತಃ ॥ ೩೫ ॥

ಪುಣ್ಯಶೀಲ ಉವಾಚ :—

ತಪೋನಿಧೇ ನಮಸ್ತುಭ್ಯಮಗಸ್ತ್ಯ ಮುನಿಸೇವಿತ ।
ಕುತ್ಸಿತಾಸ್ಯಂ ಮಹಾಪಾಪಂ ರಕ್ಷ ರಕ್ಷ ದಯಾನಿಧೇ ॥ ೩೬ ॥
ಕೇನ ದೋಷೇಣ ಮೇ ಚಾತ್ರ ಮುಖಸ್ಯಾಸೀತ್ಕುರೂಪತಾ ॥ ೩೭ ॥
ಮಯಿ ಪ್ರೀತ್ಯಾ ಮಹಾಭಾಗ ವದಸ್ವ ಮುನಿಸತ್ತಮ ॥ ೩೮ ॥

ಅಗಸ್ತ್ಯ ಉವಾಚ :—

ವಿಪ್ರವರ್ಯ ಮಹಾಭಾಗ ಪುಣ್ಯಶೀಲ ಮಹಾಮತೇ ।
ಆನನಸ್ಯವಿರೂಪಂ ವೈ ಶೃಣು ನಾನ್ಯಮನಾ ದ್ವಿಜ ॥ ೩೯ ॥

---

೩೨–೩೩. ಆಗ ಅತಿಧಾರ್ಮಿಕನಾದ ಪುಣ್ಯಶೀಲನು ಖೇದಗೊಂಡ ಮನಸ್ಸುಳ್ಳವನಾಗಿ ಬಹುಬಗೆಯಾಗಿ ನಿಟ್ಟುಸಿರುಗಳನ್ನು ಬಿಡುತ್ತ ಮಹರ್ಷಿ ಗಣಗಳಿಂದ ಸೇವಿತವಾದ ಸುವರ್ಣಮುಖರೀನದಿಯ ತೀರದಲ್ಲಿ ಉತ್ತಮವೂ, ದೇವಲೋಕಸಮಾನವೂ, ಸಕಲಾಭೀಷ್ಟಪ್ರದವೂ ಆದ ಅಗಸ್ತ್ಯಮಹಾಯೋಗಿಯ ಆಶ್ರಮವನ್ನು ಸೇರಿದವನಾದನು.

೩೪–೩೫. ಆ ಆಶ್ರಮದಲ್ಲಿ ನಿರಂತರವೂ ಮುನಿಶ್ರೇಷ್ಠರಿಂದ ಸೇವೆ ಗೊಳ್ಳುತ್ತಿರುವವನೂ, ಮಹಾತ್ಮನೂ, ಸಕಲಲೋಕಹಿತೈಷಿಯೂ ಆದ ಅಗಸ್ತ್ಯ ನನ್ನು ಕಂಡು ತನಗೆ ಬಂದಿದ್ದ ಕತ್ತೆಯ ಮುಖಕ್ಕಾಗಿ ಅತ್ಯಂತ ದುಃಖಪಡುತ್ತ ಆತನಿಗೆ ಪ್ರಣಾಮವನ್ನು ಮಾಡಿದನು.

೩೬. ಪುಣ್ಯಶೀಲನು ಹೇಳುತ್ತಾನೆ:—"ಮುನಿಸೇವಿತನೂ ತಪೋನಿಧಿಯೂ ಆದ ಅಗಸ್ತ್ಯನೆ! ನಿನಗೆ ನಮಸ್ಕರಿಸುವೆನು. ವಿಕಾರವಾದ ಮುಖವುಳ್ಳ ಮಹಾ ಪಾಪಿಯಾದ ನನ್ನನ್ನು ಕರುಣಾಸಮುದ್ರನಾದ ನೀನು ಕಾಪಾಡು.

೩೭–೩೮. ಮಹಾಮಹಿಮನಾದ ಮುನಿಶ್ರೇಷ್ಠನೆ! ಯಾವ ದೋಷದಿಂದ ನನಗೆ ಈ ಮುಖದ ವೈರೂಪ್ಯವುಂಟಾಯಿತೆಂಬುದನ್ನು ನನ್ನಲ್ಲಿ ದಯೆಯಿಟ್ಟು ಹೇಳುವವನಾಗು."

೩೯. ಅಗಸ್ತ್ಯನು ಹೇಳುತ್ತಾನೆ:—"ಮಹಾಶಯನೂ ಮಹಾಬುದ್ಧಿಯೂ

ಕಂಚಿದ್ವಿಪ್ರಂ ಗುಣನಿಧಿಂ ವೇದವೇದಾಂಗಪಾರಗಂ ।
ಶ್ರೋತ್ರಿಯಂ ಪುತ್ರರಹಿತಂ ಶ್ರಾದ್ಧೇ ತ್ವಂ ವಿನಿಯುಕ್ತವಾನ್ ।
ತೇನ ದೋಷೇಣ ಮಹತಾ ಮುಖೇ ತವ ವಿರೂಪತಾ ॥ ೪೦ ॥
ಯೇ ಲೋಕೇ ಹವ್ಯಕವ್ಯಾದೌ ವಂಧ್ಯಾಯಾಃ ಸ್ವಾಮಿನಂ ದ್ವಿಜಂ ।
ನಿಯೋಜಯಂತಿ ತೇ ಯಾಂತಿ ಮುಖೇ ಗರ್ದಭರೂಪತಾಂ ॥ ೪೧ ॥
ಶುಭ್ರಕರ್ಮಣಿ ವಾ ಮಿತ್ರ ಪೈತೃಕೇ ವಾಪಿ ಕರ್ಮಣಿ ।
ವಂಧ್ಯಾಪತಿಂ ಮಹಾಪಾಪಂ ಕದಾಚಿನ್ನ ನಿಮಂತ್ರಯೇತ್ ॥ ೪೨ ॥
ವಂಧ್ಯಾಪತಿಂ ಮಹಾಕ್ರೂರಂ ವೃಷಲೀಪತಿಮೇವ ವಾ ।
ಶ್ರೇಯಸ್ಕಾಮೋ ಹಿ ವಿಪ್ರೇಂದ್ರ ಶ್ರಾದ್ಧೇ ತು ನ ನಿಮಂತ್ರಯೇತ್ ॥೪೩॥
ವೇದಶಾಸ್ತ್ರಾದಿಯುಕ್ತೋಽಪಿ ಕುಲೀನಃ ಕರ್ಮಠೋಽಪಿ ವಾ ।
ವಂಧ್ಯಾಭರ್ತಾ ದ್ವಿಜಶ್ರೇಷ್ಠ ಶ್ರಾದ್ಧೇ ತ್ಯಾಜ್ಯಃ ಕಥಂ ಚನ ॥ ೪೪ ॥
ಜ್ಯೋತಿಷ್ಟೋಮಾದಿಯಜ್ಞೇಷು ವ್ರತೇಷು ಚ ತಪಃ ಸು ಚ ।
ಸಮರ್ಥೋಽಪಿ ದ್ವಿಜಶ್ರೇಷ್ಠಃ ಶ್ರಾದ್ಧೇ ವಂಧ್ಯಾಪತಿಂ ತ್ಯಜೇತ್ ॥ ೪೫ ॥

---

ಬ್ರಾಹ್ಮಣೋತ್ತಮನೂ ಆದ ಪುಣ್ಯಶೀಲನೆ! ನಿನ್ನ ಮುಖವು ವಿರೂಪವಾಗಲು ಕಾರಣವನ್ನು ಹೇಳುವೆನು. ಏಕಾಗ್ರಚಿತ್ತನಾಗಿ ಕೇಳು.

೪೦. ಸದ್ಗುಣನಿಧಿಯೂ, ವೇದವೇದಾಂಗಗಳನ್ನು ಆಮೂಲಾಗ್ರವಾಗಿ ತಿಳಿದವನೂ ಆದರೂ ಸಂತತಿಹೀನನಾದ ಒಬ್ಬಾನೊಬ್ಬ ಶ್ರೋತ್ರಿಯ ಬ್ರಾಹ್ಮಣ ನನ್ನು ನೀನು ಶ್ರಾದ್ಧಕ್ಕಾಗಿ ನಿಮಂತ್ರಿಸಿದ್ದೆಯಲ್ಲವೆ. ಮಹತ್ತರವಾದ ಆ ದೋಷ ದಿಂದಲೇ ನಿನ್ನ ಮುಖಕ್ಕೆ ಈ ವೈರೂಪ್ಯವು ಸಂಪ್ರಾಪ್ತವಾಗಿರುವುದು.

೪೧. ಯಾವ ಜನರು ಪ್ರಪಂಚದಲ್ಲಿ ಯಜ್ಞಗಳಲ್ಲಿಯೂ ಪೈತೃಕಕಾರ್ಯ ಗಳಲ್ಲಿಯೂ ಬಂಜೆಯ ಗಂಡನಾದ ಬ್ರಾಹ್ಮಣನನ್ನು ಸತ್ಕರಿಸುವರೊ ಅವರು ಮುಖದಲ್ಲಿ ಗಾರ್ದಭರೂಪವನ್ನು ಹೊಂದುವರು.

೪೨. ಎಲೈ ಬ್ರಾಹ್ಮಣನೆ! ಶುಭಕರ್ಮಗಳಲ್ಲಾಗಲಿ, ಪಿತೃಶ್ರಾದ್ಧಗಳ ಲ್ಲಾಗಲಿ ಮಹಾಪಾಪಿಯಾದ ವಂಧ್ಯಾಪತಿಯನ್ನೆಂದಿಗೂ ಆಮಂತ್ರಿಸಬಾರದು.

೪೩–೪೪. ಓ ವಿಪ್ರೋತ್ತಮ! ವಂಧ್ಯಾಪತಿಯನ್ನೂ, ಅತ್ಯಂತಕ್ರೂರಿ ಯನ್ನೂ ವೃಷಲೀಪತಿಯನ್ನೂ ಶ್ರೇಯಸ್ಸನ್ನು ಬಯಸುವ ಮನುಷ್ಯನು ಶ್ರಾದ್ಧ ಕಾರ್ಯದಲ್ಲಿ ನಿಮಂತ್ರಿಸಬಾರದು. ವೇದಶಾಸ್ತ್ರಗಳಲ್ಲಿ ಪಾರಂಗತನಾಗಿರಲಿ, ಸತ್ಕುಲಪ್ರಸೂತನಾಗಿರಲಿ, ಸ್ವಕರ್ಮನಿರತನಾಗಿರಲಿ, ವಂಧ್ಯಾಪತಿಯಾದವ ನನ್ನು ಮಾತ್ರ ಶ್ರಾದ್ಧಕರ್ಮದಲ್ಲಿ ಸರ್ವಥಾ ತ್ಯಜಿಸಬೇಕು.

೪೫. ಜ್ಯೋತಿಷ್ಟೋಮವೇ ಮೊದಲಾದ ಯಜ್ಞಗಳಲ್ಲಿಯೂ, ವ್ರತೋಪ

ಅಲಭ್ಯೇ ತು ದ್ವಿಜೇ ಪಾತ್ರೇ ತಂತುಮಾತ್ರೋಪಜೀವಿನಂ ।
ಪುತ್ರವಂತಂ ಸದಾಚಾರಂ ಶ್ರಾದ್ಧಾರ್ಥಂ ತು ನಿಮಂತ್ರಯೇತ್ ॥ ೪೬ ॥
ತದಭಾವೇ ದ್ವಿಜಶ್ರೇಷ್ಠ ಪುತ್ರಂ ವಾನುಜಮೇವ ವಾ ।
ಆತ್ಮಾನಂ ವಾ ನಿಯುಂಜೀತ ಶ್ರಾದ್ಧೇ ವಂಧ್ಯಾಪತಿಂ ತ್ಯಜೇತ್ ॥ ೪೭ ॥
ಪುಣ್ಯಶೀಲ ಮಹಾಭಾಗ ಚೋದ್ಧೃತ್ಯ ಭುಜಮುಚ್ಯತೇ ।
ಸರ್ವಥಾ ಪುತ್ರಹೀನಂ ತು ಶ್ರಾದ್ಧಾರ್ಥಂತು ನ ನಿಯೋಜಯೇತ್ ॥೪೮॥
ವಂಧ್ಯಾಪತಿಂ ದ್ವಿಜಂ ಯಸ್ತು ಶ್ರಾದ್ಧಕರ್ತಾ ನಿಯೋಕ್ಷ್ಯತಿ ॥ ೪೯ ॥
ತಚ್ಛ್ರಾದ್ಧಮಾಸುರಂ ಜ್ಞೇಯಂ ಕರ್ತಾ ಚ ನರಕಂ ವ್ರಜೇತ್ ॥ ೫೦ ॥
ಬಹುನಾತ್ರ ಕಿಮುಕ್ತೇನ ತದ್ದೋಷವಿನಿವೃತ್ತಯೇ ।
ಉಪಾಯಂ ತೇ ಪ್ರವಕ್ಷ್ಯಾಮಿ ಸ್ವರ್ಣಮುಖ್ಯಾಸ್ತಟೇ ಶುಭೇ ॥ ೫೧ ॥
ವರ್ತತೇ ದೇವಸಂಘೈಶ್ಚ ಸೇವಿತೋ ವೇಂಕಟಾಚಲಃ ।
ಮೇರುಪುತ್ರೋ ಮಹಾಪುಣ್ಯಃ ಸರ್ವಕಾಮಫಲಪ್ರದಃ ॥ ೫೨ ॥

---

ವಾಸಗಳಲ್ಲಿಯೂ, ತಪಸ್ಸುಗಳಲ್ಲಿಯೂ ಸಮರ್ಥನಾದರೂ ಬ್ರಾಹ್ಮಣೋತ್ತಮನು ಪುತ್ರಹೀನನಾದಲ್ಲಿ ಆತನನ್ನು ಶ್ರಾದ್ಧಕಾರ್ಯದಲ್ಲಿ ತ್ಯಜಿಸಬೇಕು.

೪೬. ಸತ್ಪಾತ್ರನಾದ ಬ್ರಾಹ್ಮಣನು ಲಭಿಸದಿದ್ದರೆ ಕೇವಲ ನಿತ್ಯಕರ್ಮ ನಿರತನಾದರೂ ಪುತ್ರವಂತನೂ, ಸದಾಚಾರಸಂಪನ್ನನೂ ಆದವನನ್ನು ಮಾತ್ರ ಶ್ರಾದ್ಧದಲ್ಲಿ ನಿಮಂತ್ರಿಸಬೇಕು.

೪೭. ಎಲೈ ದ್ವಿಜೋತ್ತಮನೆ! ಅಂತಹನೂ ಲಭಿಸದಿದ್ದರೆ, ಮಗನನ್ನಾಗಲಿ, ತಮ್ಮನನ್ನಾಗಲಿ, ತನ್ನನ್ನೇ ಆಗಲಿ ನಿಯೋಜಿಸಬೇಕಲ್ಲದೆ ಶ್ರಾದ್ಧ ಕಾಲದಲ್ಲಿ ವಂಧ್ಯಾಪತಿಯನ್ನು ತ್ಯಜಿಸಲೇಬೇಕು.

೪೮. ಮಹಾಭಾಗನಾದ ಪುಣ್ಯಶೀಲನೆ! ಭುಜವನ್ನೆತ್ತಿ ಶಪಥಪೂರ್ವಕ ವಾಗಿ ಹೇಳುವೆನು, ಕೇಳು. ಶ್ರಾದ್ಧಕ್ಕಾಗಿ ಪುತ್ರಹೀನನಾದವನನ್ನು ಸರ್ವಥಾ ನಿಮಂತ್ರಣಮಾಡಬಾರದು.

೪೯–೫೦. ಯಾವನು ವಂಧ್ಯಾಪತಿಯಾದ ಬ್ರಾಹ್ಮಣನನ್ನು ಶ್ರಾದ್ಧ ಮಾಡುವಾಗ ನಿಮಂತ್ರಿಸುವನೊ, ಆವನು ಮಾಡಿದ ಶ್ರಾದ್ಧವು ಆಸುರವೆಂದು ತಿಳಿಯಬೇಕು. ಅದನ್ನು ಮಾಡಿದವನು ನರಕಕ್ಕೆ ಭಾಗಿಯಾಗುವನು.

೫೧–೫೨. ಈ ವಿಷಯವಾಗಿ ಹೆಚ್ಚು ಹೇಳಲೇಕೆ? ಈ ನಿನ್ನ ದೋಷದ ನಿವೃತ್ತಿಗಾಗಿ ಉಪಾಯವೊಂದನ್ನು ಹೇಳುವೆನು. ಈ ಸುವರ್ಣಮುಖಿಯ ತೀರದಲ್ಲಿ ದೇವಸಮೂಹಗಳಿಂದ ಸೇವಿತವಾದುದೂ, ಮೇರುವಿನ ಸಂತತಿ

ತಸ್ಮಿನ್ವೇಂಕಟಶೈಲೇಂದ್ರೇ ಸುರಾಸುರನಮಸ್ಕೃತೇ ।
ವಿಯದ್ಗಂಗೇತಿ ನಾಮ್ನಾ ವೈ ತೀರ್ಥಮಸ್ತಿ ಮಹತ್ತರಂ ॥ ೫೩ ॥
ಸರ್ವಪಾಪಪ್ರಶಮನಮಾಯುರಾರೋಗ್ಯವರ್ಧನಂ ।
ತ್ವಂ ಗತ್ವಾ ವೇಂಕಟಂ ಶೈಲಂ ಸ್ವಾಮಿಪುಷ್ಕರಿಣೀಜಲೇ ॥ ೫೪ ॥
ಸ್ನಾತ್ವಾ ಸಂಕಲ್ಪಪೂರ್ವಂ ತು ಗಂಗಾತೀರ್ಥಮನಂತರಂ ।
ಗತ್ವಾ ತೀರ್ಥವಿಧಾನೇನ ಸ್ನಾನಂ ಕುರು ಮಹಾಮತೇ ॥ ೫೫ ॥
ಸ್ನಾನಮಾತ್ರಾತ್ತತಃ ಸದ್ಯೋ ಮುಖಸ್ಯಾಸ್ಯ ಮಹಾಮತೇ ।
ವೈರೂಪ್ಯಂ ತತ್‌ಕ್ಷಣಾದೇವ ನಂಕ್ಷ್ಯತ್ಯೇವ ನ ಸಂಶಯಃ ॥ ೫೬ ॥
ಏವಮುಕ್ತಃ ಪುಣ್ಯಶೀಲೋ ಹ್ಯಗಸ್ತ್ಯೇನ ಮಹಾತ್ಮನಾ ।
ತಂ ಪ್ರಣಮ್ಯ ಮಹಾತ್ಮಾನಂ ವೇಂಕಟಾದ್ರಿಂ ತತೋ ಯಯೌ ॥ ೫೭ ॥
ತತ್ರ ಗತ್ವಾ ಮಹಾಭಾಗಃ ಸ್ವಾಮಿಪುಷ್ಕರಿಣೀಜಲೇ ।
ಸ್ನಾತ್ವಾ ನಿಯಮಪೂರ್ವಂ ತು ವಿಯದ್ಗಂಗಾಸಮೀಪಗಃ ॥ ೫೮ ॥

---

ಯಾದುದೂ, ಮಹಾಪುಣ್ಯಭೂಮಿಯೂ, ಸಕಲ ಅಭೀಪ್ಸಿತಗಳನ್ನೂ ಕೊಡುವುದೂ ಆದ ವೇಂಕಟಾಚಲವೆಂಬ ಪರ್ವತವಿರುವುದು.

೫೩. ಸಮಸ್ತ ಸುರಾಸುರರಿಂದ ಸೇವೆಗೊಳ್ಳುತ್ತಿರುವ ಆ ಉತ್ತಮವಾದ ವೇಂಕಟಾಚಲದಲ್ಲಿ ಮಹಾಪುಣ್ಯಪ್ರದವಾದ ಆಕಾಶಗಂಗೆಯೆಂಬ ಹೆಸರಿನ ತೀರ್ಥವೊಂದು ನೆಲಸಿರುವುದು.

೫೪–೫೫. ಆ ತೀರ್ಥವು ಸಕಲಪಾಪಗಳನ್ನೂ ಹೋಗಲಾಡಿಸಿ ಆಯುರಾರೋಗ್ಯಗಳನ್ನು ಅಭಿವೃದ್ಧಿಗೊಳಿಸುವುದು. ನೀನು ಆ ವೇಂಕಟಾಚಲಕ್ಕೆ ಹೋಗಿ ಸ್ವಾಮಿಪುಷ್ಕರಿಣೀತೀರ್ಥದ ನೀರಿನಲ್ಲಿ ಸಂಕಲ್ಪಪೂರ್ವಕವಾಗಿ ಸ್ನಾನವನ್ನು ಮಾಡಿಕೊಂಡು ಬಳಿಕ ಆಕಾಶಗಂಗಾತೀರ್ಥವನ್ನು ಸೇರಿ ತೀರ್ಥಸ್ನಾನಗಳಿಗೆ ವಿಧಿಸಿರುವ ನಿಯಮವನ್ನನುಸರಿಸಿ ಸ್ನಾನವನ್ನು ಮಾಡು.

೫೬. ಎಲೈ ಮಹಾಮತಿಯೇ! ಅಲ್ಲಿ ಸ್ನಾನಮಾಡುವ ಮಾತ್ರದಿಂದಲೇ ನಿನ್ನ ಮುಖದ ವೈರೂಪ್ಯವು ತಕ್ಷಣದಲ್ಲಿಯೇ ನಾಶವಾಗುವುದು. ಇದರಲ್ಲಿ ಸಂಶಯವೇ ಇಲ್ಲವು."

೫೭. ಇಂತೆಂದು ಮಹಾತ್ಮನಾದ ಅಗಸ್ತ್ಯಮುನಿಯು ಅಪ್ಪಣೆಕೊಡಿಸಲು ಆ ಪುಣ್ಯಶೀಲನು ಆ ಮಹಾಪುರುಷನಿಗೆ ಪೊಡಮಟ್ಟು ಬೀಳ್ಕೊಂಡು ವೇಂಕಟಾದ್ರಿಯನ್ನು ಕುರಿತು ಹೊರಟನು.

೫೮. ಮಹಾಶಯನಾದ ಆತನು ಅಲ್ಲಿಗೆ ಹೋಗಿ ನಿಯಮವನ್ನನುಸರಿಸಿ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವನ್ನು ಮುಗಿಸಿಕೊಂಡು ಆಕಾಶಗಂಗೆಯೆಂಬ ತೀರ್ಥವನ್ನು ಸಮೀಪಿಸಿದನು.

ತತ್ರ ಸ್ನಾನೇನ ಧರ್ಮಾತ್ಮಾ ಕಾಮವಕ್ತ್ರೋಪಮಂ ಮುಖಂ ।
ಪ್ರಾಪ್ತವಾನ್ಪುಣ್ಯಶೀಲಸ್ತು ಅಹೋ ತೀರ್ಥಸ್ಯ ವೈಭವಂ ॥ ೫೯ ॥

ಶ್ರೀ ಸೂತ ಉವಾಚ:—

ಏವಂ ವಃ ಕಥಿತಂ ವಿಪ್ರಾ ನಾರದೇನ ಪ್ರಭಾಷಿತಂ ।
ಸನತ್ಕುಮಾರಮುನಯೇ ಶೌನಕಾದ್ಯಾ ಮಹೌಜಸಃ ॥ ೬೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ "ಆಕಾಶಗಂಗಾಮಾಹಾತ್ಮ್ಯವರ್ಣನಂ"ನಾಮ ದ್ವಾವಿಂಶತಿತಮೋಽಧ್ಯಾಯಃ

---

೫೯. ಅದರಲ್ಲಿ ಸ್ನಾನವನ್ನು ಮಾಡಿದುದರಿಂದ ಪುಣ್ಯಶೀಲನು ಮನ್ಮಥನ ಮುಖಕ್ಕೆ ಸಮಾನವಾದ ಸುಂದರಮುಖವನ್ನು ಹೊಂದುವವನಾದನು. ಆ ತೀರ್ಥದ ವೈಭವವನ್ನೇನೆಂದು ಹೇಳಲಿ!"

೬೦. ಸೂತನು ಹೇಳುತ್ತಾನೆ:—ಮಹಾ ತೇಜಸ್ವಿಗಳಾದ ಶೌನಕಾದಿ ಬ್ರಾಹ್ಮಣರಿರಾ! ಇಂತು ನಾರದಮಹಾಮುನಿಯು ಸನತ್ಕುಮಾರನಿಗೆ ವಿಸ್ತರಿಸಿದ ಇತಿಹಾಸವನ್ನು ನಿಮಗೆ ತಿಳಿಸಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೇಂಕಟಾಚಲ ಮಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ಆಕಾಶಗಂಗಾಮಾಹಾತ್ಮ್ಯವರ್ಣನ"ವೆಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋವಿಂಶತಿತಮೋಧ್ಯಾಯಃ

### ಚಕ್ರತೀರ್ಥಮಹಿಮಾನುವರ್ಣನಂ

ಶ್ರೀ ಸೂತ ಉವಾಚ :—

ಅಥಾಹಂ ಸಂಪ್ರವಕ್ಷ್ಯಾಮಿ ದ್ವಿಜೇಂದ್ರಾಃ ಸತ್ಯವಾದಿನಃ ।
ಚಕ್ರತೀರ್ಥಸ್ಯ ಮಾಹಾತ್ಮ್ಯಂ ಸರ್ವಪಾಪಪ್ರಣಾಶನಂ ॥ ೧ ॥
ಯೇ ಶೃಣ್ವಂತಿ ಮಹಾಪುಣ್ಯಂ ಚಕ್ರತೀರ್ಥಸ್ಯ ವೈಭವಂ ।
ತೇ ಯಾಂತಿ ವಿಷ್ಣುಭವನಂ ಪುನರಾವೃತ್ತಿವರ್ಜಿತಂ ॥ ೨ ॥
ಅನ್ನದಾನೇ ಚ ವಿಮುಖಾ ಜಲದಾನೇ ತಥೈವ ಚ ।
ಗೋದಾನವಿಮುಖಾ ಯೇ ಚ ಶುದ್ಧಾಸ್ತೇಽತ್ರ ನಿಮಜ್ಜನಾತ್ ॥ ೩ ॥
ತಸ್ಮಾತ್ಪುಣ್ಯತಮಂ ತೀರ್ಥಂ ಚಕ್ರತೀರ್ಥಮನುತ್ತಮಂ ॥ ೪ ॥

ಶ್ರೀ ಸೂತ ಉವಾಚ :—

ಪುರಾ ಶ್ರೀವತ್ಸಗೋತ್ರೀಯಃ ಪದ್ಮನಾಭೋ ಜಿತೇಂದ್ರಿಯಃ ।
ಚಕ್ರಪುಷ್ಕರಿಣೀತೀರೇ ಸೋಽತಪ್ಯತ ಮಹತ್ತಪಃ ॥ ೫ ॥

---

## ಕನ್ನಡದ ಅನುವಾದ

### ಚಕ್ರತೀರ್ಥಮಹಿಮಾನುವರ್ಣನ

೧. ಸೂತನು ಹೇಳುತ್ತಾನೆ:— ಸತ್ಯವಾದಿಗಳಾದ ಬ್ರಾಹ್ಮಣೋತ್ತಮರಿರಾ! ಇನ್ನು ಚಕ್ರತೀರ್ಥದ ಮಹಾತ್ಮ್ಯೆಯನ್ನು ನಿಮಗೆ ವಿಸ್ತರಿಸುವೆನು. ಅದರ ಶ್ರವಣವೇ ಸಕಲಪಾಪಗಳನ್ನೂ ದೂರಗೊಳಿಸುವುದು.

೨. ಪರಮಪುಣ್ಯಪ್ರದವಾದ ಚಕ್ರತೀರ್ಥದ ವೈಭವವನ್ನು ಯಾರು ಕೇಳುವರೊ, ಅವರು ಪುನರಾವೃತ್ತಿವರ್ಜಿತವಾದ ವೈಕುಂಠಲೋಕವನ್ನು ಸೇರುವರು.

೩. ಕ್ಷುದಾತುರರಿಗೆ ಅನ್ನದಾನವನ್ನು ಮಾಡದಿರುವವರೂ, ಜಲದಾನವನ್ನು ಮಾಡದಿರುವವರೂ, ಗೋದಾನದಿಂದ ವಿಮುಖರಾದವರೂ ಅದರಲ್ಲಿ ಸ್ನಾನವನ್ನು ಮಾಡುವುದರಿಂದ ಪರಿಶುದ್ಧರಾಗುವರು.

೪. ಆದುದರಿಂದ ಚಕ್ರತೀರ್ಥವು ಪುಣ್ಯತಮವೂ, ಉತ್ತಮೋತ್ತಮವೂ ಆಗಿರುವುದು.

೫. ಸೂತನು ಹೇಳುತ್ತಾನೆ:—ಮುನ್ನು ಶ್ರೀವತ್ಸಗೋತ್ರಸಂಭೂತನಾದ ಪದ್ಮನಾಭವೆಂಬವನು ಜಿತೇಂದ್ರಿಯನಾಗಿ ಚಕ್ರತೀರ್ಥದ ತೀರ್ಥದಲ್ಲಿ ಮಹತ್ತರವಾದ ತಪಸ್ಸನ್ನು ಮಾಡುತ್ತಿದ್ದನು.

ದಯಾಯುಕ್ತೋ ನಿರಾಹಾರಃ ಸತ್ಯವಾದೀ ಜಿತೇಂದ್ರಿಯಃ ।
ಆತ್ಮವತ್ಸರ್ವಭೂತಾನಿ ಪಶ್ಯನ್ವಿಷಯನಿಃಸ್ಪೃಹಃ ॥ ೬ ॥
ಸರ್ವಭೂತಹಿತೋ ದಾಂತಃ ಸರ್ವದ್ವಂದ್ವವಿವರ್ಜಿತಃ ।
ವರ್ಷಾಣಿ ಕತಿಚಿತ್ಸೋಽಯಂ ಜೀರ್ಣಪರ್ಣಾಶನೋಽಭವತ್ ॥ ೭ ॥
ಕಂಚಿತ್ಕಾಲಂ ಜಲಾಹಾರೋ ವಾಯುಭಕ್ಷಃ ಕಿಯತ್ಸಮಾಃ ।
ಏವಂ ದ್ವಾದಶವರ್ಷಾಣಿ ಪದ್ಮನಾಭೋ ಮಹಾಮುನಿಃ ।
ಅತಪ್ಯತ ತಪೋ ಘೋರಂ ದೇವೈರಪಿ ಸುದುಷ್ಕರಂ ॥ ೮ ॥
ಅಥ ತತ್ತಪಸಾ ತುಷ್ಟೋ ಭಗವಾನ್ಕಮಲಾಪತಿಃ ।
ಪ್ರತ್ಯಕ್ಷತಾಮಗಾತ್ತಸ್ಯ ಶಂಖಚಕ್ರಗದಾಧರಃ ॥ ೯ ॥
ವಿಕಚಾಂಬುಜಪತ್ರಾಕ್ಷಃ ಸೂರ್ಯಕೋಟಿಸಮಪ್ರಭಃ ।
ಉನ್ಮೀಲ್ಯ ಚಕ್ಷುಷೀ ತತ್ರ ದೃಷ್ಟವಾನ್ವೇಂಕಟೇಶ್ವರಂ ॥ ೧೦ ॥
ಶಂಖಚಕ್ರಧರಂ ಶಾಂತಂ ಶ್ರೀನಿವಾಸಂ ಕೃಪಾನಿಧಿಂ ।
ದೃಷ್ಟ್ವಾ ದೇವಂ ಮಹಾತ್ಮಾನಂ ಸ್ತೋತುಂ ಸಮುಪಚಕ್ರಮೇ ॥ ೧೧ ॥

---

೬. ಆತನು ಭೂತದಯೆಯುಳ್ಳವನೂ, ಉಪವಾಸನಿರತನೂ, ಸತ್ಯವಾದಿಯೂ, ಜಿತೇಂದ್ರಿಯನೂ, ತನ್ನಂತೆಯೇ ಪರರನ್ನು ಕಾಣುವವನೂ ಆಗಿ ಬಾಹ್ಯವಿಷಯಗಳಲ್ಲಿ ಅಭಿಲಾಷಾರಹಿತನಾಗಿದ್ದನು.

೭. ಸಕಲಪ್ರಾಣಿಗಳಿಗೂ ಹಿತವನ್ನೇ ಆಚರಿಸುತ್ತ, ಕರ್ಮೇಂದ್ರಿಯಗಳನ್ನು ನಿಗ್ರಹಿಸಿ, ಶೀತೋಷ್ಣಾದಿ ಸಕಲದ್ವಂದ್ವಗಳನ್ನೂ ಗೆದ್ದವನಾಗಿ ಅನೇಕ ವರ್ಷಗಳವರೆಗೂ ಕೇವಲ ತರಗೆಲೆಗಳನ್ನೇ ಭಕ್ಷಿಸುತ್ತಿದ್ದನು.

೮–೯. ಸ್ವಲ್ಪಕಾಲವನ್ನು ಜಲಸೇವನೆಯಿಂದಲೂ ಕೆಲವು ವರ್ಷಗಳನ್ನು ವಾಯುಸೇವನೆಯಿಂದಲೂ ಕಳೆದನು. ಇಂತು ಮಹಾಮುನಿಯಾದ ಪದ್ಮನಾಭನು ಹನ್ನೆರಡುವರ್ಷಗಳವರೆಗೂ ದೇವತೆಗಳಿಗೂ ದುಸ್ಸಾಧ್ಯವಾದ ತಪಸ್ಸನ್ನು ಮಾಡಿದನು. ಆತನ ತಪಸ್ಸಿನಿಂದ ಪರಿತುಷ್ಟನಾದ ಷಡ್ಗುಣೈಶ್ವರ್ಯವಂತನಾದ ಲಕ್ಷ್ಮೀರಮಣನು ಶಂಖಚಕ್ರಗದಾಪಾಣಿಯಾಗಿ ಆತನಿಗೆ ಪ್ರತ್ಯಕ್ಷನಾದನು.

೧೦. ಅರಳಿದ ಕಮಲದ ದಳದಂತಿರುವ ನೇತ್ರಗಳುಳ್ಳವನಾಗಿ ಕೋಟಿ ಸೂರ್ಯರಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ ಆ ವೇಂಕಟೇಶ್ವರನನ್ನು ಕಣ್ಣುಗಳನ್ನು ತೆರೆಯುತ್ತಲೇ ಆ ಪದ್ಮನಾಭನು ಇದುರಿನಲ್ಲಿ ಕಂಡನು.

೧೧. ಶಂಖಚಕ್ರಧಾರಿಯೂ, ಪ್ರಸನ್ನವದನನೂ, ಶ್ರೀನಿವಾಸನೂ, ಕೃಪಾಸಮುದ್ರನೂ, ಮಹಾತ್ಮನೂ ಆದ ಆ ದೇವನನ್ನು ನೋಡಿ ಪದ್ಮನಾಭನು ಈ ರೀತಿ ಸ್ತೋತ್ರಮಾಡಲು ಪ್ರಾರಂಭಿಸಿದನು.

ನಮೋ ದೇವಾಧಿದೇವಾಯ ವೇಂಕಟೇಶಾಯ ಶಾರ್ಙ್ಗಿಣೇ ।
ನಾರಾಯಣಾದ್ರಿವಾಸಾಯ ಶ್ರೀನಿವಾಸಾಯ ತೇ ನಮಃ ॥ ೧೨ ॥
ನಮಃ ಕಲ್ಮಷನಾಶಾಯ ವಾಸುದೇವಾಯ ವಿಷ್ಣವೇ ।
ಶೇಷಾಚಲನಿವಾಸಾಯ ಶ್ರೀನಿವಾಸಾಯ ತೇ ನಮಃ ॥ ೧೩ ॥
ನಮಸ್ತ್ರೈಲೋಕ್ಯನಾಥಾಯ ವಿಶ್ವರೂಪಾಯ ಸಾಕ್ಷಿಣೇ ।
ಶಿವಬ್ರಹ್ಮಾದಿವಂದ್ಯಾಯ ಶ್ರೀನಿವಾಸಾಯ ತೇ ನಮಃ ॥ ೧೪ ॥
ನಮಃ ಕಮಲನೇತ್ರಾಯ ಕ್ಷೀರಾಬ್ಧಿಶಯನಾಯ ತೇ ।
ದುಷ್ಟರಾಕ್ಷಸಸಂಹರ್ತ್ರೇ ಶ್ರೀನಿವಾಸಾಯ ತೇ ನಮಃ ॥ ೧೫ ॥
ಭಕ್ತಪ್ರಿಯಾಯ ದೇವಾಯ ದೇವಾನಾಂ ಪತಯೇ ನಮಃ ॥ ೧೬ ॥
ಪ್ರಣತಾರ್ತಿವಿನಾಶಾಯ ಶ್ರೀನಿವಾಸಾಯ ತೇ ನಮಃ ॥ ೧೭ ॥
ಯೋಗಿನಾಂ ಪತಯೇ ನಿತ್ಯಂ ವೇದವೇದ್ಯಾಯ ವಿಷ್ಣವೇ ।
ಭಕ್ತಾನಾಂ ಪಾಪಸಂಹರ್ತ್ರೇ ಶ್ರೀನಿವಾಸಾಯ ತೇ ನಮಃ ॥ ೧೮ ॥

---

೧೨. "ದೇವತೆಗಳಿಗೆಲ್ಲ ಅಧಿದೈವವೂ, ಪಾಪನಾಶಕರಲ್ಲಿ ಸಿನ್ನೀಮನೂ, ಶಾರ್ಙ್ಗಧನುರ್ಧರನೂ, ನಾರಾಯಣಾದ್ರಿನಿವಾಸಿಯೂ, ಶ್ರೀನಿವಾಸನೂ ಆದ ನಿನಗೆ ನಮಸ್ಕಾರವು!

೧೩. ಸಕಲ ಮನಃಕಲ್ಮಷಗಳನ್ನು ನಾಶಗೊಳಿಸುವವನೂ, ವಾಸುದೇವನೂ, ವಿಶ್ವವ್ಯಾಪಕನೂ, ಶೇಷಾಚಲನಿವಾಸಿಯೂ, ಶ್ರೀನಿವಾಸನೂ ಆದ ನಿನಗೆ ನಮಸ್ಕಾರವು!

೧೪. ಮೂರು ಲೋಕಗಳಿಗೆ ಒಡೆಯನೂ, ವಿಶ್ವರೂಪಿಯೂ, ಸರ್ವಸಾಕ್ಷಿಯೂ, ಶಿವ ಬ್ರಹ್ಮರೇ ಮೊದಲಾದವರಿಂದ ನಮಸ್ಕರಿಸಲ್ಪಡುವವನೂ, ಶ್ರೀನಿವಾಸನೂ ಆದ ನಿನಗೆ ನಮಸ್ಕಾರವು!

೧೫. ಕಮಲಲೋಚನನೂ, ಕ್ಷೀರಸಾಗರಶಯನನೂ, ದುಷ್ಟರಾಕ್ಷಸರನ್ನು ನಿಗ್ರಹಮಾಡುವವನೂ, ಶ್ರೀನಿವಾಸನೂ ಆದ ನಿನಗೆ ನಮಸ್ಕರಿಸುವೆನು!

೧೬–೧೭. ಭಕ್ತರಲ್ಲಿ ಅಭಿಮಾನವುಳ್ಳವನೂ, ದೇವನೂ, ದೇವತೆಗಳಿಗೆಲ್ಲ ನಾಯಕನೂ ಆದ ನಿನಗೆ ನಮಸ್ಕಾರವು! ಪ್ರಸನ್ನರಾದವರ ದುಃಖಗಳನ್ನು ನಾಶಗೊಳಿಸುವವನೂ, ಶ್ರೀನಿವಾಸನೂ ಆದ ನಿನಗೆ ಪ್ರಣಾಮವನ್ನು ಮಾಡುವೆನು!

೧೮. ಯೋಗಿಗಳಿಗೆ ಧ್ಯೇಯನಾದ ಸ್ವಾಮಿಯೂ, ವೇದಪ್ರತಿಪಾದ್ಯನಾದವನೂ, ವ್ಯಾಪಕನೂ, ಭಕ್ತರ ಪಾಪಗಳನ್ನು ನಿರ್ಮೂಲ ಗೊಳಿಸುವವನೂ ಆದ ಶ್ರೀನಿವಾಸನಿಗೆ ನಮಸ್ಕರಿಸುವೆನು!"

ಏವಂ ಸ್ತುತೋ ಮಹಾಭಾಗಃ ಶ್ರೀನಿವಾಸೋ ಜಗನ್ಮಯಃ ।
ಪದ್ಮನಾಭಾಖ್ಯಋಷಿಣಾ ಚಕ್ರತೀರ್ಥನಿವಾಸಿನಾ ॥ ೧೯ ॥
ಸಂತೋಷಂ ಪರಮಂ ಪ್ರಾಪ್ಯ ವೇಂಕಟೇಶೋ ದಯಾನಿಧಿಃ ॥ ೨೦ ॥
ಪದ್ಮನಾಭಂ ದ್ವಿಜವರಂ ಶಾಂತಂ ಧರ್ಮಪರಾಯಣಂ ।
ಸುಧಾಧಾರೋಪಮಂ ವಾಕ್ಯಮಬ್ರವೀತ್ಪುರುಷೋತ್ತಮಃ ॥ ೨೧ ॥

ಶ್ರೀನಿವಾಸ ಉವಾಚ:—

ದ್ವಿಜವರ್ಯ ಮಹಾಭಾಗ ಮತ್ಪಾದಕಮಲಾರ್ಚಕ ।
ಚಕ್ರತೀರ್ಥಸ್ಯ ತೀರೇ ತ್ವಮಾಕಲ್ಪಂ ಪೂಜಯನ್ವಸ ॥ ೨೨ ॥
ಇತ್ಯುಕ್ತ್ವಾ ಭಗವಾನ್ವಿಷ್ಣುಸ್ತತ್ರೈವಾಂತರಧೀಯತ ।
ಅಂತರ್ಧಾನಂ ಗತೇ ದೇವೇ ಶ್ರೀನಿವಾಸೇ ಜಗದ್ಗುರೌ ॥ ೨೩ ॥
ಚಕ್ರತೀರ್ಥಸ್ಯ ತೀರೇ ತು ವಾಸಂ ಚಕ್ರೇ ಮಹಾಮತಿಃ ।
ತತಃ ಕಾಲಾಂತರೇ ಕಶ್ಚಿದ್ರಾಕ್ಷಸೋ ಭೀಮದರ್ಶನಃ ॥ ೨೪ ॥
ಮುನಿಂ ತಂ ಪದ್ಮನಾಭಾಖ್ಯಂ ನಾರಾಯಣಪರಾಯಣಂ ।
ಆಯಯೌ ಭಕ್ಷಿತುಂ ಕ್ರೂರಃ ಕ್ಷುಧಯಾ ಪರಿಪೀಡಿತಃ ॥ ೨೫ ॥

---

೧೯–೨೦. ಇಂತು ಚಕ್ರತೀರ್ಥನಿವಾಸಿಯಾದ ಪದ್ಮನಾಭನೆಂಬ ಋಷಿಯಿಂದ ಸಂಸ್ತುತನಾಗಿ ಮಹಾತ್ಮನೂ, ಜಗನ್ಮಯನೂ, ವೆಂಕಟೇಶ್ವರನೂ, ಕರುಣಾಸಮುದ್ರನೂ ಆದ ಶ್ರೀನಿವಾಸನು ಅಪರಿಮಿತವಾದ ಸಂತೋಷವನ್ನು ಹೊಂದಿದನು.

೨೧. ಬ್ರಾಹ್ಮಣೋತ್ತಮನೂ, ಪ್ರಶಾಂತಸ್ವಭಾವದವನೂ, ಸ್ವಧರ್ಮಪರಾಯಣನೂ ಆದ ಪದ್ಮನಾಭನನ್ನು ಕುರಿತು ಆ ಪುರುಷೋತ್ತಮನು ಅಮೃತಧಾರೆಗೆ ಸಮಾನವಾದ ಈ ಮಾತನ್ನಾಡಿದನು.

೨೨. ಶ್ರೀನಿವಾಸನು ಹೇಳುತ್ತಾನೆ:—"ನನ್ನ ಪಾದಕಮಲಗಳನ್ನು ಪೂಜಿಸುತ್ತಿರುವ ಮಹಾತ್ಮನಾದ ಬ್ರಾಹ್ಮಣೋತ್ತಮನೆ! ನೀನು ಚಕ್ರತೀರ್ಥದ ತೀರದಲ್ಲಿಯೇ ಕಲ್ಪಾಂತದವರೆಗೂ ನನ್ನ ಪೂಜೆಯನ್ನು ಮಾಡಿಕೊಂಡು ವಾಸಿಸುತ್ತಿರು."

೨೩–೨೫. ಇಂತೆಂದು ಭಗವಂತನಾದ ಮಹಾವಿಷ್ಣುವು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ದೇವದೇವನೂ, ಜಗದ್ಗುರುವೂ ಆದ ಶ್ರೀನಿವಾಸನು ಅಂತರ್ಧಾನನಾಗಲು ಮಹಾಮತಿಯಾದ ಪದ್ಮನಾಭನು ಆ ಚಕ್ರತೀರ್ಥದ ಸಮೀಪದಲ್ಲಿಯೇ ತಪಸ್ಸನ್ನು ಮಾಡುತ್ತ ವಾಸಿಸುತ್ತಿದ್ದನು. ಕೆಲವು ಕಾಲವು ಕಳೆಯಲು ಭಯಂಕರಸ್ವರೂಪನೂ, ಕ್ರೂರಸ್ವಭಾವದವನೂ, ಹಸಿವಿನಿಂದ ತಳಮಳಿಸುತ್ತಿರುವವನೂ ಆದ ರಾಕ್ಷಸನೊಬ್ಬನು ನಾರಾಯಣಧ್ಯಾನಪರಾಯಣನಾಗಿದ್ದ ಪದ್ಮನಾಭನೆಂಬ ಆ ಮುನಿವರ್ಯನನ್ನು ಭಕ್ಷಿಸಲು ಬಂದನು.

ಬ್ರಾಹ್ಮಣಂ ತರಸಾ ಸೋಽಯಂ ರಾಕ್ಷಸೋ ಜಗೃಹೇ ತದಾ ।
ಗೃಹೀತಸ್ತರಸಾ ತೇನ ವಿಪ್ರೋ ವೇದಾಂಗಪಾರಗಃ ॥ ೨೬ ॥
ಪ್ರಚುಕ್ರೋಶ ದಯಾಂಭೋಧಿಮಾಪನ್ನಾನಾಂ ಪರಾಯಣಂ ।
ನಾರಾಯಣಂ ಚಕ್ರಪಾಣಿಂ ರಕ್ಷ ರಕ್ಷೇತಿ ವೈ ಮುಹುಃ ॥ ೨೭ ॥
ವೇಂಕಟೇಶ ದಯಾಸಿಂಧೋ ಶರಣಾಗತಪಾಲಕ ।
ತ್ರಾಹಿ ಮಾಂ ಪುರುಷವ್ಯಾಘ್ರ ರಕ್ಷೋವಶಮುಪಾಗತಂ ॥ ೨೮ ॥
ಲಕ್ಷ್ಮೀಕಾಂತ ಹರೇ ವಿಷ್ಣೋ ವೈಕುಂಠ ಗರುಡಧ್ವಜ ।
ಮಾಂ ರಕ್ಷ ರಾಕ್ಷಸಾಕ್ರಾಂತಂ ನಕ್ರಾಕ್ರಾಂತಂ ಗಜಂ ಯಥಾ ॥ ೨೯ ॥
ದಾಮೋದರ ಜಗನ್ನಾಥ ಹಿರಣ್ಯಾಸುರಮರ್ದನ ।
ಪ್ರಹ್ಲಾದಮಿವ ಮಾಂ ರಕ್ಷ ರಾಕ್ಷಸೇನಾತಿಪೀಡಿತಂ ॥ ೩೦ ॥
ಇತ್ಯೇವಂ ಸ್ತುವತಸ್ತಸ್ಯ ಪದ್ಮನಾಭಸ್ಯ ಹೇ ದ್ವಿಜಾಃ ।
ಸ್ವಭಕ್ತಸ್ಯ ಭಯಂ ಜ್ಞಾತ್ವಾ ಚಕ್ರಪಾಣಿರ್ದಯಾನಿಧಿಃ ॥ ೩೧ ॥
ಸ್ವಚಕ್ರಂ ಪ್ರೇಷಯಾಮಾಸ ಭಕ್ತರಕ್ಷಣಕಾರಣಾತ್ ।
ಪ್ರೇರಿತಂ ವಿಷ್ಣುಚಕ್ರಂ ತದ್ವಿಷ್ಣುನಾ ಪ್ರಭವಿಷ್ಣುನಾ ॥ ೩೨ ॥

---

೨೬–೨೭. ಆಗಲಾ ರಾಕ್ಷಸನು ವೇಗವಾಗಿ ಬಂದು ಆ ಬ್ರಾಹ್ಮಣನನ್ನು ಹಿಡಿದುಕೊಂಡನು. ವೇದವೇದಾಂಗಗಳಲ್ಲಿ ಪಾರಂಗತನಾದ ಆತನು ರಾಕ್ಷಸನಿಂದ ಹಿಡಿಯಲ್ಪಟ್ಟವನಾಗಿ ದಯಾಸಮುದ್ರನೂ, ಆಪದ್ಗತರಶರಣ್ಯನೂ, ಚಕ್ರಪಾಣಿಯೂ ಆದ ನಾರಾಯಣನನ್ನು ಕುರಿತು "ಕಾಪಾಡು, ಕಾಪಾಡು" ಎಂಬುದಾಗಿ ಮತ್ತೆ ಮತ್ತೆ ಕೂಗತೊಡಗಿದನು.

೨೮. "ವೇಂಕಟೇಶ್ವರನೆ! ದಯಾಸಮುದ್ರನೆ! ಶರಣಾಗತರನ್ನು ರಕ್ಷಿಸುವವನೆ! ಪುರುಷೋತ್ತಮನೆ! ರಾಕ್ಷಸನ ವಶಕ್ಕೆ ಸಿಕ್ಕಿಬಿದ್ದಿರುವ ನನ್ನನ್ನು ಕಾಪಾಡು.

೨೯. ಲಕ್ಷ್ಮೀನಾಯಕನೆ! ಶ್ರೀಹರಿಯೆ! ವಿಶ್ವವ್ಯಾಪಕನೆ! ವೈಕುಂಠವಾಸೀ! ಗರುಡಧ್ವಜಾ! ಹಿಂದೆ ಮೊಸಳೆಯ ಬಾಯಿಗೆ ಸಿಕ್ಕಿದ ಗಜೇಂದ್ರನಂತೆ ಈಗ ರಾಕ್ಷಸನ ಕೈಗೆ ಸಿಕ್ಕಿರುವ ನನ್ನನ್ನು ರಕ್ಷಿಸು.

೩೦. ದಾಮೋದರನೆ! ಜಗನ್ನಾಯಕನೆ! ಹಿರಣ್ಯಕಶಿಪುವನ್ನು ಸಂಹರಿಸಿದವನೆ! ಪ್ರಹ್ಲಾದನಂತೆ ರಾಕ್ಷಸನಿಂದ ಅತ್ಯಂತ ಪೀಡಿತನಾಗಿರುವ ನನ್ನನ್ನೀಗ ಕಾಪಾಡು."

೩೧–೩೩. ಎಲೈ ಬ್ರಾಹ್ಮಣರಿರಾ! ಇಂತು ಆ ಪದ್ಮನಾಭನು ಸ್ತೋತ್ರ ಮಾಡುತ್ತಿರಲು ದಯಾಸಮುದ್ರನಾದ ಶ್ರೀನಿವಾಸನು ತನ್ನ ಭಕ್ತನಿಗೊದಗಿರುವ ಸಂಕಟವನ್ನು ತಿಳಿದುಕೊಂಡು ಆತನನ್ನು ಸಲಹುವುದಕ್ಕಾಗಿ ತನ್ನ ಚಕ್ರಾಯುಧ

ಆಜಗಾಮಾಥ ವೇಗೇನ ಚಕ್ರಪುಷ್ಕರಿಣೀ ತಟಂ ।
ಅನಂತಾದಿತ್ಯಸಂಕಾಶಮನಂತಾಗ್ನಿಸಮಪ್ರಭಂ ॥ ೩೩ ॥
ಮಹಾಜ್ವಾಲಂ ಮಹಾನಾದಂ ಮಹಾಸುರವಿಮರ್ದನಂ ।
ದೃಷ್ಟ್ವಾ ಸುದರ್ಶನಂ ವಿಷ್ಣೋಃ ರಾಕ್ಷಸೋಽಥ ಪ್ರದುದ್ರುವೇ ॥ ೩೪ ॥
ದ್ರವಮಾಣಸ್ಯ ತಸ್ಯಾಶು ರಾಕ್ಷಸಸ್ಯ ಸುದರ್ಶನಂ ।
ಶಿರಶ್ಚಕರ್ತ ಸಹಸಾ ಜ್ವಾಲಾಮಾಲಾದುರಾಸದಂ ॥ ೩೫ ॥
ತತೋ ವಿಪ್ರವರೋ ದೃಷ್ಟ್ವಾ ರಾಕ್ಷಸಂ ಪತಿತಂ ಭುವಿ ।
ಮುದಾ ಪರಮಯಾ ಯುಕ್ತಸ್ತುಷ್ಟಾವ ಚ ಸುದರ್ಶನಂ ॥ ೩೬ ॥

ಪದ್ಮನಾಭ ಉವಾಚ :—

ವಿಷ್ಣುಚಕ್ರ ನಮಸ್ತೇಽಸ್ತು ವಿಶ್ವರಕ್ಷಣದೀಕ್ಷಿತ ।
ನಾರಾಯಣಕರಾಂಭೋಜ ಭೂಷಣಾಯ ನಮೋಽಸ್ತು ತೇ ॥ ೩೭ ॥
ಯುದ್ಧೇಷ್ವಸುರಸಂಹಾರಕುಶಲಾಯ ಮಹಾರವ ।
ಸುದರ್ಶನ ನಮಸ್ತುಭ್ಯಂ ಭಕ್ತಾನಾಮಾರ್ತಿನಾಶನ ॥ ೩೮ ॥

---

ವನ್ನು ಕಳುಹಿಸಿಕೊಟ್ಟನು. ಮಹಾಮಹಿಮನಾದ ವಿಷ್ಣುವು ಪ್ರೇರಿಸಿ ಕಳುಹಿಸಿದ ಆ ಸುದರ್ಶನ ಚಕ್ರವು ಅನೇಕ ಸೂರ್ಯರಂತೆ ಪ್ರಕಾಶಿಸುತ್ತ ಅನೇಕ ಅಗ್ನಿಗಳಂತೆ ಪ್ರಭೆಯುಳ್ಳದಾಗಿ ವೇಗದಿಂದ ಚಕ್ರತೀರ್ಥದ ಸಮೀಪಕ್ಕೆ ಬಂದಿತು.

೩೪. ಮಹಾಜ್ವಾಲೆಗಳನ್ನುಗುಳುತ್ತ ಮಹಾನಾದವನ್ನು ಮಾಡುತ್ತ ಮಹಾದೈತ್ಯರನ್ನು ನಿಗ್ರಹಿಸಲು ಶಕ್ತವಾದ ಆ ಸುದರ್ಶನವೆಂಬ ಮಹಾವಿಷ್ಣುವಿನ ಚಕ್ರಾಯುಧವನ್ನು ಕಂಡು ರಾಕ್ಷಸನು ಭಯಗೊಂಡು ಓಡಿಹೋದನು.

೩೫. ಆ ಸುದರ್ಶನ ಚಕ್ರವು ಜ್ವಾಲೆಗಳಿಂದ ನೋಡುವುದಕ್ಕೆ ಅಸಹ್ಯವಾಗಿ ಶೀಘ್ರವಾಗಿಯೇ ಓಡಿಹೋಗುತ್ತಿರುವ ಆ ರಾಕ್ಷಸನ ತಲೆಯನ್ನು ಕತ್ತರಿಸಿ ಕೆಡವಿತು.

೩೬. ಆಗ ಬ್ರಾಹ್ಮಣೋತ್ತಮನಾದ ಪದ್ಮನಾಭನು ಭೂಮಿಯಲ್ಲಿ ಸತ್ತು ಬಿದ್ದಿದ್ದ ರಾಕ್ಷಸನನ್ನು ಕಂಡು ಅಪರಿಮಿಪವಾದ ಆನಂದವನ್ನು ಹೊಂದಿ ಆ ಸುದರ್ಶನ ಚಕ್ರವನ್ನು ಸ್ತೋತ್ರಮಾಡತೊಡಗಿದನು.

೩೭. ಪದ್ಮನಾಭನು ಸ್ತುತಿಸುತ್ತಾನೆ:—ಎಲೈ ವಿಷ್ಣುಚಕ್ರವೆ! ಲೋಕ ರಕ್ಷಣದಲ್ಲಿಯೇ ದೀಕ್ಷೆಯನ್ನು ಕೈಕೊಂಡಿರುವುದೂ ನಾರಾಯಣನ ಕರಕಮಲಗಳಿಗೆ ಭೂಷಣಪ್ರಾಯವಾದುದೂ ಆದ ನಿನಗೆ ನಮಸ್ಕಾರವು!

೩೮. ಯುದ್ಧಗಳಲ್ಲಿ ರಾಕ್ಷಸರನ್ನು ಸಂಹರಿಸಿ ಭಕ್ತರ ಸಂಕಟಗಳನ್ನು ಪರಿಹರಿಸಿ ಮಹಾಧ್ವನಿಯನ್ನುಮಾಡುವ ಸುದರ್ಶನವೆಂಬ ನಿನಗೆ ನಮಸ್ಕರಿಸುವೆನು!

ರಕ್ಷ ಮಾಂ ಭಯಸಂವಿಗ್ನಂ ಸರ್ವಸ್ಮಾದಪಿ ಕಲ್ಮಷಾತ್ ।
ಸ್ವಾಮಿನ್ಸುದರ್ಶನ ವಿಭೋ ಚಕ್ರತೀರ್ಥೇ ಸದಾ ಭವಾನ್ ॥ ೩೯ ॥
ಸನ್ನಿಧೇಹಿ ಹಿತಾಯ ತ್ವಂ ಜಗತೋ ಮುಕ್ತಿಕಾಂಕ್ಷಿಣಃ ।
ಬ್ರಾಹ್ಮಣೇನೈವಮುಕ್ತಂ ತದ್ವಿಷ್ಣುಚಕ್ರಂ ಮುನೀಶ್ವರಾಃ ॥ ೪೦ ॥
ತಂ ಪ್ರಾಹ ಪದ್ಮನಾಭಾಖ್ಯಂ ಪ್ರೀಣಯನ್ನಿವ ಸೌಹೃದಾತ್ ॥ ೪೧ ॥

ಸುದರ್ಶನ ಉವಾಚ :—

ಪದ್ಮನಾಭ ಮಹಾತೀರ್ಥಂ ಚಕ್ರತೀರ್ಥಮನುತ್ತಮಂ ।
ಅಸ್ಮಿನ್ವಸಾಮಿ ಸತತಂ ಲೋಕಾನಾಂ ಹಿತಕಾಮ್ಯಯಾ ॥ ೪೨ ॥
ತ್ವತ್ಪೀಡಾಂ ಪರಿಚಿಂತ್ಯಾಹಂ ರಾಕ್ಷಸೇನ ದುರಾತ್ಮನಾ ।
ಪ್ರೇರಿತೋ ವಿಷ್ಣುನಾ ವಿಪ್ರ ತ್ವರಯಾ ಸಮುಪಾಗತಃ ॥ ೪೩ ॥
ತ್ವತ್ಪೀಡಕೋಽಪಿ ನಿಹತೋ ಮಯಾಯಂ ರಾಕ್ಷಸಾಧಮಃ ।
ಮೋಚಿತಸ್ತ್ವಂ ಭಯಾದಸ್ಮಾತ್ತ್ವಂ ಹಿ ಭಕ್ತೋ ಹರೇಃ ಸದಾ ॥ ೪೪ ॥
ಚಕ್ರತೀರ್ಥೇ ಮಹಾಪುಣ್ಯೇ ಸರ್ವಪಾಪಹರೇ ದ್ವಿಜ ।
ಸತತಂ ಲೋಕರಕ್ಷಾರ್ಥಂ ಸನ್ನಿಧಾನಂ ಕರೋಮಿ ತೇ ॥ ೪೫ ॥

---

೩೯–೪೧. ಭಯಾಭಿಭೂತನಾಗಿರುವ ನನ್ನನ್ನು ಸಕಲದೋಷಗಳಿಂದಲೂ ರಕ್ಷಿಸು, ವಿಭುವಾದ ಸುದರ್ಶನದೇವತೆಯೆ! ನೀನು ನಿತ್ಯವೂ ಮೋಕ್ಷಾಭಿಲಾಷಿಯಾದ ಜಗತ್ತಿಗೆ ಹಿತವನ್ನುಂಟುಮಾಡುವುದಕ್ಕಾಗಿ ಈ ಚಕ್ರತೀರ್ಥದಲ್ಲಿ ಸನ್ನಿಹಿತನಾಗಿರು.'' ಎಲೈ ಮುನೀಶ್ವರರಿರಾ! ಇಂತು ಬ್ರಾಹ್ಮಣನಿಂದ ಪ್ರಾರ್ಥಿತವಾಗಿ ಆ ವಿಷ್ಣುಚಕ್ರವು ಪದ್ಮನಾಭನನ್ನು ಸ್ನೇಹಪೂರಿತಹೃದಯದಿಂದ ಪ್ರೀತಿಸುತ್ತ ಆತನನ್ನು ಕುರಿತು ಇಂತೆಂದಿತು.

೪೨. ಸುದರ್ಶನಚಕ್ರದೇವತೆಯು ಹೇಳುತ್ತಾನೆ:—''ಎಲೈ ಪದ್ಮನಾಭನೆ! ಮಹಾತೀರ್ಥವಾದ ಚಕ್ರತೀರ್ಥಕ್ಕಿಂತ ಉತ್ತಮವಾದ ತೀರ್ಥವಿಲ್ಲ. ಸಕಲಲೋಕಗಳಿಗೂ ಹಿತವನ್ನುಂಟುಮಾಡಲು ನಾನು ನಿರಂತರವೂ ಇಲ್ಲಿಯೇ ವಾಸಿಸುತ್ತಿರುವೆನು.

೪೩–೪೪. ಎಲೈ ವಿಪ್ರನೆ! ದುರಾತ್ಮನಾದ ಈ ರಾಕ್ಷಸನಿಂದ ನಿನಗುಂಟಾಗುತ್ತಿದ್ದ ಹಿಂಸೆಯನ್ನು ಕುರಿತು ಚಿಂತಿಸುತ್ತಿದ್ದ ಮಹಾವಿಷ್ಣುವಿನಿಂದ ಆಜ್ಞಪ್ತನಾಗಿ ನಿನ್ನ ಬಳಿಗೆ ತ್ವರೆಯಿಂದ ಸಂಪ್ರಾಪ್ತನಾದೆನು. ನಿನ್ನನ್ನು ಪೀಡಿಸುತ್ತಿದ್ದ ಈ ರಾಕ್ಷಸಾಧಮನೂ ನನ್ನಿಂದ ಹತನಾದನು. ನೀನೂ ಆ ಭಯದಿಂದ ಬಿಡುಗಡೆಯನ್ನು ಹೊಂದಿದೆ. ನೀನು ಯಾವಾಗಲೂ ಹರಿಭಕ್ತನಾಗಿರುವೆಯಲ್ಲವೆ!

೪೫. ಎಲೈ! ಬ್ರಾಹ್ಮಣನೆ! ಮಹಾಪುಣ್ಯಪ್ರದವೂ, ಸಕಲಪಾಪಹರವೂ ಆದ ಈ ಚಕ್ರತೀರ್ಥದಲ್ಲಿ ನಿನಗಾಗಿಯೂ, ಲೋಕರಕ್ಷಣಾರ್ಥವಾಗಿಯೂ ನಾನು ಯಾವಾಗಲೂ ಸನ್ನಿಹಿತನಾಗಿರುವೆನು.

ಅಸ್ಮಿನ್ಮತ್ಸನ್ನಿಧಾನಾತ್ತೇ ತಥಾನ್ಯೇಷಾಮಪಿ ದ್ವಿಜ ॥ ೪೬ ॥
ಇತಃಪರಂ ನ ಪೀಡಾಸ್ಯಾದ್ಭೂತರಾಕ್ಷಸಸಂಭವಾ ।
ಅಸ್ಮಿನ್ಮತ್ಸನ್ನಿಧಾನಾತ್ಸ್ಯಾಚ್ಚಕ್ರತೀರ್ಥಮಿತಿ ಪ್ರಥಾ ॥ ೪೭ ॥
ಸ್ನಾನಂ ಯೇಽತ್ರ ಪ್ರಕುರ್ವಂತಿ ಚಕ್ರತೀರ್ಥೇ ವಿಮುಕ್ತಿದೇ ।
ತೇಷಾಂ ಪುತ್ರಾಶ್ಚ ಪೌತ್ರಾಶ್ಚ ವಂಶಜಾಃ ಸರ್ವ ಏವ ಹಿ ॥ ೪೮ ॥
ವಿಧೂತಪಾಪಾ ಯಾಸ್ಯಂತಿ ತದ್ವಿಷ್ಣೋಃ ಪರಮಂ ಪದಂ ।
ಇತ್ಯುಕ್ತ್ವಾ ವಿಷ್ಣುಚಕ್ರಂ ತತ್ಪದ್ಮನಾಭಸ್ಯ ಪಶ್ಯತಃ ॥ ೪೯ ॥
ಅನ್ಯೇಷಾಮಪಿ ವಿಪ್ರಾಣಾಂ ಪಶ್ಯತಾಂ ಸಹಸಾ ದ್ವಿಜಾಃ ।
ಚಕ್ರಪುಷ್ಕರಿಣೀಂ ತಾಂ ತು ಪ್ರಾವಿಶತ್ಪಾಪನಾಶಿನೀಂ ॥ ೫೦ ॥

ಶ್ರೀ ಸೂತ ಉವಾಚ:—

ಚಕ್ರತೀರ್ಥಸ್ಯ ಮಾಹಾತ್ಮ್ಯಂ ವಿಪ್ರೇಂದ್ರಾಃ ಪಾಪನಾಶನಂ ।
ಯುಷ್ಮಾಕಂ ಕಥಿತಂ ಸರ್ವಂ ಶೌನಕಾದ್ಯಾ ಮಹೌಜಸಃ ॥ ೫೧ ॥
ಚಕ್ರತೀರ್ಥಸಮಂ ತೀರ್ಥಂ ನ ಭೂತಂ ನ ಭವಿಷ್ಯತಿ ।
ಅತ್ರ ಸ್ನಾತ್ವಾ ನರಾ ವಿಪ್ರಾ ಮೋಕ್ಷಭಾಜೋ ನ ಸಂಶಯಃ ॥ ೫೨ ॥

---

೪೬–೪೭. ಎಲೈ ದ್ವಿಜೋತ್ತಮನೆ! ಈ ತೀರ್ಥದಲ್ಲಿ ನನ್ನ ಸನ್ನಿಧಾನವಿರುವುದರಿಂದ ನಿನಗೂ ಇತರರಿಗೂ ಇನ್ನುಮೇಲೆ ಭೂತಗಳಿಂದಾಗಲಿ ರಾಕ್ಷಸರಿಂದಾಗಲಿ ಪೀಡೆಯು ಸಂಭವಿಸುವುದಿಲ್ಲ. ನನ್ನ ಸಾನ್ನಿಧ್ಯದಿಂದಲೇ ಈ ತೀರ್ಥಕ್ಕೆ ಚಕ್ರತೀರ್ಥವೆಂಬ ಹೆಸರು ಪ್ರಖ್ಯಾತವಾಗಿರುವುದು.

೪೮–೫೦. ಮುಕ್ತಿಯನ್ನು ಸಂಪಾದಿಸಿಕೊಡುವ ಈ ಚಕ್ರತೀರ್ಥದಲ್ಲಿ ಯಾರು ಸ್ನಾನವನ್ನು ಮಾಡುವರೊ, ಅವರ ಮಕ್ಕಳೂ, ಮೊಮ್ಮಕ್ಕಳೂ, ಅವರ ವಂಶದಲ್ಲಿ ಹುಟ್ಟಿದವರು ಎಲ್ಲರೂ ತಮ್ಮ ಪಾಪಗಳನ್ನು ಕಳೆದುಕೊಂಡು ವಿಷ್ಣುಲೋಕವೆಂಬ ಪರಮಪದವನ್ನು ಹೊಂದುವರು.'' ಇಂತು ಹೇಳಿ ಪದ್ಮನಾಭನೂ ಅಲ್ಲಿ ನೆರೆದಿದ್ದ ಇತರ ಬ್ರಾಹ್ಮಣರೂ ನೋಡುತ್ತಿದ್ದಂತೆಯೇ ಆ ಸುದರ್ಶನ ಚಕ್ರವು ಪಾಪನಾಶಕವಾದ ಆ ತೀರ್ಥವನ್ನು ಪ್ರವೇಶಮಾಡಿತು.

೫೧. ಸೂತನು ಹೇಳುತ್ತಾನೆ:—ಎಲೈ ಶೌನಕಾದಿ ಮಹಾಮಹಿಮರಾದ ಬ್ರಾಹ್ಮಣೋತ್ತಮರಿರಾ! ಸಕಲಪಾಪನಾಶಕವಾದ ಚಕ್ರತೀರ್ಥದ ಮಾಹಾತ್ಮ್ಯವನ್ನು ವಿವರವಾಗಿ ನಿಮಗೆ ಕಥನಮಾಡಿರುವೆನು.

೫೨. ಈ ಚಕ್ರತೀರ್ಥಕ್ಕೆ ಸಮಾನವಾದ ತೀರ್ಥವು ಬೇರೊಂದು ಇರಲಿಲ್ಲ; ಮುಂದೆಯೂ ಉಂಟಾಗಲಾರದು. ಅಯ್ಯಾ ವಿಪ್ರರಿರಾ! ಇಲ್ಲಿ ಸ್ನಾನಮಾಡುವುದರಿಂದ ಮನುಷ್ಯರು ಮೋಕ್ಷಭಾಗಿಗಳಾಗುವರೆಂಬುದರಲ್ಲಿ ಸಂದೇಹವಿಲ್ಲ.

ಕೀರ್ತಯೇದಿಮಮಧ್ಯಾಯಂ ಶೃಣುಯಾದ್ವಾ ಸಮಾಹಿತಃ ।
ಚಕ್ರತೀರ್ಥಾಭಿಷೇಕಸ್ಯ ಪ್ರಾಪ್ನೋತಿ ಫಲಮುತ್ತಮಂ ॥ ೫೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ
"ಚಕ್ರತೀರ್ಥಮಹಿಮಾನುವರ್ಣನಂ" ನಾಮ
ತ್ರಯೋವಿಂಶತಿತಮೋಽಧ್ಯಾಯಃ

---

೫೩. ಯಾವನು ಈ ಅಧ್ಯಾಯವನ್ನು ಪುರಾಣರೂಪವಾಗಿ ಕೀರ್ತನೆ ಮಾಡುವನೊ, ಅಥವಾ ಏಕಾಗ್ರಚಿತ್ತದಿಂದ ಕೇಳುವನೊ, ಅವನೂ ಚಕ್ರತೀರ್ಥದಲ್ಲಿ ಸ್ನಾನವನ್ನುಮಾಡಿದ ಉತ್ತಮ ಫಲವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೆಂಕಟಾಚಲ
ಮಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ಚಕ್ರತೀರ್ಥಮಹಿಮಾನುವರ್ಣನ"ವೆಂಬ
ಇಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುರ್ವಿಂಶತಿತಮೋಽಧ್ಯಾಯಃ

## ಚಕ್ರತೀರ್ಥಮಹಿಮಾನುವರ್ಣನಂ

ಋಷಯ ಊಚುಃ :—

ಭಗವನ್ರಾಕ್ಷಸಃ ಕೋಽಸೌ ಸೂತಪೌರಾಣಿಕೋತ್ತಮ ।
ವಿಷ್ಣುಭಕ್ತಂ ಮಹಾತ್ಮಾನಂ ಯೋ ಬ್ರಾಹ್ಮಣಮಬಾಧತ ॥ ೧ ॥

ಸೂತ ಉವಾಚ :—

ವಕ್ಷ್ಯಾಮಿ ರಾಕ್ಷಸಂ ಕ್ರೂರಂ ತಂ ವಿಪ್ರಾಃ ಶ್ರುಣುತಾದರಾತ್ ।
ಯಥಾ ಚ ರಾಕ್ಷಸೋ ಜಾತೋ ಮುನೀನಾಂ ಶಾಪವೈಭವಾತ್ ॥ ೨ ॥
ಪುರಾ ವೈಕುಂಠಸದೃಶೇ ಶ್ರೀರಂಗೇ ವಿಷ್ಣುಮಂದಿರೇ ।
ವಸಿಷ್ಠಾತ್ರಿಮುಖಾಃ ಸರ್ವೇ ವಿಷ್ಣುಭಕ್ತಾ ಮಹೌಜಸಃ ॥ ೩ ॥
ಶ್ರೀರಂಗನಾಥಂ ದೇವೇಶಂ ಭಕ್ತಾನಾಮಭಯಪ್ರದಂ ।
ಉಪಾಸಾಂಚಕ್ರಿರೇ ಮುಕ್ತ್ಯೈ ಶ್ರೀರಂಗಪುರವಾಸಿನಃ ॥ ೪ ॥
ಕದಾಚಿತ್ತತ್ರ ಗಂಧರ್ವೋ ವೀರಬಾಹುಸುತೋ ಬಲೀ ।
ಸುಂದರೋ ನಾಮ ವಿಪ್ರೇಂದ್ರಾ ವಿಟಗೋಷ್ಠೀಪರಾಯಣಃ ॥ ೫ ॥

---

## ಕನ್ನಡದ ಅನುವಾದ

### ಚಕ್ರತೀರ್ಥಮಹಿಮಾನುವರ್ಣನ

೧. ಋಷಿಗಳು ಕೇಳುತ್ತಾರೆ:—ಪೌರಾಣಿಕೋತ್ತಮನಾದ ಎಲೈ ಸೂತ ಮಹರ್ಷಿಯೆ! ವಿಷ್ಣುಭಕ್ತನೂ, ಮಹಾತ್ಮನೂ ಆದ ಪದ್ಮನಾಭನೆಂಬ ಆ ಬ್ರಾಹ್ಮಣನನ್ನು ಈ ಪರಿಯಾಗಿ ಬಾಧಿಸಿದ ರಾಕ್ಷಸನು ಯಾರು?

೨. ಸೂತನು ಹೇಳುತ್ತಾನೆ:—ಎಲೈ ಬ್ರಾಹ್ಮಣರಿರಾ! ಕ್ರೂರನಾದ ಆ ರಾಕ್ಷಸನು ಯಾರೆಂಬುದನ್ನೂ, ಅವನಿಗೆ ಮುನಿಗಳ ಶಾಪದ ಅಮೋಘತ್ವದಿಂದ ರಾಕ್ಷಸತ್ವವು ಹೇಗೆ ಪ್ರಾಪ್ತವಾಯಿತೆಂಬುದನ್ನೂ ಹೇಳುವೆನು, ಆದರದಿಂದ ಕೇಳಿರಿ.

೩–೪. ಪೂರ್ವಕಾಲದಲ್ಲಿ ವೈಕುಂಠಸದೃಶವೂ, ವಿಷ್ಣುನಿವಾಸವೂ ಎನಿಸಿದ ಶ್ರೀರಂಗದಲ್ಲಿ ವಿಷ್ಣುಭಕ್ತರೂ ಮಹಾತೇಜಸ್ವಿಗಳೂ ಆದ ವಸಿಷ್ಠ, ಅತ್ರಿಯೆ ಮೊದಲಾದ ಮಹರ್ಷಿಗಳೆಲ್ಲರೂ ವಾಸಮಾಡುತ್ತ ದೇವೇಶ್ವರನೂ, ಭಕ್ತರಿಗೆ ಅಭಯವನ್ನು ಕೊಡುವವನೂ ಆದ ಶ್ರೀ ರಂಗನಾಥಸ್ವಾಮಿಯನ್ನು ಮೋಕ್ಷವನ್ನು ಪಡೆಯುವ ಅಭಿಲಾಷೆಯಿಂದ ಸೇವೆ ಮಾಡುತ್ತಿದ್ದರು.

೫–೬. ಎಲೈ ಬ್ರಾಹ್ಮಣಶ್ರೇಷ್ಠರಿರಾ! ಅಲ್ಲಿಗೆ ಒಮ್ಮೆ ವೀರಬಾಹುವಿನ

ಲಲನಾಶತಸಂಯುಕ್ತೋ ವಿವಸ್ತ್ರಃ ಸಲಿಲಾಶಯೇ ।
ಚಿಕ್ರೀಡ ಸ ವಿವಸ್ತ್ರಾಭಿಃ ಸಾಕಂ ಯುವತಿಭಿರ್ಮುದಾ ॥ ೬ ॥
ಕವೇರಜಾಯಾಸ್ತೀರ್ಥೇ ತು ವಸಿಷ್ಠೋ ಮುನಿಭಿಃ ಸಹ ।
ಮಾಧ್ಯಾಹ್ನಿಕಂ ಕರ್ತುಮನಾ ಯಯೌ ಶ್ರೀರಂಗಮಂದಿರಾತ್ ॥ ೭ ॥
ತಾನೃಷೀನವಲೋಕ್ಯಾಥ ರಾಮಾಸ್ತಾ ಭಯಕಾತರಾಃ ।
ವಾಸಾಂಸ್ಯಾಚ್ಛಾದಯಾಮಾಸುಃ ಸುಂದರೋ ನ ತು ಸಾಹಸೀ ॥ ೮ ॥
ತತೋ ವಸಿಷ್ಠಃ ಕುಪಿತಃ ಶಶಾಪೈನಂ ಗತತ್ರಪಂ ॥ ೯ ॥

ವಸಿಷ್ಠ ಉವಾಚ :—

ಯಸ್ಮಾತ್ಸುಂದರ ಗಂಧರ್ವ ದೃಷ್ಟ್ವಾಸ್ಮಾನ್ಲಜ್ಜಯಾ ತ್ವಯಾ ।
ವಾಸೋ ನಾಚ್ಛಾದಿತಂ ಶೀಘ್ರಂ ಯಾಹಿ ರಾಕ್ಷಸತಾಂ ತತಃ ॥ ೧೦ ॥
ಏವಮುಕ್ತೇ ವಸಿಷ್ಠೇನ ರಾಮಾಃ ಪ್ರಾಂಜಲಯಸ್ತದಾ ।
ಪ್ರಣಿಪತ್ಯ ವಸಿಷ್ಠಂ ತಂ ಭಕ್ತಿನಮ್ರೇಣ ಚೇತಸಾ ॥ ೧೧ ॥
ಮುನಿಮಂಡಲಮಧ್ಯೇ ತು ವಸಿಷ್ಠಮಿದಮಬ್ರುವನ್ ॥ ೧೨ ॥

---

ಮಗನೂ ಬಲಶಾಲಿಯೂ ಆದ ಸುಂದರನೆಂಬ ಗಂಧರ್ವನೊಬ್ಬನು ವಿಟಗೋಷ್ಠಿ ಯಲ್ಲಿಯೇ ನಿರತನಾಗಿದ್ದುಕೊಂಡು ತನ್ನ ನೂರುಮಂದಿ ಮಡದಿಯರೊಡನೆ ಶ್ರೀರಂಗಕ್ಕೆ ಬಂದು ನದಿಯಲ್ಲಿ ವಸ್ತ್ರಹೀನೆಯರಾದ ಅವರೊಡನೆ ತಾನೂ ದಿಗಂಬರನಾಗಿ ಸಂತೋಷದಿಂದ ಜಲಕ್ರೀಡೆಯನ್ನಾಡುತ್ತಿದ್ದನು.

೭. ಆಗ ಮಧ್ಯಾಹ್ನಕಾಲವಾದುದರಿಂದ ಕಾವೇರೀನದಿಯ ತೀರ್ಥೋದಕದಲ್ಲಿ ಆಹ್ನಿಕಗಳನ್ನು ನೆರವೇರಿಸಿಕೊಳ್ಳಲು ವಸಿಷ್ಠನು ಮಿಕ್ಕ ಮುನಿಗಳೊಡನೆ ಶ್ರೀರಂಗದೇವಾಲಯದಿಂದ ಹೊರಟು ಬಂದನು.

೮. ಆ ಮಹರ್ಷಿಗಳನ್ನು ಕಾಣುತ್ತಲೆ ಆ ಸ್ತ್ರೀಯರೆಲ್ಲರೂ ಭಯದಿಂದ ತಲ್ಲಣಿಸುವ ಹೃದಯವುಳ್ಳವರಾಗಿ ತಮ್ಮ ತಮ್ಮ ವಸ್ತ್ರಗಳನ್ನುಟ್ಟುಕೊಂಡರು. ಆದರೆ ಧೃಷ್ಟನಾದ ಸುಂದರನುಮಾತ್ರ ದಿಗಂಬರನಾಗಿಯೇ ನಿಂತಿದ್ದನು.

೯. ಅದನ್ನು ಕಂಡು ಕೋಪಗೊಂಡು ಆ ವಸಿಷ್ಠನು ಲಜ್ಜಾರಹಿತನಾದ ಅವನಿಗೆ ಶಾಪವನ್ನು ಕೊಟ್ಟನು.

೧೦. ವಸಿಷ್ಠನು ಹೇಳುತ್ತಾನೆ:—"ಎಲೈ ಸುಂದರಗಂಧರ್ವನೆ! ನಮ್ಮನ್ನು ನೋಡಿದರೂ ನೀನು ನಾಚಿಕೆಯಿಲ್ಲದೆ ವಸ್ತ್ರಗಳನ್ನುಡದೆ ಬೆತ್ತಲೆಯೇ ನಿಂತಿರುವುದರಿಂದ ಶೀಘ್ರವಾಗಿ ರಾಕ್ಷಸಜನ್ಮವನ್ನು ಹೊಂದುವವನಾಗು.

೧೧–೧೨. ಇಂತು ವಸಿಷ್ಠನು ಶಾಪವನ್ನುಕೊಡಲು ಆ ಗಂಧರ್ವನ ಪತ್ನಿಯರೆಲ್ಲರೂ ಅಂಜಲಿಬಂಧವನ್ನು ಮಾಡಿಕೊಂಡು ಭಕ್ತಿಯಿಂದ ದೀನವಾದ ಮನಸ್ಸುಳ್ಳವರಾಗಿ ಮುನಿಸಂಘದ ಮಧ್ಯದಲ್ಲಿದ್ದ ಆತನನ್ನು ಕುರಿತು ವಿಜ್ಞಾಪಿಸಿಕೊಂಡರು.

ರಾಮಾ ಊಚುಃ:—

ಭಗವನ್ಸರ್ವಧರ್ಮಜ್ಞ ಚತುರಾನನನಂದನ ।
ದಯಾಸಿಂಧೋಽವಲೋಕಯಾಸ್ಮಾನ್ನ ಕೋಪಂ ಕರ್ತುಮರ್ಹಸಿ ॥೧೩॥
ಪತಿರೇವ ಹಿ ನಾರೀಣಾಂ ಭೂಷಣಂ ಪರಮುಚ್ಯತೇ ।
ಪತಿಹೀನಾ ತು ಯಾ ನಾರೀ ಶತಪುತ್ರಾಪಿ ಸಾ ಮುನೇ ॥ ೧೪ ॥
ವಿಧವೇತ್ಯುಚ್ಯತೇ ಲೋಕೇ ತಾಸಾಂ ಜನ್ಮ ನಿರರ್ಥಕಂ ।
ತತ್ಪ್ರಸಾದಂ ಕುರು ಮುನೇ ಪತ್ಯಾವುಸ್ಮಾಕಮಾದರಾತ್ ॥ ೧೫ ॥
ಏಕೋಽಪರಾಧಃ ಕ್ಷಂತವ್ಯೋ ಮುನಿಭಿಸ್ತತ್ತ್ವದರ್ಶಿಭಿಃ ।
ಕ್ಷಮಾಂ ಕುರು ದಯಾಸಿಂಧೋ ಯುಷ್ಮಚ್ಛಿಷ್ಯೇಽತ್ರ ಸುಂದರೇ ॥ ೧೬ ॥

ಸೂತ ಉವಾಚ:—

ವಸಿಷ್ಠಃ ಪ್ರಾರ್ಥಿತಸ್ತ್ವೇವಂ ಸುಂದರಸ್ಯಾಂಗನಾಜನೈಃ ।
ಪ್ರೋವಾಚ ವಚನಂ ಭೂಯಃ ಪ್ರಸನ್ನಃ ಸ ದ್ವಿಜೋತ್ತಮಃ ॥ ೧೭ ॥

ವಸಿಷ್ಠ ಉವಾಚ:—

ನ ಮೇ ಸ್ಯಾದ್ವಚನಂ ಮಿಥ್ಯಾ ಕದಾಚಿದಪಿ ಸುಭ್ರುವಃ ।
ಉಪಾಯಂ ವಃ ಪ್ರವಕ್ಷ್ಯಾಮಿ ಶ್ರುಣುಧ್ವಂ ಶ್ರದ್ಧಯಾ ಸಹ ॥ ೧೮ ॥

---

೧೩. ಸ್ತ್ರೀಯರು ಹೇಳುತ್ತಾರೆ:—"ಎಲೈ ಸರ್ವಶಕ್ತನೆ! ಸಕಲಧರ್ಮಗಳನ್ನು ತಿಳಿದ ಚತುರ್ಮುಖಬ್ರಹ್ಮನ ಪುತ್ರನೆ! ದಯಾಸಮುದ್ರನೆ! ನಮ್ಮನ್ನು ಕೃಪಾದೃಷ್ಟಿಯಿಂದ ನೋಡುವವನಾಗು. ನಮ್ಮಲ್ಲಿ ಕೋಪವನ್ನು ಮಾಡುವುದು ನಿನಗೆ ತಕ್ಕುದಲ್ಲ.

೧೪–೧೫. ಪತಿಯೇ ಸ್ತ್ರೀಯರಿಗೆ ಉತ್ತಮೋತ್ತಮವಾದ ಭೂಷಣವೆಂದು ಹೇಳಲ್ಪಟ್ಟಿರುವುದು. ಎಲೈ ಮುನಿಯೆ! ಪತಿರಹಿತಳಾದ ಸ್ತ್ರೀಯು ಶತಪುತ್ರರನ್ನು ಪಡೆದಿದ್ದರೂ, ಅವಳಿಗೆ ವಿಧವೆಯೆಂದೇ ಹೆಸರಾಗುವುದಲ್ಲವೆ. ಅಂತಹ ಸ್ತ್ರೀಯರ ಜನ್ಮವು ನಿರರ್ಥಕವು. ಆದುದರಿಂದ ನಮ್ಮ ಪತಿದೇವನ ವಿಷಯದಲ್ಲಿ ಆದರವನ್ನು ತೋರಿಸಿ ಅನುಗ್ರಹವನ್ನು ಮಾಡುವವನಾಗು.

೧೬. ತತ್ತ್ವದರ್ಶಿಗಳಾದ ಮುನಿಗಳು ಇತರರಲ್ಲಿ ಒಂದು ಅಪರಾಧವನ್ನಾದರೂ ಕ್ಷಮಿಸಬೇಕು. ದಯಾಸಮುದ್ರನೆ! ನಿನ್ನ ಶಿಷ್ಯನಾದ ಈ ಸುಂದರನಲ್ಲಿ ಕ್ಷಮೆಯನ್ನು ತೋರಿಸು."

೧೭. ಸೂತನು ಹೇಳುತ್ತಾನೆ:—ಬ್ರಾಹ್ಮಣೋತ್ತಮನಾದ ವಸಿಷ್ಠನಿಂತು ಸುಂದರನ ಸ್ತ್ರೀಯರಿಂದ ಪ್ರಾರ್ಥಿಸಲ್ಪಟ್ಟವನಾಗಿ ಪ್ರಸನ್ನಾಂತಃಕರಣನಾಗಿ ಅವರನ್ನು ಕುರಿತು ಮತ್ತೆ ಹೇಳತೊಡಗಿದನು.

೧೮. ವಸಿಷ್ಠನು ಹೇಳುತ್ತಾನೆ:—"ಎಲೌ ಮಂಗಳಾಂಗಿಯರೆ! ನನ್ನ

ಷೋಡಶಾಬ್ದಾವಧಿಃ ಶಾಪೋ ಭರ್ತುರ್ವೋ ಭವಿತಾ ಧ್ರುವಂ ।
ಷೋಡಶಾಬ್ದಾವಧೌ ಚೈವ ಸುಂದರೋ ರಾಕ್ಷಸಾಕೃತಿಃ ॥ ೧೯ ॥
ಯದೃಚ್ಛಯಾ ವೇಂಕಟಾದ್ರಿಂ ಸರ್ವಪಾಪಹರಂ ಶುಭಂ ।
ಗತ್ವಾಽಸೌ ಚಕ್ರತೀರ್ಥಂ ತದ್ಗಮಿಷ್ಯತಿ ಸುರಾಂಗನಾಃ ॥ ೨೦ ॥
ಆಸ್ತೇ ತತ್ರ ಮಹಾಯೋಗೀ ಪದ್ಮನಾಭೋ ಮುನೀಶ್ವರಃ ।
ಭಕ್ಷಣಾರ್ಥಂ ತು ಮುನಿಂ ಸೋಽಯಂ ರಾಕ್ಷಸೋಽಭಿಗಮಿಷ್ಯತಿ ॥ ೨೧ ॥
ತತೋ ಬ್ರಾಹ್ಮಣರಕ್ಷಾರ್ಥಂ ಪ್ರೇರಿತಂ ಚಕ್ರಮುತ್ತಮಂ ।
ವಿಷ್ಣುನಾಸ್ಯ ಶಿರಃ ಕಾಯಾದ್ಧರಿಷ್ಯತಿ ನ ಸಂಶಯಃ ॥ ೨೨ ॥
ತತಃ ಸ್ವಂ ರೂಪಮಾಸಾದ್ಯ ಶಾಪಾನ್ಮುಕ್ತಃ ಸ ಸುಂದರಃ ।
ಪತಿರ್ವಸ್ತ್ರಿದಿವಂ ಭೂಯೋ ಗಂತಾ ನಾಸ್ತ್ಯತ್ರ ಸಂಶಯಃ ॥ ೨೩ ॥
ತತಸ್ತ್ರಿದಿವಮಾಸಾದ್ಯ ಸುಂದರೋಽಯಂ ಪತಿರ್ಹಿ ವಃ ।
ರಮಯಿಷ್ಯತಿ ಸುಂದರ್ಯೋ ಯುಷ್ಮಾನ್ಸುಂದರವೇಷಧೃಕ್ ॥ ೨೪ ॥

---

ಮಾತುಗಳು ಎಂದಿಗೂ ಸುಳ್ಳಾಗಲಾರವು. ಆದರೆ ನಿಮಗೊಂದುಪಾಯವನ್ನು ಹೇಳುವೆನು. ಶ್ರದ್ಧಾಯುಕ್ತರಾಗಿ ಕೇಳಿರಿ.

೧೯-೨೦. ನಿಮ್ಮಪತಿಗೆ ನಿಜವಾಗಿಯೂ ಹದಿನಾರುವರ್ಷಗಳವರೆಗೆ ಮಾತ್ರ ಈ ಶಾಪವು ಅನುಭವಾರ್ಹವಾಗುವುದು. ಎಲೌ ದೇವಕನ್ಯೆಯರಿರಾ !. ಹದಿನಾರು ವರ್ಷಗಳ ಆ ಅವಧಿಯು ಕಳೆಯುತ್ತ ಬರಲು ರಾಕ್ಷಸರೂಪವನ್ನು ಹೊಂದಿದ ಸುಂದರನು ಸಕಲಪಾಪಹರವೂ, ಪವಿತ್ರವೂ ಆದ ವೇಂಕಟಾಚಲವನ್ನು ಯಾದೃಚ್ಛಿಕವಾಗಿ ಸೇರಿ ಅದರಲ್ಲಿರುವ ಚಕ್ರತೀರ್ಥದ ಸಮೀಪಕ್ಕೆ ಹೋಗುವನು.

೨೧. ಅಲ್ಲಿ ಮಹಾಯೋಗಿಯೂ ಮುನಿಶ್ರೇಷ್ಠನೂ ಆದ ಪದ್ಮನಾಭನೆಂಬವನು ವಾಸಮಾಡುತ್ತಿರುವನು. ಈ ರಾಕ್ಷಸನು ಆ ಮುನಿವರನನ್ನು ಭಕ್ಷಣಮಾಡಲು ಮೇಲೆ ಬೀಳುವನು.

೨೨. ಆಗಲಾ ಬ್ರಾಹ್ಮಣನನ್ನು ರಕ್ಷಿಸುವುದಕ್ಕಾಗಿ ಮಹಾವಿಷ್ಣುವಿನಿಂದ ಕಳುಹಿಸಲ್ಪಟ್ಟ ಸುದರ್ಶನಚಕ್ರವು ಆ ರಾಕ್ಷಸನ ತಲೆಯನ್ನು ಕತ್ತರಿಸಿ ಕೆಡಹುವುದು. ಈ ವಿಷಯದಲ್ಲಿ ಸಂಶಯವಿಲ್ಲವು.

೨೩. ಬಳಿಕ ನಿಮ್ಮ ಸ್ವಾಮಿಯಾದ ಸುಂದರನು ನಿಜರೂಪವನ್ನು ಹೊಂದಿ ಶಾಪದಿಂದ ಮುಕ್ತನಾಗಿ ಮತ್ತೆ ಸ್ವರ್ಗಲೋಕವನ್ನು ಸೇರುವುದರಲ್ಲಿ ನಿಮಗೆ ಸಂದೇಹವೇ ಬೇಡ.

೨೪. ಎಲೌ ಸುಂದರಿಯರಿರಾ ! ಇಂತು ನಿಮ್ಮ ಪತಿಯಾದ ಸುಂದರನು ಸ್ವರ್ಗವನ್ನು ಸೇರಿ ಸುಂದರವೇಷವನ್ನು ಧರಿಸಿದವನಾಗಿ ನಿಮ್ಮೆಲ್ಲರನ್ನೂ ಸಂತೋಷಗೊಳಿಸುವನು."

ಶ್ರೀ ಸೂತ ಉವಾಚ :—

ಇತ್ಯುಕ್ತ್ವಾತು ವಸಿಷ್ಠಸ್ತಾಃ ಸುಂದರಸ್ಯ ವರಾಂಗನಾಃ ।
ಸ್ವಾಶ್ರಮಂ ಪ್ರಯಯೌ ತೂರ್ಣಂ ಶ್ರೀರಂಗೇಶ್ವರಭಕ್ತಿಮಾನ್ ॥ ೨೫ ॥
ಅಥ ರಾಮಾಸ್ತಮಾಲಿಂಗ್ಯ ಸುಂದರಂ ಪತಿಮಾತ್ಮನಃ ।
ರುರುದುಃ ಶೋಕಸಂತಪ್ತಾ ದುಃಖಸಾಗರಮಧ್ಯಗಾಃ ॥ ೨೬ ॥
ದೃಶ್ಯಮಾನಾಸು ತಾಸ್ವೇವಂ ಸುಂದರೋ ರಾಕ್ಷಸೋಽಭವತ್ ।
ಮಹಾದಂಷ್ಟ್ರೋ ಮಹಾಕಾಯೋ ರಕ್ತಶ್ಮಶ್ರುಶಿರೋರುಹಃ ॥ ೨೭ ॥
ತಂ ದೃಷ್ಟ್ವಾ ಭಯಸಂವಿಗ್ನಾ ಜಗ್ಮೂ ರಾಮಾಸ್ತ್ರಿವಿಷ್ಟಪಂ ।
ತತೋ ರಾಕ್ಷಸವೇಷೋಽಯಂ ಸುಂದರೋ ಭೈರವಾಕೃತಿಃ ॥ ೨೮ ॥
ಭಕ್ಷಯನ್ಪ್ರಾಣಿನಃ ಸರ್ವಾನ್ದೇಶಾದ್ದೇಶಂ ವನಾದ್ವನಂ ।
ಭ್ರಮನ್ನನಿಲವೇಗೋಽಯಂ ವೇಂಕಟಾದ್ರಿಂ ನಗೋತ್ತಮಂ ॥ ೨೯ ॥
ಪ್ರವಿಶ್ಯಾಸೌ ಮಹಾಪಾಪೀ ಚಕ್ರತೀರ್ಥಂ ತತೋ ಯಯೌ ।
ಏವಂ ಷೋಡಶವರ್ಷಾಣಿ ಭ್ರಮತೋಽಸ್ಯ ಯಯುಸ್ತದಾ ॥ ೩೦ ॥
ತತಸ್ತು ಶೋಡಶಾಬ್ದಾಂತೇ ರಾಕ್ಷಸೋಽಯಂ ಮುನೀಶ್ವರಾಃ ।
ಭಕ್ಷಿತುಂ ಪದ್ಮನಾಭಂ ತಂ ಚಕ್ರತೀರ್ಥನಿವಾಸಿನಂ ॥ ೩೧ ॥

---

೨೫. ಸೂತನು ಹೇಳುತ್ತಾನೆ:—ಇಂತೆಂದು ಶ್ರೀರಂಗನಾಥನಲ್ಲಿ ಭಕ್ತಿಯುಕ್ತನಾದ ವಸಿಷ್ಠನು ಸುಂದರಗಂಧರ್ವನ ಸ್ತ್ರೀಯರಿಗೆ ಹೇಳಿ ಶೀಘ್ರವಾಗಿ ತನ್ನ ಆಶ್ರಮವನ್ನು ಕುರಿತು ಪ್ರಯಾಣಮಾಡಿದನು.

೨೬. ಆಗಲಾ ಸ್ತ್ರೀಯರೆಲ್ಲರೂ ತಮ್ಮ ಪತಿಯಾದ ಸುಂದರನನ್ನು ಆಲಿಂಗಿಸಿ ಶೋಕಸಂತಪ್ತರಾಗಿ ದುಃಖಸಮುದ್ರದಲ್ಲಿ ಮುಳುಗಿ ಅಳತೊಡಗಿದರು.

೨೭. ಅವರು ನೋಡುತ್ತಿರುವಂತೆಯೇ ಸುಂದರನು ದೊಡ್ಡ ಕೋರೆ ಹಲ್ಲುಳ್ಳವನೂ, ದೊಡ್ಡ ಶರೀರವುಳ್ಳವನೂ, ಕೆಂಪಾದ ಮೀಸೆ, ತಲೆಗೂದಲುಳ್ಳವನೂ ಆದ ರಾಕ್ಷಸನಾಗಿ ಪರಿಣಮಿಸಿದನು.

೨೮–೩೦. ಅವನನ್ನು ಕಂಡು ಆ ಸ್ತ್ರೀಯರೆಲ್ಲರೂ ಭಯದಿಂದ ನಡುಗುತ್ತ ಸ್ವರ್ಗಲೋಕಕ್ಕೆ ಹೊರಟುಹೋದರು. ಬಳಿಕ ರಾಕ್ಷಸರೂಪನೂ ಭಯಂಕರಾಕೃತಿಯೂ ಆದ ಸುಂದರನು ಕೈಗೆ ಸಿಕ್ಕಿದ ಪ್ರಾಣಿಗಳನ್ನೆಲ್ಲ ಭಕ್ಷಿಸುತ್ತ ದೇಶದಿಂದ ದೇಶಕ್ಕೂ, ಅರಣ್ಯದಿಂದ ಅರಣ್ಯಕ್ಕೂ ವಾಯುವೇಗದಿಂದ ಸಂಚರಿಸುತ್ತ ಪರ್ವತಶ್ರೇಷ್ಠವಾದ ವೇಂಕಟಾಚಲವನ್ನು ಪ್ರವೇಶಿಸಿ ಚಕ್ರತೀರ್ಥದ ಸಮೀಪಕ್ಕೆ ಬಂದನು. ಅವನಿಂತು ಸ್ವೇಚ್ಛೆಯಾಗಿ ತಿರುಗಾಡುತ್ತಿರಲು ಹದಿನಾರು ವರ್ಷಗಳ ಅವಧಿಯು ಕಳೆಯುವ ಸಮಯವೊದಗಿತು.

೩೧–೩೨. ಎಲೈ ಮುನಿಶ್ರೇಷ್ಠರಿರಾ! ಹದಿನಾರುವರ್ಷಗಳ ಕೊನೆಯಲ್ಲಿ

ಉಪಾದ್ರವದ್ವಾಯುವೇಗಃ ಸ ಚಾಸೌತ್ತಿಷ್ಠೀಜ್ಜನಾರ್ದನಂ ।
ಯೋಗಿನಾ ಚ ಸ್ತುತೋ ವಿಷ್ಣುಸ್ತದಾ ಚಕ್ರಮಚೋದಯತ್ ॥ ೩೨ ॥
ರಕ್ಷಿತುಂ ಪದ್ಮನಾಭಂ ತಂ ರಾಕ್ಷಸೇನ ಪ್ರಪೀಡಿತಂ ।
ಅಥಾಗತ್ಯ ಹರೇಶ್ಚಕ್ರಂ ರಾಕ್ಷಸಸ್ಯ ಶಿರೋಽಹರತ್ ॥ ೩೩ ॥
ತತೋಽಯಂ ರಾಕ್ಷಸಂ ದೇಹಂ ತ್ಯಕ್ತ್ವಾ ದಿವ್ಯಕಲೇವರಃ ।
ವಿಮಾನವರಮಾರುಹ್ಯ ಸುಂದರಃ ಪುಷ್ಪವರ್ಷಿತಃ ॥ ೩೪ ॥
ಪ್ರಾಂಜಲಿಃ ಪ್ರಣತೋ ಭೂತ್ವಾ ವವಂದೇ ತತ್ಸುದರ್ಶನಂ ।
ತುಷ್ಟಾವ ಶ್ರುತಿರಮ್ಯಾಭಿರ್ವಾಗ್ಭಿರಗ್ರ್ಯಾಭಿರಾದರಾತ್ ॥ ೩೫ ॥

ಸುಂದರ ಉವಾಚ :—

ಸುದರ್ಶನ ನಮಸ್ತೇಽಸ್ತು ವಿಷ್ಣುಹಸ್ತೈಕಭೂಷಣ ।
ನಮಸ್ತೇಽಸುರಸಂಹರ್ತ್ರೇ ಸಹಸ್ರಾದಿತ್ಯತೇಜಸೇ ॥ ೩೬ ॥
ಕೃಪಾವಶೇನ ಭವತಸ್ತ್ಯಕ್ತ್ವಾಹಂ ರಾಕ್ಷಸೀಂ ತನುಂ ।
ಸ್ವಂ ರೂಪಮಭಜಂ ವಿಷ್ಣೋಶ್ಚಕ್ರಾಯುಧ ನಮೋಸ್ತು ತೇ ॥ ೩೭ ॥

---

ಈ ರಾಕ್ಷಸನು ಚಕ್ರತೀರ್ಥದಲ್ಲಿ ವಾಸಮಾಡುತ್ತಿದ್ದ ಪದ್ಮನಾಭನನ್ನು ತಿನ್ನು ವುದಕ್ಕಾಗಿ ವಾಯುವೇಗದಿಂದ ಓಡಿಬಂದನು. ಆ ಬ್ರಾಹ್ಮಣನು ಆ ತನ್ನ ಆಪತ್ಕಾಲದಲ್ಲಿ ಮಹಾವಿಷ್ಣುವನ್ನು ಸ್ತೋತ್ರಮಾಡಿದನು. ಆ ಯೋಗಿಯಿಂದ ಸ್ತುತಿಸಲ್ಪಟ್ಟ ವಿಷ್ಣುವು ಆಗ ತನ್ನ ಚಕ್ರಾಯುಧವನ್ನು ಬ್ರಾಹ್ಮಣ ರಕ್ಷಣಾರ್ಥ ವಾಗಿ ಕಳುಹಿಸಿಕೊಟ್ಟನು.

೩೩. ರಾಕ್ಷಸನಿಂದ ಅತ್ಯಂತಪೀಡೆಗೊಳಗಾದ ಪದ್ಮನಾಭನನ್ನು ಕಾಪಾಡಲು ಹರಿಯ ಚಕ್ರವು ವೇಗದಿಂದ ಬಂದು ಆ ರಾಕ್ಷಸನ ತಲೆಯನ್ನು ಕತ್ತರಿಸಿತು.

೩೪–೩೫. ಆಗ ಸುಂದರನು ರಾಕ್ಷಸದೇಹವನ್ನು ತ್ಯಜಿಸಿ ದಿವ್ಯವಾದ ಶರೀರವುಳ್ಳವನಾಗಿ ತನಗಾಗಿ ಬಂದ ವಿಮಾನವನ್ನೇರಿ ದೇವತೆಗಳು ಪುಷ್ಪವೃಷ್ಟಿ ಯನ್ನು ಸುರಿಸುತ್ತಿರಲು ಅಂಜಲಿಬಂಧವನ್ನು ಮಾಡಿಕೊಂಡು ಸುದರ್ಶನಚಕ್ರಕ್ಕೆ ಪ್ರಣಾಮವನ್ನು ಮಾಡಿದನು. ಅಲ್ಲದೆ ಭಕ್ತಿಭಾವದಿಂದ ಉತ್ತಮಗಳೂ, ಶ್ರೋತ್ರ ಮನೋಹರಗಳೂ ಆದ ಮಾತುಗಳಿಂದ ಚಕ್ರವನ್ನು ಸ್ತೋತ್ರಮಾಡಿದನು.

೩೬. ಸುಂದರನು ಹೇಳುತ್ತಾನೆ:—"ವಿಷ್ಣುವಿನ ಕರಕಮಲಕ್ಕೆ ಭೂಷಣ ಪ್ರಾಯವಾದ ಸುದರ್ಶನ ಚಕ್ರವೆ! ನಿನಗೆ ನಮಸ್ಕಾರವಿರಲಿ! ರಾಕ್ಷಸರನ್ನು ಸಂಹಾರಮಾಡುವುದೂ, ಸಾವಿರ ಸೂರ್ಯರ ತೇಜಸ್ಸಿನಿಂದ ಹೊಳೆಯುವುದೂ ಆದ ನಿನಗೆ ನಮಸ್ಕಾರವು.

೩೭. ಮಹಾವಿಷ್ಣುವಿನ ಓ ಚಕ್ರಾಯುಧವೆ! ನಿನ್ನ ಕೃಪಾಬಲದ ದೆಸೆಯಿಂದ

ಅನುಜಾನೀಹಿ ಮಾಂ ಗಂತುಂ ತ್ರಿದಿವಂ ವಿಷ್ಣುವಲ್ಲಭ ।
ಭಾರ್ಯಾ ಮೇ ಪರಿಶೋಚಂತಿ ವಿರಹಾತುರಚೇತಸಃ ॥ ೩೮ ॥
ತ್ವನ್ಮನಸ್ಕೋ ಭವಿಷ್ಯಾಮಿ ಯಾವಜ್ಜೀವಂ ಯಥಾ ಹ್ಯಹಂ ।
ತಥಾ ರೂಪಂ ಕುರುಷ್ವ ತ್ವಂ ಮಯಿ ಚಕ್ರ ನಮೋಽಸ್ತು ತೇ ॥ ೩೯ ॥
ಏವಂ ಸ್ತುತಂ ವಿಷ್ಣುಚಕ್ರಂ ಸುಂದರೇಣ ಸಭಕ್ತಿಕಂ ।
ಅನುಜಗ್ರಾಹ ಸಹಸಾ ತಥಾಸ್ತ್ವಿತಿ ಮುನೀಶ್ವರಾಃ ॥ ೪೦ ॥
ಚಕ್ರಾಯುಧಾಭ್ಯನುಜ್ಞಾತಃ ಸುಂದರೋ ಬ್ರಾಹ್ಮಣೋತ್ತಮಂ ।
ಪ್ರಣಮ್ಯ ತೇನಾನುಜ್ಞಾತೋ ಗಂಧರ್ವಸ್ತ್ರಿದಿವಂ ಯಯೌ ॥ ೪೧ ॥
ಸುಂದರೇ ತು ಗತೇ ಸ್ವರ್ಗಂ ಪದ್ಮನಾಭೋ ಮುನೀಶ್ವರಃ ।
ತಚ್ಚಕ್ರಂ ಪ್ರಾರ್ಥಯಾಮಾಸ ವಿಷ್ಣ್ವಾಯುಧ ನಮೋಽಸ್ತು ತೇ ॥ ೪೨ ॥
ಚಕ್ರಾಯುಧ ನಮಾಮಿ ತ್ವಾಂ ಮಹಾಸುರವಿಮರ್ದನ ।
ಸನ್ನಿಧಾನಂ ಕುರುಷ್ವ ತ್ವಂ ಚಕ್ರತೀರ್ಥೇಽಮಲೇ ಶುಭೇ ॥ ೪೩ ॥

---

ನಾನು ನನ್ನ ರಾಕ್ಷಸ ಶರೀರವನ್ನು ಬೀಳ್ಕೊಟ್ಟು ನಿಜಸ್ವರೂಪವನ್ನು ಹೊಂದಿದೆನು. ಆದುದರಿಂದ ನಿನಗೆ ನಮಸ್ಕರಿಸುವೆನು!

೩೮. ಎಲೈ ವಿಷ್ಣುಪ್ರಿಯನೇ! ಈಗ ನಾನು ಸ್ವರ್ಗಕ್ಕೆ ಹೋಗಲು ಅಪ್ಪಣೆಯನ್ನು ದಯೆಪಾಲಿಸು. ನನ್ನ ವಿರಹದಿಂದ ವ್ಯಾಕುಲಿತಹೃದಯರಾಗಿ ನನ್ನ ಪತ್ನಿಯರೆಲ್ಲ ಶೋಕಮಾಡುತ್ತಿರುವರು.

೩೯. ಓ ಚಕ್ರಾಯುಧವೆ! ನಾನು ಜೀವವಿರುವಪರ್ಯಂತವೂ ನಿನ್ನಲ್ಲಿಯೇ ನೆಟ್ಟ ಮನಸ್ಸುಳ್ಳವನಾಗುವಂತೆ ನನಗೆ ರೂಪವನ್ನು ಅನುಗ್ರಹಿಸು. ನಿನಗೆ ನಮಸ್ಕಾರವು!"

೪೦. ಇಂತು ಭಕ್ತಿಯುಕ್ತವಾಗಿ ಸುಂದರನಿಂದ ಸ್ತುತಿಸಲ್ಪಟ್ಟ ವಿಷ್ಣು ಚಕ್ರವು ಹಾಗೆಯೇ ಆಗಲೆಂದು ತತ್‌ಕ್ಷಣವೇ ಆ ಗಂಧರ್ವಪತಿಯನ್ನು ಅಂತೇ ಆಗಲೆಂದು ಅನುಗ್ರಹಿಸಿತು.

೪೧. ಬಳಿಕ ಸುಂದರನು ಆ ಚಕ್ರಾಯುಧದ ಅಪ್ಪಣೆಯನ್ನು ಪಡೆದು ಬ್ರಾಹ್ಮಣೋತ್ತಮನಾದ ಪದ್ಮನಾಭನಿಗೆ ಪ್ರಣಾಮವನ್ನು ಮಾಡಿ ಆತನ ಅನುಜ್ಞೆಯನ್ನೂ ಹೊಂದಿ ಸ್ವರ್ಗಲೋಕವನ್ನು ಕುರಿತು ತೆರಳಿದನು.

೪೨. ಇಂತು ಸುಂದರನು ಸ್ವರ್ಗಲೋಕಕ್ಕೆ ಪ್ರಯಾಣಮಾಡಲು ಮುನೀಂದ್ರನಾದ ಪದ್ಮನಾಭನು ಚಕ್ರಾಯುಧವನ್ನು ಪ್ರಾರ್ಥಿಸಿದನು. "ವಿಷ್ಣುವಿನ ಆಯುಧಮುಖ್ಯವಾದ ಓ ಚಕ್ರದೇವ! ನಿನಗೆ ನಮಸ್ಕರಿಸುವೆನು!

೪೩. ಮಹಾದೈತ್ಯರನ್ನು ನಿಗ್ರಹಿಸುವ ಚಕ್ರಾಯುಧವಾದ ನಿನಗೆ ನಮ

ತ್ವತ್ಸನ್ನಿಧಾನಾತ್ಸರ್ವೇಷಾಂ ಸ್ನಾತಾನಾಂ ಪಾಪಿನಾಮಿಹ ।
ಪಾಪನಾಶಂ ಕುರುಷ್ವ ತ್ವಂ ಮೋಕ್ಷಂ ಚ ಕುರು ಶಾಶ್ವತಂ ॥ ೪೪ ॥
ಚಕ್ರತೀರ್ಥಮಿತಿ ಖ್ಯಾತಿಂ ಲೋಕೇಽಸ್ಯ ಪರಿಕಲ್ಪಯ ।
ತ್ವತ್ಸನ್ನಿಧಾನಾದತ್ರತ್ಯಮುನೀನಾಂ ಭಯನಾಶನಂ ॥ ೪೫ ॥
ಇತಃ ಪರಂ ಭವತ್ವಾರ್ಯ ಚಕ್ರಾಯುಧ ನಮೋಽಸ್ತು ತೇ ।
ಭೂತಪ್ರೇತಪಿಶಾಚೇಭ್ಯೋ ಭಯಂ ಮಾ ಭವತು ಪ್ರಭೋ ॥ ೪೬ ॥
ಇತಿ ಸಂಪ್ರಾರ್ಥಿತಂ ಚಕ್ರಂ ಪದ್ಮನಾಭೇನ ಯೋಗಿನಾ ।
ತಥೈವಾಸ್ತ್ವಿತಿ ಸಂಭಾಷ್ಯ ತಸ್ಮಿಂಸ್ತೀರ್ಥೇ ತಿರೋಹಿತಂ ॥ ೪೭ ॥

ಶ್ರೀ ಸೂತ ಉವಾಚ :—

ಏವಂ ವಃ ಕಥಿತೋ ವಿಪ್ರಾ ರಾಕ್ಷಸಸ್ಯೋದ್ಭವೋ ಮಯಾ ।
ಮಾಹಾತ್ಮ್ಯಂ ಚಕ್ರತೀರ್ಥಸ್ಯ ಕಥಿತಂ ಚ ಮಲಾಪಹಂ ॥ ೪೮ ॥

---

ಸ್ಕಾರವನ್ನು ಮಾಡುವೆನು. ನಿರ್ಮಲವೂ, ಶುಭವೂ ಆದ ಈ ಚಕ್ರತೀರ್ಥದಲ್ಲಿ ನೀನು ನಿನ್ನ ಸಾನ್ನಿಧ್ಯವನ್ನುಂಟುಮಾಡು.

೪೪. ನಿನ್ನ ಸನ್ನಿಧಾನ ವಿಶೇಷದಿಂದ ಇಲ್ಲಿ ಸ್ನಾನಮಾಡುವ ಸಕಲ ಪಾಪಿಗಳಿಗೂ ಪಾತಕಗಳನ್ನು ನಾಶಗೊಳಿಸಿ ಶಾಶ್ವತವಾದ ಮೋಕ್ಷವು ಸಿಕ್ಕುವಂತೆ ಮಾಡು.

೪೫–೪೬. ಇದಕ್ಕೆ ಭೂಮಂಡಲದಲ್ಲಿ ಚಕ್ರತೀರ್ಥವೆಂಬ ಹೆಸರಿನಿಂದ ಪ್ರಖ್ಯಾತಿಯನ್ನುಂಟುಮಾಡು. ನಿನ್ನ ಸನ್ನಿಧಾನದಿಂದ ಇಲ್ಲಿರುವ ಸಕಲ ಮಹರ್ಷಿಗಳಿಗೂ ಭಯಗಳನ್ನು ನಾಶಗೊಳಿಸು. ಲೋಕಪೂಜ್ಯವಾದ ಚಕ್ರಾಯುಧವೆ! ನಿನಗೆ ನಮಸ್ಕಾರವನ್ನು ಮಾಡುವೆನು. ಸ್ವಾಮಿಯೆ! ಈ ಪ್ರದೇಶದಲ್ಲಿ ಭೂತಗಳು, ಪ್ರೇತಗಳು, ಪಿಶಾಚಗಳು ಇವೇ ಮುಂತಾದ ದುಷ್ಟಸತ್ವಗಳಿಂದ ಎಂದಿಗೂ ಭಯವುಂಟಾಗದಿರಲಿ.''

೪೭. ಇಂತು ಮಹಾಯೋಗಿಯಾದ ಪದ್ಮನಾಭನಿಂದ ಸ್ತೋತ್ರಮಾಡಲ್ಪಟ್ಟ ಆ ಚಕ್ರವು ಹಾಗೆಯೇ ಆಗಲೆಂದು ಅನುಗ್ರಹಿಸಿ ಆ ತೀರ್ಥದಲ್ಲಿ ಅಂತರ್ಧಾನವನ್ನು ಹೊಂದಿತು.

೪೮. ಸೂತನು ಹೇಳುತ್ತಾನೆ:—ಎಲೈ ಬ್ರಾಹ್ಮಣರಿರಾ! ಇಂತು ರಾಕ್ಷಸನ ಉದ್ಭವದ ಕಾರಣವನ್ನು ನಿಮಗೆ ಹೇಳಿರುವೆನು. ಕೇಳುವವರ ಸಕಲ ಕಲ್ಮಷಗಳನ್ನೂ ನಾಶಮಾಡುವ ಚಕ್ರತೀರ್ಥದ ಮಹಾತ್ಮ್ಯವೂ ನಿರೂಪಿತವಾಗಿರುವುದು.

ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ಮಾನವೋ ಭುವಿ ॥ ೪೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀ
ವರಾಹ ಸಂವಾದೇ "ಚಕ್ರತೀರ್ಥಮಹಿಮಾನುವರ್ಣನಂ" ನಾಮ
ಚತುರ್ವಿಂಶತಿತಮೋಽಧ್ಯಾಯಃ

---

೪೯. ಈ ಚರಿತ್ರೆಯನ್ನು ಕೇಳುವುದರಿಂದ ಮನುಷ್ಯನು ಇಹಲೋಕದಲ್ಲಿ ಸಕಲ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೆಂಕಟಾಚಲ
ಮಾಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ಚಕ್ರತೀರ್ಥಮಹಿಮಾನುವರ್ಣನ"ವೆಂಬ
ಇಪ್ಪತ್ತುನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚವಿಂಶೋऽಧ್ಯಾಯಃ

## ಜಾಬಾಲಿತೀರ್ಥಮಹಿಮಾನುವರ್ಣನಂ

ಶ್ರೀ ಸೂತ ಉವಾಚ :—

ಭೋ ಭೋಸ್ತಪೋಧನಾಸ್ಸರ್ವೇ ನೈಮಿಷಾರಣ್ಯವಾಸಿನಃ ।
ವೇಂಕಟಾದ್ರೌ ಮಹಾಪುಣ್ಯೇ ಸರ್ವಪಾತಕನಾಶನೇ ॥ ೧ ॥
ತತೋ ಜಾಬಾಲಿತೀರ್ಥಸ್ಯ ಮಾಹಾತ್ಮ್ಯಂ ವರ್ಣಯಾಮ್ಯಹಂ ।
ದುರಾಚಾರಾಭಿಧೋ ಯತ್ರ ಸ್ನಾತ್ವಾ ಮುಕ್ತೋऽಭವದ್ದ್ವಿಜಾಃ ॥ ೨ ॥

ಮುನಯ ಊಚುಃ :—

ದುರಾಚಾರಾಭಿಧಃ ಕೋऽಸೌ ಸೂತ ತತ್ವಾರ್ಥಕೋವಿದ ।
ಕಿಂಚ ಪಾಪಂ ಕೃತಂ ತೇನ ದುರಾಚಾರೇಣ ವೈ ಮುನೇ ॥ ೩ ॥
ಕಥಂ ವಾ ಪಾತಕಾನ್ಮುಕ್ತಸ್ತೀರ್ಥೇऽಸ್ಮಿನ್ಸ್ನಾನವೈಭವಾತ್ ।
ಏತಚ್ಛುಶ್ರೂಷಮಾಣಾನಾಂ ವಿಸ್ತರಾದ್ವದ ನೋ ಮುನೇ ॥ ೪ ॥

ಶ್ರೀ ಸೂತ ಉವಾಚ :—

ಮುನಯಃ ಶ್ರೂಯತಾಂ ತಸ್ಯ ದುರಾಚಾರಸ್ಯ ಪಾತಕಂ ।
ಜಾಬಾಲಿತೀರ್ಥಸ್ನಾನೇನ ಯಥಾ ಮುಕ್ತಶ್ಚ ಪಾತಕಾತ್ ॥ ೫ ॥

---

## ಕನ್ನಡದ ಅನುವಾದ

### ಜಾಬಾಲಿತೀರ್ಥಮಹಿಮಾನುವರ್ಣನ

೧-೨. ಸೂತನು ಹೇಳುತ್ತಾನೆ:— ಎಲೈ ನೈಮಿಷಾರಣ್ಯನಿವಾಸಿಗಳಾದ ತಪೋಧನರಿರಾ! ಮಹಾಪುಣ್ಯಪ್ರದವೂ, ಸಕಲ ಪಾತಕನಾಶನವೂ ಆಗಿ ವೇಂಕಟಾಚಲದಲ್ಲಿ ನೆಲಸಿರುವ ಜಾಬಾಲಿತೀರ್ಥದ ಮಾಹಾತ್ಮ್ಯೆಯನ್ನು ಇದೀಗ ನಿಮಗೆ ವಿಸ್ತರಿಸಿ ಹೇಳುವೆನು. ಆ ತೀರ್ಥದಲ್ಲಿ ದುರಾಚಾರನೆಂಬುವನು ಸ್ನಾನ ವನ್ನು ಮಾಡಿ ಮೋಕ್ಷವನ್ನು ಪಡೆದನು.

೩. ಮುನಿಗಳು ಕೇಳುತ್ತಾರೆ:—ಸಕಲ ತತ್ವಾರ್ಥಗಳಲ್ಲಿಯೂ ನಿಪುಣ ನಾದ ಸೂತನೆ! ದುರಾಚಾರನೆಂಬವನು ಯಾರು? ಮುನಿಯೆ! ಆ ದುರಾ ಚಾರನಿಂದ ಯಾವ ಪಾಪವು ಮಾಡಲ್ಪಟ್ಟಿತು?

೪. ಅವನು ಈ ತೀರ್ಥದಲ್ಲಿ ಸ್ನಾನವನ್ನು ಮಾಡಿದ ಪುಣ್ಯದಿಂದ ಪಾತಕ ಗಳನ್ನು ಹೇಗೆ ಕಳೆದುಕೊಂಡನು? ಇದನ್ನು ಕೇಳಲು ಕುತೂಹಲವುಳ್ಳವರಾಗಿ ರುವ ನಮಗೆ ವಿಸ್ತಾರವಾಗಿ ಹೇಳುವವನಾಗು.

೫. ಸೂತನು ಹೇಳುತ್ತಾನೆ:—ಎಲೈ ಮಹರ್ಷಿಗಳೆ! ಆ ದುರಾಚಾರ ನೆಂಬವನು ಮಾಡಿದ ಪಾತಕವನ್ನೂ ಅವನು ಜಾಬಾಲಿತೀರ್ಥದ ಸ್ನಾನದ ಫಲವಾಗಿ ತನ್ನ ಪಾಪದಿಂದ ಮೋಕ್ಷವನ್ನು ಪಡೆದ ವಿಧಾನವನ್ನೂ ಕೇಳಿರಿ.

ದುರಾಚಾರಾಭಿಧೋ ವಿಪ್ರಾಃ ಕಾವೇರೀತೀರಮಾಶ್ರಿತಃ ।
ಕಂಚಿದಾಸ್ತೇ ದ್ವಿಜಃ ಪಾಪೀ ಕ್ರೂರಕರ್ಮರತಃ ಸದಾ ॥ ೬ ॥
ಬ್ರಹ್ಮಘ್ನೈಶ್ಚ ಸುರಾಪೈಶ್ಚ ಸ್ತೇಯಿಭಿರ್ಗುರುತಲ್ಪಗೈಃ ।
ಸದಾ ಸಂಸರ್ಗದುಷ್ಟೋಽಸೌ ತೈಃ ಸಾಕಂ ನ್ಯವಸದ್ದ್ವಿಜಾಃ ॥ ೭ ॥
ಮಹಾಪಾತಕಸಂಸರ್ಗದೋಷೇಣಾಸ್ಯ ದ್ವಿಜಸ್ಯ ವೈ ।
ಬ್ರಾಹ್ಮಣ್ಯಂ ಸಕಲಂ ನಷ್ಟಂ ನಿಃಶೇಷೇಣ ದ್ವಿಜೋತ್ತಮಾಃ ॥ ೮ ॥
ಮಹಾಪಾತಕಿಭಿಸ್ಸಾರ್ಧಂ ದಿನಮೇಕಂ ತು ಯೋ ದ್ವಿಜಃ ।
ನಿವಸೇತ್ಸಾದರಂ ತಸ್ಯ ತತ್ಕ್ಷಣಾದ್ವೈ ದ್ವಿಜನ್ಮನಃ ॥ ೯ ॥
ಬ್ರಾಹ್ಮಣಸ್ಯ ತು ಚೈಕಾಂಶೋ ನಶ್ಯತ್ಯೇವ ನ ಸಂಶಯಃ ।
ದ್ವಿದಿನಂ ಸೇವನಾತ್ಸ್ಪರ್ಶಾದ್ದರ್ಶನಾಚ್ಛಯನಾತ್ತಥಾ ॥ ೧೦ ॥
ಭೋಜನಾತ್ಸಹಪಙ್ಕ್ತೌ ಚ ಮಹಾಪಾತಕಿಭಿರ್ದ್ವಿಜಾಃ ।
ದ್ವಿತೀಯ ಭಾಗೋ ನಶ್ಯೇತ ಬ್ರಾಹ್ಮಣಸ್ಯ ನ ಸಂಶಯಃ ॥ ೧೧ ॥
ತ್ರಿದಿನಾಚ್ಚ ತೃತೀಯಾಂಶೋ ನಶ್ಯತ್ಯೇವ ನ ಸಂಶಯಃ ।
ಚತುರ್ದಿನಾಚ್ಚತುರ್ಥಾಂಶೋ ವಿಲಯಂ ಯಾತಿ ಹಿ ಧ್ರುವಂ ॥ ೧೨ ॥

---

೬. ದುರಾಚಾರನೆಂಬ ಹೆಸರಿನ ಪಾಪಿಯೂ ಕ್ರೂರಕರ್ಮನಿರತನೂ ಆದ ಬ್ರಾಹ್ಮಣನೊಬ್ಬನು ಕಾವೇರೀ ನದಿಯ ತೀರಪ್ರದೇಶದಲ್ಲಿ ವಾಸಮಾಡುತ್ತಿದ್ದನು.

೭. ಅವನು ಬ್ರಹ್ಮಘಾತಕರೂ, ಸುರಾಪಾಯಿಗಳೂ, ಕಳ್ಳರೂ, ಗುರುತಲ್ಪ ಗಾಮಿಗಳೂ ಆದವರೊಡನೆ ಸಹವಾಸವನ್ನು ಮಾಡಿ ದುಷ್ಟನಾಗಿ ಅವರೊಡನೆಯೇ ಯಾವಾಗಲೂ ವ್ಯವಹರಿಸುತ್ತಿದ್ದನು.

೮. ಎಲೈ ಬ್ರಾಹ್ಮಣೋತ್ತಮರಿರಾ! ಆ ಮಹಾಪಾತಕಿಗಳ ಸಹವಾಸದ ದೋಷದಿಂದ ಆ ಬ್ರಾಹ್ಮಣನ ದ್ವಿಜತ್ವವೆಲ್ಲವೂ ನಿಶ್ಶೇಷವಾಗಿ ನಾಶವಾಯಿತು.

೯-೧೧. ಯಾವ ಬ್ರಾಹ್ಮಣನಾದರೂ ಮಹಾಪಾತಕಿಗಳೊಡನೆ ಒಂದು ದಿನ ಮಾತ್ರವಿದ್ದರೂ ಆದರಸಹಿತವಾದ ಸಹವಾಸದಿಂದ ತತ್‌ಕ್ಷಣದಲ್ಲಿಯೇ ದ್ವಿಜನ್ಮನಾದ ಆ ಬ್ರಾಹ್ಮಣನ ತೇಜಸ್ಸಿನಲ್ಲಿ ನಾಲ್ಕನೆಯ ಒಂದು ಭಾಗವು ನಷ್ಟ ವಾಗುವುದೆಂಬುದರಲ್ಲಿ ಸಂಶಯವೇ ಇಲ್ಲವು. ಎಲೈ ಬ್ರಾಹ್ಮಣರಿರಾ! ಮಹಾ ಪಾಪಿಗಳೊಡನೆ ಎರಡು ದಿವಸಗಳವರೆಗೂ ಸೇವೆ, ಸ್ಪರ್ಶ, ದರ್ಶನ, ಸಹಶಯನ, ಸಹಪಙ್ಕ್ತಿಭೋಜನ ಮುಂತಾದುವುಗಳನ್ನು ಮಾಡುವುದರಿಂದ ಬ್ರಾಹ್ಮಣ ನಾದವನ ಬ್ರಾಹ್ಮಣ್ಯದ ಎರಡನೆಯ ಅಂಶವು ನಷ್ಟವಾಗುವುದು. ಇದರಲ್ಲಿ ಯಾವ ಸಂದೇಹವೂ ಇರುವುದಿಲ್ಲ.

೧೨. ಮೂರುದಿನದ ಸಹವಾಸದಿಂದ ನಿಸ್ಸಂಶಯವಾಗಿಯೂ ಬ್ರಾಹ್ಮಣ್ಯ

ಅತಃ ಪರಂ ಚ ತೈಃ ಸಾಕಂ ಶಯನಾಸನಭೋಜನೈಃ ।
ತತ್ತುಲ್ಯಪಾತಕೀ ಭೂಯಾನ್ಮಹಾಪಾತಕಿಸಂಗವಾನ್ ॥ ೧೩ ॥
ತೇನ ಬ್ರಾಹ್ಮಣ್ಯಹೀನೋಽಯಂ ದುರಾಚಾರಾಭಿಧೋ ದ್ವಿಜಃ ।
ಗ್ರಸ್ತೋಽಭವದ್ಭೀಷಣೇನ ವ್ಯಾಲೇನೇವ ಬಲೀಯಸಾ ॥ ೧೪ ॥
ಅಸೌ ಪರವಶಸ್ತೇನ ವೇತಾಲೇನಾತಿಪೀಡಿತಃ ।
ದೇಶಾದ್ದೇಶಂ ಭ್ರಮನ್ವಿಪ್ರೋ ವನಾಚ್ಚೈವ ವನಾಂತರಂ ॥ ೧೫ ॥
ಪೂರ್ವಪುಣ್ಯವಿಪಾಕೇನ ದೈವಯೋಗೇನ ಸ ದ್ವಿಜಃ
ವೇಂಕಟಾದ್ರಿಂ ಮಹಾಪುಣ್ಯಂ ಸರ್ವಪಾತಕನಾಶನಂ ॥ ೧೬ ॥
ಅನುದ್ರುತಃ ಪಿಶಾಚೇನ ವೇತಾಲೇನ ದ್ವಿಜೋ ಯಯೌ ।
ನ್ಯಮಜ್ಜಯತ್ಸವೇತಾಲೋ ಮಹಾಪಾತಕನಾಶನೇ ॥ ೧೭ ॥
ಜಾಬಾಲಿತೀರ್ಥೇ ವಿಪ್ರೇಂದ್ರಾ ಮಹಾಪಾತಕಿಸಂಗಿನಂ ।
ಉದತಿಷ್ಠತ್ಕ್ಷಣಾದೇವ ವೇತಾಲೇನ ವಿಮೋಚಿತಃ ॥ ೧೮ ॥

---

ದಲ್ಲಿ ಮುಕ್ಕಾಲುಭಾಗವು ನಾಶವನ್ನು ಹೊಂದುವುದು. ನಾಲ್ಕನೆಯ ದಿನದ ಸಹವಾಸದಿಂದ ನಾಲ್ಕನೆಯ ಅಂಶವೂ ಕೂಡ ಶಾಶ್ವತವಾಗಿ ನಷ್ಟವಾಗುವುದು.

೧೩. ಆಮೇಲೂ ಸಹ ಮಹಾಪಾತಕಿಗಳೊಡನೆ ಶಯನ, ಆಸನ, ಭೋಜನಗಳನ್ನು ಮಾಡುವುದರಿಂದ ಮನುಷ್ಯನು ಅವರಿಗೆ ಸಮಾನವಾದ ಪಾತಕಿಯೆನಿಸಿಕೊಳ್ಳುವನು.

೧೪. ಈ ರೀತಿಯಾದ ವ್ಯವಹಾರದಿಂದ ದುರಾಚಾರನೆಂಬ ದ್ವಿಜನು ತನ್ನ ಬ್ರಾಹ್ಮಣ್ಯವನ್ನೆಲ್ಲ ಕಳೆದುಕೊಂಡು ಬಲಿಷ್ಠವಾದ ಕಾಲಸರ್ಪದಂತೆ ತೋರುವ ಭಯಂಕರನಾದ ಭೇತಾಳನಿಗೆ ಸಿಕ್ಕಿಕೊಂಡನು.

೧೫–೧೮. ಆ ಬ್ರಾಹ್ಮಣನು ದುಃಖಪರವಶನಾಗಿ ಭೇತಾಳನ ಅತಿಯಾದ ಹಿಂಸೆಗೊಳಗಾಗಿ ದೇಶದಿಂದ ದೇಶವನ್ನೂ, ಅರಣ್ಯದಿಂದ ಅರಣ್ಯವನ್ನೂ ಸುತ್ತಾಡುತ್ತ ಸ್ವಲ್ಪವಾದ ತನ್ನ ಪೂರ್ವಪುಣ್ಯದ ಫಲವಾಗಿಯೂ, ದೈವಾನುಗ್ರಹ ಯೋಗವೊದಗಿದ್ದರಿಂದಲೂ, ಸಕಲಪಾತಕಗಳನ್ನೂ ನಾಶಗೊಳಿಸುವುದೂ ಮಹಾಪುಣ್ಯಪ್ರದವೆನಿಸಿದುದೂ ಆದ ವೇಂಕಟಾಚಲವನ್ನು ಪಿಶಾಚಿಯಾದ ಭೇತಾಳನು ಬೆನ್ನಟ್ಟುತ್ತಿರುವಂತೆಯೇ ಬಂದು ಸೇರಿದನು. ಎಲೈ ಬ್ರಾಹ್ಮಣೋತ್ತಮರಿರಾ! ಆ ಭೇತಾಳನು ಮಹಾಪಾತಕಿಗಳ ಸಹವಾಸದಿಂದ ದುಷ್ಟನಾದ ಆ ಬ್ರಾಹ್ಮಣನನ್ನು ಸಕಲ ಪಾತಕಗಳನ್ನೂ ನಿರ್ಮೂಲಗೊಳಿಸುವ ಜಾಬಾಲಿತೀರ್ಥದಲ್ಲಿ ಮುಳುಗಿಸಿತು. ಅವನು ತತ್‌ಕ್ಷಣದಲ್ಲಿಯೇ ಭೇತಾಳನ ಬಾಧೆಯಿಂದ ಬಿಡುಗಡೆಯನ್ನು ಹೊಂದಿ ಆ ಸರೋವರದಿಂದ ಮೇಲಕ್ಕೆದ್ದು ಬಂದನು.

ಉತ್ಥಿತೋಽಸೌ ದ್ವಿಜೋ ವಿಪ್ರಾಸ್ತಸ್ಮಾತ್ತೀರ್ಥಾತ್ತು ಪಾವನಾತ್ ।
ಸ್ವಸ್ಥೋ ವ್ಯಚಿಂತಯತ್ಕೋಽಯಂ ಸ್ವರ್ಣಮುಖ್ಯಾಃ ಸಮೀಪತಃ ॥ ೧೯ ॥
ಕಥಂ ಮಯಾಗತಮಹೋ ಕಾವೇರೀತೀರವಾಸಿನಾ ।
ಇತಿ ಚಿಂತಾಕುಲಃ ಸೋಽಯಂ ಜಾಬಾಲೇಸ್ತೀರ್ಥಮುತ್ತಮಂ ॥ ೨೦ ॥
ಜಾಬಾಲಿಂ ಚ ಮಹಾತ್ಮಾನಂ ಯೋಗೀಂದ್ರವರಮುತ್ತಮಂ ।
ಸಮಾಗಮ್ಯ ಪ್ರಣಮ್ಯಾಸೌ ದುರಾಚಾರೋಽಭ್ಯಭಾಷತ ॥ ೨೧ ॥
ನ ಜಾನೇ ಭಗವನ್ವಿಪ್ರ ಪರ್ವತೋಽಯಂ ವದಾಧುನಾ ।
ಕಾವೇರೀತೀರನಿಲಯೋ ದುರಾಚಾರಾಭಿಧೋ ಹ್ಯಹಂ ॥ ೨೨ ॥
ಕೃಪಯಾ ಬ್ರೂಹಿ ಮೇ ಬ್ರಹ್ಮನ್ಮಯಾತ್ರ ಕಥಮಾಗತಂ ।
ಇತಿ ಪೃಷ್ಟೋ ಮುನಿಸ್ತೇನ ದುರಾಚಾರೇಣ ಸುವ್ರತಃ ॥ ೨೩ ॥
ಧ್ಯಾತ್ವಾ ಮುಹೂರ್ತಮಪದದ್ದುರಾಚಾರಂ ಕೃಪಾನಿಧಿಃ ॥ ೨೪ ॥

ಜಾಬಾಲಿರುವಾಚ :—

ಮಹಾಪಾತಕಿಸಂಸರ್ಗಾದ್ದುರಾಚಾರಸ್ಯ ತೇ ಪುರಾ ।
ಬ್ರಾಹ್ಮಣ್ಯಂ ನಷ್ಟಮಭವದ್ವೇತಾಲಸ್ತ್ವಂ ತತೋಽಗ್ರಹೀತ್ ॥ ೨೫ ॥

---

೧೯. ಎಲೈ ಬ್ರಾಹ್ಮಣರಿರಾ! ಆ ದ್ವಿಜನು ಪರಮಪವಿತ್ರವಾದ ಆ ತೀರ್ಥದಿಂದ ಹೊರಕ್ಕೆ ಬಂದು ಸ್ವಸ್ಥಚಿತ್ತನಾಗಿ ಈ ರೀತಿ ಚಿಂತಿಸತೊಡಗಿದನು :— "ಸ್ವರ್ಣಮುಖಿಯ ಸಮೀಪದಲ್ಲಿರುವ ಈ ಪ್ರದೇಶವಾವುದು ?

೨೦–೨೧. ಕಾವೇರೀ ನದಿಯ ತೀರದಲ್ಲಿ ವಾಸಿಸುತ್ತಿದ್ದ ನಾನು ಇಲ್ಲಿಗೆ ಬಂದಿರುವುದು ಆಶ್ಚರ್ಯವೇ ಸರಿ." ಇಂತು ಚಿಂತೆಯಿಂದ ವ್ಯಾಕುಲಗೊಂಡವನಾಗಿ ಆ ದುರಾಚಾರನು ಉತ್ತಮವಾದ ಜಬಾಲಿ ತೀರ್ಥವನ್ನೂ ಯೋಗೀಂದ್ರರಲ್ಲಿ ಅಗ್ರಗಣ್ಯನೂ, ಮಹಾತ್ಮನೂ ಆದ ಜಾಬಾಲಿಮಹರ್ಷಿಯನ್ನೂ ಕಂಡು ಆತನ ಸಮೀಪಕ್ಕೆ ಹೋಗಿ ಪ್ರಣಾಮವನ್ನು ಮಾಡಿ ಹೇಳತೊಡಗಿದನು :—

೨೨. "ಪೂಜ್ಯನಾದ ಓ ಬ್ರಾಹ್ಮಣೋತ್ತಮನೆ! ಈ ಪರ್ವತವು ಯಾವುದೆಂಬುದನ್ನು ನಾನು ತಿಳಿಯೆನು. ದಯವಿಟ್ಟು ತಿಳಿಸು. ನಾನು ಕಾವೇರೀ ತೀರವಾಸಿಯಾದ ದುರಾಚಾರನೆಂಬುವನು.

೨೩–೨೪. ಎಲೈ ವಿಪ್ರಶ್ರೇಷ್ಠನೆ! ನಾನು ಇಲ್ಲಿಗೆ ಹೇಗೆ ಬಂದೆನೆಂಬುದನ್ನು ಕೃಪೆಯಿಂದ ಹೇಳುವವನಾಗು." ಇಂತೆಂದು ಆ ದುರಾಚಾರನಿಂದ ಕೇಳಲ್ಪಟ್ಟ ವ್ರತಚಾರಿಯೂ, ಕರುಣಾಸಮುದ್ರನೂ ಆದ ಆ ಮುನಿಯು ಮುಹೂರ್ತಕಾಲ ಧ್ಯಾನಾಸಕ್ತನಾಗಿದ್ದು ಆ ಬಳಿಕ ಹೇಳತೊಡಗಿದನು :—

೨೫. ಜಾಬಾಲಿಯು ಹೇಳುತ್ತಾನೆ:—"ಅಯ್ಯಾ! ಮಹಾಪಾತಕಗಳನ್ನು ಮಾಡುತ್ತಿದ್ದವರೊಡನೆ ಸೇರಿಕೊಂಡು ದುರಾಚಾರಗಳಲ್ಲಿ ನಿರತನಾಗಿದ್ದುದರಿಂದ

ತೇನಾವಿಷ್ಟಸ್ತ್ವಮಾಯಾತೋ ವಿವಶೋಽತ್ರ ವಿಮೂಢಧೀಃ ।
ನ್ಯಮಜ್ಜಯತ್ತ್ವಾಂ ವೇತಾಲಸ್ತೀರ್ಥೇಽಸ್ಮಿನ್ನತಿಪಾವನೇ ॥ ೨೬ ॥
ಅತ್ರ ಮಜ್ಜನಮಾತ್ರೇಣ ವಿಮುಕ್ತಃ ಪಾತಕಾದ್ಭವಾನ್ ।
ಜಾಬಾಲಿತೀರ್ಥೇ ಯೇ ಸ್ನಾನಂ ಪುಣ್ಯಂ ಕುರ್ವಂತಿ ಮಾನವಾಃ ॥ ೨೭ ॥
ತೇಷಾಂ ನಶ್ಯಂತಿ ವೈ ಸತ್ಯಂ ಪಂಚಪಾತಕಸಂಚಯಾಃ ।
ಸತ್ಕರ್ಮಸಾಧನೇ ಪುಣ್ಯತೀರ್ಥೇಽಸ್ಮಿನ್ಸ್ನಾನಮಾತ್ರತಃ ॥ ೨೮ ॥
ಮಹಾಪಾತಕಿಸಂಸರ್ಗದೋಷಸ್ತೇ ವಿಲಯಂ ಗತಃ ।
ತ್ವಾಮುಗ್ರಹೀದ್ಯೋ ವೇತಾಲಃ ಪುರಾಽಯಂ ಬ್ರಾಹ್ಮಣೋಽಭವತ್ ॥
ಮೃತೇಽಹನಿ ಪಿತೃಶ್ರಾದ್ಧಂ ನಾಕರೋತ್ಪಾರ್ವಣೇನ ವೈ ।
ತೇನ ಸ್ವಪಿತೃಭಿಶ್ಶಪ್ತೋ ವೇತಾಲತ್ವಮುಗಾದಯಂ ॥ ೩೦ ॥
ಸೋಽಪಿ ಜಾಬಾಲಿತೀರ್ಥಸ್ಯ ಜಲೇ ಸ್ನಾನಪ್ರಭಾವತಃ ।
ವೇತಾಲತ್ವಂ ವಿಹಾಯೈವ ವಿಷ್ಣುಲೋಕಮವಾಪ್ತವಾನ್ ॥ ೩೧ ॥

---

ನಿನ್ನ ಬ್ರಾಹ್ಮಣ್ಯವೆಲ್ಲವೂ ನಷ್ಟವಾಯಿತು. ಆದುದರಿಂದ ನಿನ್ನನ್ನು ಭೇತಾಳನು ಹಿಡಿದನು.

೨೬. ಆ ಪಿಶಾಚಿಯ ಆವೇಶವನ್ನು ತಾಳಿ ನೀನು ಪರವಶನೂ ಬುದ್ಧಿ ಹೀನನೂ ಆಗಿ ಇಲ್ಲಿಗೆ ಬಂದೆ. ಆ ಭೇತಾಳನೇ ನಿನ್ನನ್ನು ಪರಮಪಾವನವಾದ ಈ ತೀರ್ಥದಲ್ಲಿ ಮುಳುಗಿಸಿದನು.

೨೭–೨೯. ಇಲ್ಲಿ ಸ್ನಾನಮಾಡಿದ ಮಾತ್ರದಿಂದ ನೀನು ಸಕಲ ಪಾಪಗ ಳಿಂದಲೂ ವಿಮುಕ್ತನಾದೆ. ಯಾವ ಮಾನವನು ಪುಣ್ಯಪ್ರದವಾದ ಜಾಬಾಲಿ ತೀರ್ಥದಲ್ಲಿ ಸ್ನಾನವನ್ನು ಮಾಡುವರೊ, ಅವರ ಮಹಾಪಾತಕಗಳ ಸಮೂಹಗ ಳೆಲ್ಲವೂ ನಾಶವಾಗುವುವು. ಸಕಲ ಸತ್ಕರ್ಮಗಳಿಗೂ ಸಾಧನಭೂತವಾದ ಈ ಪುಣ್ಯ ತೀರ್ಥದಲ್ಲಿ ಸ್ನಾನಮಾಡಿದ ಮಾತ್ರದಿಂದ ನೀನು ಮಾಡಿದ ಮಹಾಪಾತಕಿಗಳ ಸ್ನೇಹವೆಂಬ ದೋಷವು ಲಯವನ್ನು ಹೊಂದಿತು. ನಿನ್ನನ್ನು ಹಿಡಿದ ಭೇತಾಳನು ಪೂರ್ವದಲ್ಲಿ ಒಬ್ಬ ಬ್ರಾಹ್ಮಣನಾಗಿದ್ದನು.

೩೦. ಅವನು ತಂದೆಯು ಮೃತನಾದ ತಿಥಿಯ ದಿನದಲ್ಲಿ ಪಾರ್ವಣದಾನ ರೂಪವಾದ ಪಿತೃಶ್ರಾದ್ಧವನ್ನು ಮಾಡಲಿಲ್ಲ. ಆ ಕಾರಣದಿಂದ ಪಿತೃದೇವತೆಗಳ ಶಾಪಕ್ಕೆ ಈಡಾಗಿ ಭೇತಾಳನ ರೂಪವನ್ನು ಹೊಂದಿದನು.

೩೧. ಅವನೂ ಸಹ ನಿನ್ನೊಡನೆ ಜಾಬಾಲಿತೀರ್ಥದ ಜಲದಲ್ಲಿ ಸ್ನಾನವನ್ನು ಮಾಡಿದ ಪ್ರಭಾವದಿಂದ ಭೇತಾಳತ್ವವನ್ನು ಕಳೆದುಕೊಂಡು ವಿಷ್ಣುಲೋಕವನ್ನು ಸೇರುವವನಾದನು.

ನ ಕುರ್ಯಾದ್ಯೋ ನರಃ ಶ್ರಾದ್ಧಂ ಮಾತಾಪಿತ್ರೋರ್ಮೃತೇಽಹನಿ ।
ವೇತಾಲತ್ವಮವಾಪ್ಯಾಶು ಪಶ್ಚಾನ್ನರಕಮಶ್ನುತೇ ॥ ೩೨ ॥

ಶ್ರೀ ಸೂತ ಉವಾಚ :—

ದುರಾಚಾರೋ ಮಹಾಪಾಪೀ ತೀರ್ಥೇಽಸ್ಮಿನ್ಸ್ನಾನಮಾತ್ರತಃ ।
ಪ್ರಾಪ್ತವಾನ್ವಿಷ್ಣುಲೋಕಂ ವೈ ಪುನರಾವೃತ್ತಿವರ್ಜಿತಂ ॥ ೩೩ ॥
ಏವಂ ವಃ ಕಥಿತಂ ಪುಣ್ಯಂ ದುರಾಚಾರವಿಮೋಕ್ಷಣಂ ।
ತಸ್ಮಾತ್ಪುಣ್ಯತಮಂ ತೀರ್ಥಂ ಸರ್ವಪಾಪಹರಂ ಶುಭಂ ॥ ೩೪ ॥
ಯತ್ರ ಹಿ ಸ್ನಾನಮಾತ್ರೇಣ ದುರಾಚಾರೋ ವಿಮೋಚಿತಃ ।
ಯಾನಿ ನಿಷ್ಕೃತಿಹೀನಾನಿ ಪಾಪಾನ್ಯಪಿ ವಿನಾಶಯೇತ್ ॥ ೩೫ ॥
ಶೂದ್ರೇಣ ಪೂಜಿತಂ ಲಿಂಗಂ ವಿಷ್ಣುಂ ವಾ ಯೋ ನಮೇದ್ದ್ವಿಜಃ ।
ಪ್ರಾಯಶ್ಚಿತ್ತಂ ನ ಸ್ಮೃತಿಷು ತಸ್ಯೋಕ್ತಂ ಪರಮರ್ಷಿಭಿಃ ॥ ೩೬ ॥
ನಶ್ಯೇತ್ತಸ್ಯಾಪಿ ತತ್ಪಾಪಂ ತೀರ್ಥೇ ಜಾಬಾಲಿಸಂಜ್ಞಕೇ ।
ವಿಪ್ರನಿಂದಾಕೃತಾಂ ಚೈವ ಪ್ರಾಯಶ್ಚಿತ್ತಂ ನ ವಿದ್ಯತೇ ॥ ೩೭ ॥

---

೩೨. ಯಾವ ಮನುಷ್ಯನು ತಾಯಿ ತಂದೆಗಳು ಸತ್ತ ತಿಥಿಗಳಲ್ಲಿ ಶ್ರಾದ್ಧಗಳನ್ನು ಮಾಡುವುದಿಲ್ಲವೋ ಅವನು ಭೇತಾಳತ್ವವನ್ನು ಹೊಂದಿ ಮರಣಾನಂತರ ನರಕವನ್ನು ಅನುಭವಿಸುತ್ತಾನೆ.''

೩೩. ಸೂತನು ಹೇಳುತ್ತಾನೆ:—ಇಂತು ಮಹಾಪಾಪಿಯಾದ ದುರಾಚಾರನು ಈ ತೀರ್ಥದಲ್ಲಿ ಸ್ನಾನವನ್ನು ಮಾಡಿದ ಮಾತ್ರದಿಂದಲೇ ಪುನರ್ಜನ್ಮರಹಿತವಾದ ವಿಷ್ಣುಲೋಕವನ್ನು ಪಡೆದನು.

೩೪. ದುರಾಚಾರನ ಪಾಪಮೋಕ್ಷವೆಂಬ ಪುಣ್ಯಚರಿತ್ರೆಯನ್ನು ನಿಮಗೆ ನಿರೂಪಿಸಿರುವೆನು. ಆದುದರಿಂದ ಈ ತೀರ್ಥವು ಪುಣ್ಯತಮವೂ ಕಲ್ಮಷಹರವೂ ಶುಭಪ್ರದವೂ ಆಗಿರುವುದು.

೩೫. ಅದರಲ್ಲಿ ಸ್ನಾನವನ್ನು ಮಾಡಿದ ಮಾತ್ರದಿಂದ ದುರಾಚಾರನು ಭೇತಾಳನ ಹಿಂಸೆಯಿಂದ ಬಿಡುಗಡೆಯನ್ನು ಹೊಂದಿದನು. ಈ ತೀರ್ಥವು ಪ್ರಾಯಶ್ಚಿತ್ತರಹಿತಗಳಾದ ಸಕಲ ಪಾಪಗಳನ್ನೂ ಕೂಡ ನಾಶಗೊಳಿಸುವುದು.

೩೬. ಶೂದ್ರನಿಂದ ಪೂಜಿಸಲ್ಪಟ್ಟ ಶಿವಲಿಂಗಕ್ಕಾಗಲಿ, ವಿಷ್ಣುಮೂರ್ತಿಗಾಗಲಿ ಯಾವ ಬ್ರಾಹ್ಮಣನು ನಮಸ್ಕರಿಸುವನೊ, ಅವನ ಪಾಪಕ್ಕೆ ಯಾವ ಸ್ಮೃತಿಗಳಲ್ಲಿಯೂ ಮಹರ್ಷಿಗಳು ಪ್ರಾಯಶ್ಚಿತ್ತವನ್ನು ಹೇಳಿರುವುದಿಲ್ಲ.

೩೭. ಅಂತಹನ ಪಾಪವೂ ಕೂಡ ಜಾಬಾಲಿತೀರ್ಥದ ಸ್ನಾನದಿಂದ ನಾಶಗೊಳ್ಳುವುದು. ಬ್ರಾಹ್ಮಣರನ್ನು ನಿಂದಿಸುವವರಿಗೂ ಎಲ್ಲಿಯೂ ಯಾವ ಪ್ರಾಯಶ್ಚಿತ್ತವೂ ಕಾಣುವುದಿಲ್ಲ.

ವಿಶ್ವಾಸಘಾತುಕಾನಾಂ ಚ ಕೃತಘ್ನಾನಾಂ ಚ ನಿಷ್ಕೃತಿಃ ।
ಭ್ರಾತೃಭಾರ್ಯಾರತಾನಾಂ ಚ ಪ್ರಾಯಶ್ಚಿತ್ತಂ ನ ವಿದ್ಯತೇ ॥ ೩೮ ॥
ತೇಷಾಂ ಜಾಬಾಲಿತೀರ್ಥೇ ವೈ ಸ್ನಾನಾಚ್ಛುದ್ಧಿರ್ಭವಿಷ್ಯತಿ ।
ಏವಂ ವಃ ಕಥಿತಂ ವಿಪ್ರಾಃ ಜಾಬಾಲೇಸ್ತೀರ್ಥವೈಭವಂ ॥ ೩೯ ॥
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ಮಾನವೋ ಭುವಿ ॥ ೪೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ "ಜಾಬಾಲಿತೀರ್ಥಮಹಿಮಾನುವರ್ಣನಂ" ನಾಮ ಪಂಚವಿಂಶೋಽಧ್ಯಾಯಃ

---

೩೮. ಹಾಗೆಯೇ ವಿಶ್ವಾಸಘಾತಕರಿಗೂ, ಕೃತಘ್ನರಿಗೂ ನಿಷ್ಕೃತಿಯು ಹೇಳಲ್ಪಟ್ಟಿರುವುದಿಲ್ಲ. ಅಂತೆಯೆ ಸಹೋದರ ಸ್ತ್ರೀಸಂಗವನ್ನು ಮಾಡಿದವರಿಗೂ ಪ್ರಾಯಶ್ಚಿತ್ತವು ಇರುವುದಿಲ್ಲ.

೩೯-೪೦. ಅವರೆಲ್ಲರಿಗೂ ಜಾಬಾಲಿತೀರ್ಥದಲ್ಲಿ ಸ್ನಾನಮಾಡುವುದರಿಂದ ಶುದ್ಧಿಯುಂಟಾಗುವುದು. ಎಲೈ ಬ್ರಾಹ್ಮಣರಿರಾ! ಇಂತು ನಿಮಗೆ ಜಾಬಾಲಿ ತೀರ್ಥದ ಮಾಹಾತ್ಮ್ಯೆಯನ್ನು ಕಥನಮಾಡಿರುವೆನು. ಇದನ್ನು ಕೇಳಲು ಮನುಷ್ಯನು ಭೂಲೋಕದಲ್ಲಿ ಸಕಲ ಪಾಪಗಳಿಂದಲೂ ನಿಷ್ಕೃತಿಯನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೆಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ಜಾಬಾಲಿತೀರ್ಥಮಹಿಮಾನುವರ್ಣನ"ವೆಂಬ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಡ್ವಿಂಶೋऽಧ್ಯಾಯಃ

### ತುಂಬುರುತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಸೂತ ಉವಾಚ :—

ಅತ್ರಾಹಂ ಸಂಪ್ರವಕ್ಷ್ಯಾಮಿ ಶೌನಕಾದ್ಯಾ ಮಹೌಜಸಃ ।
ಘೋಣತೀರ್ಥಸ್ಯ ಮಾಹಾತ್ಮ್ಯಂ ಸರ್ವಪಾತಕನಾಶನಂ ॥ ೧ ॥
ತತ್ರ ಸ್ನಾನಂ ಜನಾನಾಂತು ಜನ್ಮಾಂತರತಪಃಫಲಂ ।
ಉತ್ತರಾಫಲ್ಗುನೀಯುಕ್ತ ಶುಕ್ಲ ಪಕ್ಷೀಯಪರ್ವಣಿ ॥ ೨ ॥
ತುಂಬೋಸ್ತೀರ್ಥಂ ಮೀನಸಂಸ್ಥೇ ರವೌ ತೀರ್ಥಾನಿ ಸರ್ವಶಃ ।
ಅಪರಾಹ್ಣೇ ಸಮಾಯಾಂತಿ ಗಂಗಾದೀನಿ ಜಗತ್ರಯೇ ॥ ೩ ॥

ಋಷಯ ಊಚುಃ :—

ಭಗವನ್ಸೂತ ಸರ್ವಜ್ಞ ಸರ್ವಶಾಸ್ತ್ರಾರ್ಥಪಾರಗ ।
ಗಂಗಾದ್ಯಾಃ ಸರಿತಃ ಸರ್ವಾ ಘೋಣತೀರ್ಥೇऽತಿಪಾವನೇ ॥ ೪ ॥
ಕಿಮರ್ಥಂ ಸ್ನಾಂತಿ ವೈ ತತ್ರ ಮೀನಸಂಸ್ಥೇ ಪ್ರಭಾಕರೇ ॥ ೫ ॥

---

## ಕನ್ನಡದ ಅನುವಾದ

### ತುಂಬುರುತೀರ್ಥಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಮಹಾತೇಜಸ್ವಿಗಳಾದ ಶೌನಕಾದಿಗಳಿರಾ! ಇನ್ನು ಘೋಣತೀರ್ಥದಮಾಹಾತ್ಮ್ಯೆಯನ್ನು ವಿವರಿಸುವೆನು ಆ ವಿಷಯಶ್ರವಣವು ಸಕಲ ಪಾಪಗಳನ್ನೂ ನಾಶಗೊಳಿಸುವುದು.

೨-೩. ಆ ತೀರ್ಥದಲ್ಲಿ ಸ್ನಾನವೆಂಬುದು ಜನರಿಗೆ ಪೂರ್ವಜನ್ಮಗಳಲ್ಲಿ ಮಾಡಿದ ಪುಣ್ಯದ ಫಲದಿಂದಲೇ ಲಭಿಸುವುದು. ಸೂರ್ಯನು ಮೀನರಾಶಿಯಲ್ಲಿರಲು ಶುಕ್ಲಪಕ್ಷದಲ್ಲಿ ಉತ್ತರಾಫಲ್ಗುನಿಯ ನಕ್ಷತ್ರದ ದಿವಸವು ಪರ್ವತಿಥಿಯಾದಲ್ಲಿ ಅಂದಿನ ದಿನದ ಅಪರಾಹ್ಣ ಸಮಯಕ್ಕೆ ಸರಿಯಾಗಿ ಮೂರು ಲೋಕಗಳಲ್ಲಿರುವ ಗಂಗಾದಿ ಸಕಲ ತೀರ್ಥಗಳೂ ಘೋಣ ಅಥವಾ ತುಂಬು ತೀರ್ಥದಲ್ಲಿ ಸನ್ನಿಹಿತಗಳಾಗುವುವು.

೪-೫. ಋಷಿಗಳು ಕೇಳುತ್ತಾರೆ:—ಸರ್ವಜ್ಞನೂ, ಸಕಲ ಶಾಸ್ತ್ರಗಳ ರಹಸ್ಯಗಳನ್ನರಿತವನೂ ಆದ ಸೂತಪೌರಾಣಿಕನೆ! ಸೂರ್ಯಮಾನದಲ್ಲಿ ಮೀನಮಾಸವಾಗಿರಲು ನೀನು ಹೇಳಿದಂತೆ ಪರಮಪಾವನವಾದ ಘೋಣತೀರ್ಥದಲ್ಲಿ ಗಂಗಾದಿ ಸಕಲ ನದಿಗಳೂ ಏಕೆ ಸ್ನಾನಮಾಡುವರೆಂಬುದನ್ನು ನಮಗೆ ತಿಳಿಸು.

ಶ್ರೀ ಸೂತ ಉವಾಚ :—

ಪಾಪಿನೋ ಮನುಜಾಃ ಸರ್ವೇ ಹ್ಯಸ್ಮಾಸು ಸ್ನಾಂತಿ ಯತ್ನತಃ ।
ವಿಸೃಜ್ಯ ಪಾಪಜಾಲಾನಿ ಕೃತಾರ್ಥಾ ಯಾಂತಿ ವೈ ಜನಾಃ ॥ ೬ ॥
ಅಸ್ಮಾಕಂ ಪಾಪಜಾಲಂ ತತ್ಕಥಂ ನಶ್ಯತಿ ಸರ್ವತಃ ।
ಏವಮಾಲೋಚ್ಯ ತೀರ್ಥಾನಿ ಗಂಗಾದೀನಿ ಪ್ರಯತ್ನತಃ ॥ ೭ ॥
ಸಂಸ್ಮೃತ್ಯ ಬ್ರಹ್ಮಪುತ್ರಸ್ಯ ನಾರದಸ್ಯ ಮಹಾತ್ಮನಃ ।
ವಾಕ್ಯಂ ಮನೋಹರಂ ದಿವ್ಯಂ ಸರ್ವಪಾಪನಿಷೂದನಂ ॥ ೮ ॥
ಗತ್ವಾ ಶ್ರೀವೇಂಕಟಂ ಶೈಲಂ ಬ್ರಹ್ಮಹತ್ಯಾದಿ ಶೋಧಕಂ ।
ತತ್ರ ಸ್ನಾತ್ವಾ ತೀರ್ಥವರ್ಯೇ ಸ್ವಾಮಿಪುಷ್ಕರಿಣೀಜಲೇ ॥ ೯ ॥
ಅನಂತರಂ ತತೋ ವಿಪ್ರಾ ಘೋಣತೀರ್ಥೇಽತಿಪಾವನೇ ।
ಉತ್ತರಾಫಲ್ಗುನೀಯುಕ್ತಶುಕ್ಲಪಕ್ಷೀಯಪರ್ವಣಿ ॥ ೧೦ ॥
ಸ್ನಾಂತಿ ತೀರ್ಥಾನಿ ಸರ್ವಾಣಿ ಮೀನಸಂಸ್ಥೇ ಪ್ರಭಾಕರೇ ।
ತಸ್ಯ ತೀರ್ಥಸ್ಯ ಮಾಹಾತ್ಮ್ಯಂ ಕೋ ವೇತ್ತಿ ಭುವನತ್ರಯೇ ॥ ೧೧ ॥
ತಸ್ಮಾತ್ಪುಣ್ಯತಮಂ ತೀರ್ಥಂ ಘೋಣತೀರ್ಥಂ ದ್ವಿಜೋತ್ತಮಾಃ ॥ ೧೨ ॥

---

೬. ಸೂತನು ಹೇಳುತ್ತಾನೆ :—"ನಮ್ಮಲ್ಲಿ ಪಾಪಿಗಳಾದ ಮನುಷ್ಯರೆಲ್ಲರೂ ಪ್ರಯತ್ನಪೂರ್ವಕವಾಗಿ ಸ್ನಾನಮಾಡುವರು. ಆ ರೀತಿ ಸ್ನಾನಮಾಡಿ ಅವರೆಲ್ಲ ತಮ್ಮ ಪಾಪಗಳನ್ನು ನಮ್ಮಲ್ಲಿ ಬಿಟ್ಟು ಕೃತಾರ್ಥರಾಗಿ ಹೊರಟುಹೋಗುವರು.

೭–೧೨. ನಮ್ಮಲ್ಲಿ ಇಷ್ಟು ಅಗಾಧವಾಗಿ ಸೇರಿಕೊಂಡಿರುವ ಪಾಪಸಮೂಹವು ನಾಶವಾಗುವುದು ಹೇಗೆ?" ಇಂತೆಂದು ಗಂಗಾದಿ ತೀರ್ಥಗಳು ಬಹಳ ಕಾಲ ಯೋಚಿಸುತ್ತ, ಬ್ರಹ್ಮಮಾನಸಪುತ್ರನೂ ಮಹಾಮಹಿಮನೂ ಆದ ನಾರದ ಮಹರ್ಷಿಯ ವಾಕ್ಯವನ್ನು ಸ್ಮರಿಸಿಕೊಂಡು, ಮನೋಹರವೂ, ಸ್ವರ್ಗತುಲ್ಯವೂ, ಸಕಲ ಪಾಪಗಳನ್ನು ಕಳೆಯುವುದೂ, ಬ್ರಹ್ಮಹತ್ಯೆಯೇ ಮೊದಲಾದ ಮಹಾಪಾಪಗಳನ್ನೂ ನಿರ್ಮೂಲಗೊಳಿಸುವುದೂ ಆದ ಶ್ರೀ ವೇಂಕಟಾಚಲವನ್ನು ಸೇರಿ ಉತ್ತಮ ತೀರ್ಥವೆನಿಸಿದ ಸ್ವಾಮಿಪುಷ್ಕರಿಣಿಯ ಜಲದಲ್ಲಿ ಸ್ನಾನವನ್ನು ಮಾಡಿಕೊಂಡು ಬಳಿಕ ಸೌರಮಾನದ ಮೀನಮಾಸದ ಶುಕ್ಲಪಕ್ಷದಲ್ಲಿ ಉತ್ತರಾನಕ್ಷತ್ರಯುಕ್ತವಾದ ಪರ್ವದಿನದಲ್ಲಿ ಆ ತೀರ್ಥಗಳೆಲ್ಲವೂ ಅತಿಪವಿತ್ರವಾದ ಘೋಣತೀರ್ಥದಲ್ಲಿ ಸ್ನಾನಮಾಡುವುವು. ಆ ತೀರ್ಥದ ಮಾಹಾತ್ಮ್ಯವನ್ನು ಸಮಗ್ರವಾಗಿ ತಿಳಿಯಲು ಮೂರು ಲೋಕಗಳಲ್ಲಿ ಯಾವನಿಗೆತಾನೆ ಸಾಧ್ಯವು? ಎಲೈ ಬ್ರಾಹ್ಮಣೋತ್ತಮರಿರಾ! ಆದುದರಿಂದ ಘೋಣತೀರ್ಥವೆಂಬುದು ಅತ್ಯಂತ ಪುಣ್ಯತಮವಾಗಿರುವುದು.

ಆರಾಮೋಚ್ಛೇದಕಂ ಕ್ರೂರಂ ಕನ್ಯಾತುರಗವಿಕ್ರಯಂ ।
ಘೋಣಸ್ನಾನಪರಿತ್ಯಕ್ತಂ ತಮಾಹುರ್ಬ್ರಹ್ಮಘಾತುಕಂ ॥ ೧೩ ॥
ದೇವದ್ರವ್ಯಾಪಹಂತಾರಂ ತಥಾ ದತ್ತಾಪಹಾರಕಂ ।
ಘೋಣಸ್ನಾನಪರಿತ್ಯಕ್ತಂ ತಮಾಹುರ್ಬ್ರಹ್ಮಘಾತುಕಂ ॥ ೧೪ ॥
ತಟಾಕಸೇತುಭೇತ್ತಾರಂ ಪರಸ್ತ್ರೀ ಸಂಗಲೋಲುಪಂ ।
ಘೋಣಸ್ನಾನಪರಿತ್ಯಕ್ತಂ ತಮಾಹುಃ ಸ್ತೇಯಿನಂ ಬುಧಾಃ ॥ ೧೫ ॥
ದದಾಮೀತಿ ದ್ವಿಜಾಯೋಕ್ತ್ವಾ ಪಶ್ಚಾದ್ಯೋ ನಾಸ್ತಿಕೋಽಧಮಃ ।
ಘೋಣಸ್ನಾನಪರಿತ್ಯಕ್ತಂ ಸುರಾಪಂ ತಂ ವಿದುರ್ಬುಧಾಃ ॥ ೧೬ ॥
ಗುರುವಿಪ್ರಜನದ್ವೇಷ್ಯಮಾತ್ಮಸ್ತುತಿಪರಾಯಣಂ ।
ಘೋಣಸ್ನಾನಪರಿತ್ಯಕ್ತಂ ತಮಾಹುಃ ಸ್ತೇಯಿನಂ ಬುಧಾಃ ॥ ೧೭ ॥
ಅಸಂಸ್ಕೃತಾನ್ನಭೋಕ್ತಾರಂ ಪಿತೃಶೇಷಾನ್ನಭೋಜಿನಂ ।
ಘೋಣಸ್ನಾನಪರಿತ್ಯಕ್ತಂ ತಮಾಹುಃ ಸ್ತೇಯಿನಂ ದ್ವಿಜಾಃ ॥ ೧೮ ॥

---

೧೩. ಉದ್ಯಾನವನಗಳನ್ನು ಕಡಿಯುವವನನ್ನೂ, ಕ್ರೂರನಾದವನನ್ನೂ, ಕನ್ಯಾವಿಕ್ರಯ ಮಾಡುವವನನ್ನೂ, ಘೋಣತೀರ್ಥದಲ್ಲಿ ಸ್ನಾನಮಾಡದವನನ್ನೂ, ಕುದುರೆಗಳನ್ನು ಮಾರುವವನನ್ನೂ ಬ್ರಹ್ಮಘಾತಕನೆಂದು ಬಲ್ಲವರು ಹೇಳುವರು.

೧೪. ದೇವಸ್ಥಾನಗಳ ದ್ರವ್ಯಗಳನ್ನಪಹರಿಸುವವನೂ, ಕೊಟ್ಟುದನ್ನು ಹಿಂದಕ್ಕೆ ಕಸಿದುಕೊಳ್ಳುವವನೂ, ಘೋಣತೀರ್ಥದಲ್ಲಿ ಸ್ನಾನಮಾಡದವನೂ ಬ್ರಹ್ಮಘಾತಕನೆಂದು ಕರೆಯಲ್ಪಡುವನು.

೧೫. ಕೆರೆ, ಸೇತುವೆಗಳನ್ನು ಒಡೆದುಹಾಕುವವನೂ, ಪರಸ್ತ್ರೀಯರಲ್ಲಿ ಆಸಕ್ತನಾದವನೂ, ಘೋಣಸ್ನಾನವನ್ನು ಬಿಟ್ಟವನೂ ಬಲ್ಲವರಿಂದ ಕಳ್ಳನೆಂದು ಕರೆಯಲ್ಪಡುವನು.

೧೬. ಬ್ರಾಹ್ಮಣನಿಗೆ ಕೊಡುತ್ತೇನೆಂದು ವಾಗ್ದಾನವನ್ನು ಮಾಡಿ ಬಳಿಕ ಇಲ್ಲವೆಂದು ಹೇಳುವ ಅಧಮನನ್ನೂ, ತುಂಬುರುತೀರ್ಥದಲ್ಲಿ ಸ್ನಾನವನ್ನು ತ್ಯಜಿಸಿದವನನ್ನೂ ಬುಧರು ಸುರಾಪಾನಮಾಡಿದವನೆಂದು ಹೇಳುವರು.

೧೭. ಗುರುಗಳು, ಬ್ರಾಹ್ಮಣರು, ಜನರು—ಇವರ ದ್ವೇಷಕ್ಕೆ ಪಾತ್ರನಾದವನನ್ನೂ, ತನ್ನನ್ನೇ ಸ್ತೋತ್ರಮಾಡಿಕೊಳ್ಳುವವನನ್ನೂ, ಘೋಣತೀರ್ಥದಲ್ಲಿ ಸ್ನಾನವನ್ನು ಮಾಡದವನನ್ನೂ ಸ್ವರ್ಣಸ್ತೇಯಿಯೊಡನೆ ಬಲ್ಲವರು ಹೋಲಿಸಿ ಹೇಳುವರು.

೧೮. ಪ್ರೋಕ್ಷಣ ಪರಿಷೇಚನಾದಿ ಸಂಸ್ಕಾರಗಳಿಲ್ಲದ ಅನ್ನವನ್ನು ಸೇವಿಸುವವನನ್ನೂ, ಇತರರ ಪಿತೃಶೇಷವನ್ನು ತಿನ್ನುವವನನ್ನೂ, ಘೋಣತೀರ್ಥಸ್ನಾನರಹಿತನನ್ನೂ ಸ್ತೇಯಿಯೆಂದು ತಿಳಿದವರು ಕರೆಯುವರು.

ಪಿತೃಶೇಷಾನ್ನದಾತಾರಂ ಮಾತಾಪಿತೃವಿರೋಧಿನಂ ।
ಘೋಣಸ್ನಾನಪರಿತ್ಯಕ್ತಂ ತಮಾಹುಃ ಸ್ತೇಯಿನಂ ಬುಧಾಃ ॥ ೧೯ ॥
ಪರಸ್ತ್ರೀಸಂಗ ನಿರತಂ ಭ್ರಾತೃಭಾರ್ಯಾರತಿಪ್ರಿಯಂ ।
ಘೋಣಸ್ನಾನಪರಿತ್ಯಕ್ತಂ ತಮಾಹುರ್ಗುರುತಲ್ಪಗಂ ॥ ೨೦ ॥
ಚಂಡಾಲಭಾಷಿಣಂ ವಿಪ್ರಂ ಸದೈವಾದರ್ಭಪಾಣಿಕಂ ।
ಘೋಣಸ್ನಾನಪರಿತ್ಯಕ್ತಂ ತತ್ಸಂಸರ್ಗಂ ತು ಪಂಚಮಂ ॥ ೨೧ ॥
ರಜಸ್ವಲಾಶ್ವಚಂಡಾಲಧ್ವನಿಂ ಶ್ರುತ್ವಾನ್ನಭೋಜನಂ ।
ಘೋಣಸ್ನಾನಪರಿತ್ಯಕ್ತಂ ತತ್ಸಂಸರ್ಗಂ ತು ಪಂಚಮಂ ॥ ೨೨ ॥
ಪುರಾಣೋದ್ವಾಹಮೌಂಜ್ಯಾದಿಧರ್ಮಾಣಾಂ ವಿಘ್ನಕಾರಕಂ ।
ಘೋಣಸ್ನಾನಪರಿತ್ಯಕ್ತಂ ತಮಾಹುಃ ಪಶುಘಾತುಕಂ ॥ ೨೩ ॥
ಶರಣಾಗತಹಂತಾರಂ ಸರ್ವತೀರ್ಥಪರಾಙ್ಮುಖಂ ।
ಘೋಣಸ್ನಾನಪರಿತ್ಯಕ್ತಂ ತಮಾಹುರ್ಭ್ರೂಣಹಂ ಬುಧಾಃ ॥ ೨೪ ॥

---

೧೯. ಪಿತೃಶೇಷದ ಅನ್ನವನ್ನು ಇತರರಿಗೆ ಕೊಡುವವನನ್ನೂ, ತಾಯಿ ತಂದೆಗಳನ್ನು ದ್ವೇಷಿಸುವವನನ್ನೂ, ಘೋಣತೀರ್ಥದ ಸ್ನಾನವಿಲ್ಲದವನನ್ನೂ ಸ್ತೇಯಿಯೆಂದು ಹೇಳುವರು.

೨೦. ಪರಸ್ತ್ರೀಯರಲ್ಲಿ ಆಸಕ್ತನಾದವನನ್ನೂ, ಭ್ರಾತೃಭಾರ್ಯೆಯರಲ್ಲಿ ಅಭಿಲಾಷೆಯುಳ್ಳವನನ್ನೂ, ಘೋಣಸ್ನಾನ ಮಾಡದವನನ್ನೂ ಪಶುಘಾತಕನೆಂದು ಹೇಳುವರು.

೨೧. ಚಂಡಾಲನೊಡನೆ ಮಾತನಾಡುವ ಬ್ರಾಹ್ಮಣನನ್ನೂ, ಯಾವಾಗಲೂ ದರ್ಭೆಯ ಪವಿತ್ರವಿಲ್ಲದ ಕೈಗಳಲ್ಲಿ ಪವಿತ್ರವಾದ ಕೆಲಸಗಳನ್ನು ಮಾಡುವವನನ್ನೂ, ಘೋಣಸ್ನಾನವನ್ನು ಬಿಟ್ಟವನನ್ನೂ ಸಹವಾಸದ ದೃಷ್ಟಿಯಿಂದ ಪಂಚಮರೆಂಬುದಾಗಿ ತಿಳಿಯಬೇಕು.

೨೨. ಬಹಿಷ್ಠೆಯಾದ ಸ್ತ್ರೀ, ಕುದುರೆ, ಚಂಡಾಲ—ಇವರ ಶಬ್ದಗಳನ್ನು ಕೇಳಿ ಶೌಚವಿಲ್ಲದೆಯೇ ಊಟಮಾಡುವವನೂ, ಘೋಣತೀರ್ಥ ಸ್ನಾನವನ್ನು ತ್ಯಜಿಸಿದವನೂ ಪಂಚಮರಂತೆ ಸಹವಾಸಯೋಗ್ಯರಲ್ಲವು.

೨೩. ಪುರಾಣ ಪುಣ್ಯಕಥೆಗಳು, ಮದುವೆ ಮುಂಜಿಗಳು ಮುಂತಾದ ಧರ್ಮ ಶುಭಕಾರ್ಯಗಳಿಗೆ ವಿಘ್ನವನ್ನುಂಟುಮಾಡುವವನನ್ನೂ, ಘೋಣತೀರ್ಥದಲ್ಲಿ ಸ್ನಾನವನ್ನು ಮಾಡದವನನ್ನೂ ಪಶುಘಾತಕನೆಂದು ಕರೆಯುವರು.

೨೪. ಶರಣಾಗತರನ್ನು ಕೊಲ್ಲುವವನೂ, ಸಕಲ ತೀರ್ಥಗಳಿಗೆ ಯಾತ್ರೆಯನ್ನು ಮಾಡಲು ಹಿಂದೆಗೆಯುವವನೂ, ಘೋಣಸ್ನಾನವನ್ನು ತ್ಯಜಿಸಿದವನನ್ನೂ ಬುಧರು ಭ್ರೂಣಹತ್ಯೆಯನ್ನು ಮಾಡಿದವನೆಂದು ಕರೆಯುವರು.

ಪಿತೃಯಜ್ಞಪರಿತ್ಯಕ್ತಂ ತ್ಯಕ್ತಭಾರ್ಯಂ ಕುಲಾಧಮಂ ।
ಘೋಣಸ್ನಾನಪರಿತ್ಯಕ್ತಂ ತಮಾಹುರ್ಗೋವಿಘಾತುಕಂ ॥ ೨೫ ॥
ಮಹಾಪಾಪಸಮಾನಾನಿ ಕ್ಷುದ್ರಪಾಪಾನಿ ಯಾನಿ ಚ ।
ಘೋಣಸ್ನಾನಪರಿತ್ಯಕ್ತಮಾಶ್ರಯಂತಿ ದ್ವಿಜೋತ್ತಮಾಃ ॥ ೨೬ ॥
ಮಹಾಪಾಪರತಂ ವಿಪ್ರಾಃ ಶ್ವಪಚಂ ವಾ ಕುಲಾಧಮಂ ।
ಕ್ರೂರಂ ಕುಲಾಂತಕಂ ಕಷ್ಟಮದತ್ತಂ ಕರ್ಮವರ್ಜಿತಂ ॥ ೨೭ ॥
ಪಶುಘ್ನಂ ಚ ಪರದ್ರೋಹಮಾಶ್ರಿತಂ ಪಿಶುನಂ ತಥಾ ।
ಅಸತ್ಯಭಾಷಿಣಂ ದಂಭಂ ಪರದಾರರತಂ ತಥಾ ॥ ೨೮ ॥
ಮಿತ್ರದ್ರೋಹಂ ಕೃತಘ್ನಂ ಚ ಭ್ರೂಣಹಂ ಚಾತಿಪಾತಕಂ ।
ಪರದಾರರತಂ ಪಾಪಂ ಪರಾಣಾಮರ್ಥಸೂಚಕಂ ॥ ೨೯ ॥
ಅನೃತಂ ಕೃಷಿಕರ್ಮಾಣಂ ಸ್ವಾಮಿದ್ರೋಹಂ ಚ ವಂಚಕಂ ।
ಸಲೋಭಂ ಪಿತೃಹಂತಾರಂ ಸರ್ವದೇವಪರಾಙ್ಮುಖಂ ॥ ೩೦ ॥
ಆತ್ಮಪ್ರಶಂಸಾಂ ಕುರ್ವಾಣಂ ಧರ್ಮವಿಘ್ನಕರಂ ನರಂ ।
ಅಪಾತ್ರವ್ಯಯಕರ್ತಾರಂ ಸಾನುಕೂಲ್ಯವಿಭೇದಕಂ ॥ ೩೧ ॥

---

೨೫. ಪಿತೃಶ್ರಾದ್ಧಗಳನ್ನು ಕೈಬಿಟ್ಟವನನ್ನೂ, ಹೆಂಡತಿಯನ್ನು ಸಾಕಲಾರದವನನ್ನೂ, ಕುಲಕಳಂಕನಾದವನನ್ನೂ, ಘೋಣಸ್ನಾನವನ್ನು ಮಾಡದವನನ್ನೂ ಗೋಹತ್ಯೆಯನ್ನು ಮಾಡಿದವರೆಂದು ಹೇಳುವರು.

೨೬–೩೬. ಎಲೈ ಬ್ರಾಹ್ಮಣೋತ್ತಮರಿರಾ! ಮಹಾಪಾಪಗಳಲ್ಲಿ ನಿರತನಾದವನನ್ನೂ, ಚಂಡಾಲನನ್ನೂ, ಹೀನಕುಲದವನನ್ನೂ, ಕ್ರೂರನನ್ನೂ, ಕುಲಕಂಟಕನಾದವನನ್ನೂ, ಕಷ್ಟಜೀವಿಯನ್ನೂ, ದಾನಮಾಡದವನನ್ನೂ, ಸ್ವಾಶ್ರಮೋಚಿತಕರ್ಮರಹಿತನಾದವನನ್ನೂ, ಪಶುಹಿಂಸೆ ಮಾಡುವವನನ್ನೂ, ಪರದ್ರೋಹವನ್ನೇ ಜೀವನೋಪಾಯವನ್ನಾಗಿ ಮಾಡಿಕೊಂಡಿರುವವನನ್ನೂ, ಲೋಭಿಯನ್ನೂ, ಸುಳ್ಳನ್ನಾಡುವವನನ್ನೂ, ದಾಂಭಿಕನನ್ನೂ, ಪರಸ್ತ್ರೀಲೋಲುಪನನ್ನೂ, ಮಿತ್ರದ್ರೋಹಿಯನ್ನೂ, ಕೃತಘ್ನನನ್ನೂ, ಶಿಶುಹತ್ಯೆಮಾಡಿದವನನ್ನೂ, ಮಹಾಪಾತಕಗಳನ್ನು ಮಾಡಿದವನನ್ನೂ, ಪರದಾರಾಭಿಮರ್ಶಕನನ್ನೂ, ಪಾಪಿಷ್ಠನನ್ನೂ, ಇತರರ ಸಂಪತ್ತನ್ನು ಸೂಚಿಸುವವನನ್ನೂ, ಸುಳ್ಳುಹೇಳುವವನನ್ನೂ, ಕೃಷಿಮಾಡುವವನನ್ನೂ, ಸ್ವಾಮಿದ್ರೋಹಿಯನ್ನೂ, ಮೋಸಗಾರನನ್ನೂ, ಲೋಭಸಹಿತನನ್ನೂ, ಮಾತಾಪಿತೃಘಾತಕನನ್ನೂ, ಸಕಲದೇವಕಾರ್ಯಗಳಿಂದ ಪರಾಙ್ಮುಖನಾದವನನ್ನೂ, ತನ್ನ ಪ್ರಶಂಸೆಯನ್ನು ತಾನೇ ಮಾಡಿಕೊಳ್ಳುವವನನ್ನೂ, ಧರ್ಮಕಾರ್ಯಗಳಿಗೆ ವಿಘ್ನಗಳನ್ನುಂಟುಮಾಡುವವನನ್ನೂ, ಮೂರ್ಖನನ್ನೂ, ಅಪಾತ್ರದಲ್ಲಿ ದಾನಮಾಡಿದವನನ್ನೂ, ಅನುಕೂಲವುಳ್ಳವರನ್ನು

ಸುಪಲ್ಲವಫಲೋಪೇತವೃಕ್ಷವಿಚ್ಛೇದಕಾರಕಂ ।
ವಿಶ್ವಾಸಘಾತುಕಂ ಚೈವ ವೀರಹತ್ಯಾಪರಾಯಣಂ ॥ ೩೨ ॥
ಅನಗ್ನಿಕಮಪುತ್ರಂ ಚ ವಿಷಕರ್ಮಪ್ರಯೋಗಿಣಂ ।
ಗುರುದ್ವೇಷಕರಂ ಪಾಪಂ ದಂಪತ್ಯೋರ್ವಿರಸಾವಹಂ ॥ ೩೩ ॥
ಗ್ರಾಮಾಧಿಪತ್ಯಂ ಕುರ್ವಾಣಂ ತಥಾ ದೇವಾಲಯಸ್ಯ ಚ ।
ಭೃತಕಾಧ್ಯಾಪಕಂ ವಿಪ್ರಂ ಕ್ರೂರಕರ್ಮಪರಾಯಣಂ ॥ ೩೪ ॥
ಪ್ರಕೃತೀಕೃತಪಾಪೌಘಂ ಮಹಾಘೌಘಪರಾಯಣಂ ।
ಅಜ್ಞಾನಾದಘಕರ್ತಾರಂ ಜ್ಞಾನಾದ್ದುಷ್ಕರ್ಮಕಾರಕಂ ॥ ೩೫ ॥
ಏತಾನ್ಸರ್ವಾಂಶ್ಚ ವಿಪ್ರೇಂದ್ರಾ ಘೋಣತೀರ್ಥಂ ಮನೋಹರಂ ।
ಪುನಾತಿ ಸ್ನಾನಪಾನಾದ್ಯೈರಹೋ ತೀರ್ಥಸ್ಯ ವೈಭವಂ ॥ ೩೬ ॥

ಶ್ರೀ ಸೂತ ಉವಾಚ :—

ಅತ್ರೇತಿಹಾಸಂ ವಕ್ಷ್ಯಾಮಿ ಪುರಾಣಂ ಪಾಪನಾಶನಂ ।
ಸರ್ವಪಾಪಪ್ರಶಮನಮಪವರ್ಗಫಲಪ್ರದಂ ॥ ೩೭ ॥

---

ಕೆಡಿಸುವವನನ್ನೂ, ಚಿಗುರುಹಣ್ಣುಗಳಿಂದ ಕೂಡಿದ ಗಿಡಗಳನ್ನು ಕಡಿದುಹಾಕುವವರನ್ನೂ, ನಂಬಿಸಿ ಮೋಸಮಾಡುವವನನ್ನೂ, ವೀರಹತ್ಯೆಯನ್ನು ಮಾಡುವವನನ್ನೂ, ವೈಶ್ವದೇವಾಗ್ನಿಯಿಲ್ಲದವನನ್ನೂ, ಸಂತತಿಹೀನನನ್ನೂ, ವಿಷಪ್ರದಾನವನ್ನೇ ಉದ್ಯೋಗವಾಗಿ ಕಲ್ಪಿಸಿಕೊಂಡವನನ್ನೂ, ಗುರುದ್ವೇಷಿಯಾದ ಪಾಪಿಯನ್ನೂ, ಸತಿಪತಿಗಳಲ್ಲಿ ವಿರಸವನ್ನುಂಟುಮಾಡುವವನನ್ನೂ, ಗ್ರಾಮಾಧಿಪತ್ಯವನ್ನು ಮಾಡುವವನನ್ನೂ, ದೇವಸ್ಥಾನದ ಮೇಲ್ವಿಚಾರಣೆಯಲ್ಲಿ ನಿರತನಾದವನನ್ನೂ, ಸೇವಕರಾದ ಶೂದ್ರಾದಿಗಳಿಗೆ ಅಧ್ಯಯನವನ್ನು ಮಾಡಿಸುವ ಬ್ರಾಹ್ಮಣನನ್ನೂ, ಕ್ರೂರಕರ್ಮಗಳನ್ನೇ ಮಾಡುವವನನ್ನೂ, ಸ್ವಭಾವದಿಂದಲೇ ಅನೇಕ ಪಾಪಗಳನ್ನು ಮಾಡಿದವನನ್ನೂ, ರಹಸ್ಯವಾಗಿ ಪಾಪಗಳನ್ನು ಮಾಡುವವನನ್ನೂ, ತಿಳಿಯದೆ ಪಾತಕಗಳನ್ನು ಮಾಡುವವನನ್ನೂ, ಬುದ್ಧಿಪೂರ್ವಕವಾಗಿ ಪಾತಕಗಳನ್ನು ಮಾಡುವವನನ್ನೂ—ಈ ಎಲ್ಲರನ್ನೂ ಸಹ ಮನೋಹರವಾದ ಘೋಣತೀರ್ಥವು ಸ್ನಾನಪಾನಗಳ ಮಾತ್ರದಿಂದಲೇ ಪುನೀತರನ್ನಾಗಿ ಮಾಡುವುದೆಂದ ಮೇಲೆ ಆ ತೀರ್ಥದ ವೈಭವವನ್ನೇನೆಂದು ಹೇಳಲಿ?

೩೭. ಈ ವಿಷಯದಲ್ಲಿ ಪುರಾತನವೂ ಪಾಪನಾಶಕವೂ ಆದ ಒಂದು ಇತಿಹಾಸವನ್ನು ಹೇಳುವೆನು. ಆ ಚರಿತ್ರೆಯನ್ನು ಕೇಳಲು ಸಕಲ ಪಾತಕಗಳೂ ನಾಶವಾಗಿ ಮೋಕ್ಷಪದವಿಯೂ ಲಭಿಸುವುದು.

ಪುರಾ ಗಾರ್ಗ್ಯೋ ಮಹಾತೇಜಾಃ ಸರ್ವವಿದ್ಯಾವಿಶಾರದಃ ।
ಸರ್ವಜ್ಞೋ ನೀತಿಮಾನ್ವಿಪ್ರಃ ಪ್ರಾಹ ಚೇತ್ಥಂ ಜಿತೇಂದ್ರಿಯಃ ॥ ೩೮ ॥
ದೇವಲಂ ಚ ಮಹಾತ್ಮಾನಾಂ ನಮಸ್ಕೃತ್ಯ ಪ್ರಸನ್ನಧೀಃ ।
ಕಥಯಸ್ವ ಮಹಾಭಾಗ ಮಯಿ ಕಾರುಣಿಕೋ ಭವ ।
ಘೋಣತೀರ್ಥಸ್ಯ ಮಾಹಾತ್ಮ್ಯಂ ಸರ್ವಪಾಪಹರಂ ಶುಭಂ ॥ ೩೯ ॥

ದೇವಲ ಉವಾಚ :—

ತುಂಬುರುರ್ನಾಮ ಗಂಧರ್ವೋ ಭಾರ್ಯಾಂ ಶಪ್ತ್ವಾ ಪತಿವ್ರತಾಂ ।
ಅತ್ರ ಸ್ನಾತ್ವಾ ಸಮಭ್ಯರ್ಚ್ಯ ವೇಂಕಟೇಶಂ ದಯಾನಿಧಿಂ ॥ ೪೦ ॥
ಪ್ರಾಪ್ತವಾನ್ವಿಷ್ಣುಲೋಕಂ ವೈ ಪುನರಾವೃತ್ತಿವರ್ಜಿತಂ ॥ ೪೧ ॥

ಗಾರ್ಗ್ಯ ಉವಾಚ :—

ಕಿಮರ್ಥಂ ದೇವಲ ಋಷೇ ಭಾರ್ಯಾಂ ರೂಪವತೀಂ ಸ್ತ್ರಿಯಂ ।
ತುಂಬುರುರ್ನಾಮ ಗಂಧರ್ವಃ ಸರ್ವವಿದ್ಯಾವಿಶಾರದಃ ॥ ೪೨ ॥
ಶಪ್ತವಾನ್ಕೇನ ದೋಷೇಣ ಭಾರ್ಯಾಂ ಸರ್ವಗುಣಾನ್ವಿತಾಂ ।
ತದ್ವದಸ್ವ ಮಹಾಭಾಗ ಶ್ರೋತುಂ ಕೌತೂಹಲಂ ಹಿ ಮೇ ॥ ೪೩ ॥

---

೩೮–೩೯. ಪೂರ್ವದಲ್ಲಿ ಮಹಾತೇಜಸ್ವಿಯೂ, ಸಕಲವಿದ್ಯಾಪಾರಂಗತನೂ, ಸರ್ವಜ್ಞನೂ, ನೀತಿವಂತನೂ, ಇಂದ್ರಿಯಸಂಯಮನವನ್ನು ಮಾಡಿದವನೂ, ಪ್ರಸನ್ನಮನಸ್ಕನೂ ಆದ ಗಾರ್ಗ್ಯನೆಂಬ ಬ್ರಾಹ್ಮಣೋತ್ತಮನು ಮಹಾತ್ಮನಾದ ದೇವಲಮಹರ್ಷಿಗೆ ನಮಸ್ಕರಿಸಿ ಇಂತೆಂದು ಬಿನ್ನವಿಸಿದನು. "ಮಹಾಶಯನೇ! ಸಕಲ ಪಾಪಹರವೂ, ಪವಿತ್ರವೂ ಆದ ಘೋಣತೀರ್ಥದ ಮಾಹಾತ್ಮ್ಯೆಯನ್ನು ಹೇಳುವವನಾಗು. ನನ್ನಲ್ಲಿ ಕರುಣೆಯುಳ್ಳವನಾಗು."

೪೦–೪೧. ದೇವಲನು ಹೇಳುತ್ತಾನೆ:— "ತುಂಬುರುವೆಂಬ ಹೆಸರಿನ ಗಂಧರ್ವನೊಬ್ಬನು ಪತಿವ್ರತೆಯಾದ ತನ್ನ ಪತ್ನಿಗೆ ಶಾಪವನ್ನು ಕೊಟ್ಟು ಇಲ್ಲಿ ಸ್ನಾನವನ್ನು ಮಾಡಿಕೊಂಡು ದಯಾಸಮುದ್ರನಾದ ವೇಂಕಟೇಶ್ವರನನ್ನು ಪೂಜಿಸಿ ಪುನರಾವೃತ್ತಿರಹಿತವಾದ ವಿಷ್ಣುಲೋಕವನ್ನು ಪಡೆದನು."

೪೨. ಗಾರ್ಗ್ಯನು ಕೇಳುತ್ತಾನೆ:—"ದೇವಲಮಹರ್ಷಿಯೆ! ಸಕಲ ವಿದ್ಯೆಗಳಲ್ಲಿಯೂ ಪಾರಂಗತನಾಗಿದ್ದ ತುಂಬುರನೆಂಬ ಗಂಧರ್ವನು ರೂಪವತಿಯಾದ ಸ್ತ್ರೀಯೆನಿಸಿದ ತನ್ನ ಪತ್ನಿಗೆ ಶಾಪವನ್ನೇಕೆ ಕೊಟ್ಟನು?

೪೩. ಸಕಲ ಸದ್ಗುಣಗಳಿಂದ ಕೂಡಿದ ಆಕೆಯನ್ನು ಯಾವ ದೋಷಕ್ಕಾಗಿ ಶಪಿಸಿದನು? ಎಲೈ ಮಹಾಭಾಗನೆ! ಆ ಕಥೆಯನ್ನು ನನಗೆ ಹೇಳು. ಕೇಳಲು ಬಹಳ ಕುತೂಹಲವುಂಟಾಗಿರುವುದು."

ತುಂಬುರುರ್ನಾಮ ಗಂಧರ್ವೋ ಭಾರ್ಯಾಂ ಪ್ರೀತ್ಯಾ ಹ್ಯುವಾಚ ಹ ।
ಮಾಘತ್ರಯೇ ಮಯಾ ಸಾಕಂ ಸ್ನಾನಂ ಕುರು ಮಲಾಪಹಂ ॥ ೪೪ ॥
ಮಾಘಮಾಸ್ಯುದಿತೇ ಸೂರ್ಯೇ ಸರ್ವಕಲ್ಮಷನಾಶನೇ ।
ತೀರೇಽಸ್ಮಿನ್ವಿಷ್ಣುಪೂಜಾರ್ಥಂ ಗೋಮಯಾಲೇಪನಂ ಕುರು ॥ ೪೫ ॥
ರಂಗವಲ್ಲ್ಯಾದಿಭಿಃ ಶುಭ್ರಪದ್ಮಸ್ವಸ್ತಿಕಧಾತುಭಿಃ ।
ಶುಶ್ರೂಷಾಂ ಕುರು ಮೇ ವಿಷ್ಣೋರ್ಮಾಸೇಽಸ್ಮಿನ್ಮಂಗಳಪ್ರದೇ ॥ ೪೬ ॥
ಮಾಘೇಽಸ್ಮಿನ್ಮಾಧವಸ್ಯಾಸ್ಯ ಕುರು ತ್ವಂ ದೀಪವರ್ತಿಕಾಂ ।
ಸಧೂಪಂ ಪಾವಕಂ ಭಕ್ತ್ಯಾ ಸಮರ್ಪಯ ಹರೇಃ ಪುರಃ ॥ ೪೭ ॥
ಕುರು ಪಾಕಂ ಶುಚಿರ್ಭೂತ್ವಾ ಮಾಧವಾಯ ಮಹಾತ್ಮನೇ ।
ಪ್ರದಕ್ಷಿಣನಮಸ್ಕಾರೈರ್ಭಕ್ತ್ಯಾ ಮಾಘೇ ಮಯಾ ಸಹ ॥ ೪೮ ॥
ಕುರುಷ್ವ ದೇವದೇವಸ್ಯ ಸಪರ್ಯಾಂ ವಿಷ್ಣವೇಽನ್ವಹಂ ।
ಪುರಾಣಶ್ರವಣಂ ವಿಷ್ಣೋಃ ಕುರು ನಿತ್ಯಮತಂದ್ರಿತಾ ॥ ೪೯ ॥

---

೪೪. ದೇವಲನು ಹೇಳುತ್ತಾನೆ:—ತುಂಬುರು ಎಂಬ ಗಂಧರ್ವನು ಒಮ್ಮೆ ಹೆಂಡತಿಯನ್ನು ಕುರಿತು ಪ್ರೀತಿಯಿಂದ ಇಂತೆಂದು ಹೇಳತೊಡಗಿದನು:—"ಮಾಘಾದಿ ಮೂರು ತಿಂಗಳುಗಳಲ್ಲಿ ನನ್ನೊಡನೆ ಸ್ನಾನವನ್ನು ಮಾಡಲು ನಿನ್ನ ಸಕಲ ಕಲ್ಮಷಗಳೂ ಕಳೆದುಹೋಗುವುವು.

೪೫. ಮಾಘಮಾಸದಲ್ಲಿ ಸೂರ್ಯೋದಯವಾಗುತ್ತಲೆ ಸಕಲ ಪಾಪಗಳನ್ನೂ ನಾಶಮಾಡುವ ಈ ತೀರ್ಥದ ತೀರದಲ್ಲಿ ವಿಷ್ಣುಪೂಜೆಗಾಗಿ ಗೋಮಯದಿಂದ ಲೇಪನೆಯನ್ನು ಮಾಡಿದ ಒಂದು ಸ್ಥಳವನ್ನು ಸಿದ್ಧಗೊಳಿಸು.

೪೬. ಮಂಗಲಪ್ರದವಾದ ಈ ಮಾಸದಲ್ಲಿ ರಂಗವಲ್ಲಿಯೇ ಮೊದಲಾದ ಧಾತುಗಳಿಂದ ಪದ್ಮ, ಸ್ವಸ್ತಿಕ ಮುಂತಾದ ಚಿತ್ರಗಳನ್ನು ಬರೆದು ನನ್ನೊಡನೆ ವಿಷ್ಣುಸೇವೆಯನ್ನು ಮಾಡು.

೪೭. ಈ ಮಾಘಮಾಸದಲ್ಲಿ ಪರಮಾತ್ಮನಿಗಾಗಿ ದೀಪದ ಬತ್ತಿಗಳನ್ನೂ ಮಾಡು. ಮತ್ತು ಮಹಾವಿಷ್ಣುವಿನ ಮುಂದುಗಡೆಯಲ್ಲಿ ಧೂಪವನ್ನೂ ದೀಪವನ್ನೂ ಭಕ್ತಿಯಿಂದ ಸಮರ್ಪಿಸು.

೪೮-೪೯. ಮಹಾದೇವನಾದ ಶ್ರೀನಿವಾಸನ ನೈವೇದ್ಯಕ್ಕಾಗಿ ಶುಚಿರ್ಭೂತಳಾಗಿ ಪಾಕವನ್ನು ಸಿದ್ಧಗೊಳಿಸು. ಮತ್ತು ಈ ಮಾಸದಲ್ಲಿ ನನ್ನೊಡನೆ ದೇವೋತ್ತಮನಾದ ವಿಷ್ಣುವಿಗೆ ಭಕ್ತಿಯಿಂದ ಪ್ರದಕ್ಷಿಣೆ ನಮಸ್ಕಾರಗಳನ್ನೂ ಸೇವೆಗಳನ್ನೂ ಮಾಡುತ್ತಿರು. ಪ್ರತಿದಿನವೂ ಆಲಸಿಕೆಯಿಲ್ಲದಂತೆ ವಿಷ್ಣುವಿನ ಚರಿತ್ರೆಯ ರೂಪವಾದ ಪುರಾಣಗಳನ್ನು ಶ್ರವಣಮಾಡುತ್ತಿರು.

ನಿತ್ಯಂ ಸ್ನಾತ್ವಾ ಪ್ರಯತ್ನೇನ ಪಿಬ ಪಾದೋದಕಂ ಹರೇಃ ।
ಕೃಷ್ಣ ವಿಷ್ಣೋ ಮುಕುಂದೇತಿ ನಾರಾಯಣ ಜನಾರ್ದನ ॥ ೫೦ ॥
ಅಚ್ಯುತಾನಂತ ವಿಶ್ವಾತ್ಮನ್ನಿತಿ ಕೀರ್ತಯ ಸಂತತಂ ।
ಕ್ರೋಧಮಾತ್ಸರ್ಯಲೋಭಾದೀಂಸ್ತ್ಯಕ್ತ್ವಾ ತ್ವಂ ವ್ರತಮಾಚರ ॥ ೫೧ ॥
ತೇನ ತೇ ಜಾಯತೇ ಮುಕ್ತಿರ್ವಿಷ್ಣುಲೋಕಶ್ಚ ಶಾಶ್ವತಃ ।
ಇತ್ಥಂ ಸಾ ಭರ್ತೃಗದಿತಂ ಶ್ರುತ್ವಾ ಗಂಧರ್ವವಲ್ಲಭಾ ।
ಭರ್ತಾರಮಬ್ರವೀತ್ಕೋಪಾದಸಹ್ಯಂ ದುರ್ಗತಿಪ್ರದಂ ॥ ೫೨ ॥
ಮಾಘೇ ಚೋದ್ಭೂತಶೀತೇ ತು ಪ್ರಾತರ್ಮಂದೋದಿತೇ ರವೌ ।
ಕಥಂ ನಿಮಜ್ಜಯೇದಸ್ಮಿನ್ಮಾಘೇ ಶೀತಾರ್ತಿದೇಽನಘ ॥ ೫೩ ॥
ಯತ್ತ್ವಯೋಕ್ತಾನಿ ಕರ್ಮಾಣಿ ನ ಶಕ್ಯಾನಿ ಮಯಾಸಕೃತ್ ।
ನ ಕರೋಮಿ ಪತೇ ಸ್ನಾನಂ ಪ್ರಾತಃಕಾಲೇ ತ್ವಯಾ ಸಹ ॥ ೫೪ ॥
ಮೃತೌ ಶೀತಾತಿಪಾತೇನ ನ ಚ ಮೇ ರಕ್ಷಕೋ ಭವಾನ್ ।
ಇತ್ಯೇವಮುದಿತಂ ಶ್ರುತ್ವಾ ಪತಿರ್ಗಂಧರ್ವವಲ್ಲಭಃ ॥ ೫೫ ॥

---

೫೦–೫೧. ನಿತ್ಯವೂ ಪ್ರಯತ್ನದಿಂದ ಸ್ನಾನಮಾಡಿ ಹರಿಯ ಪಾದೋದಕವನ್ನು ಸೇವಿಸು. ಕೃಷ್ಣ, ವಿಷ್ಣು, ಮುಕುಂದ, ನಾರಾಯಣ, ಜನಾರ್ದನ, ಅಚ್ಯುತ, ಅನಂತ, ವಿಶ್ವಾತ್ಮ ಮುಂತಾದ ಹರಿನಾಮಗಳನ್ನು ನಿರಂತರವೂ ಪಠಿಸುತ್ತಿರು. ಕ್ರೋಧ, ಮಾತ್ಸರ್ಯ, ಲೋಭಗಳೇ ಮುಂತಾದ ದುರ್ಗುಣಗಳೆಲ್ಲವನ್ನೂ ಬಿಟ್ಟು ನೀನು ಈ ವ್ರತವನ್ನಾಚರಿಸು.

೫೨. ಇದರಿಂದ ನಿನಗೆ ಮೋಕ್ಷವೂ ಶಾಶ್ವತವಾದ ವಿಷ್ಣುಲೋಕಪ್ರಾಪ್ತಿಯೂ ಉಂಟಾಗುವುದು.'' ಇಂತೆಂದು ಪತಿಯು ಹೇಳಿದ ಮಾತುಗಳನ್ನು ಕೇಳಿ ಆ ಗಂಧರ್ವಪತ್ನಿಯು ಕೋಪಗೊಂಡು ಸಹಿಸಲಶಕ್ಯವೂ ನರಕಪ್ರದವೂ ಆದ ಮಾತನ್ನು ಹೇಳತೊಡಗಿದಳು :—

೫೩. ''ವಿಪರೀತವಾದ ಶೀತದಿಂದ ಕೂಡಿದ ಮಾಘಮಾಸದಲ್ಲಿ ಪ್ರಾತಃಕಾಲದ ಸೂರ್ಯನು ಮಂದರಶ್ಮಿಯಾಗಿ ಉದಯಿಸುತ್ತಿರಲು ನಾನು ಶೀತರೋಗವನ್ನುಂಟುಮಾಡುವ ನೀರಿನಲ್ಲಿ ಹೇಗೆ ಸ್ನಾನಮಾಡಲಿ ?

೫೪. ನೀನು ಹೇಳಿದ ಕಾರ್ಯಗಳೆಲ್ಲವೂ ನನ್ನಿಂದ ಮಾಡಲು ಎಂದಿಗೂ ಸಾಧ್ಯವಾಗಲಾರದು. ಎಲೈ ಸ್ವಾಮಿಯೆ ! ಪ್ರಾತಃಕಾಲದಲ್ಲಿ ನಿನ್ನೊಡನೆ ನಾನು ಸ್ನಾನವನ್ನು ಖಂಡಿತವಾಗಿಯೂ ಮಾಡಲಾರೆನು.

೫೫–೫೭. ಅತ್ಯಂತ ಶೀತದಿಂದುಂಟಾದ ರೋಗದಿಂದ ನಾನು ಸಾಯುವವಳಾದರೆ ನೀನು ನನ್ನನ್ನು ರಕ್ಷಿಸಲು ಸಮರ್ಥನೂ ಅಲ್ಲ.'' ಇಂತೆಂದ ಅವಳ ಮಾತುಗಳನ್ನು ಕೇಳಿ ಗಂಡನಾದ ಆ ತುಂಬುರುಗಂಧರ್ವನು ಸ್ವಭಾವದಿಂದ

ಸ ಶಾಂತೋಽಪಿ ಶಶಾಪಾಥ ಭಾರ್ಯಾಂ ಚಾಪ್ರಿಯವಾದಿನೀಂ ।
ಪುತ್ರಂ ಚ ಧರ್ಮವಿಮುಖಂ ಭಾರ್ಯಾಂ ಚಾಪ್ರಿಯಭಾಷಿಣೀಂ ॥ ೫೬ ॥
ಅಬ್ರಹ್ಮಣ್ಯಂ ಚ ರಾಜಾನಂ ಸದ್ಯಃ ಶಾಪೇನ ದಂಡಯೇತ್ ।
ಇತಿ ನ್ಯಾಯಂ ವಿಚಿಂತ್ಯಾಸೌ ಶಶಾಪೇತ್ಥಂ ಸತೀಂ ತದಾ ॥ ೫೭ ॥
ವೇಂಕಟಾದ್ರೌ ಮಹಾಪುಣ್ಯೇ ಸರ್ವಪಾತಕನಾಶನೇ ।
ಘೋಣತೀರ್ಥಸಮೀಪೇ ಚ ಪಿಪ್ಪಲದ್ರುಮಕೋಟರೇ ॥ ೫೮ ॥
ತತ್ರಾಂಬುರಹಿತೇ ಮೂಢೇ ಮಂಡೂಕಾ ಭವ ಕೇವಲಂ ।
ಇತ್ಯೇವಂ ಭರ್ತೃವಾಕ್ಯಂ ತಚ್ಛ್ರುತ್ವಾ ಗಂಧರ್ವವಲ್ಲಭಾ ॥ ೫೯ ॥
ಪತಿತ್ವಾ ಪಾದಯೋಸ್ತಸ್ಯ ತುಂಬುರುಂ ಪ್ರಾರ್ಥಯತ್ಸತೀ ।
ವಿಶಾಪಮವದತ್ಪಶ್ಚಾದ್ಭರ್ತಾ ವೈ ತುಂಬುರುಸ್ತದಾ ॥ ೬೦ ॥
ಅಗಸ್ತ್ಯೋ ವೈ ಮಹಾಭಾಗಸ್ತಪಸ್ವೀ ವಿಜಿತೇಂದ್ರಿಯಃ ।
ಘೋಣತೀರ್ಥವರೇ ಸ್ನಾತ್ವಾ ಪೌರ್ಣಮಾಸ್ಯಾಂ ಮಹಾತಿಥೌ ॥ ೬೧ ॥
ಶಿಷ್ಯೇಭ್ಯೋ ವೈ ಯದಾ ತಸ್ಮಿನ್ನಶ್ವತ್ಥದ್ರುಮಸನ್ನಿಧೌ ।
ಘೋಣತೀರ್ಥಸ್ಯ ಮಾಹಾತ್ಮ್ಯಂ ವಕ್ತಿ ವೈ ಬ್ರಾಹ್ಮಣೋತ್ತಮಃ ॥ ೬೨ ॥

---

ಶಾಂತನಾದರೂ ಪರುಷವಾಕ್ಯಗಳನ್ನಾಡಿದ ತನ್ನ ಹೆಂಡತಿಯನ್ನು ಶಪಿಸಿದನು. “ಧರ್ಮಮಾರ್ಗವನ್ನು ಬಿಟ್ಟು ನಡೆಯುವ ಮಗನನ್ನೂ, ಅಪ್ರಿಯಗಳನ್ನಾಡುವ ಹೆಂಡತಿಯನ್ನೂ, ಬ್ರಾಹ್ಮಣರನ್ನು ಮರ್ಯಾದೆಯಿಂದ ಕಾಣದ ರಾಜನನ್ನೂ ತಕ್ಷಣದಲ್ಲಿಯೇ ಶಾಪದಿಂದ ದಂಡಿಸಬೇಕು.” ಇಂತೆಂಬ ನ್ಯಾಯವನ್ನು ಮನಸ್ಸಿಗೆ ತಂದುಕೊಂಡು ಆಗ ಪತ್ನಿಯನ್ನು ಕುರಿತು ಶಾಪವನ್ನು ಕೊಟ್ಟನು.

೫೮–೬೦. “ಮಹಾಪುಣ್ಯಕ್ಷೇತ್ರವೂ, ಸಕಲಪಾತಕಗಳನ್ನು ನಾಶಗೊಳಿಸುವುದೂ ಆದ ವೇಂಕಟಾಚಲದಲ್ಲಿರುವ ಘೋಣತೀರ್ಥದ ಸಮೀಪದ ಒಂದು ಅಶ್ವತ್ಥವೃಕ್ಷದ ಡೊಗರಿನಲ್ಲಿ ನೀರಿಲ್ಲದ ಕಡೆ ಮೂಢಳಾದ ನೀನು ಕಪ್ಪೆಯಾಗಿ ಜನ್ಮವನ್ನೆತ್ತುವವಳಾಗು.” ಇಂತೆಂದ ಗಂಡನ ಮಾತನ್ನು ಕೇಳಿ ಆ ಗಂಧರ್ವ ಸ್ತ್ರೀಯು ಆತನ ಪಾದಗಳಲ್ಲಿ ಬಿದ್ದು ಬಹುವಿಧಗಳಾಗಿ ಪ್ರಾರ್ಥಿಸಿಕೊಂಡಳು. ಆಗ ಪತಿಯಾದ ತುಂಬುರನು ಶಾಪಮೋಕ್ಷದ ಕ್ರಮವನ್ನು ಹೇಳಿದನು.

೬೧–೬೨. “ಮಹಾತ್ಮನೂ, ತಪಸ್ಸಂಪನ್ನನೂ, ಜಿತೇಂದ್ರಿಯನೂ ಆದ ಅಗಸ್ತ್ಯನು ಪೌರ್ಣಮಿಯ ಮಹಾತಿಥಿಯಲ್ಲಿ ಉತ್ತಮವಾದ ಘೋಣತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು ಅಶ್ವತ್ಥವೃಕ್ಷದ ಸಮೀಪದಲ್ಲಿ ಕುಳಿತುಕೊಂಡು ಆ ತೀರ್ಥದ ಮಾಹಾತ್ಮ್ಯೆಯನ್ನು ತನ್ನ ಶಿಷ್ಯರಿಗೆ ವಿಸ್ತಾರವಾಗಿ ಹೇಳುವನು.

ತದಾ ಪಿಪ್ಪಲವೃಕ್ಷಸ್ಯ ಕೋಟರೇ ತ್ವಂ ಸಮಾಹಿತಾ ।
ಶ್ರುತ್ವಾ ವೈ ಘೋಣತೀರ್ಥಸ್ಯ ಮಾಹಾತ್ಮ್ಯಂ ಮೋಕ್ಷದಾಯಕಂ ॥ ೬೩ ॥
ವಿಧೂಯ ಸರ್ವಪಾಪಾನಿ ಮಯಾ ಸಾಕಂ ರಮಿಷ್ಯಸಿ ।
ಇತ್ಯುಕ್ತ್ವಾ ವಿರರಾಮಾಥ ಧರ್ಮಪತ್ನೀ ಪತಿವ್ರತಾ ॥ ೬೪ ॥
ಭರ್ತೃಶಾಪಾನ್ಮಹಾಘೋರಾಂ ಮಂಡೂಕತನುಮಾಶ್ರಿತಾ ।
ಶೇಷಾದ್ರಿಶಿಖರೇ ತಸ್ಮಿನ್ಘೋಣತೀರ್ಥಸ್ಯ ದಕ್ಷಿಣೇ ॥ ೬೫ ॥
ಶನೈಃಶನೈರ್ಗತಾ ನಾರೀ ಪಿಪ್ಪಲದ್ರುಮಕೋಟರಂ ।
ಅಬ್ದಾಯುತಂ ಗತಂ ತಸ್ಯಾ ಅಶ್ವತ್ಥದ್ರುಮಕೋಟರೇ ॥ ೬೬ ॥
ತತಃ ಕಾಲಾಂತರೇಽಗಸ್ತ್ಯೋ ವೇಂಕಟಾದ್ರಿಂ ಮನೋಹರಂ ।
ಗತ್ವಾ ಶ್ರೀಸ್ವಾಮಿತೀರ್ಥೇ ಚ ಸ್ನಾತ್ವಾ ನಿಯಮಪೂರ್ವಕಂ ॥ ೬೭ ॥
ವರಾಹಸ್ವಾಮಿನಂ ದೇವಂ ನತ್ವಾ ತೀರ್ಥಸ್ಯ ದಕ್ಷಿಣೇ ।
ವೇಂಕಟೇಶಾಲಯಂ ಗತ್ವಾ ಶ್ರೀನಿವಾಸಂ ಕೃಪಾನಿಧಿಂ ॥ ೬೮ ॥
ವೇದವೇದ್ಯಂ ವಿಶಾಲಾಕ್ಷಂ ದೇವದೇವಂ ಸನಾತನಂ ।
ನತ್ವಾಽಗಸ್ತ್ಯೋ ಮಹಾಭಾಗೋ ಘೋಣತೀರ್ಥಂ ತತೋ ಯಯೌ ॥

---

೬೩-೬೪. ಆಗ ಆ ವೃಕ್ಷದ ಪೊಟ್ಟರೆಯಲ್ಲಿ ಕುಳಿತು ನೀನು ಮೋಕ್ಷದಾಯಕವಾದ ಘೋಣತೀರ್ಥಮಾಹಾತ್ಮ್ಯೆಯನ್ನು ಕೇಳಿ ಅದರ ಫಲವಾಗಿ ಸಕಲಪಾಪಗಳನ್ನೂ ಕಳೆದುಕೊಂಡು ಮತ್ತೆ ನನ್ನೊಡನೆ ಸೇರಿ ಸುಖಿಸುವೆ." ಇಂತೆಂದ ಪತಿಯ ಮಾತುಗಳನ್ನು ಕೇಳಿ ಪತಿವ್ರತೆಯಾದ ಆ ಗಂಧರ್ವಪತ್ನಿಯು ಮರುಮಾತಾಡಲಾರದಾದಳು.

೬೫-೬೬. ಬಳಿಕಲಾಸ್ತ್ರೀಯು ಗಂಡನ ಶಾಪದಿಂದ ಬಹಳ ಕಷ್ಟದಾಯಕವಾದ ಕಪ್ಪೆಯ ಶರೀರವನ್ನು ಹೊಂದಿ ವೇಂಕಟಾಚಲದ ಮೇಲಿರುವ ಘೋಣತೀರ್ಥದ ದಕ್ಷಿಣದಿಕ್ಕಿನಲ್ಲಿ ಅಶ್ವತ್ಥವೃಕ್ಷದ ಡೊಗರನ್ನು ಕುರಿತು ಮೆಲ್ಲಮೆಲ್ಲಗೆ ಪ್ರಯಾಣಮಾಡುವವಳಾದಳು. ಇಂತು ಆಕೆಯು ಮರದಲ್ಲಿ ವಾಸಮಾಡುತ್ತಿರಲು ಹತ್ತುಸಾವಿರ ವರ್ಷಗಳು ಕಳೆದುಹೋದುವು.

೬೭-೬೯. ಒಂದಾನೊಂದು ದಿನ ಅಗಸ್ತ್ಯಮಹರ್ಷಿಯು ಮನೋಹರವಾದ ವೇಂಕಟಾಚಲಕ್ಕೆ ಹೊರಟು ಸ್ವಾಮಿತೀರ್ಥದಲ್ಲಿ ವಿಧಿಪೂರ್ವಕವಾಗಿ ಸ್ನಾನವನ್ನು ಮಾಡಿಕೊಂಡು ಧರಣೀವರಾಹಸ್ವಾಮಿಗೆ ನಮಸ್ಕರಿಸಿ ಆ ತೀರ್ಥದ ದಕ್ಷಿಣಭಾಗದಲ್ಲಿರುವ ವೇಂಕಟೇಶ್ವರದೇವಾಲಯಕ್ಕೆ ಹೋಗಿ ಕೃಪಾಸಮುದ್ರನೂ, ವೇದವೇದ್ಯನೂ, ವಿಶಾಲಾಕ್ಷನೂ, ದೇವಾಧಿದೇವನೂ, ಅನಾದಿಪುರುಷನೂ ಆದ ಶ್ರೀ ಶ್ರೀನಿವಾಸನಿಗೆ ನಮಸ್ಕಾರವನ್ನುಮಾಡಿ ಮಹಾಭಾಗನಾದ ಆತನು ಘೋಣತೀರ್ಥದ ಸಮೀಪಕ್ಕೆ ಬಂದು ಸೇರಿದನು.

ತತ್ರ ಸ್ನಾತ್ವಾ ತೀರ್ಥವರ್ಯೇ ಸ್ವಶಿಷ್ಯೈರ್ಯೋಗಿನಾಂವರಃ ।
ಪಿಪ್ಪಲದ್ರುಮಚ್ಛಾಯಾಯಾಂ ಶಿಷ್ಯೇಭ್ಯೋ ಭಕ್ತಿಪೂರ್ವಕಂ ॥ ೭೦ ॥
ಘೋಣತೀರ್ಥಸ್ಯ ಮಾಹಾತ್ಮ್ಯಂ ಬ್ರಹ್ಮಹತ್ಯಾವಿನಾಶಕಂ ।
ಸರ್ವಮಂಗಲದಂ ಪುಣ್ಯಂ ಸರ್ವಸಂಪತ್ಪ್ರದಾಯಕಂ ॥ ೭೧ ॥
ಉಕ್ತವಾನ್ಯೋಗಿನಾಂ ಶ್ರೇಷ್ಠೋ ಹ್ಯಗಸ್ತ್ಯೋ ಭಗವಾನೃಷಿಃ ॥ ೭೨ ॥
ತದಾ ಶ್ರುತ್ವಾ ತು ವರ್ಷಾಭೂಃ ಪಾದಯೋಸ್ತಸ್ಯ ಯೋಗಿನಃ ।
ಪತಿತ್ವಾ ಜ್ಞಾನದೀಪೇನ ವಿದಿತ್ವಾ ವೈಭವಂ ಮುನೇಃ ॥ ೭೩ ॥
ಪೂರ್ವರೂಪಂ ಸಮಾಸಾದ್ಯ ನಾರೀರೂಪಂ ಮನೋಹರಂ ।
ಅಗಸ್ತ್ಯ ಯೋಗಿನಾಂ ಶ್ರೇಷ್ಠ ರಕ್ಷರಕ್ಷ ದಯಾನಿಧೇ ॥ ೭೪ ॥
ಮಾಂ ರಕ್ಷ ದಯಯಾ ಬ್ರಹ್ಮನ್ಪತಿವಾಕ್ಯವಿರೋಧಿನೀಂ ।
ಇತ್ಯುಕ್ತ್ವಾ ತಂ ವಿಶಾಲಾಕ್ಷೀ ವಿರರಾಮ ತತಃ ಪರಂ ॥ ೭೫ ॥

ಅಗಸ್ತ್ಯ ಉವಾಚ:—

ಕಾ ತ್ವಂ ಸುಶ್ರೋಣಿ ಭದ್ರಂ ತೇ ಭೇಕಜನ್ಮಪ್ರದಾಯಕಂ ।
ಪಾಪಂ ಪೂರ್ವಭವೇ ಚಾಸೀತ್ತದ್ವದಸ್ವ ಚ ಮಾ ಚಿರಂ ॥ ೭೬ ॥

---

೭೦–೭೨. ಯೋಗಿಗಳಲ್ಲಿ ಶ್ರೇಷ್ಠನೂ, ಷಡ್ಗುಣೈಶ್ವರ್ಯಾನ್ವಿತನೂ ಆದ ಅಗಸ್ತ್ಯನು ತನ್ನ ಶಿಷ್ಯರೊಡನೆ ಆ ಉತ್ತಮ ತೀರ್ಥದಲ್ಲಿ ಸ್ನಾನವನ್ನು ಮಾಡಿ ಅಶ್ವತ್ಥವೃಕ್ಷದ ನೆರಳಿನಲ್ಲಿ ಕುಳಿತು ಬ್ರಹ್ಮಹತ್ಯಾದಿ ಪಾಪಗಳನ್ನು ಕಳೆಯುವುದೂ, ಸಕಲ ಮಂಗಳಗಳನ್ನುಂಟುಮಾಡುವುದೂ, ಪುಣ್ಯಪ್ರದವೂ, ಸಕಲೈಶ್ವರ್ಯಪ್ರದವೂ ಆದ ಆ ತೀರ್ಥದ ಮಾಹಾತ್ಮ್ಯೆಯನ್ನು ಭಕ್ತಿಪೂರ್ವಕವಾಗಿ ಶಿಷ್ಯರಿಗೆಲ್ಲ ಉಪದೇಶ ಮಾಡುತ್ತಿದ್ದನು.

೭೩–೭೫. ಆಗ ಇದನ್ನೆಲ್ಲ ಕೇಳುತ್ತಿದ್ದ ಕಪ್ಪೆಯು ತನಗೆ ಸಹಜವಾದ ಜ್ಞಾನದಿಂದ ಆ ಮಹರ್ಷಿಯ ವೈಭವವನ್ನು ತಿಳಿದುಕೊಂಡು ಆತನ ಪಾದಗಳಲ್ಲಿ ಬಿದ್ದು ಮನೋಹರವೂ, ಸ್ತ್ರೀಸಹಜವೂ ಆದ ತನ್ನ ಪೂರ್ವರೂಪವನ್ನು ಪಡೆದು "ದಯಾನಿಧಿಯೆ! ನನ್ನನ್ನು ಕಾಪಾಡು, ಪತಿವಾಕ್ಯವನ್ನುಲ್ಲಂಘಿಸಿದ ನನ್ನನ್ನು ಕೃಪೆಯಿಂದ ರಕ್ಷಿಸು" ಎಂಬುದಾಗಿ ಹೇಳುತ್ತ ಸುಮ್ಮನಾದಳು.

೭೬. ಅಗಸ್ತ್ಯನು ಹೇಳುತ್ತಾನೆ:—ಮಂಗಳಾಂಗಿಯೆ! ನೀನು ಯಾರು? ನಿನಗೆ ಮಂಗಳವಾಗಲಿ. ನಿನಗೆ ಈ ಕಪ್ಪೆಯ ಜನ್ಮವು ಪ್ರಾಪ್ತವಾಗಲು ಪೂರ್ವಜನ್ಮದಲ್ಲಿ ಯಾವ ಪಾಪವನ್ನು ಮಾಡಿದ್ದೆಯೆಂಬುದನ್ನು ತಡೆಮಾಡದೆ ತಿಳಿಸು.

ನಾರ್ಯುವಾಚ :—

ತುಂಬುರುರ್ನಾಮ ಗಂಧರ್ವಃ ಸರ್ವವಿದ್ಯಾವಿಶಾರದಃ ।
ತಸ್ಯ ಭಾರ್ಯಾಸ್ಮ್ಯಹಂ ವಿಪ್ರ ಹ್ಯಗಸ್ತ್ಯ ಮುನಿಸೇವಿತ ॥ ೭೭ ॥
ಭರ್ತಾ ಮೇ ಸರ್ವಧರ್ಮಜ್ಞಸ್ತುಂಬುರುರ್ಮುನಿಸತ್ತಮಃ ।
ಸರ್ವಧರ್ಮಾನ್ಮಸೋಽಜ್ಞಾ ತ್ವಂ ಕುರು ನಿತ್ಯಂ ಮಯಾ ಸಹ ॥ ೭೮ ॥
ಪತಿವಾಕ್ಯಂ ತದಾ ಶ್ರುತ್ವಾ ಪರಲೋಕೋಪಕಾರಕಂ ।
ಅಸಹ್ಯಂ ವಾಕ್ಯಮುತ್ಯುಗ್ರಂ ದುರ್ಗತಿಪ್ರದಮೇವ ಹಿ ॥ ೭೯ ॥
ಮಯಾ ಚೋಕ್ತಂ ಹಿ ದುರ್ಬುದ್ಧ್ಯಾ ಹೇ ತಾತ ಮುನಿಸತ್ತಮ ॥ ೮೦ ॥

ಅಗಸ್ತ್ಯ ಉವಾಚ :—

ಕುಶಾಗ್ರಬುದ್ಧಿಸ್ತೇ ಭರ್ತಾ ಶಶಾಪ ತ್ವಾಂ ರುಷಾನ್ವಿತಃ ।
ಏವಂ ಶಾಪೋ ಯುಕ್ತ ಏವ ಪತಿವಾಕ್ಯವಿರೋಧಿನೀಂ ॥ ೮೧ ॥
ಪತಿವಾಕ್ಯಮನಾದೃತ್ಯ ಸ್ವೇಚ್ಛಯಾ ವರ್ತತೇ ತು ಯಾ ।
ಸಾ ನಾರೀ ನಿರಯೇ ಘೋರೇ ಪತತ್ಯಾಚಂದ್ರತಾರಕಂ ॥ ೮೨ ॥
ನ ಸ್ವಾತಂತ್ರ್ಯಂ ತು ನಾರೀಣಾಂ ನೋಲ್ಲಂಘ್ಯಂ ಪತಿಭಾಷಣಂ ।
ಪಾತಿವ್ರತ್ಯೇನ ಪುಣ್ಯೇನ ಪತಿಶುಶ್ರೂಷಣೇನ ಚ ॥ ೮೩ ॥

---

೭೭. ಸ್ತ್ರೀಯು ಹೇಳುತ್ತಾಳೆ:—ತುಂಬುರನೆಂಬ ಸಕಲವಿದ್ಯಾವಿಶಾರದನಾದ ಗಂಧರ್ವನೊಬ್ಬನಿರುವನು. ಮುನಿಸೇವಿತನಾದ ಎಲೈ ಅಗಸ್ತ್ಯನೆ! ನಾನು ಆತನ ಹೆಂಡತಿಯಾಗಬೇಕು.

೭೮. ಸಕಲ ಧರ್ಮಗಳನ್ನು ತಿಳಿದವನೂ, ಮುನಿಸತ್ತಮನೂ ಆದ ನನ್ನ ಪತಿಯು ನನ್ನನ್ನು ಕುರಿತು, "ಮನಃಪ್ರಿಯೆಯಾದ ನೀನು ನನ್ನೊಡನೆ ನಿತ್ಯವೂ ಸಕಲ ಧರ್ಮಕಾರ್ಯಗಳನ್ನು ಮಾಡುತ್ತಿರು" ಎಂಬುದಾಗಿ ಹೇಳಿದನು.

೭೯–೮೦. ತಂದೆಗೆ ಸಮಾನನಾದ ಮುನಿಶ್ರೇಷ್ಠನೆ! ಪರಲೋಕದಲ್ಲಿ ಸುಖವನ್ನುಂಟುಮಾಡತಕ್ಕ ಪತಿಯ ಆ ವಾಕ್ಯವನ್ನು ಕೇಳಿ ದುರ್ಬುದ್ಧಿಯುಳ್ಳವಳಾದ ನಾನು ಅಸಹ್ಯವೂ, ಕ್ರೂರವೂ, ನರಕಪ್ರದವೂ ಆದ ಮಾತುಗಳನ್ನಾಡಿದೆನು.

೮೧. ಅಗಸ್ತ್ಯನು ಹೇಳುತ್ತಾನೆ:—ತೀಕ್ಷ್ಣಬುದ್ಧಿಯಾದ ನಿನ್ನ ಗಂಡನು ಕೋಪಗೊಂಡು ನಿನಗೆ ಶಾಪವನ್ನು ಕೊಟ್ಟನು. ಪತಿವಾಕ್ಯಕ್ಕೆ ವಿರುದ್ಧವಾಗಿ ನಡೆದ ನಿನಗೆ ಶಾಪವು ಯುಕ್ತವೇ ಸರಿ.

೮೨. ಪತಿಯ ಮಾತುಗಳನ್ನು ಕಡೆಗಂಡು ಯಾವ ಸ್ತ್ರೀಯು ತನ್ನಿಷ್ಟದಂತೆ ನಡೆದುಕೊಳ್ಳುವಳೊ, ಅವಳು ಸೂರ್ಯಚಂದ್ರರಿರುವವರೆಗೂ ಭಯಂಕರವಾದ ನರಕದಲ್ಲಿ ಬಿದ್ದಿರುವಳು.

೮೩–೮೪. ಸ್ತ್ರೀಯರಿಗೆ ಎಂದಿಗೂ ಸ್ವಾತಂತ್ರ್ಯವೆಂಬುದಿಲ್ಲವು. ಪತಿಯ

ಸ್ತ್ರಿಯೋ ವಿಷ್ಣುಪದಂ ಯಾಂತಿ ನ ಚಾನ್ಯೈರಪಿ ಸುವ್ರತೈಃ ।
ಪತಿರ್ಮಾತಾ ಪತಿರ್ವಿಷ್ಣುಃ ಪತಿರ್ಬ್ರಹ್ಮಾ ಪತಿಃ ಶಿವಃ ॥ ೮೪ ॥
ಪತಿರ್ಗುರುಃ ಪತಿಸ್ತೀರ್ಥಮಿತಿ ಸ್ತ್ರೀಣಾಂ ವಿದುರ್ಬುಧಾಃ ।
ಪತಿವಾಕ್ಯಮುಪಾಕೃತ್ಯ ಯಾ ನಾರೀ ಸುಕೃತೈಃ ಪರೈಃ ॥ ೮೫ ॥
ಸದೈವ ಯುಜ್ಯತೇ ಸಾಪಿ ನೈವ ಶುದ್ಧಾ ಭವೇತ್ಸಕೃತ್ ।
ಪತಿಹೀನಾ ತು ಯಾ ನಾರೀ ಗುರುಭಿರ್ಧರ್ಮವಿತ್ತಮೈಃ ॥ ೮೬ ॥
ಸಾ ಕೃತಜ್ಞಾ ವಿದಧ್ಯಾತ್ತು ವ್ರತಂ ಧರ್ಮಫಲಪ್ರದಂ ।
ಪತಿನಾ ಪ್ರೇರಿತಾ ಸೈವ ಪತಿಬುದ್ಧಿಪರಾಯಣಾ ॥ ೮೭ ॥
ಪತಿಪಾದಾಬ್ಜತೀರ್ಥೇನ ಯಾ ಸ್ನಾತಾ ಸಾ ಹರಿಪ್ರಿಯಾ ।
ಸಾ ಸ್ನಾತಾ ಸರ್ವತೀರ್ಥೇಷು ಗಂಗಾದಿಷು ನ ಸಂಶಯಃ ॥ ೮೮ ॥
ತಸ್ಮಾತ್ತ್ವತ್ಕೃತದೋಷಸ್ತು ತ್ವಾಮಾಯಾತೀತಿ ತತ್ಫಲಂ ।
ಭುಂಜಂತ್ಯಾಸ್ತೇಽತ್ರ ಶೃಣ್ವಂತ್ಯಾ ಘೋಣತೀರ್ಥಸ್ಯ ವೈಭವಂ ॥ ೮೯ ॥
ಮುಕ್ತಿರಾಸೀಚ್ಛುಭಾಂಗಂ ತನ್ನಾರೀರೂಪಂ ಪುನರ್ಯಥಾ ।
ತಸ್ಮಾದ್ಘೋಣಸ್ಯ ತೀರ್ಥಸ್ಯ ತುಂಬುತೀರ್ಥಮಿತೀಹ ವೈ ॥ ೯೦ ॥

---

ಆಜ್ಞೆಯನ್ನು ಮೀರಲಾಗದು. ಪಾತಿವ್ರತ್ಯದಿಂದಲೂ, ಪುಣ್ಯಾರ್ಜನೆಯಿಂದಲೂ, ಪತಿಶುಶ್ರೂಷೆಯಿಂದಲೂ ಸ್ತ್ರೀಯರು ವೈಕುಂಠವನ್ನು ಪಡೆಯುವರೇ ಹೊರತು ಇತರ ಯಾವ ವ್ರತೋಪವಾಸಾದಿಗಳಿಂದಲೂ ಪಡೆಯಲಾರರು. ಹೆಂಡತಿಗೆ ಗಂಡನೇ ತಾಯಿಯು, ಆತನೇ ವಿಷ್ಣುವು, ಬ್ರಹ್ಮನು, ಶಿವನು.

೮೫–೮೮. ಸ್ತ್ರೀಯರಿಗೆ ಪತಿಯೇ ಗುರುವು, ತೀರ್ಥವು. ಇಂತೆಂದು ಶಾಸ್ತ್ರಜ್ಞರು ಹೇಳಿರುವರು. ಯಾವ ನಾರಿಯು ಪತಿವಾಕ್ಯವನ್ನು ಅನಾದರಣೆ ಮಾಡಿ ಇತರ ಪುಣ್ಯಕರ್ಮಗಳಲ್ಲಿ ನಿತ್ಯವೂ ಎಷ್ಟೇ ನಿರತಳಾಗಿದ್ದರೂ ಅವಳು ಎಂದಿಗೂ ಪರಿಶುದ್ಧಳೆನಿಸುವುದಿಲ್ಲ. ಸ್ತ್ರೀಯು ಅದೃಷ್ಟವಶದಿಂದ ಪತಿರಹಿತೆಯಾಗಿದ್ದಲ್ಲಿ ಧರ್ಮಜ್ಞರಾದ ಗುರುಗಳಿಂದ ಧರ್ಮಫಲವನ್ನು ಕೊಡುವ ವ್ರತ ನಿಯಮಗಳಲ್ಲಿ ಕೃತಜ್ಞತೆಯಿಂದ ನಿರತಳಾಗಿರಬೇಕು. ಯಾವಳು ಪತಿವಾಕ್ಯವನ್ನನುಸರಿಸಿ ನಡೆದುಕೊಳ್ಳುತ್ತ ಪತಿಸೇವೆಯಲ್ಲಿಯೇ ತನ್ನ ಬುದ್ಧಿಯನ್ನು ವಿನಿಯೋಗಿಸುತ್ತ ಪತಿಯ ಪಾದಗಳನ್ನು ತೊಳೆದ ನೀರಿನಲ್ಲಿ ಸ್ನಾನಮಾಡುವಳೊ, ಅವಳೇ ವಿಷ್ಣುವಿಗೆ ಅತ್ಯಂತ ಪ್ರಿಯೆಯೆನಿಸುವಳು. ಅವಳೇ ಗಂಗಾದಿ ಸಕಲ ತೀರ್ಥಗಳಲ್ಲಿಯೂ ಸ್ನಾನಮಾಡಿದವಳೆಂಬುದರಲ್ಲಿ ಸಂದೇಹವಿಲ್ಲ.

೮೯–೯೧. ಆದುದರಿಂದ ನೀನು ಮಾಡಿದ ದೋಷವೇ ನಿನಗೆ ಅಂಟಿಕೊಂಡಿರುವುದು. ಅದರ ಫಲವನ್ನು ಅನುಭವಿಸುತ್ತಿದ್ದ ನೀನು ಘೋಣತೀರ್ಥದ ಮಾಹಾತ್ಮ್ಯೆಯನ್ನು ಕೇಳುತ್ತಿರಲು ಹೀನಜನ್ಮವು ಕಳೆದು ಮೊದಲಿದ್ದಂತೆಯೇ

ಲೋಕೇ ಪ್ರಸಿದ್ಧಿರಭವದಹೋ ತೀರ್ಥಸ್ಯ ವೈಭವಂ ॥ ೯೧ ॥

ಶ್ರೀ ಸೂತ ಉವಾಚ:—

ಘೋಣತೀರ್ಥೇ ಮಹಾಪುಣ್ಯೇ ಸರ್ವಪಾಪವಿನಾಶಿನಿ ।
ಸ್ನಾಂತಿ ಯೇ ಪೌರ್ಣಮಾಸ್ಯಾಂ ವೈ ಶೌನಕಾದ್ಯಾ ಮಹೌಜಸಃ ॥ ೯೨ ॥
ತೇಷಾಂ ಕ್ರತುಫಲಂ ಪುಣ್ಯಂ ತೀರ್ಥಾಯುತಫಲಂ ಭವೇತ್ ।
ಕಪಿಲಾಗೋಸಹಸ್ರಂ ತು ಯೋ ದದಾತಿ ದಿನೇ ದಿನೇ ॥ ೯೩ ॥
ತತ್ಫಲಂ ಸಮವಾಪ್ನೋತಿ ಸ್ನಾನಾತ್ತುಂಬುರುತೀರ್ಥಕೇ ।
ರತ್ನಕೋಟಿಸಹಸ್ರಾಣಿ ಯೋ ದದಾತಿ ದಿನೇ ದಿನೇ ॥ ೯೪ ॥
ಮತ್ತೇಭಾನಾಂ ಸಹಸ್ರಾಣಿ ತಥೈವಾಶ್ವಾಯುತಾನ್ಯಪಿ ।
ತತ್ಫಲಂ ಸಮವಾಪ್ನೋತಿ ಘೋಣತೀರ್ಥಾವಗಾಹನಾತ್ ॥ ೯೫ ॥
ಕನ್ಯಾಕೋಟಿಪ್ರದಾನೇನ ಯತ್ಫಲಂ ಚರ್ಷಿಭಿಃ ಸ್ಮೃತಂ ।
ತತ್ಫಲಂ ಸಮವಾಪ್ನೋತಿ ಘೋಣತೀರ್ಥಾಚ್ಛ ಪಾವನಾತ್ ॥ ೯೬ ॥

---

ಸುಂದರವಾದ ಸ್ತ್ರೀ ರೂಪವು ನಿನಗೆ ಪ್ರಾಪ್ತವಾಯಿತು. ಈ ಕಾರಣದಿಂದಲೇ ಘೋಣತೀರ್ಥಕ್ಕೆ ತುಂಬುರುತೀರ್ಥವೆಂಬ ಹೆಸರು ಲೋಕದಲ್ಲಿ ಪ್ರಸಿದ್ಧವಾಗಿರುವುದು. ಈ ತೀರ್ಥದ ವೈಭವವು ಅತ್ಯಾಶ್ಚರ್ಯಕರವಾಗಿರುವುದು.

೯೨–೯೫. ಸೂತನು ಹೇಳುತ್ತಾನೆ:— ಮಹಾ ಪುಣ್ಯಪ್ರದವೂ, ಸಕಲ ಪಾತಕನಾಶಕವೂ ಆದ ಘೋಣತೀರ್ಥದಲ್ಲಿ ಪೂರ್ಣಿಮೆಯ ದಿನ ಯಾರು ಸ್ನಾನವನ್ನು ಮಾಡುವರೊ, ಅವರಿಗೆ ಪುಣ್ಯಪ್ರದವಾದ ಯಜ್ಞವನ್ನು ಮಾಡಿದ ಫಲವೂ, ಹತ್ತುಸಾವಿರ ತೀರ್ಥಗಳನ್ನು ಸೇವಿಸಿದ ಫಲವೂ ಲಭಿಸುವುವು. ಕಪಿಲೆಗಳಾದ ಸಾವಿರ ಆಕಳುಗಳನ್ನು ಪ್ರತಿನಿತ್ಯದಲ್ಲಿಯೂ ಯಾವನು ದಾನ ಮಾಡುವನೊ, ಅವನ ಪುಣ್ಯಕ್ಕೆ ಸಮಾನವಾದ ಫಲವನ್ನು ಮನುಷ್ಯನು ತುಂಬು ತೀರ್ಥದ ಒಂದು ಸ್ನಾನದಿಂದಲೇ ಪಡೆಯುವನು. ಪ್ರತಿದಿನವೂ ಅನೇಕ ಸಾವಿರ ಕೋಟಿ ರತ್ನಗಳನ್ನೂ, ಸಾವಿರಾರು ಮದಿಸಿದ ಆನೆಗಳನ್ನೂ, ಹತ್ತು ಸಾವಿರಗಟ್ಟಲೆಯಾಗಿ ಕುದುರೆಗಳನ್ನೂ ಯಾವನು ದಾನಮಾಡುವನೊ, ಅವನ ಪುಣ್ಯವನ್ನು ಸಾಮಾನ್ಯ ಮನುಷ್ಯನು ಘೋಣತೀರ್ಥದ ಸ್ನಾನವೊಂದರಿಂದಲೇ ಹೊಂದುವನು.

೯೬. ಒಂದು ಕೋಟಿ ಕನ್ಯಾದಾನಗಳಿಂದ ಯಾವ ಫಲವು ಸಿಕ್ಕುವುದೆಂದು ಋಷಿಗಳು ಹೇಳಿರುವರೊ, ಆ ಫಲವನ್ನೇ ಮನುಷ್ಯನು ಪವಿತ್ರವಾದ ಘೋಣ ತೀರ್ಥದಲ್ಲಿ ಸಂಪಾದಿಸುವನು.

ಹೇಮಾಂಬರಸಹಸ್ರಂ ಯಃ ಕುರುಕ್ಷೇತ್ರೇ ಪ್ರಯಚ್ಛತಿ ।
ತತ್ಫಲಂ ಸಮವಾಪ್ನೋತಿ ಘೋಣತೀರ್ಥಸ್ಯ ವೈಭವಾತ್ ॥ ೯೭ ॥
ಗುರ್ವರ್ಥೇ ಬ್ರಾಹ್ಮಣಾರ್ಥೇ ಚ ಸ್ವಾಮ್ಯರ್ಥೇ ಯಸ್ತ್ಯಜೇತ್ತನುಂ ।
ತತ್ಫಲಂ ಸಮವಾಪ್ನೋತಿ ಘೋಣತೀರ್ಥಸ್ಯ ವೈಭವಾತ್ ॥ ೯೮ ॥
ಆಪನ್ನಾರ್ತಿಹರಾಣಾಂ ಚ ತೀರ್ಥಸೇವಾಪರಾತ್ಮನಾಂ ।
ಸತ್ಯವ್ರತಾನಾಂ ಯತ್ಪುಣ್ಯಂ ಘೋಣತೀರ್ಥಾಚ್ಚ ತದ್ಭವೇತ್ ॥ ೯೯ ॥
ಯತ್ಫಲಂ ಶ್ರಾದ್ಧಕರ್ತೄಣಾಂ ಪಿತೄಣಾಮಿಂದುಸಂಕ್ಷಯೇ ।
ತತ್ಫಲಂ ಸಮವಾಪ್ನೋತಿ ಘೋಣತೀರ್ಥಾದ್ಧಿ ಪಾವನಾತ್ ॥ ೧೦೦ ॥
ಗಂಗಾಯಾಂ ನರ್ಮದಾಯಾಂ ಚ ಸರಯೂಚಂದ್ರಭಾಗಯೋಃ ।
ಸರ್ವೇಷು ಪುಣ್ಯತೀರ್ಥೇಷು ಯಃ ಸ್ನಾನಂ ಕುರುತೇ ನರಃ ।
ತತ್ಫಲಂ ಸಮವಾಪ್ನೋತಿ ಘೋಣತೀರ್ಥಾದ್ಧಿ ಪಾವನಾತ್ ॥ ೧೦೧ ॥
ತಸ್ಮಾತ್ಪುಣ್ಯತಮಂ ತೀರ್ಥಂ ಘೋಣತೀರ್ಥಂ ವಿದುರ್ಬುಧಾಃ ॥ ೧೦೨ ॥

---

೯೭. ಒಂದು ಸಾವಿರ ಪೀತಾಂಬರಗಳನ್ನು ಯಾವನು ಕುರುಕ್ಷೇತ್ರದಲ್ಲಿ ಸತ್ಪಾತ್ರಗಳಿಗೆ ದಾನಮಾಡುವನೊ, ಅವನ ಪುಣ್ಯವನ್ನೇ ಘೋಣತೀರ್ಥದ ಮಾಹಾತ್ಮ್ಯೆಯಿಂದ ಪಡೆಯುವನು.

೯೮. ಗುರುವಿಗಾಗಲಿ, ಬ್ರಾಹ್ಮಣರ ರಕ್ಷಣೆಯಲ್ಲಾಗಲಿ, ಸ್ವಾಮಿಕಾರ್ಯಕ್ಕಾಗಲಿ ಯಾವನು ದೇಹವನ್ನರ್ಪಿಸುವನೊ, ಅವನ ಪುಣ್ಯವನ್ನೇ ಮನುಷ್ಯನು ಘೋಣತೀರ್ಥಸ್ನಾನ ವೈಭವದ ಫಲವಾಗಿ ಪಡೆಯುವನು.

೯೯. ಶರಣಾಗತರ ಕಷ್ಟಗಳನ್ನು ನಿವಾರಿಸುವವರಿಗೂ, ತೀರ್ಥಗಳನ್ನು ಸೇವಿಸುವವರಿಗೂ, ಸತ್ಯವಾಕ್ಯಪರಾಯಣರಿಗೂ ಯಾವ ಪುಣ್ಯವು ಲಭಿಸುವುದೊ, ಘೋಣತೀರ್ಥದ ಸ್ನಾನದಿಂದಲೂ ಆ ಫಲವೇ ಲಭಿಸುವುದು.

೧೦೦. ಅಮಾವಾಸ್ಯೆಯ ದಿನದಲ್ಲಿ ಪಿತೃಗಳಿಗೆ ಶ್ರಾದ್ಧಗಳನ್ನು ಮಾಡುವವರಿಗೆ ಯಾವ ಫಲವುಂಟೊ, ಆ ಪುಣ್ಯವೇ ಘೋಣತೀರ್ಥದ ಸೇವೆಯಿಂದ ಸಲ್ಲುವುದು.

೧೦೧. ಗಂಗೆ, ನರ್ಮದೆ, ಸರಯೂ, ಚಂದ್ರಭಾಗಾ ಮುಂತಾದ ಸಕಲ ಪುಣ್ಯತೀರ್ಥಗಳಲ್ಲಿಯೂ ಸ್ನಾನಗಳನ್ನು ಮಾಡಿ ಮನುಷ್ಯನು ಯಾವ ಫಲವನ್ನು ಸಂಪಾದಿಸುವನೊ, ಪಾವನವಾದ ಘೋಣತೀರ್ಥವೊಂದರಿಂದಲೇ ಅದನ್ನು ಪಡೆಯಬಹುದು.

೧೦೨. ಆದುದರಿಂದಲೇ ಘೋಣತೀರ್ಥವು ಪರಮಪುಣ್ಯತಮವೆಂದು ಬಲ್ಲವರು ಹೇಳಿರುವರು.

ಯ ಇಮಂ ಶ್ರುಣುತೇಽಧ್ಯಾಯಂ ಸರ್ವಪಾಪ ನಿಬರ್ಹಣಂ ।
ವಾಜಪೇಯಫಲಂ ತಸ್ಯ ವಿಷ್ಣುಲೋಕಶ್ಚ ಶಾಶ್ವತಃ ॥ ೧೦೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ
"ತುಂಬುರುತೀರ್ಥಮಾಹಾತ್ಮ್ಯವರ್ಣನಂ" ನಾಮ
ಷಡ್ವಿಂಶೋಽಧ್ಯಾಯಃ

---

೧೦೩. ಯಾವನು ಸಕಲ ಪಾಪಾಪನೋದಕವಾದ ಈ ಅಧ್ಯಾಯವನ್ನು ಕೇಳುವನೊ, ಅವನಿಗೆ ವಾಜಪೇಯ ಯಜ್ಞವನ್ನು ಮಾಡಿದ ಫಲವೂ, ಶಾಶ್ವತವಾದ ವಿಷ್ಣುಲೋಕನಿವಾಸವೂ ಲಭಿಸುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೆಂಕಟಾಚಲ
ಮಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ತುಂಬುರುತೀರ್ಥಮಾಹಾತ್ಮ್ಯವರ್ಣನ"
ವೆಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತವಿಂಶೋಽಧ್ಯಾಯಃ

### ಸರ್ವತೀರ್ಥಮಹಿಮೋಪಸಂಹಾರಪೂರ್ವಕ ಪುರಾಣಶ್ರವಣಪ್ರಕ್ರಿಯಾದ್ಯನುವರ್ಣನಂ

ಋಷಯ ಊಚುಃ:—

ವೇಂಕಟಾದ್ರೌ ಮಹಾಪುಣ್ಯೇ ಸರ್ವಸಂಕಟನಾಶನೇ ।
ಸಂತಿ ವೈ ಕತಿ ತೀರ್ಥಾನಿ ಸೂತ ಪೌರಾಣಿಕೋತ್ತಮ ॥ ೧ ॥
ತೇಷಾಂ ಸಂಖ್ಯಾಂ ಚ ನೋ ಬ್ರೂಹಿ ಕತಿ ಮುಖ್ಯಾನಿ ತತ್ರ ವೈ ।
ತತ್ರಾಪ್ಯತ್ಯಂತಮುಖ್ಯಾನಿ ವದ ನೋ ಮುನಿಸತ್ತಮ ॥ ೨ ॥
ಸದ್ಧರ್ಮರತಿದಾನ್ಯತ್ರ ಕತಿ ಮುಖ್ಯಾನಿ ತಾನಿ ಚ ।
ಕಾನಿ ಜ್ಞಾನಪ್ರದಾನ್ಯತ್ರ ಭಕ್ತಿವೈರಾಗ್ಯದಾನಿ ಚ ॥ ೩ ॥
ಮುಕ್ತಿಪ್ರದಾನಿ ಕಾನ್ಯತ್ರ ತಾನಿ ನೋ ವದ ಸುವ್ರತ ॥ ೪ ॥

ಶ್ರೀ ಸೂತ ಉವಾಚ:—

ಷಟ್ಷಷ್ಟಿಕೋಟಿತೀರ್ಥಾನಿ ಪುಣ್ಯಾನ್ಯತ್ರ ನಗೋತ್ತಮೇ ।
ಅಷ್ಟೋತ್ತರಸಹಸ್ರಾಣಿ ತೇಷು ಮುಖ್ಯಾನಿ ಸುವ್ರತ ॥ ೫ ॥

---

## ಕನ್ನಡದ ಅನುವಾದ

### ಸರ್ವತೀರ್ಥಮಹಿಮೆಯ ಉಪಸಂಹಾರ—ಪುರಾಣಶ್ರವಣಪ್ರಕ್ರಿಯಾದ್ಯನುವರ್ಣನ

೧. ಋಷಿಗಳು ಹೇಳುತ್ತಾರೆ:—ಪೌರಾಣಿಕರಲ್ಲಿ ಅಗ್ರಗಣ್ಯನಾದ ಸೂತನೆ! ಮಹಾಪುಣ್ಯಪ್ರದವೂ, ಸಕಲ ಕಷ್ಟಗಳನ್ನು ನಿವಾರಿಸುವುದೂ ಆದ ವೇಂಕಟಾಚಲದಲ್ಲಿ ಎಷ್ಟು ತೀರ್ಥಗಳು ನೆಲೆಗೊಂಡಿರುವುವು?

೨. ಅವುಗಳ ಸಂಖ್ಯೆಯನ್ನು ನಮಗೆ ತಿಳಿಸು. ಅವುಗಳಲ್ಲಿ ಮುಖ್ಯವಾದವುಗಳಾವುವು? ಎಲೈ ಮುನಿಶ್ರೇಷ್ಠನೆ! ಅವುಗಳಲ್ಲಿಯೂ ಅತ್ಯಂತ ಮುಖ್ಯಗಳಾದುವು ಎಷ್ಟೆಂಬುದನ್ನು ನಮಗೆ ಹೇಳು.

೩. ಆ ಮುಖ್ಯತೀರ್ಥಗಳಲ್ಲಿ ಸದ್ಧರ್ಮದಲ್ಲಿ ಆಸಕ್ತಿಯನ್ನುಂಟುಮಾಡುವ ತೀರ್ಥಗಳೆಷ್ಟು? ಜ್ಞಾನವನ್ನು ಕೊಡುವ ತೀರ್ಥಗಳಾವುವು? ಭಕ್ತಿ ಮತ್ತು ವೈರಾಗ್ಯಗಳನ್ನು ಸಂಪಾದಿಸಿಕೊಡುವುವುಗಳಾವುವು?

೪. ಎಲೈ ಸುವ್ರತನೆ! ಅವುಗಳಲ್ಲಿ ಮೋಕ್ಷವನ್ನು ಕೊಡುವ ತೀರ್ಥಗಳಾವುವೆಂಬುದನ್ನು ನಮಗೆ ಹೇಳುವವನಾಗು.

೫. ಸೂತನು ಹೇಳುತ್ತಾನೆ:—ಈ ಉತ್ತಮ ಪರ್ವತದಲ್ಲಿ ಅರುವತ್ತಾರು ಕೋಟಿ ಪುಣ್ಯತೀರ್ಥಗಳಿರುವುವು. ಎಲೈ ಶೌನಕನೆ! ಅವುಗಳಲ್ಲಿ ಒಂದು ಸಾವಿರದ ಎಂಟು ತೀರ್ಥಗಳು ಮುಖ್ಯಗಳಾಗಿರುವುವು.

ಸದ್ಧರ್ಮರತಿದಾನ್ಯತ್ರ ಸಂತಿ ಚಾಷ್ಟೋತ್ತರಂ ಶತಂ ।
ಸಹಸ್ರೇಭ್ಯಶ್ಚ ಮುಖ್ಯಾನಿ ಪೃಥಕ್ತೇಭ್ಯಶ್ಚ ತಾನಿ ಚ ॥ ೬ ॥
ಭಕ್ತಿವೈರಾಗ್ಯದಾನ್ಯತ್ರ ಷಷ್ಟಿರಷ್ಟೋತ್ತರೇ ಶತೇ ॥ ೭ ॥
ಮುಕ್ತಿದಾನ್ಯತ್ರ ಷಟ್ಚೈವ ವೇಂಕಟಾಚಲಮೂರ್ಧನಿ ।
ಸ್ವಾಮಿಪುಷ್ಕರಿಣೀ ಚೈವ ವಿಯದ್ಗಂಗಾ ತತಃ ಪರಂ ॥ ೮ ॥
ಪಶ್ಚಾತ್ಪಾಪವಿನಾಶಂ ಚ ಪಾಂಡುತೀರ್ಥಮತಃ ಪರಂ ।
ಕುಮಾರಧಾರಿಕಾತೀರ್ಥಂ ತುಂಬೋಸ್ತೀರ್ಥಮತಃ ಪರಂ ॥ ೯ ॥
ಕುಂಭಮಾಸೇ ಪೌರ್ಣಮಾಸ್ಯಾಂ ಮಘಾಯೋಗೋ ಯದಾ ಭವೇತ್ ।
ಕುಮಾರಧಾರಿಕಾಂ ಯಾಂತಿ ಸರ್ವತೀರ್ಥಾನಿ ಹೇ ದ್ವಿಜಾಃ ॥ ೧೦ ॥
ತತ್ರ ಯಃ ಸ್ನಾತಿ ವಿಪ್ರೇಂದ್ರಾ ರಾಜಸೂಯಫಲಂ ಲಭೇತ್ ।
ಮುಕ್ತಿಶ್ಚ ಭವಿತಾ ತತ್ರ ನಾತ್ರ ಕಾರ್ಯಾ ವಿಚಾರಣಾ ॥ ೧೧ ॥
ಅನ್ನದಾನವಿಧಿಸ್ತತ್ರ ಸಾರ್ಧಂ ದಕ್ಷಿಣಯಾ ದ್ವಿಜಾಃ ।
ಉತ್ತರಾಫಲ್ಗುನೀಯುಕ್ತಶುಕ್ಲಪಕ್ಷೀಯಪರ್ವಣಿ ॥ ೧೨ ॥

---

೬. ಸತ್ಕರ್ಮಗಳಲ್ಲಿ ಅಭಿಲಾಷೆಯನ್ನುಂಟುಮಾಡುವ ನೂರೆಂಟು ತೀರ್ಥಗಳಿರುವುವು. ಇವುಗಳು ಮೇಲೆ ಹೇಳಿದ ಸಾವಿರ ತೀರ್ಥಗಳಿಗಿಂತ ಬೇರೆಯಾಗಿ ಅವುಗಳಿಗಿಂತಲೂ ಮುಖ್ಯಗಳಾಗಿರುವುವು.

೭–೯. ಆ ನೂರೆಂಟು ತೀರ್ಥಗಳಲ್ಲಿ ಅರುವತ್ತು ತೀರ್ಥಗಳು ಭಕ್ತಿವೈರಾಗ್ಯಗಳನ್ನು ಕೊಡುವುವು. ಅವುಗಳಲ್ಲಿಯೂ ಮೋಕ್ಷಪ್ರದಗಳಾದುವುಗಳು ಆರು ಮಾತ್ರ ವೇಂಕಟಾಚಲದ ಮೇಲ್ಗಡೆಯಲ್ಲಿ ನೆಲಸಿರುವುವು. ಅವುಗಳಾವುವೆಂದರೆ, ಸ್ವಾಮಿಪುಷ್ಕರಿಣಿ, ಆಕಾಶಗಂಗೆ, ಪಾಪವಿನಾಶನ, ಪಾಂಡುತೀರ್ಥ, ಕುಮಾರಧಾರೆ ಮತ್ತು ತುಂಬುತೀರ್ಥಗಳು.

೧೦. ಎಲೈ ಬ್ರಾಹ್ಮಣರಿರಾ! ಕುಂಭಮಾಸದಲ್ಲಿ ಮಖಾನಕ್ಷತ್ರದಿಂದೊಡಗೂಡಿದ ಪೌರ್ಣಿಮೆಯ ದಿನದಲ್ಲಿ ಪ್ರಪಂಚದ ಸಕಲತೀರ್ಥಗಳೂ ಕುಮಾರಧಾರಾತೀರ್ಥದಲ್ಲಿ ಸನ್ನಿಹಿತಗಳಾಗುವುವು.

೧೧. ಎಲೈ ಬ್ರಾಹ್ಮಣೋತ್ತಮರಿರಾ! ಆ ಸಮಯದಲ್ಲಿ ಯಾವನು ಅಲ್ಲಿ ಸ್ನಾನವನ್ನು ಮಾಡುವನೊ, ಅವನು ರಾಜಸೂಯಯಜ್ಞದ ಪುಣ್ಯವನ್ನು ಹೊಂದುವನು. ಅವನಿಗೆ ಮೋಕ್ಷವೂ ಲಭಿಸುವುದರಲ್ಲಿ ಸಂಶಯವಿಲ್ಲ.

೧೨–೧೩. ಆಗ ಅಲ್ಲಿ ದಕ್ಷಿಣೆಯಿಂದೊಡಗೂಡಿದ ಅನ್ನದಾನವನ್ನು ಮಾಡಬೇಕೆಂದು ನಿಯಮವಿರುವುದು. ಸೂರ್ಯನು ಮೀನರಾಶಿಯಲ್ಲಿರಲು ಉತ್ತರಫಲ್ಗುನೀ ನಕ್ಷತ್ರಯುಕ್ತವಾದ ಶುಕ್ಲಪಕ್ಷದ ಪರ್ವದಿವಸದಲ್ಲಿ ಅಪರಾಹ್ಣ ಸಮಯಕ್ಕೆ ಸರಿಯಾಗಿ ಎಲ್ಲೆಡೆಗಳಿಂದಲೂ ತೀರ್ಥಗಳು ತುಂಬುತೀರ್ಥದಲ್ಲಿ

ತುಂಬೋಽಸ್ತೀರ್ಥಂ ಮೀನಸಂಸ್ಥೇ ರವೌ ತೀರ್ಥಾನಿ ಸರ್ವಶಃ ।
ಅಪರಾಹ್ಣೇ ಸಮಾಯಾಂತಿ ತತ್ರ ಸ್ನಾತೋ ನ ಜಾಯತೇ ॥ ೧೩ ॥
ಮೌಂಜೀಬಂಧಂ ವಿವಾಹಂ ಚ ಕಾರಯೇದ್ದ್ರವ್ಯದಾನತಃ ।
ಮೇಷಸಂಕ್ರಮಣೇ ಭಾನೌ ಚಿತ್ರಾನಕ್ಷತ್ರಸಂಯುತೇ ॥ ೧೪ ॥
ಪೌರ್ಣಮಾಸ್ಯಾಂ ಸಮಾಯಾಂತಿ ವಿಯದ್ಗಂಗಾಂ ತಥೈವ ಚ ।
ತತ್ರ ಸ್ನಾತ್ವಾ ನರಃ ಸದ್ಯಃ ಶತಕ್ರತುಫಲಂ ಲಭೇತ್ ॥ ೧೫ ॥
ಸುವರ್ಣಂ ತತ್ರ ದಾತವ್ಯಂ ಕನ್ಯಾದಾನಂ ವಿಶೇಷತಃ ।
ವೃಷಭಸ್ಥೇ ರವೌ ವಿಪ್ರಾ ದ್ವಾದಶ್ಯಾಂ ಹರಿವಾಸರೇ ॥ ೧೬ ॥
ಶುಕ್ಲೇ ವಾಪ್ಯಥ ಕೃಷ್ಣೇ ವಾ ಭೌಮೇನಾಪಿ ಸಮನ್ವಿತೇ ।
ಪಾಂಡುತೀರ್ಥಂ ಸಮಾಯಾಂತಿ ಗಂಗಾದೀನಿ ಜಗತ್ತ್ರಯೇ ॥ ೧೭ ॥
ತತ್ರ ಸ್ನಾತ್ವಾ ಚ ಗಾಂ ದತ್ವಾ ಮುಚ್ಯತೇ ಪ್ರತಿಬಂಧಕಾತ್ ।
ಆಶ್ವಯುಕ್ಛುಕ್ಲಪಕ್ಷೇ ಚ ಸಪ್ತಮ್ಯಾಂ ಭಾನುವಾಸರೇ ॥ ೧೮ ॥
ಉತ್ತರಾಷಾಢಯುಕ್ತಾಯಾಂ ತಥಾ ಪಾಪವಿನಾಶನಂ ।
ಉತ್ತರಾಭಾದ್ರಯುಕ್ತಾಯಾಂ ದ್ವಾದಶ್ಯಾಂ ವಾ ಸಮಾಗತಾಃ ॥ ೧೯ ॥

---

ನೆಲಸುವುದಕ್ಕೆ ಬರುವುವು. ಆಗ ಅದರಲ್ಲಿ ಸ್ನಾನವನ್ನು ಮಾಡಿದವನಿಗೆ ಪುನರ್ಜನ್ಮವಿಲ್ಲವು.

೧೪–೧೫. ಆ ತೀರ್ಥದಲ್ಲಿ ದ್ರವ್ಯದಾನದೊಡನೆ ಉಪನಯನಗಳನ್ನೂ ವಿವಾಹಗಳನ್ನೂ ಅನುಕೂಲವುಳ್ಳವರು ಮಾಡಿಸಬೇಕು. ಹಾಗೆಯೇ ಸೂರ್ಯನಿಗೆ ಮೇಷಸಂಕ್ರಮಣವೊದಗಲು ಹುಣ್ಣಿಮೆಯ ದಿನ ಚಿತ್ತಾನಕ್ಷತ್ರದ ಉದಯವಾಗಿರುವಾಗ ಸಕಲ ತೀರ್ಥಗಳೂ ಆಕಾಶಗಂಗೆಯಲ್ಲಿ ನೆಲಸುವುವು.

೧೬–೧೭. ಆ ತೀರ್ಥದ ಬಳಿಯಲ್ಲಿ ಸುವರ್ಣದಾನವನ್ನೂ ವಿಶೇಷವಾಗಿ ಕನ್ಯಾದಾನವನ್ನೂ ಮಾಡಬೇಕು. ಎಲೈ ಬ್ರಾಹ್ಮಣರಿರಾ! ಸೂರ್ಯನು ವೃಷಭಲಗ್ನಕ್ಕೆ ಬರಲು ಶುಕ್ಲ ಅಥವಾ ಕೃಷ್ಣಪಕ್ಷದ ದ್ವಾದಶಿಯ ತಿಥಿಯು ಮಂಗಳವಾರದ ದಿನವಾಗಲು, ಆ ಹರಿವಾಸರದ ದಿನ ಮೂರು ಲೋಕಗಳಲ್ಲಿರುವ ಗಂಗಾದಿ ಸರ್ವತೀರ್ಥಗಳೂ ಪಾಂಡುತೀರ್ಥವನ್ನು ಸೇರುವುವು.

೧೮–೧೯. ಅಲ್ಲಿ ಸ್ನಾನವನ್ನು ಮಾಡಿ ಗೋದಾನವನ್ನು ಮಾಡಲು ಸಕಲ ಸಂಸಾರಬಂಧಗಳಿಂದಲೂ ಮನುಷ್ಯನು ಬಿಡುಗಡೆಯನ್ನು ಹೊಂದುವನು. ಆಶ್ವಯುಜ ಮಾಸದ ಶುಕ್ಲಪಕ್ಷದಲ್ಲಿ ಸಪ್ತಮಿಯು ಭಾನುವಾರದ ದಿನ ಉತ್ತರಾಷಾಢಾ ನಕ್ಷತ್ರಯುಕ್ತವಾಗಿದ್ದರೂ, ಅಥವಾ ದ್ವಾದಶೀ ತಿಥಿಯ ದಿನ ಉತ್ತರಾಭಾದ್ರ ನಕ್ಷತ್ರವುದಿಸಿದ್ದರೂ, ಸಕಲ ತೀರ್ಥಗಳೂ ಪಾಪವಿನಾಶನ ತೀರ್ಥದಲ್ಲಿ ಸನ್ನಿಧಾನವನ್ನು ಮಾಡುವುವು.

ಶಾಲಗ್ರಾಮಶಿಲಾಂ ದತ್ವಾ ಸ್ನಾತ್ವಾ ಚ ವಿಧಿಪೂರ್ವಕಂ ।
ಮುಚ್ಯತೇ ಸರ್ವಪಾಪೈಶ್ಚ ಜನ್ಮಕೋಟಿಶತೋದ್ಭವೈಃ ॥ ೨೦ ॥
ಧನುರ್ಮಾಸೇ ಸಿತೇ ಪಕ್ಷೇ ದ್ವಾದಶ್ಯಾಮರುಣೋದಯೇ ।
ಆಯಾಂತಿ ಸರ್ವತೀರ್ಥಾನಿ ಸ್ವಾಮಿಪುಷ್ಕರಿಣೀಜಲೇ ॥ ೨೧ ॥
ತತ್ರ ಸ್ನಾತ್ವಾ ನರಃ ಸದ್ಯೋ ಮುಕ್ತಿಮೇತಿ ನ ಸಂಶಯಃ ।
ಯಸ್ಯ ಜನ್ಮಸಹಸ್ರೇಷು ಪುಣ್ಯಮೇವಾರ್ಜಿತಂ ಪುರಾ ॥ ೨೨ ॥
ತಸ್ಯ ಸ್ನಾನಂ ಭವೇದ್ವಿಪ್ರಾ ನಾನ್ಯಸ್ಯ ತ್ವಕೃತಾತ್ಮನಃ ।
ವಿಭವಾನುಗುಣಂ ದಾನಂ ಕಾರ್ಯಂ ತತ್ರ ಯಥಾವಿಧಿ ॥ ೨೩ ॥
ಶಾಲಗ್ರಾಮಶಿಲಾದಾನಂ ಗಾಂ ದದ್ಯಾಚ್ಚ ವಿಶೇಷತಃ ॥ ೨೪ ॥
ಯೇ ಶೃಣ್ವಂತಿ ಕಥಾಂ ವಿಷ್ಣೋಃ ಸದಾ ಭುವನಪಾವನೀಂ ।
ತೇ ವೈ ಮನುಷ್ಯಲೋಕೇಽಸ್ಮಿನ್ವಿಷ್ಣುಭಕ್ತಾ ಭವಂತಿ ಹಿ ॥ ೨೫ ॥
ಯದ್ಯಶಕ್ತಃ ಸದಾ ಶ್ರೋತುಂ ಕಥಾಂ ಭುವನಪಾವನೀಂ ।
ಮುಹೂರ್ತಂ ವಾ ತದರ್ಧಂ ವಾ ಕ್ಷಣಂ ವಾ ವಿಷ್ಣುಸತ್ಕಥಾಂ ।
ಯಃ ಶೃಣೋತಿ ನರೋ ಭಕ್ತ್ಯಾ ದುರ್ಗತಿರ್ನಾಸ್ತಿ ತಸ್ಯ ಹಿ ॥ ೨೬ ॥

---

೨೦. ಅಲ್ಲಿ ಸಾಲಗ್ರಾಮಶಿಲೆಯನ್ನು ದಾನಮಾಡಿ ನಿಯಮಸಹಿತನಾಗಿ ಸ್ನಾನಮಾಡಿದವನು, ನೂರುಕೋಟಿ ಜನ್ಮಗಳಲ್ಲಿ ಮಾಡಿದ ಸಕಲ ಪಾತಕಗಳಿಂದಲೂ ಮೋಕ್ಷವನ್ನು ಹೊಂದುವನು.

೨೧. ಧನುರ್ಮಾಸದ ಶುಕ್ಲಪಕ್ಷದ ದ್ವಾದಶಿಯ ದಿವಸ ಅರುಣೋದಯ ಸಮಯಕ್ಕೆ ಸಕಲ ತೀರ್ಥಗಳೂ ಸ್ವಾಮಿಪುಷ್ಕರಿಣಿಯ ನೀರಿನಲ್ಲಿ ಸೇರುವುವು.

೨೨–೨೪. ಅಲ್ಲಿ ಸ್ನಾನವನ್ನು ಮಾಡಿದ ಮನುಷ್ಯನು ತತ್‌ಕ್ಷಣದಲ್ಲಿಯೇ ಮೋಕ್ಷಪದವಿಯನ್ನು ಹೊಂದುವನು, ಸಂಶಯವಿಲ್ಲ. ಮುನ್ನು ಸಾವಿರಾರು ಜನ್ಮಗಳಲ್ಲಿ ಕೇವಲ ಪುಣ್ಯವನ್ನೇ ಯಾವನು ಸಂಪಾದಿಸಿರುವನೊ, ಅವನಿಗೆ ಮಾತ್ರ ಈ ಸ್ನಾನವು ಲಭಿಸುವುದೇ ಹೊರತು ದುರಾತ್ಮರಿಗೆ ಈ ಭಾಗ್ಯವೊದಗಲಾರದು. ಅಲ್ಲಿ ವಿಧಿಕ್ರಮವನ್ನನುಸರಿಸಿ ತನ್ನ ಶಕ್ತ್ಯನುಸಾರವಾಗಿ ಸಕಲ ದಾನಗಳನ್ನೂ ಮಾಡಬೇಕು. ವಿಶೇಷತಃ ಅಲ್ಲಿ ಸಾಲಗ್ರಾಮಗಳನ್ನೂ ಗೋವುಗಳನ್ನೂ ದಾನ ಮಾಡಬೇಕು.

೨೫. ಯಾರು ನಿರಂತರವೂ ಲೋಕವನ್ನು ಪವಿತ್ರಗೊಳಿಸುವ ವಿಷ್ಣುವಿನ ಚರಿತ್ರೆಯನ್ನು ಕೇಳುವರೊ, ಅವರೇ ಈ ಮನುಷ್ಯಲೋಕದಲ್ಲಿ ವಿಷ್ಣುಭಕ್ತರಾಗುವರು.

೨೬–೨೭. ಯಾವನಾದರೂ ಲೋಕಪಾವನವಾದ ಆ ಸತ್ಕಥೆಯನ್ನುಕೇಳಲು ಅಶಕ್ತನಾದರೆ ಒಂದು ಮುಹೂರ್ತವಾಗಲಿ, ಅರ್ಧಮುಹೂರ್ತವಾಗಲಿ, ಒಂದು

ಯತ್ಫಲಂ ಸರ್ವಯಜ್ಞೇಷು ಸರ್ವದಾನೇಷು ಯತ್ಫಲಂ ।
ಸಕೃತ್ಪುರಾಣಶ್ರವಣಾತ್ತತ್ಫಲಂ ವಿಂದತೇ ನರಃ ॥ ೨೭ ॥
ಕಲೌ ಯುಗೇ ವಿಶೇಷೇಣ ಪುರಾಣಶ್ರವಣಾದೃತೇ ।
ನಾಸ್ತಿ ಧರ್ಮಃ ಪರಃ ಪುಂಸಾಂ ನಾಸ್ತಿ ಮುಕ್ತಿಪ್ರದಂ ಪರಂ ॥ ೨೮ ॥
ಪುರಾಣಶ್ರವಣಂ ವಿಷ್ಣೋರ್ನಾಮಸಂಕೀರ್ತನಂ ಪರಂ ।
ಉಭೇ ಏವ ಮನುಷ್ಯಾಣಾಂ ಪುಣ್ಯದ್ರುಮ ಮಹಾಫಲೇ ॥ ೨೯ ॥
ಪಿಬನ್ನೇವಾಮೃತಂ ಯತ್ನಾದೇಕಃ ಸ್ಯಾದಜರಾಮರಃ ।
ವಿಷ್ಣೋಃ ಕಥಾಮೃತಂ ಕುರ್ಯಾತ್ಕುಲಮೇವಾಜರಾಮರಂ ॥ ೩೦ ॥
ಬಾಲೋ ಯುವಾಥ ವೃದ್ಧೋ ವಾ ದರಿದ್ರೋ ದುರ್ಭಗೋಽಪಿ ವಾ ।
ಪುರಾಣಜ್ಞಃ ಸದಾ ವಂದ್ಯಃಸಪೂಜ್ಯಃ ಸುಕೃತಾತ್ಮಭಿಃ ॥ ೩೧ ॥
ನೀಚಬುದ್ಧಿಂ ನ ಕುರ್ವೀತ ಪುರಾಣಜ್ಞೇ ಕದಾಚನ ।
ಯಸ್ಯ ವಕ್ತ್ರೋದ್ಗತಾ ವಾಣೀ ಕಾಮಧೇನುಃ ಶರೀರಿಣಾಂ ॥ ೩೨ ॥

---

ಕ್ಷಣವಾದರಾಗಲಿ ವಿಷ್ಣುಲೀಲೆಗಳ ಸತ್ಕಥೆಯನ್ನು ಕೇಳಲೇಬೇಕು. ಇಂತು ಭಕ್ತಿಯಿಂದ ಯಾವನು ಕೇಳುವನೊ ಅವನಿಗೆ ದುರ್ಗತಿಯು ಪ್ರಾಪ್ತವಾಗುವುದೇ ಇಲ್ಲವು. ಸಕಲ ಯಜ್ಞಗಳಿಂದಲೂ ಯಾವ ಫಲವು ಲಭಿಸುವುದೊ, ಸರ್ವ ದಾನಗಳಿಂದಲೂ ಯಾವ ಪುಣ್ಯವುಂಟಾಗುವುದೊ ಆ ಫಲವನ್ನು ಮನುಷ್ಯನು ಒಮ್ಮೆ ಪುರಾಣಶ್ರವಣವನ್ನು ಮಾಡುವುದರಿಂದಲೇ ಸಂಪಾದಿಸುವನು.

೨೮. ವಿಶೇಷವಾಗಿ ಈ ಕಲಿಯುಗದಲ್ಲಿ ಪುರಾಣಶ್ರವಣವನ್ನು ಬಿಟ್ಟಲ್ಲಿ ಮತ್ತೊಂದು ಧರ್ಮಸಾಧನವು ಮಾನವರಿಗಿಲ್ಲ. ಆದಕ್ಕಿಂತಲೂ ಉತ್ತಮವಾದ ಮೋಕ್ಷೋಪಾಯವೂ ಇಲ್ಲ.

೨೯. ಪುರಾಣಶ್ರವಣವೂ, ಶ್ರೀಹರಿಯ ನಾಮಸಂಕೀರ್ತನವೂ ಈ ಎರಡು ಮಾತ್ರ ಮನುಷ್ಯರ ಪುಣ್ಯವೆಂಬ ವೃಕ್ಷದಲ್ಲಿ ಮಹಾಫಲಗಳಾಗಿರುವುವು.

೩೦–೩೧. ಮಹತ್ಪ್ರಯತ್ನದಿಂದ ಯಾವನಾದರೂ ದೇವಲೋಕದಲ್ಲಿರುವ ಅಮೃತವನ್ನು ಪಾನಮಾಡಿದವನಾದರೆ ಅವನು ಮಾತ್ರ ಜರಾಮರಣವರ್ಜಿತ ನಾಗುವನು. ಆದರೆ ಶ್ರೀ ವಿಷ್ಣುವಿನ ಚರಿತ್ರೆಯೆಂಬ ಅಮೃತವು ಕೇಳುವವರ ಕುಲವನ್ನೇ ಮುಪ್ಪು ಸಾವುಗಳಿಂದ ಬಿಡಿಸುವುದು. ಪುರಾಣಗಳನ್ನು ತಿಳಿದವನು ಬಾಲಕನಾಗಲಿ, ಯುವಕನಾಗಲಿ, ವೃದ್ಧನಾಗಲಿ, ದುಶ್ಶೀಲನಾಗಲಿ ಆತನೇ ಪುಣ್ಯವಂತರ ನಮಸ್ಕಾರಗಳಿಗೂ ಪೂಜೆಗಳಿಗೂ ಅರ್ಹನಾದವನು.

೩೨. ಯಾವನ ಮುಖಕಮಲದಿಂದ ಮನುಷ್ಯರಿಗೆ ಕಾಮಧೇನುವಿನಂತೆ ಸಕಲೇಷ್ಟಾರ್ಥದಾಯಕವಾದ ಸತ್ಕಥೆಯು ಹೊರಡುತ್ತಿರುವುದೊ, ಅಂತಹ ಪೌರಾಣಿಕನ ವಿಷಯದಲ್ಲಿ ಎಂದಿಗೂ ನೀಚಬುದ್ಧಿಯನ್ನು ಮಾಡಬಾರದು.

ಭವಕೋಟಿಸಹಸ್ರೇಷು ಭೂತ್ವಾ ಭೂತ್ವಾವಸೀದತಾಂ ।
ಯೋ ದದಾತ್ಯಪುನರ್ವೃತ್ತಿಂ ಕೋಽನ್ಯಸ್ತಸ್ಮಾತ್ಪರೋ ಗುರುಃ ॥ ೩೩ ॥
ವ್ಯಾಸಾಸನಸಮಾರೂಢೋ ಯದಾ ಪೌರಾಣಿಕೋ ದ್ವಿಜಃ ।
ಆಸಮಾಪ್ತೇಃ ಪ್ರಸಂಗಸ್ಯ ನಮಸ್ಕುರ್ಯಾನ್ನ ಕಸ್ಯಚಿತ್ ॥ ೩೪ ॥
ನ ದುರ್ಜನಸಮಾಕೀರ್ಣೇ ನ ಶೂದ್ರಶ್ವಾಪದಾವೃತೇ ।
ದೇಶೇ ನ ದ್ಯೂತಸದನೇ ವದೇತ್ಪುಣ್ಯಕಥಾಂ ಸುಧೀಃ ॥ ೩೫ ॥
ಸುಗ್ರಾಮೇ ಸುಜನಾಕೀರ್ಣೇ ಸುಕ್ಷೇತ್ರೇ ದೇವತಾಲಯೇ ।
ಪುಣ್ಯೇ ವಾಥ ನದೀತೀರೇ ವದೇತ್ಪುಣ್ಯಕಥಾಂ ಸುಧೀಃ ॥ ೩೬ ॥
ಶ್ರದ್ಧಾಭಕ್ತಿಸಮಾಯುಕ್ತಾ ನಾನ್ಯಕಾರ್ಯೇಷು ಲಾಲಸಾಃ ।
ವಾಗ್ಯತಾಃ ಶುಚಯೋಽವ್ಯಗ್ರಾಃ ಶ್ರೋತಾರಃ ಪುಣ್ಯಭಾಗಿನಃ ॥ ೩೭ ॥
ಅಭಕ್ತ್ಯಾ ಯೇ ಕಥಾಂ ಪುಣ್ಯಾಂ ಶೃಣ್ವಂತಿ ಮನುಜಾಧಮಾಃ ।
ತೇಷಾಂ ಪುಣ್ಯಫಲಂ ನಾಸ್ತಿ ದುಃಖಂ ಜನ್ಮನಿ ಜನ್ಮನಿ ॥ ೩೮ ॥

---

೩೩. ಸಾವಿರಕೋಟಿಗಟ್ಟಳೆ ಜನ್ಮಗಳಲ್ಲಿ ಮತ್ತೆ ಮತ್ತೆ ಹುಟ್ಟಿ ಕ್ಲೇಶಪಡುವವರಿಗೆ ಪುನರಾವೃತ್ತಿರಹಿತವಾದ ಶಾಶ್ವತ ಪದವಿಯನ್ನು ಸಂಪಾದಿಸಿಕೊಡುವ ಪೌರಾಣಿಕನಿಗಿಂತ ಉತ್ತಮನಾದ ಗುರುವು ಯಾವನಿರುವನು ?

೩೪. ಪುರಾಣವನ್ನು ಹೇಳಲೆಳಸುವ ಬ್ರಾಹ್ಮಣನು ವ್ಯಾಸಾಸನವನ್ನಲಂಕರಿಸಿದಮೇಲೆ ಅಂದಿನ ಪ್ರಸಂಗವು ಮುಗಿಯುವವರೆಗೂ ಯಾವ ಕಾರಣದಿಂದಲೂ ಮತ್ತೊಬ್ಬರಿಗೆ ನಮಸ್ಕಾರವನ್ನು ಮಾಡಬಾರದು.

೩೫. ದುರ್ಜನರಿಂದ ತುಂಬಿದ ಪ್ರದೇಶದಲ್ಲಿಯೂ, ಶೂದ್ರರು ಮತ್ತು ಹಿಂಸ್ರಮೃಗಗಳಿರುವಲ್ಲಿಯೂ, ಜೂಜಾಡುವ ಮನೆಗಳಲ್ಲಿಯೂ ಬುದ್ಧಿವಂತನು ಪುರಾಣವನ್ನು ಹೇಳಬಾರದು.

೩೬. ಒಳ್ಳೆಯ ಗ್ರಾಮದಲ್ಲಿಯೂ, ಸಜ್ಜನರು ನೆರೆದಿರುವಲ್ಲಿಯೂ, ತೀರ್ಥಕ್ಷೇತ್ರದಲ್ಲಿಯೂ, ದೇವಾಲಯದಲ್ಲಿಯೂ, ಅಥವಾ ಪವಿತ್ರವಾದ ನದಿಯ ದಡದಲ್ಲಿಯೂ ಪ್ರಾಜ್ಞನು ಪುರಾಣವನ್ನು ಅನುವಾದ ಮಾಡಬೇಕು.

೩೭. ಶ್ರದ್ಧಾಭಕ್ತಿಗಳಿಂದ ಕೂಡಿದವರೂ, ಇತರ ಕಾರ್ಯಗಳಲ್ಲಿ ಆಸಕ್ತಿಯನ್ನು ಬಿಟ್ಟವರೂ, ಮಾತನಾಡದಿರುವವರೂ, ಶುಚಿಗಳೂ, ಏಕಾಗ್ರಚಿತ್ತರೂ ಆದ ಶ್ರೋತೃಗಳೇ ಪುರಾಣಶ್ರವಣದ ಪುಣ್ಯದಲ್ಲಿ ಭಾಗಿಗಳಾಗುವರು.

೩೮. ಯಾವ ನೀಚಮಾನವರು ಭಕ್ತಿರಹಿತರಾಗಿ ಪುಣ್ಯಕಥೆಯನ್ನು ಕೇಳುವರೊ, ಅವರಿಗೆ ಯಾವ ಪುಣ್ಯವೂ ಲಭಿಸುವುದಿಲ್ಲ. ಅಷ್ಟೇ ಅಲ್ಲದೆ ಜನ್ಮಜನ್ಮಗಳಲ್ಲಿಯೂ ದುಃಖವೇ ಉಂಟಾಗುವುದು.

ಪುರಾಣಂ ಯೇ ತು ಸಂಪೂಜ್ಯ ತಾಂಬೂಲಾದ್ಯೈರುಪಾಯನೈಃ ।
ಶೃಣ್ವಂತಿ ಚ ಕಥಾಂ ಪುಣ್ಯಾಂ ನ ದರಿದ್ರಾ ನ ಪಾಪಿನಃ ॥ ೩೯ ॥
ಕಥಾಯಾಂ ಕಥ್ಯಮಾನಾಯಾಂ ಯೇ ಗಚ್ಛಂತ್ಯನ್ಯತೋ ನರಾಃ ।
ಭೋಗಾಂತರೇ ಪ್ರಣಶ್ಯಂತಿ ತೇಷಾಂ ದಾರಾಶ್ಚ ಸಂಪದಃ ॥ ೪೦ ॥
ಸೋಷ್ಣೀಷಮಸ್ತಕಾ ಯೇ ಚ ಕಥಾಂ ಶೃಣ್ವಂತಿ ಪಾವನೀಂ ।
ತೇ ಬಾಲಕಾಃ ಪ್ರಜಾಯಂತೇ ಪಾಪಿನೋ ಮನುಜಾಧಮಾಃ ॥ ೪೧ ॥
ತಾಂಬೂಲಂ ಭಕ್ಷಯಂತೋ ಯೇ ಕಥಾಂ ಶೃಣ್ವಂತಿ ಪಾವನೀಂ ।
ಶ್ವವಿಷ್ಠಾಂ ಭಕ್ಷಯಂತ್ಯೇತೇ ನರಕೇ ಚ ಪತಂತಿ ಹಿ ॥ ೪೨ ॥
ಯೇ ಚ ತುಂಗಾಸನಾರೂಢಾಃ ಕಥಾಂ ಶೃಣ್ವಂತಿ ದಾಂಭಿಕಾಃ ।
ಅಕ್ಷಯ್ಯಾನ್ನರಕಾನ್ಭುಕ್ತ್ವಾ ತೇ ಭವಂತ್ಯೇವ ವಾಯಸಾಃ ॥ ೪೩ ॥
ಯೇ ಚ ವೀರಾಸನಾರೂಢಾಃ ಯೇ ಚ ಸಿಂಹಾಸನಸ್ಥಿತಾಃ ।
ಶೃಣ್ವಂತಿ ಸತ್ಕಥಾಂ ತೇ ವೈ ಭವಂತ್ಯರ್ಜುನಪಾದಪಾಃ ॥ ೪೪ ॥

---

೩೯. ಯಾವ ಮಾನವರು ಪುರಾಣಕ್ಕೆ ತಾಂಬೂಲಾದಿ ಉಪಹಾರಗಳಿಂದ ಪೂಜೆಯನ್ನು ಮಾಡಿ ಬಳಿಕ ಪುಣ್ಯಕಥೆಯನ್ನು ಕೇಳುವರೊ ಅವರು ಎಂದಿಗೂ ದರಿದ್ರರಾಗಲಿ ಪಾಪಿಗಳಾಗಲಿ ಆಗಲಾರರು.

೪೦. ಕಥೆಯನ್ನು ಅನುವಾದ ಮಾಡುತ್ತಿರುವಾಗ ಮಧ್ಯದಲ್ಲಿಯೇ ಯಾರು ಹೊರಟುಹೋಗುವರೊ, ಅವರ ಸ್ತ್ರೀಯರೂ, ಐಶ್ವರ್ಯವೂ ಅನುಭವಿಸುತ್ತಿರುವ ಮಧ್ಯದಲ್ಲಿಯೇ ಅದೃಶ್ಯವಾಗುವುವು.

೪೧. ಉಷ್ಣೀಷಾದಿಗಳನ್ನು ತಲೆಯಲ್ಲಿ ಧರಿಸಿಕೊಂಡು ಯಾವ ಮಾನವಾಧಮರು ಪುಣ್ಯಕಥೆಯನ್ನು ಕೇಳುವರೊ, ಅವರು ಜನ್ಮಾಂತರದಲ್ಲಿ ಮೂಢರಾಗಿಯೂ ಪಾಪಿಗಳಾಗಿಯೂ ಹುಟ್ಟುವರು.

೪೨. ಯಾರು ತಾಂಬೂಲಚರ್ವಣವನ್ನು ಮಾಡುತ್ತ ಪವಿತ್ರವಾದ ಹರಿಕಥೆಯನ್ನು ಕೇಳುವರೊ ಅವರು ನಾಯಿಯ ಮಲವನ್ನು ಭಕ್ಷಣೆಮಾಡುವರಾಗಿ ನರಕದಲ್ಲಿ ಬೀಳುವರು.

೪೩. ಯಾವ ದಾಂಭಿಕರು ಉನ್ನತವಾದ ಆಸನದಲ್ಲಿ ಕುಳಿತುಕೊಂಡು ಕಥೆಯನ್ನು ಕೇಳುವರೊ, ಅವರು ಅನೇಕ ಕಾಲ ಬಹುವಿಧಗಳಾದ ನರಕಗಳನ್ನನುಭವಿಸಿ ಬಳಿಕ ಕಾಗೆಗಳಾಗಿ ಹುಟ್ಟುವರು.

೪೪. ವೀರಾಸನವನ್ನಾಗಲಿ ಸಿಂಹಾಸನದಲ್ಲಾಗಲಿ ಕುಳಿತುಕೊಂಡು ಸತ್ಕಥೆಯನ್ನು ಕೇಳುವವರು ಅರ್ಜುನವೃಕ್ಷಗಳಾಗಿ ಜನಿಸುವರು.

ಅಸಂಪ್ರಣಮ್ಯ ಶೃಣ್ವಂತೋ ವಿಷವೃಕ್ಷಾ ಭವಂತಿ ಹಿ ।
ತಥಾ ಶಯಾನಾಃ ಶೃಣ್ವಂತೋ ಭವಂತ್ಯಜಗರಾ ಹಿ ತೇ ॥ ೪೫ ॥
ಯಃ ಶೃಣೋತಿ ಕಥಾಂ ವಕ್ತುಃ ಸಮಾನಾಸನಸಂಸ್ಥಿತಃ ।
ಗುರುತಲ್ಪಸಮಂ ಪಾಪಂ ಸಂಪ್ರಾಪ್ಯ ನರಕಂ ವ್ರಜೇತ್ ॥ ೪೬ ॥
ಯೇ ನಿಂದಂತಿ ಪುರಾಣಜ್ಞಂ ಸತ್ಕಥಾಂ ಪಾಪಹಾರಿಣೀಂ ।
ತೇ ವೈ ಜನ್ಮಶತಂ ಮರ್ತ್ಯಾಃ ಶುನಕಾಶ್ಚ ಭವಂತಿ ಹಿ ॥ ೪೭ ॥
ಕಥಾಯಾಂ ಕೀರ್ತ್ಯಮಾನಾಯಾಂ ಯೇ ವದಂತಿ ದುರುತ್ತರಂ ।
ತೇ ಗರ್ದಭಾಃ ಪ್ರಜಾಯಂತೇ ಕೃಕಲಾಸಾಸ್ತತಃ ಪರಂ ॥ ೪೮ ॥
ಕದಾಚಿದಪಿ ಯೇ ಪುಣ್ಯಾಂ ನ ಶೃಣ್ವಂತಿ ಕಥಾಂ ನರಾಃ ।
ತೇ ಭುಕ್ತ್ವಾ ನರಕಾನ್ಘೋರಾನ್ಭವಂತಿ ವನಸೂಕರಾಃ ॥ ೪೯ ॥
ಕಥಾಯಾಂ ಕೀರ್ತ್ಯಮಾನಾಯಾಂ ವಿಘ್ನಂ ಕುರ್ವಂತಿ ಯೇ ನರಾಃ ।
ಕೋಟ್ಯಬ್ದಂ ನರಕಾನ್ಭುಕ್ತ್ವಾ ಭವಂತಿ ಗ್ರಾಮಸೂಕರಾಃ ॥ ೫೦ ॥

---

೪೫. ಪೌರಾಣಿಕನಿಗೆ ನಮಸ್ಕರಿಸದೆ ಕಥೆಯನ್ನು ಕೇಳುವವರು ವಿಷವೃಕ್ಷ ಗಳಾಗುವರು. ಮತ್ತು ಮಲಗಿಕೊಂಡು ಹರಿಕಥೆಗಳನ್ನು ಕೇಳುವವರು ಅಜಗರ ಸರ್ಪಗಳಾಗಿ ಜನಿಸುವರು.

೪೬. ಪೌರಾಣಿಕನ ಆಸನಕ್ಕೆ ಸಮಾನವಾದ ಆಸನದಲ್ಲಿ ಕುಳಿತುಕೊಂಡು ಯಾವನು ಕಥೆಯನ್ನು ಕೇಳುವನೊ ಅವನಿಗೆ ಗುರುತಲ್ಪಗಮನಕ್ಕೆ ಸಮಾನವಾದ ಪಾಪವು ಸಂಭವಿಸಿ ನರಕವನ್ನು ಅನುಭವಿಸುವನು.

೪೭. ಯಾರು ಪೌರಾಣಿಕನನ್ನಾಗಲಿ ಪಾಪನಾಶಕವಾದ ಪುರಾಣ ವನ್ನಾಗಲಿ ನಿಂದಿಸುವರೊ ಆ ಮನುಷ್ಯರು ಒಂದುನೂರು ಜನ್ಮಗಳಲ್ಲಿ ನಾಯಿ ಗಳಾಗಿ ಹುಟ್ಟುವರು.

೪೮. ಕಥೆಯು ನಡೆಯುತ್ತಿರುವ ಸಮಯದಲ್ಲಿ ಯಾರು ಕೆಟ್ಟ ಮಾತು ಗಳನ್ನು ಆಡುವರೊ ಅವರು ಕತ್ತೆಗಳಾಗಿ ಹುಟ್ಟಿ ಬಳಿಕ ಹೆಂಟಿಗೊದ್ದಗಳಾಗಿ ಜನಿಸುವರು.

೪೯. ಯಾವ ಮಾನವರು ಒಮ್ಮೆಯಾದರೂ ಪರಮಾತ್ಮನ ಪುಣ್ಯ ಕಥೆ ಯನ್ನು ಕೇಳುವುದಿಲ್ಲವೊ ಅವರು ಘೋರಗಳಾದ ಅನೇಕ ನರಕಗಳನ್ನನುಭವಿಸಿ ಬಳಿಕ ಕಾಡುಹಂದಿಗಳಾಗಿ ಜನಿಸುವರು.

೫೦. ಕಥೆಯು ನಡೆಯುತ್ತಿರಲು ಯಾರು ಮಧ್ಯದಲ್ಲಿ ವಿಘ್ನವನ್ನುಂಟು ಮಾಡುವರೊ ಅವರು ಒಂದುಕೋಟಿ ವರ್ಷಗಳು ನರಕಗಳನ್ನು ಅನುಭವಿಸಿ ಆ ಬಳಿಕ ನಾಯಿಗಳಾಗಿ ಹುಟ್ಟುವರು.

ಯೇ ಕಥಾಮನುಮೋದಂತೇ ಕೀರ್ತ್ಯಮಾನಾಂ ನರೋತ್ತಮಾಃ ।
ಅಶೃಣ್ವಂತೋಽಪಿ ತೇ ಯಾಂತಿ ಶಾಶ್ವತಂ ಪದಮವ್ಯಯಂ ॥ ೫೧ ॥
ಯೇ ಶ್ರಾವಯಂತಿ ಮನುಜಾಃ ಪುಣ್ಯಾಂ ಪೌರಾಣಿಕೀಂ ಕಥಾಂ ।
ಕಲ್ಪಕೋಟಿಶತಂ ಸಾಗ್ರಂ ತಿಷ್ಠಂತಿ ಬ್ರಹ್ಮಣಃ ಪದೇ ॥ ೫೨ ॥
ಆಸನಾರ್ಥಂ ಪ್ರಯಚ್ಛಂತಿ ಪುರಾಣಜ್ಞಸ್ಯ ಯೇ ನರಾಃ ।
ಕಂಬಲಾಜಿನವಾಸಾಂಸಿ ತಥಾ ಮಂಚಕಮೇವ ಚ ॥ ೫೩ ॥
ಸ್ವರ್ಗಲೋಕಂ ಸಮಾಸಾದ್ಯ ಭುಕ್ತ್ವಾ ಭೋಗಾನ್ಯಥೇಪ್ಸಿತಾನ್ ।
ಸ್ಥಿತ್ವಾ ಬ್ರಹ್ಮಾದಿಲೋಕೇಷು ಪದಂ ಯಾಂತಿ ನಿರಾಮಯಂ ॥ ೫೪ ॥
ಪುರಾಣಸ್ಯ ಪ್ರಯಚ್ಛಂತಿ ಯೇ ಚ ಸೂತ್ರಂ ನವಂ ವರಂ ।
ಭೋಗಿನೋ ಜ್ಞಾನಸಂಪನ್ನಾಸ್ತೇ ಭವಂತಿ ಭವೇ ಭವೇ ॥ ೫೫ ॥
ಯೇ ಮಹಾಪಾತಕೈರ್ಯುಕ್ತಾ ಹ್ಯುಪಪಾತಕಿನಶ್ಚ ಯೇ ।
ಪುರಾಣಶ್ರವಣಾದೇವ ತೇ ಯಾಂತಿ ಪರಮಂ ಪದಂ ॥ ೫೬ ॥

---

೫೧. ಯಾವ ಉತ್ತಮಪುರುಷರು ಪೌರಾಣಿಕನು ಹೇಳುತ್ತಿರುವ ಕಥೆಯನ್ನು ಶ್ಲಾಘನೆ ಮಾಡುವರೊ, ಅಂತಹವರು ಕಥೆಯನ್ನು ಕೇಳದವರಾದರೂ ಶಾಶ್ವತವೂ ನಾಶರಹಿತವೂ ಆದ ಪರಮಪದವನ್ನು ಹೊಂದುವರು.

೫೨. ಯಾವ ಮಾನವರು ಇತರರಿಗೆ ಪುರಾಣಗಳ ಸತ್ಕಥೆಗಳನ್ನು ಕೇಳುವ ಅನುಕೂಲವನ್ನು ಕಲ್ಪಿಸಿಕೊಡುವರೊ, ಅವರು ಒಂದುನೂರು ಕೋಟಿ ಕಲ್ಪಗಳು ಪೂರ್ತಿಯಾಗಿ ಬ್ರಹ್ಮಲೋಕದಲ್ಲಿ ವಾಸಮಾಡುವರು.

೫೩–೫೪. ಪೌರಾಣಿಕನಿಗೆ ಆಸನಕ್ಕಾಗಿ ಯಾರು ಕಂಬಳಿಯನ್ನಾಗಲಿ, ಚರ್ಮವನ್ನಾಗಲಿ, ಬಟ್ಟೆಯನ್ನಾಗಲಿ, ಕಾಲುಮಣೆಯನ್ನಾಗಲಿ ಒದಗಿಸಿ ಕೊಡುವರೊ, ಅವರು ಸ್ವರ್ಗಲೋಕವನ್ನು ಸೇರಿ ಅಪೇಕ್ಷಿಸಿದ ಭೋಗಗಳನ್ನೆಲ್ಲ ಅನುಭವಿಸಿ ಬ್ರಹ್ಮನ ಸತ್ಯಲೋಕವೇ ಮೊದಲಾದವುಗಳಲ್ಲಿ ಬಹಳ ಕಾಲವಿದ್ದು ದುಃಖರಹಿತವಾದ ಪದವಿಯನ್ನು ಹೊಂದುವರು.

೫೫. ಪುರಾಣ ಗ್ರಂಥಕ್ಕಾಗಿ ಯಾರು ಹೊಸದೂ, ಉತ್ತಮವೂ ಆದ ದಾರವನ್ನು ಕೊಡುವರೊ, ಅವರು ಸಕಲೈಶ್ವರ್ಯಗಳನ್ನೂ ಅನುಭವಿಸಿ ಪ್ರತಿಯೊಂದು ಜನ್ಮದಲ್ಲಿಯೂ ಪರಮಾತ್ಮನ ಜ್ಞಾನವುಳ್ಳವರಾಗಿ ಹುಟ್ಟುವರು.

೫೬. ಮಹಾಪಾತಕಗಳನ್ನು ಮಾಡಿದವರಾಗಲಿ ಉಪಪಾತಕಗಳಲ್ಲಿ ನಿರತರಾದವರಾಗಲಿ ಅವರೆಲ್ಲರೂ ಪುರಾಣವನ್ನು ಶ್ರವಣ ಮಾಡುವುದರಿಂದಲೇ ಪರಮಪದವನ್ನು ಹೊಂದುವರು.

**ವೇಂಕಟಾದ್ರೇಸ್ತು ಮಾಹಾತ್ಮ್ಯಂ ಶ್ರುತ್ವಾ ತ ಋಷಯಸ್ತತಃ ।**
**ವ್ಯಾಸಪ್ರಸಾದಸಂಪನ್ನಂ ಸೂತಂ ಪೌರಾಣಿಕೋತ್ತಮಂ ।**
**ಪೂಜಯಿತ್ವಾ ಯಥಾನ್ಯಾಯಂ ಪ್ರಹರ್ಷಮತುಲಂಗತಾಃ ॥ ೫೭ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ
"ಸರ್ವತೀರ್ಥಮಹಿಮೋಪಸಂಹಾರಪೂರ್ವಕ ಪುರಾಣಶ್ರವಣಪ್ರಕ್ರಿಯಾದ್ಯನು
ವರ್ಣನಂ" ನಾಮ ಸಪ್ತವಿಂಶೋಽಧ್ಯಾಯಃ

---

೫೭. ಇಂತು ನೈಮಿಷಾರಣ್ಯವಾಸಿಗಳಾದ ಶೌನಕಾದಿ ಋಷಿಗಳೆಲ್ಲರೂ ವೇಂಕಟಾಚಲದ ಮಾಹಾತ್ಮ್ಯೆಯನ್ನು ಕೇಳಿದವರಾಗಿ ವ್ಯಾಸರ ಅನುಗ್ರಹದಿಂದ ಜ್ಞಾನಸಂಪನ್ನನೂ, ಪೌರಾಣಿಕೋತ್ತಮನೂ ಆದ ಸೂತನನ್ನು ಉಚಿತ ಮರ್ಯಾದೆಗಳಿಂದ ಪೂಜೆ ಮಾಡಿ ಅಪರಿಮಿತವಾದ ಆನಂದವನ್ನು ಹೊಂದಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ವೈಷ್ಣವಖಂಡದ ಎರಡನೆಯ ಶ್ರೀ ವೇಂಕಟಾಚಲ
ಮಾಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ಸರ್ವತೀರ್ಥಮಹಿಮೆಯ
ಉಪಸಂಹಾರ—ಪುರಾಣಶ್ರವಣಪ್ರಕ್ರಿಯಾದ್ಯನುವರ್ಣನ"ವೆಂಬ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟಾವಿಂಶೋಽಧ್ಯಾಯಃ

### ಸೂತಶೌನಕಸಂವಾದೇ ಕಟಾಹತೀರ್ಥಪ್ರಶಂಸನಂ

ಋಷಯ ಊಚುಃ:—

ಸೂತ ಸರ್ವಾರ್ಥತತ್ತ್ವಜ್ಞ ವೇದವೇದಾಂತಪಾರಗ ।
ಶ್ರೀವೇಂಕಟಾಚಲೇ ತೀರ್ಥಂ ಕಟಾಹಾಖ್ಯಂ ಸುಪಾವನಂ ॥ ೧ ॥
ಶ್ರೂಯತೇ ತಸ್ಯ ಮಾಹಾತ್ಮ್ಯಂ ಘುಷ್ಯತೇ ಚ ಜಗತ್ತ್ರಯೇ ।
ಅಸ್ಮಾಕಮೇತದ್ಬ್ರೂಹಿ ತ್ವಂ ಕೃಪಯಾ ವ್ಯಾಸಶಾಸಿತ ॥ ೨ ॥

ಶ್ರೀ ಸೂತ ಉವಾಚ:—

ಪುರಾ ವೈ ನಾರದಃ ಶ್ರೀಮಾನ್ಬ್ರಹ್ಮಪುತ್ರೋ ಮಹಾನೃಷಿಃ ।
ದೃಷ್ಟ್ವಾ ವೈ ನೈಮಿಷಾರಣ್ಯಂ ಸಂಪ್ರಾಪ್ತೋ ದ್ವಿಜಸತ್ತಮಃ ॥ ೩ ॥
ತದಾನೀಂ ಬ್ರಹ್ಮಪುತ್ರಂ ತಮರ್ಘ್ಯಪಾದ್ಯಾದಿಭಿಃ ಶುಭೈಃ ।
ಪೂಜಾಯಿತ್ವಾ ಯಥಾನ್ಯಾಯಂ ಪವಿತ್ರೇ ಚ ಕುಶಾಸನೇ ॥ ೪ ॥
ಸನ್ನಿವೇಶ್ಯ ಮಹಾಭಕ್ತ್ಯಾ ವಿನಯಾನತಕಂಧರಾಃ ।
ಪ್ರಣಮ್ಯ ಪ್ರಾರ್ಥಯಾಮಾಸುರಿಮೇ ಸರ್ವೇ ಮಹರ್ಷಯಃ ॥ ೫ ॥

---

## ಕನ್ನಡದ ಅನುವಾದ

### ಸೂತಶೌನಕಸಂವಾದ—ಕಟಾಹತೀರ್ಥಪ್ರಶಂಸನ

೧–೨. ಋಷಿಗಳು ಹೇಳುತ್ತಾರೆ:—ಸಕಲ ಪದಾರ್ಥಗಳ ತತ್ತ್ವವನ್ನರಿತ ವನೂ, ವೇದ ವೇದಾಂತಗಳಲ್ಲಿ ಪಾರದರ್ಶಿಯೂ ಆದ ಸೂತನೆ! ಶ್ರೀ ವೇಂಕಟ ಶೈಲದಲ್ಲಿ ಪರಮ ಪಾವನವಾದ ಕಟಾಹವೆಂಬ ತೀರ್ಥವಿರುವುದೆಂದು ಕೇಳಿರು ವೆವು. ಅದರ ಮಾಹಾತ್ಮ್ಯವು ಮೂರು ಲೋಕಗಳಲ್ಲಿಯೂ ಕೀರ್ತಿಸಲ್ಪಡು ತ್ತಿರುವುದು. ನೀನು ವ್ಯಾಸರ ಶಿಷ್ಯನಾದುದರಿಂದ ಎಲ್ಲವನ್ನೂ ಬಲ್ಲೆ. ನಮ್ಮಲ್ಲಿ ಕೃಪೆಯನ್ನಿಟ್ಟು ಆ ತೀರ್ಥದ ಕಥೆಯನ್ನು ಹೇಳು.

೩. ಸೂತನು ಹೇಳುತ್ತಾನೆ:— ಪೂರ್ವದಲ್ಲಿ ಬ್ರಹ್ಮಮಾನಸಪುತ್ರನೂ, ಮಹರ್ಷಿಯೂ, ಬ್ರಾಹ್ಮಣೋತ್ತಮನೂ ಆದ ಶ್ರೀ ನಾರದ ಮುನಿಯು ತನ್ನ ಸಂಚಾರಕ್ರಮದಲ್ಲಿ ನೈಮಿಷಾರಣ್ಯವನ್ನು ಕಂಡು ಅಲ್ಲಿಗೆ ಬಿಜಮಾಡಿದನು.

೪–೫. ಆಗ ಅಲ್ಲಿರುವ ಮಹರ್ಷಿಗಳೆಲ್ಲ ಆ ಬ್ರಹ್ಮಪುತ್ರನನ್ನು ಪವಿತ್ರ ಗಳಾದ ಅರ್ಘ್ಯಪಾದ್ಯಾದಿಗಳಿಂದ ಉಚಿತ ರೀತಿಯಲ್ಲಿ ಸತ್ಕರಿಸಿ ಪವಿತ್ರವಾದ ಕುಶಾಸನದಲ್ಲಿ ಕುಳ್ಳಿರಿಸಿ ಅಪರಿಮಿತವಾಧ ಭಕ್ತಿಯಿಂದ ತಲೆಗಳನ್ನು ಬಗ್ಗಿಸಿ ಕೊಂಡು ನಮಸ್ಕರಿಸಿ ಇಂತೆಂದು ಪ್ರಾರ್ಥನೆಯನ್ನು ಮಾಡಿದರು.

ತ್ವಾಂ ವಿನಾ ನಾರದ ಶ್ರೀಮನ್ನಸ್ಮಾಕಂ ಭುವನತ್ರಯೇ ।
ಧರ್ಮೋಪದೇಶಕಃ ಕಶ್ಚಿನ್ನಾಸ್ತಿ ನಾಸ್ತಿ ಮಹರ್ಷಿಷು ॥ ೬ ॥
ವೇಂಕಟಾದ್ರೌ ಮಹಾಪುಣ್ಯೇ ಸರ್ವದೇವನಿಷೇವಿತೇ ।
ವೈಕುಂಠಾದಾಗತೇ ದಿವ್ಯೇ ಸಿದ್ಧಗಂಧರ್ವಸೇವಿತೇ ॥ ೭ ॥
ಕಟಾಹತೀರ್ಥಮಾಹಾತ್ಮ್ಯಂ ವರ್ಣಯಾದ್ಯ ವನೌಕಸಾಂ ॥ ೮ ॥

ಶ್ರೀ ನಾರದ ಉವಾಚ :—

ಶೃಣುಧ್ವಮೃಷಯಃ ಸರ್ವೇ ಶೌನಕಾದ್ಯಾ ಮಹೌಜಸಃ ।
ಕಟಾಹತೀರ್ಥಮಾಹಾತ್ಮ್ಯಂ ಕೋ ವೇತ್ತಿ ಭುವನತ್ರಯೇ ॥ ೯ ॥
ಮಹಾದೇವೋ ವಿಜಾನಾತಿ ತಸ್ಯ ತೀರ್ಥಸ್ಯ ವೈಭವಂ ।
ಯಾನಿ ಕಾನಿ ಚ ಪುಣ್ಯಾನಿ ಬ್ರಹ್ಮಾಂಡಾಂತರ್ಗತಾನಿ ವೈ ॥ ೧೦ ॥
ತಾನಿ ಗಂಗಾದಿತೀರ್ಥಾನಿ ಸ್ವಪಾಪಪರಿಶುದ್ಧಯೇ ।
ಕಟಾಹತೀರ್ಥಸೇವಾಂ ಚ ಕುರ್ವಂತಿ ದ್ವಿಜಸತ್ತಮಾಃ ॥ ೧೧ ॥
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚೇತರಜಾತಯಃ ।
ಸ್ಪೃಶಂತಿ ತಜ್ಜಲಮಿತಿ ನ ಪಿಬೇದ್ಯೋ ವಿಮೂಢಧೀಃ ॥ ೧೨ ॥

---

೬. ಎಲೈ ನಾರದಮುನಿಯೆ! ನಿನ್ನನ್ನು ಬಿಟ್ಟರೆ ನಮಗೆ ಮೂರು ಲೋಕಗಳಲ್ಲಿಯೂ ಧರ್ಮಗಳನ್ನುಪದೇಶಮಾಡುವವನು ಯಾರೂ ಮಹರ್ಷಿಗಳಲ್ಲಿಯೂ ಸಹ ಇಲ್ಲವೇ ಇಲ್ಲ.

೭–೮. ಸಕಲ ದೇವತೆಗಳಿಂದ ಸೇವೆಗೊಳ್ಳುತ್ತಿರುವುದೂ, ವೈಕುಂಠದಿಂದ ಭೂಲೋಕಕ್ಕೆ ಬಂದಿರುವುದೂ, ದಿವ್ಯವೂ, ಸಿದ್ಧಗಂಧರ್ವರ ನಿವಾಸವೂ ಆದ ಮಹಾಪುಣ್ಯಪ್ರದೇಶವಾದ ವೇಂಕಟಾಚಲದ ಮೇಲಿರುವ ಕಟಾಹ ತೀರ್ಥದ ಮಾಹಾತ್ಮ್ಯವನ್ನು ಅರಣ್ಯವಾಸಿಗಳಾದ ನಮಗೆ ವರ್ಣಿಸು.

೯. ನಾರದನು ಹೇಳುತ್ತಾನೆ:—ಮಹಾತೇಜಸ್ವಿಗಳಾದ ಶೌನಕಾದಿ ಋಷಿಗಳಿರಾ! ಎಲ್ಲರೂ ಕೇಳಿರಿ. ಕಟಾಹ ತೀರ್ಥದ ಮಾಹಾತ್ಮ್ಯವನ್ನು ತಿಳಿದವನು ಮೂರು ಲೋಕಗಳಲ್ಲಿ ಯಾವನು ತಾನೆ ಇರುವನು?

೧೦–೧೧. ಮಹದೇವನೊಬ್ಬನೇ ಆ ತೀರ್ಥದ ವೈಭವವನ್ನು ಸಮಗ್ರವಾಗಿ ತಿಳಿದಿರುವವನು. ಎಲೈ ಬ್ರಾಹ್ಮಣಶ್ರೇಷ್ಠರಿರಾ! ಬ್ರಹ್ಮಾಂಡದಲ್ಲಿ ನೆಲಸಿರುವ ಗಂಗಾದಿ ಪುಣ್ಯತೀರ್ಥಗಳು ಯಾವುವಿರುವುವೊ, ಅವುಗಳೆಲ್ಲವೂ ತಮ್ಮಲ್ಲಿ ಸೇರಿಕೊಂಡಿರುವ ಪಾಪಗಳನ್ನು ಕಳೆದುಕೊಳ್ಳಲು ಕಟಾಹ ತೀರ್ಥದ ಸೇವೆಯನ್ನು ಮಾಡುತ್ತಿರುವುವು.

೧೨–೧೩. ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ, ವರ್ಣಬಾಹಿರರಾದ ಇತರ ಜನರೂ ಆದರ ಜಲವನ್ನು ಸ್ಪರ್ಶಮಾಡುವರು. ಆ ಕಾರಣ

ಸ ಹಿ ಚಂಡಾಲತಾಂ ಪ್ರಾಪ್ಯ ಕುಂಭೀಪಾಕೇ ಪತಿಷ್ಯತಿ ।
ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತೀಶ್ವರಃ ।
ಸೇವಾಯ ತಸ್ಯ ತೀರ್ಥಸ್ಯ ಪ್ರಾಪ್ನೋತಿ ಪರಮಂ ಪದಂ ॥ ೧೩ ॥
ಶೃತಿಸ್ಮೃತಿಪುರಾಣೇಷು ತತ್ತೀರ್ಥಸ್ಯ ಪ್ರಶಂಸನಂ ।
ಬಹುಧಾ ವರ್ಣ್ಯತೇ ಪಂಚಮಹಾಪಾತಕನಾಶನಂ ॥ ೧೪ ॥
ಅತ್ಯದ್ಭುತತರಂ ವಿಪ್ರಾಃ ಸರ್ವಲೋಕೈಕಪಾವನಂ ।
ಬ್ರಹ್ಮಹತ್ಯಾಯುತಂ ಚಾಪಿ ಸುರಾಪಾನಾಯುತಂ ತಥಾ ॥ ೧೫ ॥
ಅಯುತಂ ಗುರುದಾರಾಣಾಂ ಗಮನಂ ಪಾಪಕಾರಣಂ ।
ಸ್ತೇಯಾಯುತಂ ಸುವರ್ಣಾನಾಂ ತತ್ಸಂಸರ್ಗಾಶ್ಚ ಕೋಟಯಃ ॥ ೧೬ ॥
ಶೀಘ್ರಂ ವಿಲಯಮಾಯಾಂತಿ ತಸ್ಯ ತೀರ್ಥಸ್ಯ ಸೇವಯಾ ॥ ೧೭ ॥
ಯಾನಿ ನಿಷ್ಕೃತಿಹೀನಾನಿ ಪಾಪಾನಿ ವಿವಿಧಾನಿ ಚ ।
ತಾನಿ ಸರ್ವಾಣಿ ನಶ್ಯಂತಿ ತೀರ್ಥಸ್ಯಾಸ್ಯ ನಿಷೇವಣಾತ್ ॥ ೧೮ ॥

---

ದಿಂದ ಯಾವ ಮೂಢಮಾನವನು ತೀರ್ಥೋದಕವನ್ನು ಪಾನಮಾಡುವುದಿಲ್ಲವೊ, ಅವನು ಚಂಡಾಲತ್ವವನ್ನು ಹೊಂದಿ ಕುಂಭೀಪಾಕನರಕದಲ್ಲಿ ಬೀಳುವನು. ಬ್ರಹ್ಮಚಾರಿಯಾಗಲಿ, ಗೃಹಸ್ಥರಾಗಲಿ, ವಾನಪ್ರಸ್ಥರಾಗಲಿ, ಸನ್ಯಾಸಿಯಾಗಲಿ, ಆ ತೀರ್ಥದ ಸೇವೆಯನ್ನು ಮಾಡುವುದರಿಂದ ಉತ್ತಮಪದವಿಯನ್ನು ಹೊಂದುವನು.

೧೪. ಶ್ರುತಿಗಳಲ್ಲಿಯೂ, ಸ್ಮೃತಿಗಳಲ್ಲಿಯೂ, ಪುರಾಣೇತಿಹಾಸಗಳಲ್ಲಿಯೂ ಆ ತೀರ್ಥದ ಮಾಹಾತ್ಮ್ಯೆಯು ಅನೇಕ ವಿಧಗಳಾಗಿ ವರ್ಣಿಸಲ್ಪಟ್ಟಿರುವುದು. ಅದು ಪಂಚಮಹಾಪಾತಕಗಳನ್ನೂ ಕಳೆಯುವುದು.

೧೫–೧೭. ಎಲೈ ಬ್ರಾಹ್ಮಣರಿರಾ! ಆ ತೀರ್ಥವು ಅತ್ಯದ್ಭುತ ಶಕ್ತಿಯುಳ್ಳದ್ದೂ ಸಕಲ ಲೋಕಗಳಲ್ಲಿಯೂ ಪರಮಪಾವನವಾದುದೂ ಆಗಿರುವುದು. ಹತ್ತುಸಾವಿರ ಬ್ರಹ್ಮಹತ್ಯೆಗಳನ್ನೂ, ಅಷ್ಟೇ ಸುರಾಪಾನಗಳವನ್ನೂ, ಮಹಾಪಾತಕಗಳೆನಿಸಿದ ಗುರುಸ್ತ್ರೀಸಂಸರ್ಗಗಳನ್ನೂ, ಸ್ವರ್ಣಸ್ತೇಯಗಳನ್ನೂ, ಅನೇಕ ಕೋಟಿ ಪಾತಕಿಗಳ ಸಹವಾಸಗಳನ್ನೂ ಮಾಡಿದ್ದರೂ ಕೂಡ ಮನುಷ್ಯನು ಈ ತೀರ್ಥದ ಸೇವನೆಯನ್ನು ಮಾಡಲು ಆ ಪಾಪಗಳೆಲ್ಲವೂ ತಕ್ಷಣದಲ್ಲಿಯೇ ನಾಶವನ್ನು ಹೊಂದುವುವು.

೧೮. ಶಾಸ್ತ್ರಗಳಲ್ಲಿ ಪ್ರಾಯಶ್ಚಿತ್ತಗಳೇ ಹೇಳಲ್ಪಡದಿರುವ ಯಾವ ಅನೇಕ ವಿಧಗಳಾದ ಪಾಪಗಳಿವೆಯೊ, ಅವುಗಳೆಲ್ಲವೂ ಈ ತೀರ್ಥದ ಸ್ನಾನಪಾನಗಳಿಂದ ನಾಶವಾಗುವುವು.

ಇದಂ ತೀರ್ಥಂ ಮಹಾಪುಣ್ಯಂ ಭಗವತ್ಪಾದನಿಸ್ಸೃತಂ ।
ಕುಷ್ಠಾದಿರೋಗಯುಕ್ತೋ ಯಃ ಪ್ರತ್ಯಹಂ ಚ ಪಿಬೇದಿದಂ ।
ಸೋಽಪಿ ರೋಗವಿಹೀನಃ ಸನ್ವಿಷ್ಣುಲೋಕಂ ಚ ಗಚ್ಛತಿ ॥ ೧೯ ॥
ಭಗವಾನ್ಶಂಕರೋ ದೇವೋ ರಹಸ್ಯಾನುಭವೇ ಪುರಾ ।
ಪಾರ್ವತ್ಯೈ ಕಥಯಾಮಾಸ ತಸ್ಯ ತೀರ್ಥಸ್ಯ ವೈಭವಂ ॥ ೨೦ ॥
ಉಕ್ತೇಷ್ವೇತೇಷು ಸಂದೇಹೋ ನ ಕರ್ತವ್ಯಃ ಕದಾಚನ ।
ಅರ್ಥವಾದೋಽಯಮಿತಿ ಚ ನ ವಕ್ತವ್ಯಂ ಕದಾಚನ ॥ ೨೧ ॥
ಯೇಽರ್ಥವಾದಮಿದಂ ಬ್ರೂಯುಸ್ತೇಷಾಂ ವೈ ನಾಸ್ತಿಕಾತ್ಮನಾಂ ।
ಜಿಹ್ವಾಗ್ರೇ ಪರಶುಂ ತಪ್ತಂ ಕ್ಷಿಪಂತಿ ಯಮಕಿಂಕರಾಃ ॥ ೨೨ ॥
ತಸ್ಮಾತ್ಕಟಾಹತೀರ್ಥಂ ತು ಸೇವನೀಯಂ ಪ್ರಯತ್ನತಃ ।
ಸರ್ವದುಃಖಪ್ರಶಮನಮಪವರ್ಗಫಲಪ್ರದಂ ॥ ೨೩ ॥
ಯತ್ರ ಪೀತ್ವಾ ನರೋ ಭಕ್ತ್ಯಾ ಸರ್ವಾನ್ಕಾಮಾನವಾಪ್ನುಯಾತ್ ॥ ೨೪ ॥

---

೧೯. ಈ ತೀಥವು ಪರಮಾತ್ಮನ ಪಾದಕಮಲಗಳಿಂದ ಉದ್ಭವಿಸಿರುವುದು. ಆದುದರಿಂದ ಮಹಾ ಪುಣ್ಯತಮವಾಗಿರುವುದು. ಕುಷ್ಠವೇ ಮೊದಲಾದ ರೋಗಗಳಿಂದ ಪೀಡಿತನಾದ ಯಾವ ಮನುಷ್ಯನು ಪ್ರತಿದಿನದಲ್ಲಿಯೂ ಈ ತೀರ್ಥದ ನೀರನ್ನು ಕುಡಿಯುವನೊ, ಅವನು ರೋಗದಿಂದ ಬಿಡುಗಡೆಯನ್ನು ಹೊಂದಿ ದೇಹವನ್ನು ತ್ಯಜಿಸಿದಮೇಲೆ ವಿಷ್ಣುಲೋಕವನ್ನು ಸೇರುವನು.

೨೦. ಪೂರ್ವದಲ್ಲಿ ಲೋಕೇಶ್ವರನಾದ ಶಂಕರನು ಏಕಾಂತದಲ್ಲಿರಲು ಪಾರ್ವತಿಗೆ ಈ ತೀರ್ಥದ ವೈಭವವನ್ನು ತಿಳಿಸಿದನು.

೨೧. ನಾನು ಹೇಳಿರುವ ಮಾತುಗಳಲ್ಲಿ ಎಂದಿಗೂ ಯಾವ ವಿಧವಾದ ಸಂದೇಹವನ್ನೂ ಮಾಡಲಾಗದು. ಮತ್ತು ಇದನ್ನು ಅರ್ಥವಾದವೆಂದು ಎಂದಿಗೂ ಹೇಳಲಾಗದು.

೨೨. ಯಾರು ಇದನ್ನು ಅರ್ಥವಾದವೆಂದು ಹೇಳುವರೋ, ಆ ನಾಸ್ತಿಕವಾದಿಗಳ ನಾಲಿಗೆಯಲ್ಲಿ ಯಮಕಿಂಕರರು ಕಾದ ಕೊಡಲಿಯನ್ನು ಹಾಕಿ ಹಿಂಸಿಸುವರು.

೨೩. ಆದುದರಿಂದ ಮಹತ್ಪ್ರಯತ್ನದಿಂದಲಾದರೂ ಕಟಾಹತೀರ್ಥವನ್ನು ಸೇವಿಸಬೇಕು. ಆ ತೀರ್ಥವೇ ಸಕಲ ದಃಖಗಳನ್ನೂ ನಿರ್ಮೂಲಗೊಳಿಸಿ ಮೋಕ್ಷಪದವಿಯನ್ನು ದೊರಕಿಸಿಕೊಡುವುದು.

೨೪. ಅದರ ನೀರನ್ನು ಪಾನಮಾಡುವುದರಿಂದ ಮನುಷ್ಯನು ತನ್ನ ಸಕಲ ಇಷ್ಟಾರ್ಥಗಳನ್ನೂ ಪಡೆಯುವನು.

ಏವಮುಕ್ತ್ವಾ ಮಹಾಭಾಗಃ ಕಾಶೀಂ ತ್ರೈಲೋಕ್ಯಪಾವನೀಂ ।
ಸಂಪ್ರಾಪ್ತೋ ನಾರದಃ ಶ್ರೀಮಾನ್ಸೂತ ಪೌರಾಣಿಕೋತ್ತಮ ॥ ೨೫ ॥
ಸಂಕ್ಷೇಪತಶ್ಚ ಭಗವಾನ್ನೈಮಿಷೇ ಹ್ಯುಕ್ತವಾನ್ಖಲು ।
ಇದಾನೀಂ ಶ್ರೋತುಮಿಚ್ಛಾಮಃ ಕಟಾಹಸ್ಯ ಚ ವೈಭವಂ ॥ ೨೬ ॥
ಸುವಿಸ್ತರೇಣ ಚಾಸ್ಮಾಕಂ ವದ ಸೂತ ಕೃಪಾವಶಾತ್ ॥ ೨೭ ॥

ಶ್ರೀ ಸೂತ ಉವಾಚ:—

ಭೋ ಭೋಸ್ತಪೋಧನಾಃ ಸರ್ವೇ ನೈಮಿಷಾರಣ್ಯವಾಸಿನಃ ।
ಕಟಾಹತೀರ್ಥಮಾಹಾತ್ಮ್ಯಂ ಶೃಣುಧ್ವಂ ದ್ವಿಜಸತ್ತಮಾಃ ॥ ೨೮ ॥
ಕಟಾಹತೀರ್ಥಂ ಭೋ ವಿಪ್ರಾಃ ಸರ್ವಲೋಕೇಷು ವಿಶ್ರುತಂ ।
ಸರ್ವಸಂಪತ್ಕರಂ ಶುದ್ಧಂ ಸರ್ವಪಾಪಪ್ರಣಾಶನಂ ॥ ೨೯ ॥
ದುಃಸ್ವಪ್ನನಾಶನಂ ಹ್ಯೇತನ್ಮಹಾಪಾತಕನಾಶನಂ ।
ಮಹಾವಿಘ್ನಪ್ರಶಮನಂ ಮಹಾಶಾಂತಿಕರಂ ನೃಣಾಂ ॥ ೩೦ ॥
ಸ್ಮೃತಿಮಾತ್ರೇಣ ಯತ್ಪುಂಸಾಂ ಸರ್ವಪಾಪನಿಷೂದನಂ ।
ಮಂತ್ರೇಣಾಷ್ಟಾಕ್ಷರೇಣೈವ ಪಿಬೇತ್ತೀರ್ಥಂ ಮನೋಹರಂ ॥ ೩೧ ॥

---

೨೫. ಎಲೈ ಪೌರಾಣಿಕಶ್ರೇಷ್ಠನಾದ ಸೂತನೆ! ಮಹಾತ್ಮನಾದ ನಾರದನು ಇಂತೆಂದು ಮೂರುಲೋಕಗಳಲ್ಲಿಯೂ ಪಾವನವೆನಿಸಿದ ಕಾಶೀಕ್ಷೇತ್ರವನ್ನು ಕುರಿತು ಪ್ರಯಾಣವನ್ನು ಮಾಡಿದನು.

೨೬–೨೭. ಆ ಪುಣ್ಯಾತ್ಮನು ಈ ಚರಿತ್ರೆಯನ್ನು ನಮಗೆ ನೈಮಿಷಾರಣ್ಯದಲ್ಲಿ ಸಂಕ್ಷೇಪವಾಗಿ ಹೇಳಿರುವನು. ಈಗ ಆ ಕಟಾಹತೀರ್ಥದ ವೈಭವವನ್ನು ನಿನ್ನ ಮುಖದಿಂದ ವಿಸ್ತಾರವಾಗಿ ಕೇಳಲಿಚ್ಛಿಸುವೆವು. ಎಲೈ ಸೂತನೇ! ನಮ್ಮಲ್ಲಿ ಕೃಪೆಯಿಟ್ಟು ಆ ಕಥೆಯನ್ನು ಹೇಳುವನಾಗು.

೨೮. ಸೂತನು ಹೇಳುತ್ತಾನೆ:—ಎಲೈ ನೈಮಿಷಾರಣ್ಯವಾಸಿಗಳಾದ ತಪಸ್ಸಂಪನ್ನರಿರಾ! ಬ್ರಾಹ್ಮಣೋತ್ತಮರಾದ ನೀವೆಲ್ಲರೂ ಕಟಾಹತೀರ್ಥದ ಮಹಾತ್ಮ್ಯೆಯನ್ನು ಕೇಳಿರಿ.

೨೯. ಈ ಕಟಾಹತೀರ್ಥವು ಸಕಲ ಲೋಕಗಳಲ್ಲಿಯೂ ಪ್ರಸಿದ್ಧವಾಗಿರುವುದು. ಸಕಲೈಶ್ವರ್ಯಗಳನ್ನೂ ಸಂಪಾದಿಸಿಕೊಡುವುದೂ ಪವಿತ್ರವೂ ಸಕಲ ಪಾಪನಾಶಕವೂ ಆಗಿರುವುದು.

೩೦. ಈ ತೀರ್ಥವೆ ದುಸ್ವಪ್ನಗಳನ್ನು ದೂರಮಾಡಿ ಮಹಾಪಾತಕಗಳನ್ನು ಕೂಡ ನಾಶನಮಾಡುವುದು. ಸಕಲಕಾರ್ಯಗಳ ವಿಘ್ನಗಳನ್ನೂ ಧ್ವಂಸಗೊಳಿಸಿ ಮನುಷ್ಯರಿಗೆ ಉತ್ತಮವಾದ ಶಾಂತಿಯನ್ನುಂಟುಮಾಡುವುದು.

೩೧. ಸ್ಮರಿಸಿದ ಮಾತ್ರದಿಂದಲೇ ಮನುಷ್ಯನಿಗೆ ಸಕಲ ಪಾಪಗಳನ್ನೂ

ಅಥವಾ ಕೇಶವಾದ್ಯೈರ್ಶ್ಚ ನಾಮಭಿರ್ವಾ ಪಿಬೇಜ್ಜಲಂ ।
ಯದ್ವಾ ನಾಮತ್ರಯೇಣಾಪಿ ಪಿಬೇತ್ತೀರ್ಥಂ ಶುಭಪ್ರದಂ ॥ ೩೨ ॥
ಅಹೋಸ್ವಿದ್ವೇಂಕಟೇಶಸ್ಯ ಮಂತ್ರೇಣಾಷ್ಟಾಕ್ಷರೇಣ ವೈ ।
ಪಿಬೇತ್ಕಟಾಹತೀರ್ಥಂ ತದ್ಭುಕ್ತಿಮುಕ್ತಿಪ್ರದಾಯಕಂ ॥ ೩೩ ॥
ವಿನಾ ಮಂತ್ರೇಣ ಯೋ ವಿಪ್ರಃ ಸಂಪಿಬೇತ್ತೀರ್ಥಮುತ್ತಮಂ ।
ಪಾಪಂ ಮೇ ನಾಶಯ ಕ್ಷಿಪ್ರಂ ಜನ್ಮಾಂತರಕೃತಂ ಮಹತ್ ॥ ೩೪ ॥
ಇತ್ಯುಕ್ತ್ವಾ ಸ ಪಿಬೇನ್ನಿತ್ಯಂ ಮೋಕ್ಷಮಾರ್ಗೈಕಸಾಧನಂ ।
ಸ್ವಾಮಿಪುಷ್ಕರಿಣೀಸ್ನಾನಂ ವರಾಹಶ್ರೀಶದರ್ಶನಂ ॥ ೩೫ ॥
ಕಟಾಹತೀರ್ಥಪಾನಂ ಚ ತ್ರಯಂ ತ್ರೈಲೋಕ್ಯದುರ್ಲಭಂ ।
ಬಹುನಾ ಕಿಮಿಹೋಕ್ತೇನ ಬ್ರಹ್ಮಹತ್ಯಾದಿ ನಾಶನಂ ॥ ೩೬ ॥
ಪುರಾ ಕಶ್ಚಿದ್ದ್ವಿಜೋ ಮೋಹಾತ್ಕೇಶವಾಖ್ಯೋ ಬಹುಶ್ರುತಂ ।
ಹತ್ವಾ ಖಡ್ಗೇನ ದುರ್ಬುಧ್ಯಾ ಬ್ರಹ್ಮಹತ್ಯಾಮವಾಪ್ತವಾನ್ ॥ ೩೭ ॥

---

ನಿರ್ನಾಮಮಾಡುವುದು, ಮನೋಹರವಾದ ಈ ತೀರ್ಥೋದಕವನ್ನು ಅಷ್ಟಾಕ್ಷರ ಮಂತ್ರದೊಡನೆ ಪಾನಮಾಡಬೇಕು.

೩೨. ಇಲ್ಲದಿದ್ದರೆ ಕೇಶವಾದಿ ದ್ವಾದಶನಾಮಗಳಿಂದಾದರೂ ಜಲಪಾನ ವನ್ನು ಮಾಡಬೇಕು. ಅಥವಾ ನಾಮತ್ರಯದ ಜಪದೊಡನೆಯೂ ಮಂಗಳ ಪ್ರದವಾದ ಈ ತೀರ್ಥೋದಕವನ್ನು ಪಾನಮಾಡಬಹುದು.

೩೩. ಅಲ್ಲದೆ ಈ ಕಟಾಹತೀರ್ಥದ ಜಲವನ್ನು ಶ್ರೀ ವೆಂಕಟೇಶ್ವರನ ನಾಮದಿಂದ ಕೂಡಿದ ಅಷ್ಟಾಕ್ಷರೀ ಮಂತ್ರದೊಡನೆ ಪಾನಮಾಡಲು ಭುಕ್ತಿ ಮುಕ್ತಿಗಳೆರಡೂ ಕರಗತಗಳಾಗುವುವು.

೩೪–೩೬. ಯಾವ ಬ್ರಾಹ್ಮಣನು ಯಾವ ಮಂತ್ರವನ್ನು ತಿಳಿಯದಿರುವನೊ, ಅವನು "ನಾನು ಜನ್ಮಾಂತರಗಳಲ್ಲಿ ಮಾಡಿದ ಮಹಾಪಾಪಗಳೆಲ್ಲವನ್ನೂ ಶೀಘ್ರ ವಾಗಿ ನಾಶಮಾಡು" ಎಂಬುದಾಗಿ ಮೋಕ್ಷಮಾರ್ಗಕ್ಕೆ ಒಂದೇ ಸಾಧನವಾದ ಈ ತೀರ್ಥೋದಕವನ್ನು ನಿತ್ಯವೂ ಸೇವಿಸಬೇಕು. ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನವೂ, ಧರಣೀ ವರಹಸ್ವಾಮಿಯ ದರ್ಶನವೂ ಕಟಾಹತೀರ್ಥದ ಪಾನವೂ ಮೂರುಲೋಕಗಳಲ್ಲಿಯೂ ಅಂತ್ಯಂತ ದುರ್ಲಭಗಳಾಗಿರುವುವು. ಹೆಚ್ಚು ಮಾತು ಗಳಾಡಿದುದರಿಂದೇನು? ಈ ತೀರ್ಥವು ಬ್ರಹ್ಮಹತ್ಯಾದಿ ಮಹಾಪಾತಕಗಳನ್ನೂ ನಾಶಗೊಳಿಸುವುದು.

೩೭. ಪೂರ್ವದಲ್ಲಿ ಕೇಶವನೆಂಬ ಹೆಸರಿನ ಬ್ರಾಹ್ಮಣನೊಬ್ಬನು ಮೋಹ ಗೊಂಡು ಶ್ರೋತ್ರಿಯನಾದ ಮತ್ತೊಬ್ಬನನ್ನು ಬುದ್ಧಿಹೀನನಾಗಿ ಖಡ್ಗದಿಂದ ಸಂಹರಿಸಿ ಬ್ರಹ್ಮಹತ್ಯೆಯ ಪಾಪವನ್ನು ಹೊಂದಿದನು.

ಸೋಽಪಿ ತಸ್ಮಿನ್ಮಹಾತೀರ್ಥೇ ಪೀತ್ವಾ ಜಲಮನುತ್ತಮಂ ।
ಕೇಶವಾಖ್ಯೋ ಮಹಾಪಾಪೀ ವಿಮುಕ್ತೋ ಬ್ರಹ್ಮಹತ್ಯಯಾ ॥ ೩೮ ॥

ಋಷಯ ಊಚುಃ:—

ಕಸ್ಯ ಪುತ್ರಃ ಕೇಶವಾಖ್ಯಃ ಕಥಂ ಪ್ರಾಪ್ತೋ ಭಯಂಕರೀಂ ।
ಬ್ರಹ್ಮಹತ್ಯಾಮತಿಕ್ರೂರಾಮಸ್ಮಾಕಂ ವಕ್ತುಮರ್ಹಸಿ ॥ ೩೯ ॥

ಶ್ರೀ ಸೂತ ಉವಾಚ:—

ತುಂಗಭದ್ರಾತಟೇ ರಮ್ಯೇ ಗಂಧರ್ವೈರುಪಸೇವಿತೇ ।
ಅಗ್ರಹಾರೋ ಮಹಾನಾಸೀದ್ವೇದಾಢ್ಯ ಇತಿ ನಾಮತಃ ॥ ೪೦ ॥
ತಸ್ಮಿನ್ವೇದಪುರೇ ರಮ್ಯೇ ಬ್ರಾಹ್ಮಣಾ ವೇದಪಾರಗಾಃ ।
ಶಬ್ದಶಾಸ್ತ್ರಪರಾಃ ಸರ್ವೇ ಜ್ಯೋತಿಃಶಾಸ್ತ್ರಪ್ರವರ್ತಕಾಃ ॥ ೪೧ ॥
ಮೀಮಾಂಸಾತರ್ಕಶಾಸ್ತ್ರಜ್ಞಾಃ ಸರ್ವೇ ವೇದಾಂತವಾದಿನಃ ।
ಧರ್ಮಶಾಸ್ತ್ರೇಷು ನಿರತಾ ಅನ್ನದಾನಪರಾಃ ಸದಾ ॥ ೪೨ ॥
ಪುತ್ರವಂತಶ್ಚ ತೇ ಸರ್ವೇ ಹ್ಯಗ್ರಹಾರೇ ಮಹಾಜನಾಃ ।
ವೇದಾಢ್ಯೇಽಪ್ಯಗ್ರಹಾರೇ ವೈ ಪದ್ಮನಾಭ ಇತಿ ಶ್ರುತಃ ॥ ೪೩ ॥

---

೩೮. ಅವನೂ ಕೂಡ ಈ ಮಹಾತೀರ್ಥದಲ್ಲಿ ಅತ್ಯುತ್ತಮವಾದ ಜಲವನ್ನು ಸೇವಿಸಿ ಮಹಾಪಾಪಿಯಾದರೂ ಬ್ರಹ್ಮಹತ್ಯೆಯ ಪಾತಕದಿಂದ ಬಿಡುಗಡೆ ಹೊಂದಿದನು.

೩೯. ಋಷಿಗಳು ಹೇಳುತ್ತಾರೆ:—ಕೇಶವನೆಂಬವನು ಯಾರ ಮಗನು? ಭಯಂಕರವೂ, ಅತಿಕ್ರೂರವೂ ಆದ ಬ್ರಹ್ಮಹತ್ಯೆಯನ್ನು ಹೇಗೆ ಪಡೆದನೆಂಬುದು ದನ್ನು ನಮಗೆ ಹೇಳುವನಾಗು.

೪೦. ಸೂತನು ಹೇಳುತ್ತಾನೆ:— ಗಂಧರ್ವರಿಂದಲೂ ಸೇವಿಸಲ್ಪಡತಕ್ಕ ಮನೋಹರವಾದ ತುಂಗಭದ್ರಾನದಿಯತೀರದಲ್ಲಿ ವೇದಾಢ್ಯವೆಂಬ ಹೆಸರುಳ್ಳ ವಿಶಾಲವಾದ ಅಗ್ರಹಾರವೊಂದಿತ್ತು.

೪೧. ರಮ್ಯವಾದ ಆ ಅಗ್ರಹಾರದಲ್ಲಿ ಪುರಜನರೆಲ್ಲರೂ ಬ್ರಾಹ್ಮಣರೂ, ವೇದ ವಿದ್ವಾಂಸರೂ, ವ್ಯಾಕರಣಜ್ಞರೂ ಜೋತಿಶ್ಶಾಸ್ತ್ರ ಪಂಡಿತರೂ ಆಗಿದ್ದರು.

೪೨. ಅವರೆಲ್ಲರೂ ಪೂರ್ವೋತ್ತರಮೀಮಾಂಸೆಗಳಲ್ಲಿಯೂ, ತರ್ಕಶಾಸ್ತ್ರದಲ್ಲಿಯೂ ನಿಪುಣರಾಗಿ ನಿತ್ಯವೂ ವೇದಾಂತ ವಿಚಾರವನ್ನು ಮಾಡುತ್ತಿದ್ದರು. ಎಲ್ಲರೂ ಧರ್ಮಶಾಸ್ತ್ರಗಳ ಸೂಕ್ಷ್ಮಗಳನ್ನರಿತವರಾಗಿ ಯಾವಾಗಲೂ ಅತಿಥಿ ಅಭ್ಯಾಗತರಿಗೆ ಅನ್ನದಾನವನ್ನು ಮಾಡುವುದರಲ್ಲಿ ನಿರತರಾಗಿದ್ದರು.

೪೩. ಆ ಅಗ್ರಹಾರದ ಮಹಾಜನರೆಲ್ಲರೂ ಪುತ್ರವಂತರಾಗಿದ್ದರು. ವೇದಾಢ್ಯವೆಂಬ ಆ ಅಗ್ರಹಾರದಲ್ಲಿಯೇ ಪದ್ಮನಾಭನೆಂಬ ಹೆಸರಿನ ಬ್ರಾಹ್ಮಣನೊಬ್ಬನಿದ್ದನು.

ತಸ್ಯ ಪುತ್ರಃ ಕೇಶವಾಖ್ಯಃ ಸರ್ವಕರ್ಮಬಹಿಷ್ಕೃತಃ ।
ಮಾತರಂ ಪಿತರಂ ತ್ಯಕ್ತ್ವಾ ಭಾರ್ಯಾಮಪಿ ಪತಿವ್ರತಾಂ ॥ ೪೪ ॥
ಸರ್ವದಾ ಗಣಿಕಾಸಕ್ತೋ ವೇಶ್ಯಾಗಾರಂ ವಿವೇಶ ಹ ।
ದಿನದ್ವಯೇ ಚ ತಾಂ ವೇಶ್ಯಾಮನುಭೂಯ ದ್ವಿಜಸ್ತತಃ ॥ ೪೫ ॥
ನಿಷ್ಕದ್ವಯಂ ಪ್ರದಾತವ್ಯಂ ಹಸ್ತೇ ದತ್ವಾ ಗತಃ ಸುಖಂ ।
ವೇಶ್ಯಯಾ ಚಾಧನಸ್ತ್ಯಕ್ತಸ್ತತ್ಸಂಯೋಗೈಕತತ್ಪರಃ ॥ ೪೬ ॥
ಇತಸ್ತತಶ್ಚೋರಯಿತ್ವಾ ಬಹುದ್ರವ್ಯಾಣಿ ಸಂತತಂ ।
ದತ್ವಾ ತಯಾ ಚಿರಂ ರೇಮೇ ತದ್ಗೃಹೇ ಬುಭುಜೇ ಚ ಸಃ ॥ ೪೭ ॥
ಏಕೇನ ಚಷಕೇನಾಸೌ ತಯಾ ಸಹ ಸುರಾಂ ಪಪೌ ।
ಸ ಕದಾಚಿತ್ಕಿರಾತೈಸ್ತು ದ್ರವ್ಯಂ ಹರ್ತುಂ ಯಯೌ ದ್ವಿಜಃ ॥ ೪೮ ॥
ವಿಪ್ರಸ್ಯ ಕಸ್ಯಚಿದ್ಗೇಹೇ ಸೋಽಪಿ ಕೈರಾತವೇಷಧೃಕ್ ।
ಕೇಶವೋ ವಿಪ್ರಬಂಧುರ್ವೈ ಸಾಹಸೀ ಖಡ್ಗಹಸ್ತವಾನ್ ॥ ೪೯ ॥
ತದ್ಗೃಹಸ್ವಾಮಿನಂ ವಿಪ್ರಂ ಹತ್ವಾ ಖಡ್ಗೇನ ಸಾಹಸಾತ್ ।
ಸಮಾದಾಯ ಬಹುದ್ರವ್ಯಂ ವೇಶ್ಯಾಗಾರಂ ವಿವೇಶ ಹ ॥ ೫೦ ॥

---

೪೪–೪೬. ಅವನ ಮಗನಾದ ಕೇಶವನೆಂಬವನು ಸಕಲ ಸತ್ಕರ್ಮಗಳಿಗೂ ಅಯೋಗ್ಯನೆನಿಸಿಕೊಂಡು ತಾಯಿಯನ್ನೂ, ತಂದೆಯನ್ನೂ, ಪತಿವ್ರತೆಯಾದ ಹೆಂಡತಿಯನ್ನೂ ಬಿಟ್ಟು ನಿರಂತರವೂ ವೇಶ್ಯಾಸ್ತ್ರೀಯರಲ್ಲಿಯೇ ಆಸಕ್ತಿಯುಳ್ಳವನಾಗಿ ಒಬ್ಬ ಗಣಿಕೆಯ ಮನೆಯಲ್ಲಿಯೇ ವಾಸಮಾಡಿದನು. ಬಳಿಕ ಎರಡು ದಿನಗಳವರೆಗೂ ಅವಳೊಡನೆ ಆ ಬ್ರಾಹ್ಮಣನು ಸುಖವನ್ನನುಭವಿಸಿ ಅವಳಿಗೆ ಎರಡು ನಿಷ್ಕಗಳನ್ನು ಕೊಟ್ಟು ನಿರ್ಧನನಾಗಲು ಅವಳು ಅವನನ್ನು ಹೊರಕ್ಕೆ ನೂಕಿಬಿಟ್ಟಳು. ಅವನಿಗೆ ಮಾತ್ರ ಅವಳ ಸಂಭೋಗದ ಆಶೆಯಲ್ಲಿಯೇ ಮನಸ್ಸು ನಿಂತಿತು.

೪೭. ಬಳಿಕ ಅವನು ಹಲವಾರು ಕಡೆಗಳಲ್ಲಿ ಧನವನ್ನು ಅಪಹರಿಸಿ ಅವಳಿಗೆ ಅಪರಿಮಿತವಾದ ಹಣವನ್ನು ಕೊಟ್ಟು ಬಹಳಕಾಲ ಅವಳೊಡನೆ ಸುಖಗಳನ್ನನುಭವಿಸುತ್ತ ಅವಳ ಮನೆಯಲ್ಲಿಯೇ ಭೋಜನವನ್ನು ಮಾಡುತ್ತಿದ್ದನು.

೪೮. ಒಂದೇ ಪಾತ್ರೆಯಿಂದಲೇ ಅವಳೊಡನೆ ಮದ್ಯವನ್ನೂ ಪಾನಮಾಡುತ್ತಿದ್ದನು. ಒಂದಾನೊಂದು ದಿವಸ ಆ ಬ್ರಾಹ್ಮಣನು ಧನವನ್ನು ಸಂಪಾದಿಸಲು ಕಳ್ಳರೊಡನೆ ಹೊರಟನು.

೪೯–೫೦. ಕಳ್ಳರ ವೇಷವನ್ನೇ ಧರಿಸಿಕೊಂಡು ಒಬ್ಬ ಬ್ರಾಹ್ಮಣನ ಮನೆಗೆ ಬ್ರಾಹ್ಮಣಾಧಮನಾದ ಆ ಕೇಶವನೂ ಸಾಹಸಿಯೂ, ಖಡ್ಗಪಾಣಿಯೂ ಆಗಿ ನುಗ್ಗಿದನು. ಅವನು ಮನೆಯ ಯಜಮಾನನಾದ ಬ್ರಾಹ್ಮಣನನ್ನು ಪರಾಕ್ರಮ

ತಂ ಯಾಂತಮನುಯಾತಿ ಸ್ಮ ಬ್ರಹ್ಮಹತ್ಯಾ ಭಯಂಕರೀ ।
ನೀಲವಸ್ತ್ರಧರಾ ಭೀಮಾ ಭೃಶಂ ರಕ್ತಶಿರೋರುಹಾ ॥ ೫೧ ॥
ಗರ್ಜಂತೀ ಸಾಟ್ಟಹಾಸಂ ಸಾ ಕಂಪಯಂತೀ ಚ ರೋದಸೀ ।
ಅನುದ್ರುತಸ್ತಯಾ ವಿಪ್ರೋ ಬಭ್ರಾಮ ಜಗತೀತಲೇ ॥ ೫೨ ॥
ಏವಂ ಭ್ರಮನ್ಧರಾಂ ಸರ್ವಾಂ ವಿಪ್ರಬಂಧುರ್ದುರಾತ್ಮವಾನ್ ।
ಸ್ವಗ್ರಾಮಂ ಪ್ರಯಯೌ ಭೀತ್ಯಾ ಶೌನಕಾದ್ಯಾ ಮಹೌಜಸಃ ॥ ೫೩ ॥
ಅನುದ್ರುತಸ್ತಯಾ ಭೀತಃ ಪ್ರಯಯೌ ಸ್ವನಿಕೇತನಂ ।
ಬ್ರಹ್ಮಹತ್ಯಾಪ್ಯನುದ್ರುತ್ಯ ತೇನ ಸಾಕಂ ಗೃಹಂ ಯಯೌ ॥ ೫೪ ॥
ಜನಕಂ ರಕ್ಷರಕ್ಷೇತಿ ಕೇಶವಃ ಶರಣಂ ಯಯೌ ।
ಮಾ ಭೈಷೀರಿತಿ ಸ ಪ್ರೋಚ್ಯ ಪಿತಾ ರಕ್ಷಿತುಮುದ್ಯತಃ ॥ ೫೫ ॥
ಕ್ರೂರೈನಂ ಬ್ರಹ್ಮಹತ್ಯಾ ಸಾ ಜನಕಂ ಪ್ರತ್ಯಭಾಷತ ॥ ೫೬ ॥

---

ದಿಂದ ಕತ್ತರಿಸಿ ಕೆಡವಿ ಅತಿಯಾದ ದ್ರವ್ಯವನ್ನು ತೆಗೆದುಕೊಂಡು ವೇಶ್ಯೆಯ ಮನೆಯನ್ನು ಪ್ರವೇಶಿಸಿದನು.

೫೧. ಇಂತು ಓಡಾಡುತ್ತಿರುವ ಅವನನ್ನು ಭಯಂಕರವೂ, ನೀಲವಸ್ತ್ರಾನ್ವಿತವೂ, ಅತ್ಯಂತಕ್ರೂರವೂ, ಕೆಂಪುಕೂದಲುಳ್ಳದ್ದೂ ಆದ ಬ್ರಹ್ಮಹತ್ಯೆಯು ಹಿಂಬಾಲಿಸುತ್ತಿದ್ದಿತು.

೫೨. ಆ ಶಕ್ತಿಯು ಅಟ್ಟಹಾಸದಿಂದ ಗರ್ಜನೆಯನ್ನುಮಾಡುತ್ತ ಭೂಮ್ಯಾಕಾಶಗಳನ್ನು ನಡುಗಿಸುತ್ತಿದ್ದಳು. ಅದು ಬೆನ್ನುಹತ್ತಿರಲು ಆ ಕೇಶವ ಬ್ರಾಹ್ಮಣನು ಭೂಮಂಡಲವನ್ನೆಲ್ಲ ಸುತ್ತಿದನು.

೫೩. ಎಲೈ ಶೌನಕಾದಿ ಮಹರ್ಷಿಗಳಿರಾ! ಇಂತು ಭೂಮಿಯನ್ನೆಲ್ಲ ಸುತ್ತಿ ಎಲ್ಲಿಯೂ ಗತ್ಯಂತರವನ್ನು ಕಾಣದೆ ಬ್ರಾಹ್ಮಣಾಧಮನೂ ದುರಾತ್ಮನೂ ಆದ ಆ ಕೇಶವನು ಭಯದಿಂದ ಮತ್ತೆ ವೇದಾಢ್ಯವೆಂಬ ತನ್ನ ಗ್ರಾಮವನ್ನೇ ಸೇರಿದನು.

೫೪. ಆ ಬ್ರಹ್ಮಹತ್ಯೆಯು ತನ್ನನ್ನೇ ಹಿಂಬಾಲಿಸುತ್ತಿರಲು ಅವನು ತನ್ನ ಮನೆಯನ್ನು ಒಳಹೊಕ್ಕನು. ಬ್ರಹ್ಮಹತ್ಯೆಯೂ ಕೂಡ ಅವನೊಡನೆಯೇ ಮನೆಯನ್ನು ಪ್ರವೇಶಿಸಿತು.

೫೫. ಆಗ ಕೇಶವನು "ರಕ್ಷಿಸು, ರಕ್ಷಿಸು" ಎಂದು ಗೋಳಿಡುತ್ತ ತಂದೆಯನ್ನು ಶರಣುಹೊಕ್ಕನು. ತಂದೆಯೂ ಸಹ ಭಯಪಡಬೇಡವೆಂದು ಸಮಾಧಾನವನ್ನು ಹೇಳಿ ಅವನನ್ನು ಕಾಪಾಡುವ ಪ್ರಯತ್ನದಲ್ಲಿದ್ದನು.

೫೬. ಅದನ್ನು ಕಂಡು ಕ್ರೂರವಾದ ಬ್ರಹ್ಮಹತ್ಯೆಯು ಆ ಪದ್ಮನಾಭನನ್ನು ಕುರಿತು ಹೇಳತೊಡಗಿತು.

ಬ್ರಹ್ಮಹತ್ಯೋವಾಚ :—

ಮೈನಂ ತ್ವಂ ಪ್ರತಿಗೃಹ್ಣೀಷ್ವ ಪದ್ಮನಾಭ ದ್ವಿಜೋತ್ತಮ ।
ಅಯಂ ಸುರಾಪೀ ಸ್ತೇಯೀ ಚ ಬ್ರಹ್ಮಹಾ ಚಾತಿಪಾತಕೀ ॥ ೫೭ ॥
ಮಾತೃದ್ರೋಹೀ ಪಿತೃದ್ರೋಹೀ ಭಾರ್ಯಾತ್ಯಾಗೀ ಚ ದುಷ್ಟಧೀಃ ।
ಗಣಿಕಾಸಕ್ತಚಿತ್ತಶ್ಚ ಹ್ಯೇನಂ ಮುಂಚ ದುರಾತ್ಮಕಂ ॥ ೫೮ ॥
ಗೃಹ್ಣಾಸಿ ಚೇತ್ಸುತಂ ವಿಪ್ರ ಮಹಾಪಾತಕಿನಂ ವೃಥಾ ।
ತ್ವದ್ಭಾರ್ಯಾಮಸ್ಯ ಭಾರ್ಯಾಂ ಚ ತ್ವಾಂ ಚ ಪುತ್ರಮಿಮಂ ದ್ವಿಜ ॥೫೯॥
ಭಕ್ಷಯಿಷ್ಯಾಮಿ ವಂಶಂ ಚ ತಸ್ಮಾನ್ಮುಂಚ ದುರಾತ್ಮಕಂ ।
ಇಮಂ ತ್ಯಜಸಿ ಚೇತ್ಪುತ್ರಂ ಯುಷ್ಮಾನ್ಮುಂಚಾಮಿ ಸಾಂಪ್ರತಂ ॥ ೬೦ ॥
ಏಕಸ್ಯಾರ್ಥೇ ಕುಲಂ ಹಂತುಮರ್ಹಸಿ ತ್ವಂ ಮಹಾಮತೇ ।
ಇತ್ಯುಕ್ತಃ ಸ ತಯಾ ತತ್ರ ಪದ್ಮನಾಭೋಽಬ್ರವೀಚ್ಚ ತಾಂ ॥ ೬೧ ॥

ಪದ್ಮನಾಭ ಉವಾಚ :—

ಬಾಧತೇ ಮಾಂ ಸುತಸ್ನೇಹಃ ಕಥಂ ಪುತ್ರಂ ಪರಿತ್ಯಜೇ ।
ಬ್ರಹ್ಮಹತ್ಯಾ ತದಾಕರ್ಣ್ಯ ಪದ್ಮನಾಭಂ ತಮಬ್ರವೀತ್ ॥ ೬೨ ॥

---

೫೭. ಬ್ರಹ್ಮಹತ್ಯೆಯು ಹೇಳುತ್ತದೆ :—"ಬ್ರಾಹ್ಮಣೋತ್ತಮನಾದ ಪದ್ಮನಾಭನೆ! ಇವನನ್ನು ನೀನು ಸ್ವೀಕರಿಸಬೇಡ. ಇವನು ಸುರಾಪಾನಮಾಡಿದವನು; ಚೋರನು; ಬ್ರಹ್ಮಘಾತಕನು; ಮಹಾ ಪಾತಕಗಳನ್ನು ಮಾಡಿರುವನು.

೫೮. ತಾಯಿ ತಂದೆಯರಿಗೆ ದ್ರೋಹವನ್ನೆಸಗಿರುವನು. ಪತಿವ್ರತೆಯಾದ ಹೆಂಡತಿಯನ್ನು ಕೈಬಿಟ್ಟ ದುರ್ಬುದ್ಧಿಯು; ಯಾವಾಗಲೂ ವೇಶ್ಯೆಯಲ್ಲಿಯೇ ನಟ್ಟಮನಸ್ಸುಳ್ಳವನು. ಈ ದುರಾತ್ಮನನ್ನು ಬಿಟ್ಟುಬಿಡು.

೫೯–೬೦. ಎಲೈ ಬ್ರಾಹ್ಮಣನೆ! ಮಹಾಪಾತಕಿಯಾದ ಈ ನಿನ್ನ ಮಗನನ್ನು ನಿಷ್ಪ್ರಯೋಜನವಾಗಿ ಅಂಗೀಕರಿಸುವೆಯಾದರೆ ನಾನು ನಿನ್ನ ಹೆಂಡತಿಯನ್ನೂ, ಇವನ ಹೆಂಡತಿಯನ್ನೂ, ನಿನ್ನನ್ನೂ, ಕಡೆಗೆ ಇವನನ್ನೂ ಖಂಡಿತವಾಗಿಯೂ ತಿಂದುಬಿಡುವೆನು. ಅದರಿಂದ ನಿನ್ನ ವಂಶವೂ ನಿರ್ನಾಮವಾಗುವುದು. ಆದುದರಿಂದ ಈ ದುರಾತ್ಮನನ್ನು ನನಗೆ ಬಿಟ್ಟುಕೊಡು. ಈ ನಿನ್ನ ಮಗನನ್ನು ನನಗೆ ಕೊಟ್ಟರೆ ನಿಮ್ಮೆಲ್ಲರನ್ನೂ ಈ ಕ್ಷಣದಲ್ಲಿಯೇ ಬಿಟ್ಟು ಹೊರಡುವೆನು.

೬೧. ಮಹಾಮತಿಯೆ! ಒಬ್ಬನಿಗಾಗಿ ನಿನ್ನ ಕುಲವನ್ನೇ ನಿರ್ಮೂಲಗೊಳಿಸುವುದು ಉಚಿತವಲ್ಲ. ಇಂತೆಂದ ಬ್ರಹ್ಮಹತ್ಯೆಯ ಮಾತುಗಳನ್ನು ಕೇಳಿ ಪದ್ಮನಾಭನು ಅದನ್ನು ಕುರಿತು ಹೇಳಿದನು.

೬೨. ಪದ್ಮನಾಭನು ಹೇಳುತ್ತಾನೆ:—"ಪುತ್ರಸ್ನೇಹವೆಂಬುದು ನನ್ನನ್ನು ಬಾಧಿಸುತ್ತಿರುವುದು. ಈ ಮಗನನ್ನು ಹೇಗೆ ಕೈಬಿಡಲಿ?" ಇದನ್ನು ಕೇಳಿ ಬ್ರಹ್ಮಹತ್ಯೆಯು ಪದ್ಮನಾಭನಿಗೆ ಹೇಳತೊಡಗಿತು.

ಬ್ರಹ್ಮಹತ್ಯೋವಾಚ :—

ಪುತ್ರೋಽಯಂ ಪತಿತೋಽಭೂತ್ತೇ ವರ್ಣಾಶ್ರಮಬಹಿಷ್ಕೃತಃ ।
ಪುತ್ರೇಽಸ್ಮಿನ್ಮಾಕುರು ಸ್ನೇಹಂ ನಿಂದಿತಂ ತಸ್ಯ ದರ್ಶನಂ ॥ ೬೩ ॥
ಇತ್ಯುಕ್ತ್ವಾ ಬ್ರಹ್ಮಹತ್ಯಾ ಸಾ ಪದ್ಮನಾಭಸ್ಯ ಪಶ್ಯತಃ ।
ಹಸ್ತೇನ ಪ್ರಜಹಾರಾಸ್ಯ ಸುತಂ ಕೇಶವನಾಮಕಂ ॥ ೬೪ ॥
ರುರೋದ ತಾತ ತಾತೇತಿ ಜನಕಂ ಪ್ರಬ್ರುವನ್ಮುಹುಃ ।
ರುರುದುರ್ಜನಕೋ ಮಾತಾ ಭಾರ್ಯಾ ತಸ್ಯ ದುರಾತ್ಮನಃ ॥ ೬೫ ॥
ತಸ್ಮಿನ್ಕಾಲೇ ಮಹಾಭಾಗೋ ಭರದ್ವಾಜೋ ಮಹಾಮುನಿಃ ।
ದಿಷ್ಟ್ಯಾ ಸಮಾಯಯೌ ಯೋಗೀ ಶೌನಕಾದ್ಯಾ ಮಹೌಜಸಃ ॥ ೬೬ ॥
ಪದ್ಮನಾಭೋಽಥ ತಂ ದೃಷ್ಟ್ವಾ ಭರದ್ವಾಜಂ ಮಹಾಮುನಿಂ ।
ಸ್ತುತ್ವಾ ಪ್ರಣಮ್ಯ ಶರಣಂ ಯಯಾಚೇ ಪುತ್ರಕಾರಣಾತ್ ॥ ೬೭ ॥
ಭರದ್ವಾಜ ಮಹಾಭಾಗ ಸಾಕ್ಷಾದ್ವಿಷ್ಣ್ವಂಶಕೋ ಭವಾನ್ ।
ತ್ವದ್ದರ್ಶನಮಪುಣ್ಯಾನಾಂ ಭವಿತಾ ನ ಕದಾಚನ ॥ ೬೮ ॥
ಬ್ರಹ್ಮಹಾ ಚ ಸುರಾಪೀ ಚ ಸ್ತೇಯೀ ಚಾಭೂತ್ಸುತೋ ಮಮ ।
ಪುತ್ರಂ ಪ್ರಹರ್ತುಮಾಯಾತಾ ಬ್ರಹ್ಮಹತ್ಯಾ ಭಯಂಕರೀ ॥ ೬೯ ॥

---

೬೩. ಬ್ರಹ್ಮಹತ್ಯೆಯು ಹೇಳುತ್ತದೆ :—"ನಿನ್ನ ಈ ಮಗನು ಪತಿತನಾದುದರಿಂದ ವರ್ಣಾಶ್ರಮಧರ್ಮಗಳನ್ನನುಸರಿಸಲು ಅರ್ಹನಲ್ಲ. ಈ ಪುತ್ರನಲ್ಲಿ ಸ್ನೇಹವನ್ನು ಮಾಡಬೇಡ. ಇವನ ದರ್ಶನವೂ ಶಾಸ್ತ್ರಗಳಲ್ಲಿ ನಿಷಿದ್ಧವಾಗಿರುವುದು."

೬೪. ಇಂತೆಂದು ಹೇಳಿ ಆ ಬ್ರಹ್ಮಹತ್ಯೆಯು ಪದ್ಮನಾಭನು ನೋಡುತ್ತಿದ್ದಂತೆಯೇ ಮಗನಾದ ಕೇಶವನನ್ನು ಕೈಯಿಂದ ಹೊಡೆಯಲಾರಂಭಿಸಿತು.

೬೫. ಅವನು "ಅಪ್ಪಾ! ಅಪ್ಪಾ!" ಎಂದು ಕೂಗಿಕೊಂಡು ಮತ್ತೆ ಮತ್ತೆ ಅಳುತ್ತಿದ್ದನು. ಅದನ್ನು ಕಂಡು ಆ ದುರಾತ್ಮನ ತಂದೆಯೂ, ತಾಯಿಯೂ ಹೆಂಡತಿಯೂ ಅಳುತ್ತಿದ್ದರು.

೬೬. ಆ ಕಾಲಕ್ಕೆ ಸರಿಯಾಗಿ ಅದೃಷ್ಟವಶದಿಂದ ಮಹಾಶಯನೂ ಮಹಾಮುನಿಯೂ ಆದ ಭರದ್ವಾಜ ಮಹರ್ಷಿಯು ಅಲ್ಲಿಗೆ ಪ್ರಾಪ್ತನಾದನು.

೬೭. ಎಲೈ ಶೌನಕಾದಿ ಮಹಾಮುನಿಗಳಿರಾ! ಪದ್ಮನಾಭನು ಮಹರ್ಷಿಯಾದ ಆ ಭರದ್ವಾಜನನ್ನು ಕಂಡು ಸ್ತೋತ್ರಮಾಡಿ ಸಾಷ್ಟಾಂಗಪ್ರಣಾಮದೊಡನೆ ಮಗನಿಗೋಸ್ಕರವಾಗಿ ರಕ್ಷಣೆಯನ್ನು ಯಾಚಿಸಿದನು.

೬೮-೬೯. "ಮಹಾಭಾಗನಾದ ಭರದ್ವಾಜನೆ! ನೀನು ಸಾಕ್ಷಾದ್ವಿಷ್ಣುವಿನ ಅಂಶದಿಂದ ಉದ್ಭವಿಸಿದವನು. ಪುಣ್ಯಹೀನರಾದವರಿಗೆ ನಿನ್ನ ದರ್ಶನಲಾಭವೆಂದಿಗೂ ಉಂಟಾಗುವುದಿಲ್ಲ. ಈ ನನ್ನ ಮಗನು ಬ್ರಹ್ಮಘಾತಕನೂ, ಸುರಾಪಾನ

ಘೂಯಾದ್ಯಥಾ ಮೇ ಪುತ್ರೋಽಯಂ ಮಹಾಪಾತಕಸಂಚಿತಃ ।
ಘೋರೇಯಂ ಬ್ರಹ್ಮಹತ್ಯಾ ಚ ಯಥಾ ಶೀಘ್ರಂ ಲಯಂ ವ್ರಜೇತ್ ॥ ೨೦ ॥
ತಮುಪಾಯಂ ವದಸ್ವಾದ್ಯ ಮಮ ಪುತ್ರೇ ದಯಾಂ ಕುರು ।
ಏಕ ಏವ ಹಿ ಪುತ್ರೋ ಮೇ ನಾನ್ಯೋಽಸ್ತಿ ತನಯೋ ಮುನೇ ॥ ೨೧ ॥
ಸುತೇ ಮೃತೇ ತು ವಂಶೋ ಮೇ ಸಮುಚ್ಛಿದ್ಯೇತ ಮೂಲತಃ ।
ತತಃ ಪಿತೃಭ್ಯಃ ಪಿಂಡಾನಾಂ ದಾತಾಪಿ ನ ಭವೇದ್ಧ್ರುವಂ ॥ ೨೨ ॥
ತತಃ ಕೃಪಾಂ ಕುರುಷ್ವ ತ್ವಮಸ್ಮಾಸು ಭಗವನ್ಮುನೇ ।
ಇತ್ಯುಕ್ತಃ ಸ ಭರದ್ವಾಜಃ ಸಾಕ್ಷಾನ್ನಾರಾಯಣಾಂಶಕಃ ॥ ೨೩ ॥
ಧ್ಯಾತ್ವಾ ತು ಸುಚಿರಂ ಕಾಲಂ ಪದ್ಮನಾಭಂ ವಚೋಽಬ್ರವೀತ್ ॥ ೨೪ ॥

ಭರದ್ವಾಜ ಉವಾಚ :—

ಪದ್ಮನಾಭ ಕೃತಂ ಪಾಪಮತಿಕ್ರೂರಂ ಸುತೇನ ತೇ ।
ನಾಸ್ಯ ಪಾಪಸ್ಯ ಶಾಂತಿಃ ಸ್ಯಾತ್ಪ್ರಾಯಶ್ಚಿತ್ತಾಯುತೈರಪಿ ॥ ೨೫ ॥
ತಥಾಪಿ ತೇ ಸುತಸ್ಯಾಹಮಸ್ಯ ಪಾಪಸ್ಯ ಶಾಂತಯೇ ।
ಪ್ರಾಯಶ್ಚಿತ್ತಂ ವದಿಷ್ಯಾಮಿ ಪದ್ಮನಾಭ ಶೃಣು ದ್ವಿಜ ॥ ೨೬ ॥

---

ಮಾಡಿದವನೂ, ಸ್ವರ್ಣಚೋರನೂ ಆಗಿದ್ದನು. ಅವನನ್ನು ಸಂಹರಿಸಲು ಭಯಂಕರವಾದ ಈ ಬ್ರಹ್ಮಹತ್ಯೆಯು ಬಂದಿರುವುದು.

೨೦–೨೪. ಈ ನನ್ನ ಮಗನು ಮಹಾಪಾತಕಗಳಿಂದ ಬಿಡುಗಡೆಯನ್ನು ಹೊಂದುವುದಕ್ಕೂ, ಘೋರವಾದ ಬ್ರಹ್ಮಹತ್ಯೆಯು ಶೀಘ್ರವಾಗಿ ನಾಶವಾಗುವುದಕ್ಕೂ ತಕ್ಕ ಉಪಾಯವನ್ನು ಹೇಳು. ನನ್ನ ಮಗನಲ್ಲಿ ಕೃಪೆಮಾಡುವವನಾಗು. ಮಹಾಮುನಿಯೆ! ನನಗಿರುವ ಮಗನು ಇವನೊಬ್ಬನೇ. ನನಗೆ ಮತ್ತೊಬ್ಬ ಪುತ್ರನಿಲ್ಲ. ಈ ಮಗನು ಮೃತನಾದರೆ ನನ್ನ ವಂಶವೆಂಬ ವೃಕ್ಷವು ಮೂಲ ಸಹಿತವಾಗಿ ಕಳಚಿ ಬೀಳುವುದು. ಬಳಿಕ ಪಿತೃಗಳಿಗೆ ಪಿಂಡಗಳನ್ನು ಕೊಡುವವನೊಬ್ಬನೂ ನಿಶ್ಚಯವಾಗಿ ಇರುವುದಿಲ್ಲ. ಮಹರ್ಷಿಶ್ರೇಷ್ಠನೆ! ಆದುದರಿಂದ ನಮ್ಮಲ್ಲಿ ನೀನು ಕರುಣೆಯನ್ನು ತೋರಿಸು." ಇಂತೆಂದ ಪದ್ಮನಾಭನನ್ನು ಕಂಡು ಶ್ರೀ ನಾರಾಯಣನ ಅಂಶಭೂತನಾದ ಆ ಭರದ್ವಾಜನು ಬಹಳಕಾಲದವರೆಗೂ ಧ್ಯಾನಾಸಕ್ತನಾಗಿದ್ದು ಬಳಿಕ ಪದ್ಮನಾಭನಿಗೆ ಹೇಳಲುಪಕ್ರಮಿಸಿದನು.

೨೫. ಭರದ್ವಾಜನು ಹೇಳುತ್ತಾನೆ:—"ಎಲೈ ಪದ್ಮನಾಭನೆ! ನಿನ್ನ ಮಗನು ಮಾಡಿರುವ ಪಾಪವು ಅತಿ ಕ್ರೂರವಾಗಿರುವುದು. ಹತ್ತುಸಾವಿರ ಪ್ರಾಯಶ್ಚಿತ್ತಗಳನ್ನು ಮಾಡಿಸಿದರೂ ಈ ಪಾಪಕ್ಕೆ ತಕ್ಕ ಶಾಂತಿಯುಂಟಾಗಲಾರದು.

೨೬. ಆದರೂ ಕೂಡ ನಿನ್ನ ಮಗನ ಈ ಪಾಪಕೃತ್ಯದ ಪ್ರಾಯಶ್ಚಿತ್ತಕ್ಕಾಗಿ ಒಂದುಪಾಯವನ್ನು ಹೇಳುವೆನು. ಪದ್ಮನಾಭಬ್ರಾಹ್ಮಣನೆ! ಆದರದಿಂದ ಕೇಳು.

ಗಂಗಾಯಾ ದಕ್ಷಿಣೇ ಭಾಗೇ ದ್ವಿಶತೀಯೋಜನೇ ದ್ವಿಜ ।
ಪೂರ್ವಾಂಭೋಧೇಃ ಪಶ್ಚಿಮೇ ತು ಪಂಚಭಿರ್ಯೋಜನೈರ್ಮಿತೇ ॥ ೭೭ ॥
ಸುವರ್ಣಮುಖರೀ ತೀರೇ ಚೋತ್ತರೇ ಕ್ರೋಶಮಾತ್ರಕೇ ।
ವೇಂಕಟಾದ್ರಿರಿತಿ ಖ್ಯಾತಃ ಸರ್ವಲೋಕನಮಸ್ಕೃತಃ ॥ ೭೮ ॥
ಮೇರುಪುತ್ರೋ ಮಹಾಪುಣ್ಯಃ ಸರ್ವದೇವಾಭಿವಂದಿತಃ ।
ವೈಕುಂಠಲೋಕಾದಾನೀತೋ ವಿಷ್ಣೋಃ ಕ್ರೀಡಾಚಲೋ ಮಹಾನ್ ॥೭೯॥
ಗರುತ್ಮತಾ ವೇಗವತಾ ಸ್ವರ್ಣಮುಖ್ಯಾಸ್ತಟೇ ಶುಭೇ ।
ವರ್ತತೇ ದೇವಸಂಘೈಶ್ಚ ಋಷಿಸಂಘೈಶ್ಚ ಪೂಜಿತಃ ॥ ೮೦ ॥
ತಸ್ಮಿನ್ವೇಂಕಟಶೈಲೇಂದ್ರೇ ಸಾಕ್ಷಾನ್ನಾರಾಯಣಃ ಸ್ವಯಂ ।
ಲಕ್ಷ್ಮೀದೇವ್ಯಾ ಚ ಭೂದೇವ್ಯಾ ನೀಲಾದೇವ್ಯಾ ಸಮಾಗತಃ ॥ ೮೧ ॥
ವರ್ತತೇ ವೇಂಕಟೇಶಃ ಸ ಸಾಕ್ಷಾನ್ಮೋಕ್ಷಪ್ರದಾಯಕಃ ।
ತಸ್ಯ ವೇಂಕಟನಾಥಸ್ಯ ಹ್ಯಾಲಯಸ್ಯ ತಥೋತ್ತರೇ ॥ ೮೨ ॥

---

೭೭–೭೮. ಗಂಗಾನದಿಗೆ ದಕ್ಷಿಣದಿಕ್ಕಿಗೆ ಇನ್ನೂರು ಯೋಜನದ ದೂರಕ್ಕೂ ಪೂರ್ವಸಮುದ್ರದ ಪಶ್ಚಿಮಕ್ಕೆ ಐದು ಯೋಜನಗಳ ದೂರದಲ್ಲಿಯೂ ಸುವರ್ಣ ಮುಖರೀ ನದಿಗೆ ಒಂದುಕ್ರೋಶದಷ್ಟು ಉತ್ತರಕ್ಕೂ ಸಕಲಲೋಕ ನಿವಾಸಿ ಗಳಿಂದಲೂ ನಮಸ್ಕಾರಗಳನ್ನು ಕೈಗೊಳ್ಳುತ್ತಿರುವ ವೇಂಕಟಾಚಲವೆಂಬ ಹೆಸರಿನ ಪರ್ವತವೊಂದಿರುವುದು.

೭೯. ಆ ಪರ್ವತವು ಮೇರು ಪುತ್ರನೆಂದೂ ಮಹಾ ಪುಣ್ಯಪ್ರದೇಶವೆಂದೂ ಪ್ರಖ್ಯಾತವಾಗಿ ಸಕಲದೇವತೆಗಳಿಂದಲೂ ನಿತ್ಯವೂ ನಮಸ್ಕರಿಸಲ್ಪಡುತ್ತ ವೈಕುಂಠಲೋಕದಿಂದ ಇಲ್ಲಿಗೆ ಕರೆತರಲ್ಪಟ್ಟ ಮಹಾವಿಷ್ಣುವಿನ ಉತ್ತಮ ಕ್ರೀಡಾಪರ್ವತವೆನಿಸಿರುವುದು.

೮೦. ಸುವರ್ಣಮುಖೀನದಿಯ ದಡದಲ್ಲಿರುವ ಈ ಪರ್ವತವು ಶೀಘ್ರ ಗಾಮಿಯಾದ ಗರುಡನಿಂದಲೂ, ದೇವಗಣಗಳಿಂದಲೂ ಮಹರ್ಷಿಸಂಘ ಗಳಿಂದಲೂ ಪೂಜಿಸಲ್ಪಡುತ್ತಿರುವುದು.

೮೧. ಸರ್ವೋತ್ತಮವಾದ ಆ ವೇಂಕಟಾಚಲದಲ್ಲಿ ಶ್ರೀಮನ್ನಾರಾಯಣನು ತಾನೇ ಶ್ರೀದೇವಿ, ಭೂದೇವಿ, ನೀಳಾದೇವಿಯರೊಡನೆ ಸಾಕ್ಷಾತ್ತಾಗಿ ವಾಸ ಮಾಡುತ್ತಿರುವನು.

೮೨–೮೩. ಆ ಪರ್ವತದಲ್ಲಿ ನಾರಾಯಣನು ಸಕಲರಿಗೂ ಮೋಕ್ಷವನ್ನು ಕೊಡುವವನಾಗಿ ವೇಂಕಟೇಶ್ವರನೆಂಬ ಹೆಸರಿನಿಂದ ನೆಲಸಿರುವನು. ವೇಂಕಟಾ ಚಲನಾಯಕನಾದ ಶ್ರೀನಿವಾಸನ ಆಲಯಕ್ಕೆ ಉತ್ತರದಿಕ್ಕಿನಲ್ಲಿ ಮಂಗಳ ಪ್ರದಾಯಕವಾದ ಕಟಾಹತೀರ್ಥವು ಕಂಗೊಳಿಸುತ್ತಿರುವುದು. ಆ ತೀರ್ಥವು

ಕಟಾಹತೀರ್ಥಂ ವಿಪ್ರೇಂದ್ರ ವರ್ತತೇ ಮಂಗಲಪ್ರದಂ ।
ಬ್ರಹ್ಮಹತ್ಯಾದಿಪಾಪಘ್ನಂ ವಾಂಛಿತಾರ್ಥಪ್ರದಾಯಕಂ ॥ ೮೩ ॥
ಸುತೇನ ಸಾಕಂ ವಿಪ್ರೇಂದ್ರ ಪಿಬ ತೀರ್ಥಂ ಮನೋಹರಂ ।
ಭರದ್ವಾಜಸ್ಯ ವಾಕ್ಯಂ ತಚ್ಛ್ರುತ್ವಾ ವೈ ವೇದಸಮ್ಮತಂ ॥ ೮೪ ॥
ಶಿರಸಾ ತಂ ಪ್ರಣಮ್ಯಾಥ ಯಯೌ ವೇಂಕಟಪರ್ವತಂ ॥ ೮೫ ॥
ತಂ ಗತ್ವಾ ವೇಂಕಟಂ ಶೈಲಂ ಸ್ವಾಮಿಪುಷ್ಕರಿಣೀಜಲೇ ।
ಸುತೇನ ಸಾಕಂ ವಿಪ್ರೇಂದ್ರಃ ಸಸ್ನೌ ನಿಯಮಪೂರ್ವಕಂ ॥ ೮೬ ॥
ವರಾಹಸ್ವಾಮಿನಂ ನತ್ವಾ ಶ್ರೀನಿವಾಸಾಲಯಂ ಗತಃ ।
ಪ್ರದಕ್ಷಿಣಂ ತತಃ ಕೃತ್ವಾ ವಿಮಾನಂ ಸಂಪ್ರಣಮ್ಯ ಚ ॥ ೮೭ ॥
ಪದ್ಮನಾಭೋಽಥ ಪುತ್ರೇಣ ಕೇಶವೇನ ದುರಾತ್ಮನಾ ।
ಪಪೌ ಕಟಾಹತೀರ್ಥಂ ತದ್ಬ್ರಹ್ಮಹತ್ಯಾವಿನಾಶಕಂ ॥ ೮೮ ॥
ತದಾನೀಂ ಬ್ರಹ್ಮಹತ್ಯಾ ಸಾ ಶೀಘ್ರಮೇವ ಲಯಂ ಗತಾ ।
ಅನಂತರಂ ತತೋ ಗತ್ವಾ ವೇಂಕಟೇಶಂ ಕೃಪಾನಿಧಿಂ ॥ ೮೯ ॥

---

ಬ್ರಹ್ಮಹತ್ಯೆಯೇ ಮೊದಲಾದ ಸಕಲ ಪಾತಕಗಳನ್ನೂ ಹೋಗಲಾಡಿಸಿ ಸಕಲಾಭೀಷ್ಟದಾಯಕವಾಗಿರುವುದು.

೮೪–೮೫. ಬ್ರಾಹ್ಮಣೋತ್ತಮನೆ! ನೀನು ನಿನ್ನ ಮಗನೊಡನೆ ಹೊರಟು ಮನೋಹರವಾದ ಆ ತೀರ್ಥೋದಕವನ್ನು ಪಾನಮಾಡು.'' ವೇದಗಳ ಅಭಿಪ್ರಾಯಕ್ಕನುಸಾರವಾದ ಭರದ್ವಾಜನ ಈ ಮಾತನ್ನು ಕೇಳಿ ಪದ್ಮನಾಭನು ಆತನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ವೇಂಕಟಾಚಲವನ್ನು ಕುರಿತು ಪ್ರಯಾಣ ಮಾಡಿದನು.

೮೬. ಆ ಬ್ರಾಹ್ಮಣೋತ್ತಮನು ವೇಂಕಟಾಚಲವನ್ನು ಹತ್ತಿ ಮಗನೊಡನೆ ವಿಧಿಪೂರ್ವಕವಾಗಿ ಸ್ವಾಮಿಪುಷ್ಕರಿಣಿಯ ನೀರಿನಲ್ಲಿ ಸ್ನಾನವನ್ನು ಮಾಡಿದನು.

೮೭–೮೮. ಬಳಿಕ ವರಾಹಸ್ವಾಮಿಗೆ ನಮಸ್ಕರಿಸಿ ಶ್ರೀನಿವಾಸನ ದೇವಾಲಯವನ್ನು ಪ್ರವೇಶಿಸಿ ಪ್ರದಕ್ಷಿಣೆಯನ್ನು ಮಾಡಿ ವಿಮಾನಕ್ಕೆ ಪ್ರಣಾಮವನ್ನು ಮಾಡಿಕೊಂಡು ಪದ್ಮನಾಭನು ದುರಾತ್ಮನಾದ ಕೇಶವನೊಡನೆ ಬ್ರಹ್ಮಹತ್ಯಾನಿವಾರಕವಾದ ಕಟಾಹತೀರ್ಥೋದಕವನ್ನು ಪಾನಮಾಡಿದನು.

೮೯–೯೧. ಆಗ ಆ ಬ್ರಹ್ಮಹತ್ಯೆಯು ಕ್ಷಣಮಾತ್ರದಲ್ಲಿಯೇ ಅದೃಶ್ಯವಾಯಿತು. ಬಳಿಕ ಅಲ್ಲಿಂದ ಹೊರಟು ಬ್ರಾಹ್ಮಣೋತ್ತಮನಾದ ಪದ್ಮನಾಭನು ಮಗನೊಡನೆ ಕೃಪಾಸಮುದ್ರನಾದ ವೇಂಕಟೇಶ್ವರನನ್ನು ನೋಡಿದನು. ಆಗ ದಯಾನಿಧಿಯಾದ ವೇಂಕಟೇಶ್ವರನು ಅವರ ಕಟಾಹತೀರ್ಥ ಪಾನದಿಂದ

ಪುತ್ರೇಣ ಸಹ ವಿಪ್ರೇಂದ್ರಃ ಪದ್ಮನಾಭೋ ದದರ್ಶ ಸಃ ।
ತದಾ ಪ್ರಾದುರಭೂದ್ದೇವೋ ವೇಂಕಟೇಶೋ ದಯಾನಿಧಿಃ ॥ ೯೦ ॥
ಕಟಾಹತೀರ್ಥಪಾನೇನ ತೋಷಿತೋ ವಾಕ್ಯಮಬ್ರವೀತ್ ॥ ೯೧ ॥

ಶ್ರೀ ಭಗವಾನುವಾಚ :—

ಪದ್ಮನಾಭ ಮಹಾಬುದ್ಧೇ ವೇದ ವೇದಾಂತಪಾರಗ ।
ಭರದ್ವಾಜಸ್ಯ ವಾಕ್ಯೇನಪ್ರಾಪ್ಯ ವೇಂಕಟಪರ್ವತಂ ॥ ೯೨ ॥
ಕಟಾಹತೀರ್ಥಂ ತ್ವಂ ಪೀತ್ವಾ ಕೃತಾರ್ಥೋಽಸಿ ನ ಸಂಶಯಃ ।
ತವ ಪುತ್ರಃ ಕೇಶವಾಖ್ಯೋ ವಿಮುಕ್ತೋ ಬ್ರಹ್ಮಹತ್ಯಯಾ ॥ ೯೩ ॥
ತಸ್ಮಾತ್ಕಟಾಹತೀರ್ಥಂ ತು ಸೇವನೀಯಂ ಪ್ರಯತ್ನತಃ ।
ತಸ್ಮಿಂಸ್ತೀರ್ಥೇ ಮಹಾಭಾಗ ಪೀತ್ವಾ ಜಲಮನುತ್ತಮಂ ॥ ೯೪ ॥
ಪಾಪಿನೋಽಪಿ ಕೃತಾರ್ಥಾಃ ಸ್ಯುಃ ಸತ್ಯಂ ಸತ್ಯಂ ನ ಸಂಶಯಃ ।
ಮಾಮಕಂ ಲೋಕಮಾಗತ್ಯ ಸುಖೀ ಭವ ಮಹಾಮತೇ ॥ ೯೫ ॥
ಇತ್ಯುಕ್ತ್ವಾ ವೇಂಕಟೇಶೋಽಸಾವಂತರ್ಧಾನಂ ಗತಸ್ತತಃ ॥ ೯೬ ॥

ಶ್ರೀ ಸೂತ ಉವಾಚ :—

ತಸ್ಮಾತ್ತಪೋಧನಾಃ ಸರ್ವೇ ಶೌನಕಾದ್ಯಾ ಮಹೌಜಸಃ ।
ಕಟಾಹತೀರ್ಥ ಮಾಹಾತ್ಮ್ಯಮಿತಿಹಾಸಸಮನ್ವಿತಂ ॥ ೯೭ ॥

---

ಸಂತೋಷಗೊಂಡವನಾಗಿ ಪ್ರತ್ಯಕ್ಷವಾಗಿ ಕಾಣಿಸಿಕೊಂಡು ಮಾತನಾಡ ತೊಡಗಿದನು.

೯೨–೯೫. ಭಗವಂತನು ಹೇಳುತ್ತಾನೆ:—"ಮಹಾಬುದ್ಧಿಯೂ ವೇದ ವೇದಾಂತ ಪಾರಂಗತನೂ ಆದ ಪದ್ಮನಾಭನೆ! ನೀನು ಭರದ್ವಾಜ ಮಹಾ ಮುನಿಯ ವಾಕ್ಯವನ್ನಂಗೀಕರಿಸಿ ವೇಂಕಟಾಚಲವನ್ನು ಸೇರಿ ಕಟಾಹತೀರ್ಥದ ಉದಕವನ್ನು ಪಾನಮಾಡಿ ಕೃತಾರ್ಥನಾಗಿರುವೆ. ಸಂದೇಹವಿಲ್ಲ. ಕೇಶವನೆಂಬ ಈ ನಿನ್ನ ಮಗನೂ ಬ್ರಹ್ಮಹತ್ಯೆಯ ಮಹಾಪಾಪದಿಂದ ಮುಕ್ತಿಯನ್ನು ಹೊಂದಿರು ವನು. ಆದುದರಿಂದ ಪ್ರಯತ್ನಪೂರ್ವಕವಾಗಿ ಕಟಾಹತೀರ್ಥವನ್ನು ಸಮಸ್ತರೂ ಸೇವಿಸಬೇಕು. ಎಲೈ ಮಹಾಭಾಗನೆ! ಆ ತೀರ್ಥದ ಪರಮಪವಿತ್ರವಾದ ಜಲವನ್ನು ಸೇವಿಸಿದರೆ ಪಾಪಿಗಳೂ ಕೂಡ ಕೃತಾರ್ಥರಾಗುವರು. ಈ ಮಾತು ಸಂದೇಹವಿಲ್ಲದ್ದು ಮತ್ತು ಸತ್ಯವಾಗಿರುವುದು. ಎಲೈ ಮಹಾಮತಿಯೆ! ನೀನು ನನ್ನ ಲೋಕವನ್ನು ಹೊಂದಿ ಅಲ್ಲಿ ಸುಖಗಳನ್ನು ಅನುಭವಿಸುತ್ತಿರು."

೯೬. ಇಂತೆಂದು ವೇಂಕಟೇಶ್ವರನು ಅವರಿಗೆ ಹೇಳಿ ಅಂತರ್ಧಾನವ ನ್ನೈದಿದನು.

೯೭–೯೮. ಸೂತನು ಹೇಳುತ್ತಾನೆ:—ತಪಸ್ಸಂಪನ್ನರೂ, ಮಹಾತೇಜೋ

**ಯಥಾ ಶ್ರುತಂ ಮಯಾ ಸಮ್ಯಕ್ತಥೋಕ್ತಂ ಭವತಾಂ ದ್ವಿಜಾಃ ॥ ೯೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹ ಸಂವಾದೇ "ಸೂತಶೌನಕಸಂವಾದೇ ಕಟಾಹತೀರ್ಥಪ್ರಶಂಸನಂ"ನಾಮ ಅಷ್ಟಾವಿಂಶೋಽಧ್ಯಾಯಃ**

---

ಮಂತರೂ ಆದ ಶೌನಕಾದಿ ಮಹರ್ಷಿಗಳಿರಾ! ಇಂತು ನಿಮಗೆ ಇತಿಹಾಸದೊಡನೆ ಕೂಡಿದ ಕಟಾಹತೀರ್ಥದ ವೈಭವವನ್ನು ನಾನು ಗುರುಮುಖದಿಂದ ಕೇಳಿದಂತೆ ಯಥಾವತ್ತಾಗಿ ನಿರೂಪಿಸಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೇಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ಸೂತಶೌನಕಸಂವಾದ— ಕಟಾಹತೀರ್ಥ ಪ್ರಶಂಸನ"ವೆಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನತ್ರಿಂಶೋಽಧ್ಯಾಯಃ

### ಸುವರ್ಣಮುಖರೀಮಾಹಾತ್ಮ್ಯೇ ಅರ್ಜುನತೀರ್ಥಯಾತ್ರಾಗಮನವರ್ಣನಂ

ಋಷಯ ಊಚುಃ:—

ತೀರ್ಥಾನಾಮಿಹ ಸರ್ವೇಷಾಂ ಪ್ರಭಾವಃ ಕಥಿತಸ್ತ್ವಯಾ ।
ನದೀನಾಂ ಪರ್ವತಾನಾಂ ಚ ಕ್ಷೇತ್ರಾಣಾಂ ಸರಸಾಮಪಿ ॥ ೧ ॥
ನಿದೇಶಾತ್ಪದ್ಮಗರ್ಭಸ್ಯ ಸುವರ್ಣಮುಖರೀ ನದೀ ।
ನೀತಾ ಭುವಮಗಸ್ತ್ಯೇನ ವ್ಯಾಖ್ಯಾತಾ ಭವತಾನಘ ॥ ೨ ॥
ತದುತ್ಪತ್ತಿಪ್ರಭಾವಂಚ ತೀರ್ಥೌಘಾನ್ಸ್ತತ್ಸಮಾಶ್ರಿತಾನ್ ।
ಶ್ರೋತುಂ ಸಂಪ್ರೀತಿರುತ್ಪನ್ನಾ ತನ್ನೋ ವಕ್ತುಂ ತ್ವಮರ್ಹಸಿ ॥ ೩ ॥
ಪ್ರಣಮ್ಯ ಶಂಭುಂ ನಂದೀಶಂ ಷಡಾಸ್ಯಂ ವ್ಯಾಸಮೇವ ಚ ।
ಮುನಿಭಿಃ ಪ್ರಾರ್ಥಿತಸ್ಸೂತಃ ತದಾ ವಕ್ತುಂ ಪ್ರಚಕ್ರಮೇ ॥ ೪ ॥

ಶ್ರೀ ಸೂತ ಉವಾಚ:—

ಸಾಧು ಪೃಷ್ಟಂ ಮಹಾಭಾಗಾ ಭವದ್ಭಿರ್ಮಂಗಲಾವಹಂ ।
ಆಖ್ಯಾನಮೇತದಾಮ್ನಾಯಶ್ರವಣೋದ್ಭೂತಸಿದ್ಧಿದಂ ॥ ೫ ॥

---

## ಕನ್ನಡದ ಅನುವಾದ

### ಸುವರ್ಣಮುಖರೀಮಾಹಾತ್ಮ್ಯೇ ಅರ್ಜುನತೀರ್ಥಯಾತ್ರಾಗಮನವರ್ಣನ

೧. ಋಷಿಗಳು ಹೇಳುತ್ತಾರೆ:—ವೇಂಕಟಾಚಲದ ಪ್ರದೇಶದಲ್ಲಿರುವ ಸಕಲ ತೀರ್ಥಗಳು, ನದಿಗಳು, ಪರ್ವತಗಳು, ಕ್ಷೇತ್ರಗಳು ಮತ್ತು ಸರೋವರಗಳ ಮಾಹಾತ್ಮ್ಯಗಳೆಲ್ಲವೂ ನಿನ್ನಿಂದ ಇಲ್ಲಿಯವರೆಗೂ ವಿಸ್ತರಿಸಲ್ಪಟ್ಟಿರುವುವು.

೨. ಎಲೈ ಪಾಪರಹಿತನೆ! ಚತುರ್ಮುಖಬ್ರಹ್ಮನ ಅಪ್ಪಣೆಯಂತೆ ಸುವರ್ಣಮುಖರೀ ನದಿಯು ಸ್ವರ್ಗಲೋಕದಿಂದ ಭೂಮಿಗೆ ಅಗಸ್ತ್ಯಮಹರ್ಷಿಯಿಂದ ತರಲ್ಪಟ್ಟಿತೆಂದು ಹಿಂದೆ ನಿರೂಪಿಸಿರುವೆಯಷ್ಟೆ.

೩. ಆ ನದಿಯು ಉತ್ಪತ್ತಿಯಾದ ಬಗೆಯನ್ನೂ, ಅದರ ಮಹಿಮೆಯನ್ನೂ, ಅದನ್ನನುಸರಿಸುವ ತೀರ್ಥಸಮೂಹಗಳನ್ನೂ ಕುರಿತು ಕೇಳಲು ನಮಗೆ ಕುತೂಹಲವುಂಟಾಗಿರುವುದು. ಅದನ್ನು ನಮಗೆ ತಿಳಿಸಲು ನೀನೇ ಅರ್ಹನಾಗಿರುವೆ.

೪. ಈ ಮಾತಗಳನ್ನು ಕೇಳಿ ಸೂತಪೌರಾಣಿಕನು ಮಹೇಶ್ವರನಿಗೂ, ನಂದೀಶ್ವರನಿಗೂ, ಷಣ್ಮುಖಸ್ವಾಮಿಗೂ, ವ್ಯಾಸಮಹರ್ಷಿಗೂ ಮನಸ್ಸಿನಲ್ಲಿಯೇ ನಮಸ್ಕರಿಸಿ ಮುನಿಗಳ ಪ್ರಾರ್ಥನೆಯನ್ನನುಸರಿಸಿ ನಿರೂಪಿಸಲುಪಕ್ರಮಿಸಿದನು.

೫. ಸೂತನು ಹೇಳುತ್ತಾನೆ:—ಎಲೈ ಮಹಾಭಾಗ್ಯವಂತರಿರಾ! ಮಂಗಳ

ಶ್ರುಣುತಾವಹಿತಾ ದಿವ್ಯಾಂ ಕಥಾಂ ಕಲ್ಮಷನಾಶಿನೀಂ ।
ಭರದ್ವಾಜೇನ ಕಥಿತಾಂ ಪಾರ್ಥಾಯ ಕಥಯಾಮಿ ವಃ ॥ ೬ ॥
ಅವಾಪ್ಯ ದ್ರುಪದಾತ್ಪ್ರಾಜ್ಞಾದ್ಯಾಜ್ಞಸೇನೀಂ ಪೃಥಾಸುತಾಃ ।
ಧೃತರಾಷ್ಟ್ರನಿರ್ದೇಶೇನ ಜಗ್ಮುಃ ಕರಿಪುರಂ ಶುಭಂ ॥ ೭ ॥
ಭೀಷ್ಮೇಣ ಚಾಂಬಿಕೇಯೇನ ತತ್ರ ಸಮ್ಮಾನಿತಾಸ್ತದಾ ।
ದುರ್ಯೋಧನಾದಿಭಿಸ್ಸಾರ್ಧಂ ನ್ಯವಸನ್ಪಂಚವತ್ಸರಾನ್ ॥ ೮ ॥
ತತೋಽನುಶಿಷ್ಟೋ ಭೀಷ್ಮಾದ್ಯೈರ್ಧೃತರಾಷ್ಟ್ರೋ ಮಹಾಯಶಾಃ ।
ಸರ್ವೇಷಾಂ ಕುಲವೃದ್ಧಾನಾಂ ವಾಸುದೇವಸ್ಯ ಚಾಗ್ರತಃ ॥ ೯ ॥
ಪ್ರದದೌ ಪಾಂಡುಪುತ್ರೇಭ್ಯಸ್ತತ್ಸೇವಾಹೃಷ್ಟಮಾನಸಃ ।
ಸಾರ್ಧರಾಜ್ಯಂ ಪುರವರಂ ಖಾಂಡವಪ್ರಸ್ಥಸಂಜ್ಞಿಕಂ ॥ ೧೦ ॥
ಆಮಂತ್ರ್ಯ ಪಾಂಡುತನಯಾ ಧೃತರಾಷ್ಟ್ರಾದಿಕಾನ್ಕುರೂನ್ ।
ಜಗ್ಮುಸ್ತತ್ಖಾಂಡವಪ್ರಸ್ಥಂ ಪುರಂ ಕೃಷ್ಣಸಮನ್ವಿತಾಃ ॥ ೧೧ ॥

---

ಕರವಾದ ಈ ಆಖ್ಯಾನವನ್ನು ನೀವು ಕೇಳಿದುದು ಸಾಧುವಾಗಿಯೇ ಇರುವುದು. ಇದರ ಶ್ರವಣದಿಂದಲೇ ಸಕಲಸಿದ್ಧಿಗಳೂ ಉಂಟಾಗುವುವು.

೬. ಮುನ್ನು ಭರದ್ವಾಜನು ಅರ್ಜುನನಿಗೆ ತಿಳಿಸಿದ ಕಲ್ಮಷನಾಶಕವಾದ ಈ ದಿವ್ಯ ಚರಿತ್ರೆಯನ್ನು ಏಕಾಗ್ರಚಿತ್ತದಿಂದ ಕೇಳಿರಿ. ಅದನ್ನು ನಿಮಗೆ ವಿಸ್ತರಿಸುವೆನು.

೭. ಪ್ರಜ್ಞಾವಂತನಾದ ದ್ರುಪದರಾಜನಿಂದ ಪಾಂಚಾಲಿಯನ್ನು ಪಡೆದವರಾಗಿ ಪಂಚಪಾಂಡವರೂ ಧೃತರಾಷ್ಟ್ರನ ಆಜ್ಞೆಯಂತೆ ಪುಣ್ಯಕರವಾದ ಹಸ್ತಿನಾವತಿಗೆ ಪ್ರಯಾಣಮಾಡಿದರು.

೮. ಅವರು ಭೀಷ್ಮನಿಂದಲೂ, ಧೃತರಾಷ್ಟ್ರನಿಂದಲೂ ಉಚಿತಸನ್ಮಾನವನ್ನು ಪಡೆದು ದುರ್ಯೋಧನನೇ ಮೊದಲಾದ ದಾಯಾದಿಗಳೊಡನೆ ಐದು ವರ್ಷಗಳನ್ನು ಕಳೆದರು.

೯–೧೦. ಬಳಿಕ ಭೀಷ್ಮಾದಿ ಧರ್ಮಜ್ಞರ ಮತವನ್ನನುಸರಿಸಿ ಪಾಂಡವರ ಸೇವೆಯಿಂದ ಸಂತುಷ್ಟಾಂತರಂಗನಾದ ಧೃತರಾಷ್ಟ್ರ ಮಹಾರಾಜನು ಸಕಲ ಕುಲವೃದ್ಧರ ಮತ್ತು ಶ್ರೀ ಕೃಷ್ಣನ ಸಮ್ಮುಖದಲ್ಲಿ ಅವರ ಭಾಗಕ್ಕಾಗಿ ಅರ್ಧ ರಾಜ್ಯವನ್ನೂ ಖಾಂಡವಪ್ರಸ್ಥವೆಂಬ ಉತ್ತಮವಾದ ರಾಜಧಾನಿಯನ್ನೂ ಬಿಟ್ಟು ಕೊಟ್ಟನು.

೧೧. ಆಗ ಪಾಂಡವರು ಧೃತರಾಷ್ಟ್ರನೇ ಮೊದಲಾದ ಕೌರವರೆಲ್ಲರನ್ನೂ ಆಮಂತ್ರಿಸಿ ಶ್ರೀಕೃಷ್ಣನೊಡನೆ ಖಾಂಡವಪ್ರಸ್ಥ ನಗರವನ್ನು ಕುರಿತು ಹೊರಟು ಹೋದರು.

ಇಂದ್ರಪ್ರಸ್ಥಾಹ್ವಯೇ ತತ್ರ ರಕ್ಷಿತೇ ವಿಶ್ವಕರ್ಮಣಾ ।
ವಸನ್ಪುರೇಽಶಿಷತ್ಪೃಥ್ವೀಂ ಸಾನುಜೋ ಧರ್ಮನಂದನಃ ॥ ೧೨ ॥
ಗತೇ ಕೃಷ್ಣೇ ನಿಜಪುರಂ ನಾರದಸ್ಯಾನುಶಾಸನಾತ್ ।
ಪ್ರತಿಜ್ಞಾಂ ಚಕ್ರಿರೇ ಪಾರ್ಥಾ ಧರ್ಮಜ್ಞಾ ದ್ರೌಪದೀಂ ಪ್ರತಿ ॥ ೧೩ ॥
ಯಥಾಕ್ರಮೇಣ ಸಾ ಕೃಷ್ಣಾ ವರ್ಷಮೇಕೈಕಮಾದರಾತ್ ।
ಏಕೈಕಸ್ಯ ಗೃಹೇ ತಿಷ್ಠೇತ್ಪ್ರತಿನಿರ್ಣಯಪೂರ್ವಕಂ ॥ ೧೪ ॥
ಯಃ ಪಶ್ಯೇತ್ತಾಂ ಪರಗೃಹೇ ಸ್ಥಿತಾಂ ಪಾಂಚಾಲನಂದಿನೀಂ ।
ತೇನೈಕಹಾಯನಮಿತಂ ವಿಧೇಯಂ ತೀರ್ಥಸೇವನಂ ॥ ೧೫ ॥
ಏವಂ ಕೃತಪ್ರತಿಜ್ಞಾಸ್ತೇ ಪಾಂಡುಭೂಪಾಲನಂದನಾಃ ।
ವ್ಯಾಪಾರೈರ್ಲೋಕಸಾಮಾನ್ಯೈರ್ನಿನ್ಯುಃ ಕಾಲಮತಂದ್ರಿತಾಃ ॥ ೧೬ ॥
ಅಥ ಜಾನಪದೋ ವಿಪ್ರೋ ರಾಜಗೇಹಾಂಗಣೇ ಸ್ಥಿತಃ ।
ಚುಕ್ರೋಶ ಬಹುಧಾಧೇನುರ್ಹೃತಾ ಮೇ ತಸ್ಕರೈರಿತಿ ॥ ೧೭ ॥

---

೧೨. ವಿಶ್ವಕರ್ಮನಿಂದ ರಕ್ಷಿತವಾಗಿದ್ದ ಇಂದ್ರಪ್ರಸ್ಥವೆಂಬ ನಗರದಲ್ಲಿ ವಾಸಮಾಡುತ್ತ ಧರ್ಮನಂದನನಾದ ಯುಧಿಷ್ಠಿರನು ತಮ್ಮಂದಿರೊಡನೆ ರಾಜ್ಯ ಭಾರವನ್ನು ಮಾಡುತ್ತಿದ್ದನು.

೧೩. ಕೆಲವು ಕಾಲದಮೇಲೆ ಕೃಷ್ಣನು ತನ್ನ ಪಟ್ಟಣವಾದ ದ್ವಾರಕೆಗೆ ತೆರಳಲು, ನಾರದಮಹರ್ಷಿಯ ಅನುಜ್ಞೆಯಂತೆ ಪಂಚಪಾಂಡವರು ತಮ್ಮ ಧರ್ಮಪತ್ನಿಯಾದ ದ್ರೌಪದಿಯ ವಿಷಯದಲ್ಲಿ ಅನುಸರಿಸಬೇಕಾದ ನೀತಿಯನ್ನು ನಿರ್ಣಯಿಸಿಕೊಂಡರು.

೧೪. ಮೊದಲೇ ನಿರ್ಣಯಮಾಡಿಕೊಂಡಂತೆ ದ್ರೌಪದಿಯು ಕ್ರಮವಾಗಿ ಒಂದೊಂದು ವರ್ಷಕಾಲ ಒಬ್ಬೊಬ್ಬರ ಮನೆಯಲ್ಲಿ ಆದರದಿಂದ ಸೇವಿಸುತ್ತಿರ ಬೇಕು.

೧೫. ಆ ದ್ರುಪದಪುತ್ರಿಯು ಇತರರ ಮನೆಯಲ್ಲಿ ಏಕಾಂತದಲ್ಲಿರುವಾಗ ಯಾವನು ಆಕೆಯನ್ನು ನೋಡುವನೊ, ಅವನು ಒಂದು ವರ್ಷದವರೆಗೂ ತೀರ್ಥ ಯಾತ್ರೆಯನ್ನು ಮಾಡಿಕೊಂಡು ಬರಬೇಕು.

೧೬. ಇಂತು ಪಂಚಪಾಂಡವರು ನಿಬಂಧನೆಯನ್ನು ಮಾಡಿಕೊಂಡು ಲೋಕಸಾಮಾನ್ಯವಾದ ರಾಜ್ಯಭಾರಕಾರ್ಯಗಳಿಂದ ಜಾಗರೂಕರಾಗಿ ಕಾಲ ವನ್ನು ಕಳೆಯುತ್ತಿದ್ದರು.

೧೭. ಒಂದಾನೊಂದು ದಿನ ಹಳ್ಳಿಯ ಬ್ರಾಹ್ಮಣನೊಬ್ಬನು ಬಂದು ಮಹಾ ರಾಜನ ಅರಮನೆಯ ಅಂಗಳದಲ್ಲಿ ನಿಂತುಕೊಂಡು "ನನ್ನ ಹಸುವು ಕಳ್ಳರಿಂದ ಅಪಹರಿಸಲ್ಪಟ್ಟಿತು" ಎಂಬುದಾಗಿ ಬಹುವಿಧವಾಗಿ ಪ್ರಲಾಪವನ್ನು ಮಾಡಿದನು.

ಸಮಾಶ್ವಾಸ್ಯ ಚ ತಂ ವಿಪ್ರಂ ಪ್ರವಿವೇಶ ಧನಂಜಯಃ ।
ಆಯುಧಾನಿ ಸಮಾನೇತುಂ ತ್ವರಯಾ ಶಸ್ತ್ರಮಂದಿರಂ ॥ ೧೮ ॥
ತತ್ರಾಪಶ್ಯತ್ಸಮಾಸೀನೌ ಪಾಂಚಾಲೀಧರ್ಮನಂದನೌ ।
ಜಾನನ್ನಪಿ ಪ್ರತಿಜ್ಞಾಂ ಸಃ ಧನುರ್ಜಗ್ರಾಹ ಸೇಷುಧಿ ॥ ೧೯ ॥
ಸ ಗತ್ವಾ ತಸ್ಕರಾನಾಜೌ ನಿಹತ್ಯ ನೃಪನಂದನಃ ।
ನಿವರ್ತ್ಯ ಧೇನುಂ ತಾಂ ತಸ್ಮೈ ದದೌ ವಿಪ್ರಾಯ ಸಾದರಂ ॥ ೨೦ ॥
ಅಥ ವಿಜ್ಞಾಪಯಾಮಾಸ ಫಾಲ್ಗುನೋ ಧರ್ಮನಂದನಂ ।
ತೀರ್ಥಯಾತ್ರಾ ಮಯಾ ಕಾರ್ಯಾ ಸಮಯೋಲ್ಲಂಘನಾದಿತಿ ॥ ೨೧ ॥
ಅನುಜಸ್ಯ ವಚಃ ಶ್ರುತ್ವಾ ಸರ್ವಧರ್ಮವಿದಾಂ ವರಃ ।
ಉವಾಚ ವಚನಂ ಧೀರಃ ಸಾದರಂ ಧರ್ಮನಂದನಃ ॥ ೨೨ ॥

ಯುಧಿಷ್ಠಿರ ಉವಾಚ :—

ಗವಾರ್ಥಂ ಬ್ರಹ್ಮಣಾರ್ಥಂ ಚ ಯದ್ವದೇದನೃತಂ ವಚಃ ।
ಯದಾಚರೇದಸತ್ಕರ್ಮ ತತ್ಸತ್ಯಂ ತತ್ಸಮಂಜಸಂ ॥ ೨೩ ॥
ಬ್ರಾಹ್ಮಣಾರ್ಥಂ ಗವಾರ್ಥಂ ಚ ತ್ವಯಾ ಕರ್ಮೇದೃಶಂ ಕೃತಂ ।
ತದಸದ್ಭಾವಮಾಪ್ನೋತಿ ಕಥಂ ಕಥಯ ಸುವ್ರತ ॥ ೨೪ ॥

---

೧೮. ಅರ್ಜುನನು ಆತನನ್ನು ಸಮಾಧಾನಗೊಳಿಸಿ ತನ್ನ ಆಯುಧಗಳನ್ನು ಸಜ್ಜುಗೊಳಿಸಲು ವೇಗವಾಗಿ ಶಸ್ತ್ರಾಗಾರವನ್ನು ಪ್ರವೇಶಮಾಡಿದನು.

೧೯. ಅಲ್ಲಿ ಧರ್ಮರಾಜನೂ, ದ್ರೌಪದಿಯೂ ಏಕಾಂತದಲ್ಲಿ ಕುಳಿತಿರುವುದನ್ನು ಕಂಡು ತಾವು ಮಾಡಿಕೊಂಡಿದ್ದ ಪ್ರತಿಜ್ಞೆಯನ್ನು ತಿಳಿದವನಾದರೂ ಒಳಕ್ಕೆಹೋಗಿ ಬತ್ತಳಿಕೆಯನ್ನೂ, ಬಿಲ್ಲನ್ನೂ ಹೊರಕ್ಕೆ ತೆಗೆದುಕೊಂಡು ಬಂದನು.

೨೦. ಬಳಿಕ ವೀರನಾದ ಅರ್ಜುನನು ಯುದ್ಧ ಮಾಡಲು ಹೊರಟು ಆ ಕಳ್ಳರನ್ನೆಲ್ಲ ಸಂಹರಿಸಿ ಹಸುವನ್ನು ಹಿಂದಿರುಗಿಸಿಕೊಂಡು ಬಂದು ಆ ಬ್ರಾಹ್ಮಣನಿಗೆ ಆದರಪೂರ್ವಕವಾಗಿ ಒಪ್ಪಿಸಿದನು.

೨೧-೨೨. ಮಾರನೆಯ ದಿನ ಅರ್ಜುನನು ಧರ್ಮರಾಜನನ್ನು ಕುರಿತು "ನಮ್ಮ ನಿಯಮವನ್ನು ಮೀರಿದುದರಿಂದ ನಾನು ತೀರ್ಥಯಾತ್ರೆಯನ್ನು ಮಾಡಬೇಕಾಗಿರುವುದು. ಅಪ್ಪಣೆಯನ್ನು ಕೊಡು" ಎಂಬುದಾಗಿ ವಿಜ್ಞಾಪಿಸಿಕೊಂಡನು. ಸಕಲ ಧರ್ಮಜ್ಞರಲ್ಲಿಯೂ ಅಗ್ರೇಸರನೂ, ಧೀರನೂ ಆದ ಯುಧಿಷ್ಠಿರನು ತಮ್ಮನ ಮಾತುಗಳನ್ನು ಕೇಳಿ ಆದರಪೂರ್ವಕವಾದ ಈ ಮಾತನ್ನಾಡತೊಡಗಿದನು.

೨೩. ಯುಧಿಷ್ಠಿರನು ಹೇಳುತ್ತಾನೆ:— ಗೋವುಗಳಿಗಾಗಲಿ ಬ್ರಾಹ್ಮಣರಿಗೋಸ್ಕರವಾಗಲಿ ಅನೃತವಚನವನ್ನಾಡಿದರೂ ಅದೇ ಸತ್ಯವೆನಿಸುವುದು; ಅಸತ್ಕಾರ್ಯವನ್ನಾಚರಿಸಿದರೂ ಅದೇ ಸಮಂಜಸವಾದುದು.

೨೪. ಎಲೈ ವ್ರತಜ್ಞನೆ! ಇಂತಿರಲು ಬ್ರಾಹ್ಮಣನಿಗೋಸುಗವೂ ಗೋನಿ

ಪ್ರಜಾಪಾಲನಕೃತ್ಯಸ್ಯ ಚೋರೋಪೇಕ್ಷಣಶಿಕ್ಷಣೈಃ ।
ನೂನಂ ಫಲಂ ಭವೇದ್ರಾಜ್ಞೋ ಬ್ರಹ್ಮಹತ್ಯಾಶ್ವಮೇಧಜಂ ॥ ೨೫ ॥
ಅಸಾಧ್ಯಾನ್ವೈರಿಣೋ ಜ್ಞಾತ್ವಾಪ್ಯವನೀಶೋ ನ ಭದ್ರಭಾಕ್ ।
ಸ್ವದೇಶೋಪಪ್ಲವಕರಾಸ್ತಸ್ಕರಾ ನಾದ್ಯಶಿಕ್ಷಿತಾಃ ॥ ೨೬ ॥
ಅಸ್ಮಾಕಂ ಭೂಭುಜಾಂ ಲೋಕಜಾಲಸ್ಯ ಚ ಹಿತಂ ಹಿಯುತ್ ।
ತ್ವಯೇದೃಶಂ ಕೃತಂ ಕರ್ಮ ನಾಸ್ತಿ ದೊಷೋ ಹ್ಯತಸ್ತವ ॥ ೨೭ ॥

ಶ್ರೀ ಸೂತ ಉವಾಚ:—

ಧರ್ಮಪುತ್ರಸ್ಯ ವಚನಮಾಕರ್ಣ್ಯ ರಚಿತಾಂಜಲಿಃ ।
ಪುನರ್ವಿಜ್ಞಾಪಯಾಮಾಸ ಧರ್ಮನಿತ್ಯೋ ಧನಂಜಯಃ ॥ ೨೮ ॥

ಅರ್ಜುನ ಉವಾಚ:—

ನೈವಂ ಭೂಪಾಲ ವಾದೀಸ್ತ್ವಂ ಸ್ವಪ್ರತಿಜ್ಞಾತಿಲಂಘನಂ ।
ಜಾನತಾ ಧರ್ಮಸರ್ವಸ್ವಮುಲ್ಲಸದ್ಧರ್ಮಮೂರ್ತಿನಾ ॥ ೨೯ ॥

---

ಮಿತ್ತವಾಗಿಯೂ ಸಹ ನೀನು ಮಾಡಿದ ಈ ಕಾರ್ಯವು ಹೇಗೆ ತಾನೆ ಅಸತ್ಕಾರ್ಯವೆನಿಸಿಕೊಳ್ಳುವುದು ?

೨೫. ಪ್ರಜಾಪಾಲನವನ್ನೇ ಕರ್ತವ್ಯವೆಂದು ಅಂಗೀಕರಿಸಿರುವ ರಾಜನಿಗೆ ಚೋರರ ಉಪೇಕ್ಷಣೆಯಿಂದ ಬ್ರಹ್ಮಹತ್ಯೆಗೆ ಸಮಾನವಾದ ಪಾಪವೂ ಅವರನ್ನು ನಿಗ್ರಹಿಸುವುದರಿಂದ ಆಶ್ವಮೇಧಯಾಗವನ್ನು ಮಾಡಿದ ಪುಣ್ಯವೂ ಸಂಭವಿಸುವುದಲ್ಲವೆ.

೨೬. ತನ್ನ ದೇಶಕ್ಕೆ ಹಾನಿಯನ್ನುಂಟುಮಾಡುತ್ತಿರುವ ಚೋರರು ನಿಗ್ರಹಿಸಲು ಆಸಾಧ್ಯರೆಂದು ತಿಳಿದಿದ್ದರೂ ಕೂಡ ಅವರನ್ನು ಶಿಕ್ಷಿಸಲು ಯಾವ ರಾಜನು ಪ್ರಯತ್ನಿಸುವುದಿಲ್ಲವೋ, ಅವನಿಗೆ ಶ್ರೇಯಸ್ಸುಂಟಾಗುವುದಿಲ್ಲ.

೨೭. ರಾಜರಾದ ನಮಗೂ ಪ್ರಜಾಸಮುದಾಯಕ್ಕೂ ಹಿತವನ್ನಾಚರಿಸಬೇಕೆಂಬ ದೃಷ್ಟಿಯಿಂದಲೇ ನೀನು ಇಂತಹ ಕೆಲಸವನ್ನು ಮಾಡಿರುವೆ. ಆದುದರಿಂದ ನಿನ್ನಲ್ಲಿ ದೋಷಲೇಶವೂ ಉಂಟಾಗಲಾರದು.''

೨೮. ಸೂತನು ಹೇಳುತ್ತಾನೆ:—ಧರ್ಮಕಾರ್ಯಗಳಲ್ಲಿಯೇ ನಿರತನಾಗಿದ್ದ ಧನಂಜಯನು ಧರ್ಮರಾಜನ ಈ ಮಾತುಗಳನ್ನು ಕೇಳಿ ಮತ್ತೆ ಕೈಗಳನ್ನು ಜೋಡಿಸಿಕೊಂಡು ವಿಜ್ಞಾಪಿಸಿಕೊಂಡನು.

೨೯. ಅರ್ಜುನನು ಹೇಳುತ್ತಾನೆ:— "ಎಲೈ ಮಹಾರಾಜನೆ! ನನ್ನಪ್ರತಿಜ್ಞೆಯನ್ನು ಉಲ್ಲಂಘಿಸಬೇಕೆಂಬ ಮಾತುಗಳನ್ನು ನೀನಾಡುವುದು ಉಚಿತವಲ್ಲ. ನೀನು ಧರ್ಮಸರ್ವಸ್ವವನ್ನೂ ತಿಳಿದವನು. ಧರ್ಮವೇ ಮೂರ್ತಿಗೊಂಡಂತೆ ಕಾಣುತ್ತಿರುವೆ.

ಕೃತ್ಯಾಕೃತ್ಯವಿದಾ ದಕ್ಷೇಣಾತ್ಮನಾ ಪ್ರಾಕ್ಸವಿಾರಿತಾ ।
ನೋಲ್ಲಂಘನೀಯಾ ಸತತಂ ಪ್ರತಿಜ್ಞಾ ಪುರುಷೇಣ ಹಿ ॥ ೩೦ ॥
ಅಶಕ್ತಾನಾಂ ಗತಿಸ್ಸೇಯಂ ಯದ್ಬಂಧುಗುರುವಾಕ್ಯತಃ ।
ಧರ್ಮಂ ತ್ಯಜಂತಿ ಸಮಯಂ ತ್ಯಕ್ತ್ವಾ ಪ್ರಾಕ್ಸ್ವಂ ಸವಿಾರಿತಂ ॥ ೩೧ ॥
ಕೃಪಯಾ ತೀರ್ಥಗಮನಾದಾರ್ಯೋ ಯದಿ ನಿವರ್ತಯೇತ್ ।
ಹಿತಪ್ರತಿಜ್ಞಂ ಮಾಂ ಲೋಕಾಂಜಲ್ಪತಃ ಕೋ ನಿವಾರಯೇತ್ ॥ ೩೨ ॥
ಮಮಾಪಿ ತೀರ್ಥಯಾತ್ರಾಯಾಂ ಕೌತುಕೋತ್ತರಲಂ ಮನಃ ।
ಕರ್ತವ್ಯಂ ಚ ಸ್ಮೃತಂ ರಾಜನ್ನಾರದಾದಿಷ್ಟಶಾಸನಾತ್ ॥ ೩೩ ॥
ತತ್ಪ್ರಸೀದ ಮಹಾರಾಜ ಯತ್ತೀರ್ಥಗಮನೋದ್ಯಮೇ ।
ಸಮ್ಮಾನನೀಯಃ ಪ್ರಭುಭಿಃ ಸಮಯೋ ಹ್ಯನುಜೀವಿನಾಂ ॥ ೩೪ ॥
ತಥೇತಿ ಭ್ರಾತೃಭಿಃ ಸಾರ್ಧಂ ಕೃತಾನುಮತಿರರ್ಜುನಃ ।
ಅಗ್ರಜಂ ತೋಷಯಾಮಾಸ ಪ್ರಣಾಮಪ್ರಶ್ರಯಾದಿಭಿಃ ॥ ೩೫ ॥

---

೩೦. ಕಾರ್ಯಾಕಾರ್ಯಗಳನ್ನು ತಿಳಿದ ಪ್ರಾಜ್ಞನಾದ ನೀನೇ ಈ ಮೊದಲು "ಪುರುಷಮಾತ್ರನಾದರೂ ಮಾಡಿದ ಪ್ರತಿಜ್ಞೆಯನ್ನೆಂದಿಗೂ ಉಲ್ಲಂಘನೆ ಮಾಡಬಾರದು" ಎಂಬುದಾಗಿ ಹೇಳಿರುವೆಯಲ್ಲವೆ.

೩೧. ಬಂಧುಗಳ ಮತ್ತು ಹಿರಿಯರ ಮಾತುಗಳನ್ನು ಕೇಳಿಕೊಂಡು ಮೊದಲು ವಚನವನ್ನು ಕೊಟ್ಟುದನ್ನು ತ್ಯಜಿಸಿ ಧರ್ಮವನ್ನು ಬಿಟ್ಟುಬಿಡುವುದು ಕೇವಲ ನಿಶ್ಶಕ್ತರಿಗೆ ಕಲ್ಪಿಸಿಕೊಟ್ಟ ಒಂದು ಅನುಕೂಲವಾಗಿರುವುದು.

೩೨-೩೩. ಪೂಜ್ಯನಾದ ನೀನು ಅನುಕಂಪದಿಂದ ನನ್ನ ತೀರ್ಥಯಾತ್ರೆಯ ಪ್ರತಿಜ್ಞೆಯನ್ನು ವ್ಯರ್ಥಗೊಳಿಸುವೆಯಾದರೆ ಪ್ರತಿಜ್ಞೆಯನ್ನು ನೆರವೇರಿಸಲು ಕೈಲಾಗದವನೆಂದು ಜನರೆಲ್ಲರೂ ನನ್ನನ್ನು ಮೂದಲಿಸುವರು. ಆ ಅವಮಾನವನ್ನು ಯಾರು ನಿವಾರಿಸುವರು? ನನ್ನ ಮನಸ್ಸೂ ಕೂಡ ತೀರ್ಥಯಾತ್ರೆಯನ್ನು ಮಾಡಬೇಕೆಂಬ ಕೌತೂಹಲದಿಂದ ಉತ್ಸಾಹಗೊಳ್ಳುತ್ತಿರುವುದು. ಮಹಾರಾಜನೆ! ನಮಗೆ ಮಿತ್ರನಾದ ನಾರದನ ಅಪ್ಪಣೆಯನ್ನು ಸ್ಮರಿಸಿಕೊಂಡರೆ ಈಗ ನನಗೆ ತೀರ್ಥಯಾತ್ರೆಯು ಕರ್ತವ್ಯವೂ ಆಗಿರುವುದು.

೩೪. ಓ ಯುಧಿಷ್ಠಿರ! ಆದುದರಿಂದ ಈ ತೀರ್ಥಯಾತ್ರೆಯನ್ನು ಮಾಡುವ ನನ್ನ ಪ್ರಯತ್ನದಲ್ಲಿ ನೀನು ಪ್ರಸನ್ನಮನಸ್ಕನಾಗು. ತಮ್ಮ ಅನುಯಾಯಿಗಳ ಪ್ರತಿಜ್ಞೆಗಳೆಲ್ಲವನ್ನೂ ಪ್ರಭುಗಳು ಸಮ್ಮಾನಮಾಡಬೇಕಷ್ಟೆ."

೩೫. ಅಂತೆಯೇ ಆಗಲೆಂದು ಅಣ್ಣ ತಮ್ಮಂದಿರಿಂದ ಅನುಮತಿಯನ್ನು ಪಡೆದ ಅರ್ಜುನನು ಜ್ಯೇಷ್ಠಭ್ರಾತೃವಾದ ಯುಧಿಷ್ಠಿರನನ್ನು ಪ್ರಣಾಮಗಳಿಂದಲೂ ವಿನೀತಭಾವದಿಂದಲೂ ಸಂತೋಷಗೊಳಿಸಿದನು.

ಯಥಾರ್ಹಂ ಭೀಮಸೇನಾದೀನ್ಭ್ರಾತ್ರೂ ನಾಮಂತ್ರ್ಯ ಪಾಂಡವಃ ।
ಕೃತಸ್ವಸ್ತ್ಯಯನೋ ಭವ್ಯೈರ್ನಿರ್ಯಯೌ ಧರಣೀಸುರೈಃ ॥ ೩೬ ॥
ಪೌರಾಣಿಕಾ ಜ್ಯೋತಿಷಿಕಾ ಭಿಷಜೋ ಧರಣೀಸುರಾಃ ।
ಅನುಜಗ್ಮುರ್ಭೃತ್ಯಗಣಾಃ ಶಿಲ್ಪಿನಃ ಸೂತಮಾಗಧಾಃ ॥ ೩೭ ॥
ಯುಧಿಷ್ಠಿರಾಜ್ಞಯಾ ತಸ್ಯ ಭೋಗತ್ಯಾಗಕ್ಷಮಂ ಧನಂ ।
ಗೃಹೀತ್ವಾನುಯಯುಃ ಸ್ನಿಗ್ಧಾಃ ಸಭ್ಯಾಃ ಕೋಶಾಧಿಕಾರಿಣಃ ॥ ೩೮ ॥
ಸ ರಾಜಪುತ್ರಃ ಪ್ರಥಮಂ ಪ್ರಾಪ್ಯ ಭಾಗೀರಥೀಂ ನದೀಂ ।
ಗಂಗಾದ್ವಾರಂ ಪ್ರಯಾಗಂ ಚ ಸಿಷೇವೇ ಕಾಶಿಕಾಮಪಿ ॥ ೩೯ ॥
ಪಶ್ಯಂಸ್ತೀರ್ಥಾನಿ ಜಾಹ್ನವ್ಯಾಸ್ತ್ರಿತೀರೋಪಾಂತವರ್ತ್ಮನಾ ।
ಆಸಸಾದ ಸಮುತ್ತುಂಗಕಲ್ಲೋಲಂ ದಕ್ಷಿಣೋದಧಿಂ ॥ ೪೦ ॥
ಮಹಾನದೀಂ ಮಹಾಪುಣ್ಯಾಂ ಪ್ರಸಿದ್ಧಂ ಪುರುಷೋತ್ತಮಂ ।
ಸಿಂಹಾಚಲಂ ಚ ಸಂವೀಕ್ಷ್ಯ ಪ್ರಾಪ್ತವಾನ್ಕೃತಕೃತ್ಯತಾಂ ॥ ೪೧ ॥

---

೩೬. ಬಳಿಕ ಆ ಪಾರ್ಥನು ಭೀಮಸೇನನೇ ಮೊದಲಾದ ಇತರ ಸಹೋದರರನ್ನು ಯಥೋಚಿತರೀತಿಯಿಂದ ಉಪಚರಿಸಿ ಬೀಳ್ಕೊಟ್ಟು, ಜ್ಞಾನವೃದ್ಧರೂ ವಯೋವೃದ್ಧರೂ ಆದ ಬ್ರಾಹ್ಮಣರಿಂದ ಶುಭಾಶೀರ್ವಾದಗಳನ್ನು ಹೊಂದಿ ಹೊರಟನು.

೩೭. ತೀರ್ಥಯಾತ್ರೆಗೆ ಹೊರಟ ಅರ್ಜುನನನ್ನು ಪೌರಾಣಿಕರೂ, ಜ್ಯೋತಿಷ್ಕರೂ, ವೈದ್ಯರೂ, ಬ್ರಾಹ್ಮಣೋತ್ತಮರೂ, ಸೇವಕಸಮೂಹಗಳೂ, ಶಿಲ್ಪಿಗಳೂ, ಸೂತರೂ, ಹೊಗಳುಬಂಟರೂ ಹಿಂಬಾಲಿಸಿದರು.

೩೮. ಅವರೊಡನೆ ಯುಧಿಷ್ಠಿರನ ಅಪ್ಪಣೆಯಂತೆ ಅರ್ಜುನನಿಗೆ ಊಟ ಉಪಚಾರಗಳಿಗೂ ದಾನಧರ್ಮಗಳಿಗೂ ಬೇಕಾಗುವಷ್ಟು ಧನವನ್ನು ತೆಗೆದುಕೊಂಡು ಸ್ನೇಹಿತರೂ ವಿನೀತರೂ ಆದ ಕೋಶಾಧಿಕಾರಿಗಳು ಹೊರಟರು.

೩೯. ರಾಜಪುತ್ರನಾದ ಅರ್ಜುನನು ಮೊದಲು ಗಂಗೆಯನ್ನು ಸೇರಿ ಗಂಗಾದ್ವಾರ, ಪ್ರಯಾಗ ಕ್ಷೇತ್ರಗಳನ್ನು ನೋಡಿಕೊಂಡು ಕಾಶೀ ಕ್ಷೇತ್ರವನ್ನೂ ಸೇವಿಸಿದನು.

೪೦. ಇಂತು ಗಂಗೆಯ ಎರಡು ದಡಗಳಲ್ಲಿಯೂ ನೆಲಸಿರುವ ತೀರ್ಥಗಳನ್ನೆಲ್ಲ ನೋಡುತ್ತ ಎತ್ತರವಾದ ಅಲೆಗಳಿಂದ ಕೂಡಿದ ದಕ್ಷಿಣ ಸಮುದ್ರವನ್ನು ಸೇರಿದನು.

೪೧. ಪರಮ ಪುಣ್ಯಪ್ರದವಾದ ಮಹಾನದಿಯನ್ನೂ ಪ್ರಸಿದ್ಧವಾದ ಪುರುಷೋತ್ತಮ ಕ್ಷೇತ್ರವನ್ನೂ ಸಿಂಹಾಲಯವನ್ನೂ ನೋಡಿ ಅರ್ಜುನನು ಕೃತಕೃತ್ಯತೆಯನ್ನು ಪಡೆದನು.

ತತೋ ದದರ್ಶ ಕೌಂತೇಯಃ ಪುಣ್ಯಾಂ ಗೋದಾವರೀಂ ನದೀಂ ।
ಸಮಸ್ತದುರಿತವ್ರಾತಶಾತನೋತ್ತೀರ್ಣಗೌರವಾಂ ॥ ೪೨ ॥
ಕೃತಾಭಿಷೇಕಸ್ತತ್ತ್ರೋಯೈರ್ವಿಧಿವತ್ಪಾಂಡು ನಂದನಃ ।
ಪ್ರಮೋದಂ ವಿವಿಧೈರ್ದಾನೈರಕರೋದ್ಭೂಸುವರ್ಣಕೈಃ ॥ ೪೩ ॥
ನದೀಂ ಮಲಾಪಹಾಖ್ಯಾಂ ಚ ದೃಷ್ಟ್ವಾಪ್ಯಮೋದಂ ಯಯೌ ಶುಭಂ ।
ತತಃ ಸಮಾಸಸಾದಾಸೌ ಕೃಷ್ಣವೇಣೀಂ ಸರಿದ್ವರಾಂ ॥ ೪೪ ॥
ಶಿವಸ್ಯ ನಿಯತಾವಾಸಂ ಚತುರ್ದ್ವಾರಸಮನ್ವಿತಂ ।
ನಾನಾತೀರ್ಥಗಣಾಕೀರ್ಣಂ ಶ್ರೀಪರ್ವತಮವೈಕ್ಷತ ॥ ೪೫ ॥
ನದೀಂ ಪಿನಾಕಿನೀಂ ತೀರ್ತ್ವಾ ಗತ್ವಾ ದೇವರ್ಷಿಸೇವಿತಂ ।
ನಾರಾಯಣಪ್ರಿಯಾವಾಸಮಪಶ್ಯದ್ವೇಂಕಟಾಚಲಂ ॥ ೪೬ ॥
ಶೃಂಗೇಽಸ್ಯ ಭೂಭೃತಸ್ತುಂಗೇ ಸ್ಥಿತಂ ಲೋಕೈಕನಾಯಕಂ ।
ಅಪೂಜಯದ್ಧರಿಂ ಭಕ್ತ್ಯಾ ಪ್ರಸಿದ್ಧಂ ಶುಭಸಿದ್ಧಯೇ ॥ ೪೭ ॥

---

೪೨. ಬಳಿಕ ಆತನು ಪುಣ್ಯಪ್ರದವೂ ಸಕಲ ಪಾಪಸಮೂಹಗಳನ್ನು ನಾಶಗೊಳಿಸುವ ಉನ್ನತ ಗೌರವವನ್ನು ಪಡೆದಿರುವುದೂ ಆದ ಗೋದಾವರೀ ನದಿಯನ್ನು ಕಂಡನು.

೪೩. ಆ ಪಾಂಡವಮಧ್ಯಮನು ಆ ನದಿಯ ಜಲದಲ್ಲಿ ವಿದ್ಯುಕ್ತರೀತಿಯಿಂದ ಸ್ನಾನವನ್ನು ಮಾಡಿ ಭೂದಾನ ಸುವರ್ಣದಾನಗಳಿಂದ ಜನರಿಗೆ ಅಮಿತಾನಂದವನ್ನುಂಟುಮಾಡಿದನು.

೪೪. ಬಳಿಕ ಮಲಾಪಹೆಯೆಂಬ ನದಿಯನ್ನು ಕಂಡು ಸಂತೋಷಗೊಂಡನು. ಬಳಿಕ ಆತನು ನದಿಗಳಲ್ಲಿ ಶ್ರೇಷ್ಠವೆನಿಸಿದ ಕೃಷ್ಣವೇಣಿಯನ್ನು ಸೇರಿದನು.

೪೫. ಆಮೇಲೆ ಶಿವನ ಶಾಶ್ವತ ನಿವಾಸವೂ, ನಾಲ್ಕು ಮಹಾದ್ವಾರಗಳುಳ್ಳದ್ದೂ, ಅನೇಕ ಉತ್ತಮ ತೀರ್ಥಗಳಿಂದ ಕೂಡಿದುದೂ ಆದ ಶ್ರೀಪರ್ವತವನ್ನು ನೋಡಿದನು.

೪೬. ಪಿನಾಕಿನೀ ನದಿಯನ್ನು ದಾಟಿ ಮುಂದಕ್ಕೆ ಹೋಗುತ್ತ ದೇವತೆಗಳಿಂದಲೂ ಮಹರ್ಷಿಗಳಿಂದಲೂ ಸೇವೆಯನ್ನು ಕೈಕೊಂಡು ಶ್ರೀಮನ್ನಾರಾಯಣನಿಗೆ ಪ್ರಿಯ ನಿವಾಸವೆನಿಸಿರುವ ವೇಂಕಟಾಚಲವನ್ನು ಪಾರ್ಥನು ನೋಡಿದನು.

೪೭. ಆತನಾ ಪರ್ವತದಲ್ಲಿ ಎತ್ತರವಾದ ಶೃಂಗದಲ್ಲಿ ನೆಲಸಿ ಲೋಕೈಕನಾಯಕನೂ, ಜಗತ್ಪ್ರಸಿದ್ಧನೂ ಆಗಿರುವ ಶ್ರೀನಿವಾಸನನ್ನು ಶುಭಪ್ರಾಪ್ತಿಗೋಸ್ಕರವಾಗಿ ಭಕ್ತಿಯಿಂದ ಪೂಜಿಸಿದನು.

ಅವರುಹ್ಯ ವೇಂಕಟಮಹಾದ್ರಿಶೃಂಗತಃ
ಸ ದದರ್ಶ ಸಿದ್ಧಮುನಿಸಂಘಸೇವಿತಾಂ ।
ಕಲಶೋದ್ಭವೇನ ಮುನಿನಾ ಸಮಾಹೃತಾಂ
ತಟಿನೀಂ ಸುವರ್ಣಮುಖರೀಸಮಾಹ್ವಯಾಂ ॥ ೪೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ
"ಸುವರ್ಣಮುಖರೀಮಾಹಾತ್ಮ್ಯೇ ಅರ್ಜುನತೀರ್ಥಯಾತ್ರಾಗಮನವರ್ಣನಂ"
ನಾಮ ಏಕೋನತ್ರಿಂಶೋಽಧ್ಯಾಯಃ

---

೪೮. ಅರ್ಜುನನು ವೇಂಕಟಾಚಲದ ಮಹಾಶೃಂಗದಿಂದ ಕೆಳಗಿಳಿದು ಸಿದ್ಧರಿಂದಲೂ ಮುನಿಗಳಿಂದಲೂ ಸೇವಿಸಲ್ಪಡುತ್ತಿರುವುದೂ, ಅಗಸ್ತ್ಯಮಹಾಮುನಿಯಿಂದ ಭೂಲೋಕಕ್ಕೆ ತರಲ್ಪಟ್ಟಿರುವುದೂ ಆದ ಸುವರ್ಣಮುಖರಿಯೆಂಬ ಹೆಸರಿನಿಂದ ಪ್ರಸಿದ್ಧವಾದ ನದಿಯನ್ನು ಕಂಡನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೇಂಕಟಾಚಲ
ಮಾಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ಸುವರ್ಣಮುಖರೀಮಾಹಾತ್ಮ್ಯೇ
ಅರ್ಜುನತೀರ್ಥಯಾತ್ರಾಗಮನವರ್ಣನ"
ವೆಂಬ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಂಶೋಽಧ್ಯಾಯಃ

### ಸುವರ್ಣಮುಖರೀ ಮಾಹಾತ್ಮ್ಯಪ್ರಶಂಸಾಯಾಂ ಭರದ್ವಾಜಾಶ್ರಮವರ್ಣನ

ಸೂತ ಉವಾಚ:—

ತಥಾ ಸರ್ವಾಣಿ ತೀರ್ಥಾನಿ ಸಮಾಲೋಕ್ಯಾಗತಸ್ಯ ಚ ।
ಮುದಂ ಪ್ರಗುಣಯಾಂಚಕ್ರೇ ಸಾ ಪಾರ್ಥಸ್ಯ ಮಹಾಪಗಾ ॥ ೧ ॥
ಯಸ್ಯಾಸ್ತಟನಿಕುಂಜೇಷು ಮೋದಂತೇ ವನಿತಾಃ ಸುಖಾಃ ।
ಸಿದ್ಧಾಃ ಸಂಸೇವಿತಾ ವಾತೈಃ ಶೀಕರಾಸಾರಶೀತಲೈಃ ॥ ೨ ॥
ಯಾ ಸಮುದ್ಯತಹಸ್ತೇವ ಗಂಗಾಮಾಕಾಶವಾಹಿನೀಂ ।
ಆಲಿಂಗಿತುಂ ಸಮುತ್ತುಂಗೈಃ ಕಲ್ಲೋಲೈರಭ್ರಸಂಗಿಭಿಃ ॥ ೩ ॥
ಧೂಮ್ರೈರಾಹುತಿಸಂಭೂತೈಸ್ತರುಶಾಖೋಪಲಂಭಿಭಿಃ ।
ವಲ್ಕಲೈಶ್ಚ ವಿರಾಜಂತೇ ಯತ್ತಟಾಶ್ರಮಭೂಮಯಃ ॥ ೪ ॥
ಮುನೀಂದ್ರೈಃ ಸುರವರ್ಯೈಶ್ಚ ಸ್ಥಾಪಿತಾನಿ ಸಮಂತತಃ ।
ಯತ್ತಟದ್ವಿತಯೇ ಭಾಂತಿ ದಿವ್ಯಲಿಂಗಾನಿ ಶೂಲಿನಃ ॥ ೫ ॥

---

### ಕನ್ನಡದ ಅನುವಾದ

#### ಸುವರ್ಣಮುಖರೀಮಾಹಾತ್ಮ್ಯಪ್ರಶಂಸೆ— ಭರದ್ವಾಜಾಶ್ರಮವರ್ಣನ

೧; ಸೂತನು ಹೇಳುತ್ತಾನೆ :— ಇಂತು ಸಕಲ ತೀರ್ಥಗಳ ಸೇವೆಯನ್ನೂ ಮುಗಿಸಿಕೊಂಡು ಬಂದ ಅರ್ಜುನನಿಗೆ ಸುವರ್ಣಮುಖರೀ ನದಿಯು ಆನಂದವನ್ನು ಬಹುಗುಣಿತವನ್ನಾಗಿ ಮಾಡಿತು.

೨. ಅದರ ತೀರಗಳಲ್ಲಿರುವ ಪುಷ್ಪವಾಟಿಕೆಗಳಲ್ಲಿ ಸ್ತ್ರೀಯರು ನೀರಿನ ತುಂತುರುಗಳಿಂದೊಡಗೂಡಿ ತಣ್ಣಗೆ ಬೀಸುವ ಗಾಳಿಗಳಿಂದ ಸೇವಿತರಾಗಿ ಕೃತಾರ್ಥತೆಯನ್ನು ಪಡೆದು ಸುಖಗಳನ್ನನುಭವಿಸುತ್ತಿರುವರು.

೩. ಆ ನದಿಯು ಎತ್ತರವಾಗಿ ಆಕಾಶವನ್ನು ಮುಟ್ಟುತ್ತಿರುವ ತೆರೆಗಳಿಂದ ಆಕಾಶವಾಹಿನಿಯಾದ ಗಂಗೆಯನ್ನು ಆಲಿಂಗನಮಾಡಲು ಮೇಲಕ್ಕೆ ಕೈಗಳನ್ನು ಎತ್ತಿರುವಂತೆ ತೋರುತ್ತಿದ್ದಿತು.

೪. ಅದರ ದಡಗಳಲ್ಲಿ ಅನೇಕ ಆಶ್ರಮ ಪ್ರದೇಶಗಳು ಹೋಮಾಹುತಿಗಳ ಹೊಗೆಯಿಂದಲೂ, ಗಿಡಗಳ ಶಾಖೆಗಳಿಗೆ ಕಟ್ಟಿ ತೂಗಾಡುತ್ತಿರುವ ವಲ್ಕಲಗಳಿಂದಲೂ ಶೋಭಿಸುತ್ತಿದ್ದುವು.

೫. ಆ ನದಿಯ ಎರಡು ತೀರಗಳಲ್ಲಿಯೂ ವಿಶಾಲವಾದ ಪ್ರದೇಶಗಳಲ್ಲಿ ಮಹರ್ಷಿಗಳಿಂದಲೂ, ದೇವತೆಗಳಿಂದಲೂ ಸ್ಥಾಪಿಸಲ್ಪಟ್ಟ ಅನೇಕ ಶಿವಲಿಂಗಗಳು ವಿರಾಜಿಸುತ್ತಿದ್ದುವು.

ಯದೀಯಸೈಕತಾವಾಸವಿಶ್ರಾಂತಾ ಮಾನಸಂ ಸರಃ ।
ನ ಸ್ಮರಂತಿ ನಿಜಾವಾಸಂ ಮರಾಲಾ ವಿಹಗೋತ್ತಮಾಃ ॥ ೬ ॥
ಶಮಿತಾವಗ್ರಹಾತಂಕೈಃ ಕಲ್ಯಾಮುಖವಿನಿರ್ಗತೈಃ ।
ಪುಷ್ಣಾತಿ ತೋಯೈಃ ಸಸ್ಯಾನಿ ಲೋಕರಕ್ಷಾಕ್ಷಮಾಣಿ ಯಾ ॥ ೭ ॥
ಚಕ್ರವಾಕಕುಚೋತ್ತುಂಗವೀಚಿವಲ್ಲೀವಿಭೂಷಿತಾ ।
ಆವರ್ತನಾಭಿವಿಲಸತ್ಸೈಕತಶ್ರೋಣಿಮಂಡಲಾ ॥ ೮ ॥
ಪ್ರಫುಲ್ಲಪದ್ಮವದನಾ ಚಲನ್ಮೀನಯುಗೇಕ್ಷಣಾ ।
ವಿಲಸತ್ಫೇನವಸನಾ ಹಂಸಯಾನಮನೋಹರಾ ॥ ೯ ॥
ಜಲಪಕ್ಷಿರವಾಲಾಪಾ ನಯನಾನಂದಕಾರಿಣೀ ।
ಅಪೂರ್ವಕಾಮಿನೀರೂಪಾ ಯಾ ವಿಭಾತ್ಯಂಬುಧಿಪ್ರಿಯಾ ॥ ೧೦ ॥
ರೋಧಸ್ಯಂತರವಾಹಿನ್ಯಾ ನದ್ಯಾಃ ಪ್ರಾಚ್ಯಾಂ ಧನಂಜಯಃ ।
ದದರ್ಶ ಶೈಲಮುತ್ತುಂಗಂ ಕಾಲಹಸ್ತಸಮಾಹ್ವಯಂ ॥ ೧೧ ॥
ಉದಗ್ರಶಿಖರಾಭೋಗೋಲ್ಲಿಖಿತಾಕಾಶಮಂಡಲಂ ।
ಸಪ್ತಪಾತಾಲ ಮೂಲಾಧೋರೂಢಮಾಲೋಪಲಾಂಚಿತಂ ॥ ೧೨ ॥

---

೬. ಉತ್ತಮ ಪಕ್ಷಿಗಳೆನಿಸಿದ ಹಂಸಗಳೂ ಕೂಡ ಆ ನದಿಯ ಮರಳು ದಿನ್ನೆಗಳಲ್ಲಿ ಮನೆಗಳನ್ನು ಮಾಡಿಕೊಂಡು ವಿಶ್ರಮಿಸುತ್ತ ತಮ್ಮ ಸಹಜನಿವಾಸವಾದ ಮಾನಸಸರೋವರವನ್ನೂ ಸ್ಮರಿಸುತ್ತಿರಲಿಲ್ಲ.

೭. ಆ ನದಿಯು ಯಾವ ಆತಂಕಗಳೂ ಇಲ್ಲದೆ ಕಾಲುವೆಗಳ ಮೂಲಕ ಹರಿದುಬರುವ ನೀರಿನಿಂದ ಲೋಕರಕ್ಷಣಕ್ಕೆ ಆವಶ್ಯಕವಾದ ಬೆಳೆಗಳನ್ನು ಪೋಷಿಸುತ್ತಿದ್ದಿತು.

೮–೧೦. ಚಕ್ರವಾಕಗಳೆಂಬ ಪೀನಕುಚಗಳಿಂದಲೂ, ಅಲೆಗಳ ಸಮೂಹವೆಂಬ ಆಭರಣಗಳಿಂದಲೂ, ಸುಳಿಯೆಂಬ ನಾಭಿಯಿಂದಲೂ, ಮರಳುದಿನ್ನೆಗಳೆಂಬ ನಿತಂಬಗಳಿಂದಲೂ, ಅರಳಿದ ಕಮಲವೆಂಬ ಮುಖದಿಂದಲೂ, ಚಲಿಸುತ್ತಿರುವ ಮೀನುಗಳೆಂಬ ನೇತ್ರಗಳಿಂದಲೂ, ನೊರೆಗಳೆಂಬ ವಸ್ತ್ರಗಳಿಂದಲೂ, ಹಂಸಯಾನದ ರಾಮಣೀಯಕತೆಯಿಂದಲೂ, ಜಲಪಕ್ಷಿಗಳ ಕಲಕಲವೆಂಬ ಮಾತುಗಳಿಂದಲೂ, ನೋಡುವರ ನೇತ್ರಗಳಿಗೆ ಆನಂದವನ್ನುಂಟುಮಾಡುತ್ತ ಸಮುದ್ರರಾಜನಿಗೆ ಪ್ರೀತಿಪಾತ್ರಳಾದ ಅಪೂರ್ವ ಸ್ತ್ರೀಯಂತೆ ಆ ನದಿಯು ರಂಜಿಸುತ್ತಿದ್ದಿತು.

೧೧. ಅಂತರ್ವಾಹಿನಿಯಾದ ಆ ನದಿಯ ಪೂರ್ವತೀರದಲ್ಲಿ ಅರ್ಜುನನು ಕಾಳಹಸ್ತಿಯೆಂಬ ಹೆಸರಿನ ಉನ್ನತವಾದ ಪರ್ವತವೊಂದನ್ನು ಕಂಡನು.

೧೨. ಆ ಪರ್ವತವು ಅತ್ಯುನ್ನತ ಶಿಖರಗಳ ಸಮೂಹದಿಂದ ಆಕಾಶ

ಸ್ನಾತ್ವಾ ತಸ್ಯಾಂ ಮಹಾನದ್ಯಾಂ ಕಸ್ಮಿಂಶ್ಚಿಲೇ ಸುರಾರ್ಚಿತಂ ।
ಅಪಶ್ಯದರ್ಜುನೋ ದೇವಂ ಕಾಲಹಸ್ತೀಶನಾಮಕಂ ॥ ೧೩ ॥
ಸಂಪೂಜ್ಯ ಚ ಮಹಾದೇವಂ ನಗೇಂದ್ರತನಯಾಸಖಂ ।
ಮನಸಾ ಭಕ್ತಿಯುಕ್ತೇನ ಕೃತಾರ್ಥತ್ವಮುಪೇಯಿವಾನ್ ॥ ೧೪ ॥
ತತೋ ಮಹಾಗಿರೌ ತಸ್ಮಿನ್ನದ್ಭುತೈಕನಿಕೇತನೇ ।
ಚಚಾರಾಭೂತಪೂರ್ವಾಣಾಂ ವಿಶೇಷಾಣಾಂ ದಿದೃಕ್ಷಯಾ ॥ ೧೫ ॥
ಸಿದ್ಧಾನಾಲೋಕಯಾಮಾಸ ವಸತೋ ಗಿರಿಸಾನುಷು ।
ಗಾಯತೋ ದೇವದೇವಸ್ಯ ಚರಿತ್ರಾಣ್ಯಬಲಾಯುತಾನ್ ॥ ೧೬ ॥
ಅಪ್ಸರೋಲಲನಾಜುಷ್ಟಾನ್ಪುಷ್ಪಾಸವಮದಾಕುಲಾನ್ ।
ನಿಕುಂಜೇಷು ಸಮಾಸೀನಾನ್ಗಂಧರ್ವಾನೈಕ್ಷತಾದರಾತ್ ॥ ೧೭ ॥
ವಿವಿಕ್ತೇಷು ಪ್ರದೇಶೇಷು ಶಿವಧ್ಯಾನಪರಾಯಣಾನ್ ।
ಅಪಶ್ಯದ್ಯೋಗಿನೋ ದಿವ್ಯಾನಾದರಾನಂದಶಾಲಿನಃ ॥ ೧೮ ॥

---

ಮಂಡಲವನ್ನೇ ವ್ಯಾಪಿಸಿ, ಏಳು ಪಾತಾಳಗಳ ಕೆಳಗೂ ವ್ಯಾಪಿಸಿ ರೂಢಮೂಲವಾದ ಪಾದಗಳುಳ್ಳದ್ದಾಗಿದ್ದಿತು.

೧೩. ಅರ್ಜುನನು ಆ ನದಿಯಲ್ಲಿ ಸ್ನಾನವನ್ನು ಮಾಡಿಕೊಂಡು ಪರ್ವತವನ್ನೇರಿ ಕಾಳಹಸ್ತೀಶ್ವರನೆಂಬ ಹೆಸರಿನಿಂದ ದೇವತೆಗಳಿಂದಲೂ ಪೂಜಿಸಲ್ಪಡುತ್ತಿರುವ ಮಹಾದೇವನನ್ನು ಕಂಡನು.

೧೪. ಹಿಮವತ್ಪರ್ವತನಂದಿನಿಯೊಡನೆ ನೆಲಸಿರುವ ಮಹೇಶ್ವರನನ್ನು ಭಕ್ತಿಭರಿತವಾದ ಮನಸ್ಸಿನಿಂದ ಪೂಜಿಸಿ ಕೃತಕೃತ್ಯತೆಯನ್ನು ಪಡೆದನು.

೧೫. ಬಳಿಕ ಪರಮಾಶ್ಚರ್ಯಗಳ ಏಕನಿವಾಸವೆನಿಸಿದ ಆ ಮಹಾಪರ್ವತದಲ್ಲಿ ಹಿಂದೆ ಕಾಣದ ವಿಶೇಷಗಳನ್ನು ನೋಡುವ ಅಭಿಲಾಷೆಯಿಂದ ಸ್ವೇಚ್ಛೆಯಾಗಿ ಸಂಚರಿಸುತ್ತಿದ್ದನು.

೧೬. ಬೆಟ್ಟದ ತಪ್ಪಲುಗಳಲ್ಲಿ ಮಹಾದೇವನ ದಿವ್ಯಚರಿತ್ರೆಗಳನ್ನು ತಮ್ಮ ಸ್ತ್ರೀಯರೊಡನೆ ಸೇರಿ ಗಾನಮಾಡುತ್ತಿರುವ ಸಿದ್ಧರನ್ನು ಅರ್ಜುನನು ಅಲ್ಲಿ ಕಂಡನು.

೧೭. ಅಪ್ಸರಸ್ತ್ರೀಯರೊಡಗೂಡಿ ಪುಷ್ಪಗಳ ಮಧುವಿನ ಪಾನದಿಂದ ಮತ್ತರಾಗಿ ಪುಷ್ಪವಾಟಿಕೆಗಳಲ್ಲಿ ಕುಳಿತಿರುವ ಗಂಧರ್ವರನ್ನೂ ಕುತೂಹಲದಿಂದ ನೋಡಿದನು.

೧೮. ಏಕಾಂತಗಳಾದ ಪ್ರದೇಶಗಳಲ್ಲಿ ಆದರದಿಂದಲೂ, ಆನಂದದಿಂದಲೂ ಕೂಡಿ ಶಿವಧ್ಯಾನವನ್ನೇ ಮಾಡುತ್ತಿರುವ ಮಹಾಯೋಗಿಗಳನ್ನು ಈಕ್ಷಿಸಿದನು.

ಪ್ರಶಾಂತಾನ್ಯಾಶ್ರಮಪದಾನ್ಯವೈಕ್ಷತ ಸಮಂತತಃ ।
ಬಲಿನೀವಾರವಿಲಸದ್ದ್ವಾರಭೂಮೀಶ್ಚ ಪಾಂಡವಃ ॥ ೧೯ ॥
ನಿರಾಹಾರಾನ್ವಾಯುಭುಜಃ ಪರ್ಣಾದಾನಾತಪಾಶನಾನ್ ।
ಶಾಂತಾನಾಲೋಕಯಾಮಾಸ ಮುನೀನ್ನಿಯಮಿತೇಂದ್ರಿಯಾನ್ ॥೨೦॥
ಮುದಂ ವಿತೇನಿರೇ ತಸ್ಯ ನೇತ್ರಯೋಃ ಕಮಲಾಕರಾಃ ।
ಫುಲ್ಲಸೌಗಂಧಿಕಾಮೋದಸಂವಾಸಿತದಿಗಂತರಾಃ ॥ ೨೧ ॥
ಮೃಗಯಾಸಂಭೃತಧಿಯಶ್ಚರತೋಽಧಿಜ್ಯಕಾರ್ಮುಕಾನ್ ।
ದದರ್ಶಾನ್ವೇಷಿತಮೃಗಾನ್ಕಿರಾತಾನ್ವನಿತಾಯುತಾನ್ ॥ ೨೨ ॥
ತತೋ ದಕ್ಷಿಣದಿಗ್ಭಾಗೇ ಚರನ್ನದ್ರೇರ್ಮನೋಹರೇ ।
ಪುಣ್ಯಮಾಶ್ರಮಮದ್ರಾಕ್ಷೀದ್ಭರದ್ವಾಜಸ್ಯ ಕೌರವಃ ॥ ೨೩ ॥
ಕದಲೀ ನಾರಿಕೇಳಾಮ್ರಕೋಲಚಂಪಕಚಂದನೈಃ ॥ ೨೪ ॥
ತಕ್ಕೋಲಾಶೋಕಹಿಂತಾಲತಾಲಕೇತಕಿದಾಡಿಮೈಃ ।
ಜಂಬೂಕದಂಬಕತಕಖದಿರಾರ್ಜುನಪಾಟಲೈಃ ॥ ೨೫ ॥

---

೧೯. ಬಳಿಕ ಪಾಂಡವಮಧ್ಯಮನು ಸುತ್ತಲೂ ಶಾಂತಗಳಾದ ಋಷ್ಯಾಶ್ರಮಗಳನ್ನೂ, ಹವಿರ್ದ್ರವ್ಯವಾದ ನೀವಾರಧಾನ್ಯವು ಬೆಳೆದು ನಿಂತಿರುವ ಭೂಮಿಗಳನ್ನೂ ಕಂಡನು.

೨೦. ಅನೇಕ ಮುನಿಗಳು ನಿರಾಹಾರರಾಗಿಯೂ, ವಾಯುಭಕ್ಷಕರಾಗಿಯೂ, ಪರ್ಣಾಶನರಾಗಿಯೂ, ಆತಪಭೋಜನರಾಗಿಯೂ ಪ್ರಶಾಂತಮನಸ್ಕರಾಗಿ ಇಂದ್ರಿಯನಿಗ್ರಹಗಳನ್ನು ಮಾಡುತ್ತಿರುವುದನ್ನು ಆತನವಲೋಕಿಸಿದನು.

೨೧. ಅರಳಿದ ಕಮಲಗಳ ಪರಿಮಳದ ಸೌರಭ್ಯದಿಂದ ವ್ಯಾಪಿತಗಳಾದ ದಿಗ್ಭಾಗಗಳುಳ್ಳ ಸರೋವರಗಳು ಆತನ ನೇತ್ರಗಳಿಗೆ ಆನಂದವನ್ನುಂಟುಮಾಡುತ್ತಿದ್ದುವು.

೨೨. ಬೇಟೆಯಲ್ಲಿಯೇ ನಟ್ಟಮನಸ್ಸುಳ್ಳವರಾಗಿ ಸ್ತ್ರೀಸಹಿತರಾಗಿ ಬಿಲ್ಲುಗಳಲ್ಲಿ ಬಾಣಗಳನ್ನು ಸಂಧಾನಮಾಡಿಕೊಂಡು ಮೃಗಗಳನ್ನೇ ಹುಡುಕಿ ತಿರುಗುತ್ತಿದ್ದ ಬೇಡರನ್ನೂ ಅಲ್ಲಿ ಕಂಡನು.

೨೩. ಬಳಿಕ ಮನೋಹರವಾದ ಪರ್ವತದ ದಕ್ಷಿಣ ಭಾಗದಲ್ಲಿ ಸಂಚರಿಸುತ್ತಿರಲು ಅರ್ಜುನನು ಭರದ್ವಾಜಮಹರ್ಷಿಯ ಪವಿತ್ರವಾದ ಆಶ್ರಮಪ್ರದೇಶವನ್ನು ಕಂಡನು.

೨೪–೨೮. ಬಾಳೆ, ತೆಂಗು, ಮಾವು, ಕೋಲ, ಸಂಪಗೆ, ಚಂದನ, ತಕ್ಕೋಲ, ಅಶೋಕ, ಹಿಂತಾಲ, ತಾಲ, ಕೇತಕಿ, ದಾಳಿಂಬ, ನೇರಿಳೆ, ಕಡಬ, ಕತಕ, ಖದಿರ, ಅರ್ಜುನ, ಪಾಟಲ, ನಾಗ, ಸುರಹೊನ್ನೆ, ಸರಳ, ದೇವದಾರು,

ನಾಗಪುನ್ನಾಗಸರಲದೇವದಾರುಕರಂಜಕೈಃ ।
ಲವಂಗಲುಂಗಲವಲೀಪ್ರಿಯಂಗೂತಿಲಕೈರಪಿ ॥ ೨೬ ॥
ವಿಭೀತಶ್ರೀಫಲಾಶ್ವತ್ಥಮಧೂಕಪ್ಲಕ್ಷಕೇಸರೈಃ ।
ಪೂಗಜಂಬೀರನಾರಂಗನಿಂಬಾಮಲಕಕೌಶಿಕೈಃ ॥ ೨೭ ॥
ಅನ್ಯೈಶ್ಚ ಫಲಪುಷ್ಪಾಢ್ಯೈಃ ಶೋಭಿತಂ ಧರಣೀರುಹೈಃ ।
ವಾಸಂತೀಕುಂದಜಾತ್ಯಾದಿಲತಾಭಿಃ ಪರಿವೇಷ್ಟಿತಂ ॥ ೨೮ ॥
ಅಪೂರ್ವಸೌರಭಾಕೃಷ್ಟಭ್ರಮರೀಭಿಃ ಸಮಂತತಃ ।
ಚಕ್ರವಾಕಬಕಕ್ರೌಂಚಹಂಸಕಾರಂಡವಾಶ್ರಯೈಃ ॥ ೨೯ ॥
ಸೌಗಂಧಿಕೋತ್ಪಲಾಂಭೋಜಕೈರವೌಘವಿರಾಜಿತೈಃ ।
ಸರೋಭಿರಮೃತಸ್ಯಂದಿಮಧುರಸ್ಫಾರವಾರಿಭಿಃ ॥ ೩೦ ॥
ಸಮಾಪಾದಿತಲಕ್ಷ್ಮೀಕಂ ಕೌತುಕೈಕನಿಕೇತನಂ ।
ಸಿಂಹದಂತಾವಲವ್ಯಾಘ್ರತರಕ್ಷುರುರುರಂಕುಭಿಃ ॥ ೩೧ ॥
ಮೃಗೈರನ್ಯೈಃ ಸಮಾಕೀರ್ಣಮನ್ಯೋನ್ಯಹಿತಕಾರಿಭಿಃ ।
ಜಿತಚೈತ್ರರಥೋದ್ಯಾನಮಧರೀಕೃತನಂದನಂ ॥ ೩೨ ॥

---

ಕರಂಜಕ, ಲವಂಗ, ಲುಂಗ, ಲವಲೀಲತೆ, ಪ್ರಿಯಂಗು, ತಿಲಕ, ವಿಭೀತಕ, ಬಿಲ್ವ, ಅಶ್ವತ್ಥ, ಹಿಪ್ಪೆ, ಪ್ಲಕ್ಷ, ನಾಗಕೇಸರ, ಅಡಿಕೆ, ಗಜನಿಂಬೆ, ಕಿತ್ತಳೆ, ನಿಂಬೆ, ನೆಲ್ಲಿ, ಗುಗ್ಗಳ ಮುಂತಾದ ಅನೇಕ ಫಲಪುಷ್ಪಭರಿತಗಳಾದ ತರುಗುಲ್ಮ ಲತೆಗಳಿಂದ ಆ ಆಶ್ರಮವು ಶೋಭಿಸುತ್ತ ಕುರುವಿಂದ, ಮಲ್ಲಿಗೆ, ಜಾಜಿ ಮುಂತಾದ ಲತೆಗಳಿಂದ ಸುತ್ತುವರೆಯಲ್ಪಟ್ಟಿದ್ದಿತು.

೨೯–೩೦. ಎಲ್ಲೆಡೆಯಲ್ಲಿಯೂ ಅಪೂರ್ವವಾದ ಪುಷ್ಪಗಳ ಸುವಾಸನೆಯಿಂದ ಆಕರ್ಷಿಸಲ್ಪಟ್ಟ ದುಂಬಿಗಳು ಝೇಂಕರಿಸುತ್ತಿದ್ದುವು. ಚಕ್ರವಾಕ, ಬಕ, ಕ್ರೌಂಚ, ಹಂಸ, ಕಾರಂಡವ ಮುಂತಾದ ಜಲಪಕ್ಷಿಗಳಿಗೆ ಆಶ್ರಯವಾದವುಗಳೂ, ಸುಗಂಧಯುಕ್ತಗಳಾದ ಕುಮುದ, ಕಮಲ, ಕೈರವಗಳಿಂದ ಶೋಭಿಸುವುವುಗಳೂ, ಪುಷ್ಪಮಧುದ್ರವದಿಂದ ಸಿಹಿಗಟ್ಟಿದ ನಿರ್ಮಲಜಲದಿಂದ ಸರೋವರಗಳೂ ಶೋಭಿಸುತ್ತಿದ್ದುವು.

೩೧–೩೨. ಸಕಲೈಶ್ವರ್ಯಗಳನ್ನೂ ಆಕರ್ಷಿಸಿದಂತೊಪ್ಪಿ ಮೆರೆಯುತ್ತಿದ್ದ ಆ ಆಶ್ರಮವು ಸರ್ವಕೌತುಕಗಳ ಏಕೈಕನಿವಾಸದಂತಿದ್ದಿತು. ಸಿಂಹಗಳು, ತೀಕ್ಷ್ಣದಂಷ್ಟ್ರಗಳುಳ್ಳ ವ್ಯಾಘ್ರಗಳು, ಕರಡಿಗಳು, ಜಿಂಕೆಗಳಿಂದಲೂ, ಅನ್ಯೋನ್ಯ ಸಹಾಯಗಳನ್ನು ಮಾಡುತ್ತಿರುವ ಇತರ ಮೃಗಗಳಿಂದಲೂ ಆ ಆಶ್ರಮ ಭೂಮಿಯು ನಿಬಿಡವಾಗಿ ಕುಬೇರನ ಚೈತ್ರರಥವನ್ನೂ, ಮಹೇಂದ್ರನ ನಂದನ ವನವನ್ನೂ ಹೀಯಾಳಿಸುವಂತಿದ್ದಿತು.

ಅತಿವಾಙ್ಮನಸೋದಾರಂ ಪರಮಾನಂದಕಾರಣಂ ।
ಶಿವಾಗಮಾನಾಂ ದಿವ್ಯಾನಾಮರ್ಥಜಾತಮನುತ್ತಮಂ ॥ ೩೩ ॥
ಪ್ರಕಾಶಯಂತಿ ಶಾವಾನಾಂ ಯತ್ರ ಮಂಜುಗಿರಃ ಶುಕಾಃ ।
ಯಸ್ಮಿನ್ ಹುತಾಶನೋದಾರಧೂಮಶ್ಯಾಮಲಿತಂ ನಭಃ ॥ ೩೪ ॥
ಅಕಾಲಜಲದಭ್ರಾಂತಿಮಾತನೋತಿ ಶಿಖಂಡಿನಾಂ ॥ ೩೫ ॥
ಯಸ್ಮಿನ್ನಿಹಾರಶ್ರಾಂತಾನಾಂ ಸಿಂಹಾನಾಂ ಸ್ವೇಚ್ಛಯಾ ಗತಾಃ
ನಿರ್ವಾಪಯಂತಿ ಗಾತ್ರಾಣಿ ಕರಿಣಃ ಕರಶೀಕರೈಃ ॥ ೩೬ ॥
ತದಾಶ್ರಮಪದಂ ಪಶ್ಯನ್ವಿಸ್ಮಯಾಕ್ರಾಂತಮಾನಸಃ ।
ಪ್ರಭಾವಂ ಪಾಂಡುತನಯಃ ಪ್ರಶಶಂಸ ತಪಸ್ವಿನಾಂ ॥ ೩೭ ॥
ನಿವಾರ್ಯ ತತ್ರ ತತ್ರೈವ ಸಕಲಾನನುಜೀವಿನಃ ।
ಮಿತ್ರೈರ್ವಿಪ್ರವರೈಃ ಸಾರ್ಧಂ ಪ್ರವಿವೇಶ ತಮಾಶ್ರಮಂ ॥ ೩೮ ॥
ಅಗ್ರೇ ದದರ್ಶ ಕೌಂತೇಯಃ ಸ್ಫುರತ್ಪಾವಕತೇಜಸಂ ।
ಭರದ್ವಾಜಂ ಮುನಿವರ್ಯೈರನೇಕೈಃ ಪರಿವಾರಿತಂ ॥ ೩೯ ॥

---

೩೩–೩೫. ಮಾತಿಗೂ, ಮನಸ್ಸಿಗೂ ನಿಲುಕದ ಅತಿಶಯವಾದ ಪರಮಾನಂದಕ್ಕೆ ಆ ಆಶ್ರಮವು ಕಾರಣವಾಗಿದ್ದಿತು. ಅಲ್ಲಿ ದಿವ್ಯವಾದ ಶೈವಾಗಮಗಳ ಉತ್ತಮೋತ್ತಮವಾದ ರಹಸ್ಯಗಳನ್ನೆಲ್ಲ ಗಿಳಿಗಳು ಮಧುರವಾಣಿಗಳಿಂದ ತಮ್ಮ ಮರಿಗಳಿಗೆ ಬೋಧಿಸುತ್ತಿದ್ದುವು. ಆ ಪ್ರದೇಶದಲ್ಲಿ ಅಗ್ನಿಯಲ್ಲಿ ಹೋಮಗಳನ್ನು ಮಾಡುವುದರಿಂದುಂಟಾದ ಹೊಗೆಯಿಂದ ಕೂಡಿದ ಆಕಾಶವು ನವಿಲುಗಳಿಗೆ ಅಕಾಲದಲ್ಲಿ ಕವಿದುಕೊಂಡಿರುವ ಮೇಘಗಳ ಭ್ರಾಂತಿಯನ್ನುಂಟುಮಾಡುತ್ತಿದ್ದಿತು.

೩೬. ಅಲ್ಲಿ ವಿಹರಿಸಿ ಆಯಾಸದಿಂದ ಬಿದ್ದುಕೊಂಡಿರುವ ಸಿಂಹಗಳ ದೇಹಗಳನ್ನು ತಾವಾಗಿಯೇ ಬಂದ ಆನೆಗಳು ತಮ್ಮ ಸೊಂಡಿಲುಗಳಲ್ಲಿ ತಂದ ನೀರಿನ ಹನಿಗಳಿಂದ ಸೇಚನಮಾಡುತ್ತಿದ್ದುವು.

೩೭. ಇಂತಹ ಆಶ್ರಮಭೂಮಿಯನ್ನು ಕಂಡು ಪಾಂಡುತನಯನಾದ ಅರ್ಜುನನು ವಿಸ್ಮಯಗೊಂಡ ಹೃದಯವುಳ್ಳವನಾಗಿ ಅಲ್ಲಿದ್ದ ತಪಸ್ವಿಗಳ ಮಾಹಾತ್ಮ್ಯವನ್ನು ಪ್ರಶಂಸೆಮಾಡಿದನು.

೩೮. ತನ್ನನ್ನು ಅನುಸರಿಸಿದ ಅನುಯಾಯಿಗಳನ್ನೆಲ್ಲ ದೂರಪ್ರದೇಶಗಳಲ್ಲಿಯೇ ಬಿಡಾರಮಾಡಿಸಿ ಸ್ನೇಹಿತರು ಮತ್ತು ಬ್ರಾಹ್ಮಣೋತ್ತಮರನ್ನು ಮಾತ್ರ ಸಂಗಡ ಕರೆದುಕೊಂಡು ಆ ಆಶ್ರಮವನ್ನು ಪ್ರವೇಶಿಸಿದನು.

೩೯. ಇದಿರಿನಲ್ಲಿಯೇ ಜ್ವಲಿಸುತ್ತಿರುವ ಬೆಂಕಿಯ ತೇಜಸ್ಸುಳ್ಳ ಭರದ್ವಾಜ ಮಹಾಮುನಿಯು ಅನೇಕ ಮಹರ್ಷಿಗಳಿಂದ ಸುತ್ತುವರೆಯಲ್ಪಟ್ಟು ನಿಂತಿದ್ದುದನ್ನು ಆ ಅರ್ಜುನನು ಕಂಡನು.

ಭಸ್ಮಾನುಲಿಪ್ತಸರ್ವಾಂಗಂ ಮೃಗಚರ್ಮೋತ್ತರೀಯಕಂ ।
ನವವಾರಿದಸಂವೀತಂ ಕೈಲಾಸಮಿವ ಭಾಸ್ವರಂ ॥ ೪೦ ॥
ಜಟಾಭಿರ್ಲಂಬಮಾನಾಭಿರ್ಭಾಸ್ವಂತಂ ಸ್ವರ್ಣಕಾಂತಿಭಿಃ ।
ಸ್ಥಿರವಿದ್ಯುಲ್ಲತಾಕೀರ್ಣಮಿವ ಶಾರದನೀರದಂ ॥ ೪೧ ॥
ಶ್ರುತಿಸ್ಮೃತಿಪುರಾಣಾರ್ಥೈರೇಕೀಭೂಯ ಸಮಾಗತೈಃ ।
ಅಂಗೀಕೃತಮಿವಾಕಾರಂ ದಿವ್ಯಜ್ಞಾನಶುಭಾಸ್ಪದಂ ॥ ೪೨ ॥
ಧೃತಿಕ್ಷಾಂತಿದಯಾತುಷ್ಟಿಶಾಂತಿಭಿರ್ನಿತ್ಯಸೇವಿತಂ ।
ಪ್ರಿಯಾಭಿರಿವ ರಕ್ತಾಭಿರಖಂಡಬ್ರಹ್ಮವರ್ಚಸಂ ॥ ೪೩ ॥
ಉಪಗಮ್ಯ ಶನೈಃ ಪಾರ್ಥಸ್ತತ್ಪಾದಾಂಬುಜಯೋಃ ಪುರಃ ।
ಚಕ್ರೇ ಪ್ರಣಾಮಂ ಸಾಷ್ಟಾಂಗಂ ಸಮಾಲಿಂಗಿತಭೂತಲಂ ॥ ೪೪ ॥
ತಮಾಗತಂ ಪೃಥಾಪುತ್ರಮುತ್ಥಾಪ್ಯ ಮುನಿಪುಂಗವಃ ।
ಆಶೀರ್ಭಿರೇಧಯಾಂಚಕ್ರೇ ಪ್ರಹರ್ಷೋತ್ಫುಲ್ಲಮಾನಸಃ ॥ ೪೫ ॥

---

೪೦. ಆತನ ಶರೀರವೆಲ್ಲವೂ ಭಸ್ಮಾಲಂಕೃತವಾಗಿದ್ದಿತು. ಜಿಂಕೆಯ ಚರ್ಮವೇ ಆತನಿಗೆ ಉತ್ತರೀಯವಾಗಿದ್ದಿತು. ನೂತನ ಮೇಘಜಾಲವೆಂಬ ಉಪವೀತದಿಂದ ಶೋಭಿಸುವ ಕೈಲಾಸಪರ್ವತದಂತೆ ಆತನು ಕಾಣುತ್ತಿದ್ದನು.

೪೧. ಚಿನ್ನದ ಬಣ್ಣದಿಂದೊಡಗೂಡಿ ತಲೆಯಲ್ಲಿ ಜೋಲಾಡುತ್ತಿರುವ ಜಡೆಗಳಿಂದ ಕೂಡಿ ಆತನು ಸ್ಥಿರವಾಗಿನಿಂತ ಮಿಂಚಿನ ಬಳ್ಳಿಯೊಡಗೂಡಿದ ಶರತ್ಕಾಲದ ಮೇಘದಂತೆ ಕಂಗೊಳಿಸುತ್ತಿದ್ದನು.

೪೨. ಶೃತಿ, ಸ್ಮೃತಿ, ಪುರಾಣಗಳ ಅರ್ಥಗಳೆಲ್ಲವೂ ಏಕೀಭವಿಸಿಬಂದು ಒಂದೇ ಆಕಾರವನ್ನು ಪಡೆದಂತೆ ಆ ಮಹರ್ಷಿಯು ಪರಮಾತ್ಮಜ್ಞಾನಕ್ಕೆ ತಕ್ಕ ಆಶ್ರಮಪುರುಷನೆನಿಸಿದ್ದನು.

೪೩. ತನ್ನಲ್ಲಿಯೇ ಅನುರಾಗಗೊಂಡ ಪ್ರಿಯಪತ್ನಿಯರಂತೆ ಧೈರ್ಯ, ಕ್ಷಮೆ, ದಯೆ, ಸಂತೋಷ, ಶಾಂತಿ ಮುಂತಾದ ಸದ್ಗುಣಗಳಿಂದ ಯಾವಾಗಲೂ ಕೂಡಿದವನಾಗಿ ಆತನು ಅಖಂಡಬ್ರಹ್ಮಚರ್ಯದ ವರ್ಚಸ್ಸಿನಿಂದ ಜ್ವಲಿಸುತ್ತಿದ್ದನು.

೪೪. ಅರ್ಜುನನಾದರೊ ಆ ಮಹರ್ಷಿಯನ್ನು ಮೆಲ್ಲಮೆಲ್ಲಗೆ ಸಮೀಪಿಸಿ ಆತನ ಪಾದಗಳ ಮುಂಗಡೆಯ ಭೂಮಿಯಲ್ಲಿ ಮೈಯನ್ನೀಡಾಡಿ ಸಾಷ್ಟಾಂಗ ಪ್ರಣಾಮವನ್ನು ಮಾಡಿದನು.

೪೫. ಇಂತು ತನ್ನಲ್ಲಿಗೆ ಬಂದ ಪಾರ್ಥನನ್ನು ಕಂಡು ಮೇಲಕ್ಕೆತ್ತಿ ಆನಂದದಿಂದ ತುಂಬಿದ ಮನಸ್ಸುಳ್ಳವನಾಗಿ ಭರದ್ವಾಜನು ಅನೇಕ ಆಶೀರ್ವಾದಗಳಿಂದ ಹರಸಿದನು.

ಸಂಪೂಜ್ಯ ಚ ಯಥಾ ನ್ಯಾಯಂ ತಮರ್ಘ್ಯಾದ್ಯೈಃ ಪ್ರಿಯಾತಿಥಿಂ ।
ವಿನಿರ್ದಿಷ್ಟಾಸನಾಸೀನಂ ತಮಪೃಚ್ಛದನಾಮಯಂ ॥ ೪೬ ॥
ಸಮ್ಮಾನನಮವಾಪ್ಯಾಸ್ಮಾನ್ಮನೇಃ ಪಾಂಡವಮಧ್ಯಮಃ ।
ಪ್ರಿಯೈರ್ವಾಕ್ಯೈರ್ಮುನಿಪತೇರಕರೋನ್ಮನಸೇ ಮುದಂ ॥ ೪೭ ॥
ಸಸ್ಮಾರಾಥ ಭರದ್ವಾಜಃ ಸ್ವರ್ಧೇನುಂ ಕಾಮದೋಹಿನೀಂ ।
ಸಾ ವಿತೇನೇಽತಿಮಹತೀಂ ಭಕ್ಷ್ಯಭೋಜ್ಯಾದಿಕಲ್ಪನಾಂ ॥ ೪೮ ॥
ಭುಕ್ತ್ವಾ ಪಾರ್ಥಃ ಸಾನುಚರಸ್ತಮುಪಾಸ್ಯ ತಪೋನಿಧಿಂ ।
ದಿನಶೇಷಂ ಕಥಾಲಾಪಕೌತುಕೇನಾತ್ಯವಾಹಯತ್ ॥ ೪೯ ॥
ತತಃ ಸಾಯಂತನೀಂ ಸಂಧ್ಯಾಮುಪಾಸ್ಯ ಹುತಪಾವಕಃ ।
ವಿಪ್ರೈರಮಾತ್ಯೈಃ ಸಹಿತೋ ಯಯೌ ತಸ್ಯ ಕುಟೀಗೃಹಾನ್ ॥ ೫೦ ॥
ತತ್ರಾಸೀನೋ ಮುನಿಪತೇರಾಶೀರ್ಭಿರಭಿನಂದಿತಃ ।
ಆನಂದ್ಯಮಾನೋ ಮುಮುದೇ ತನ್ನದೀಶೀತಲಾನಿಲೈಃ ॥ ೫೧ ॥

---

೪೬. ಬಳಿಕ ಪ್ರಿಯವಾದ ಅತಿಥಿಗೆ ಅರ್ಘ್ಯಪಾದ್ಯಾದಿಗಳಿಂದ ಯಥೋಚಿತವಾದ ಸತ್ಕಾರವನ್ನು ನೆರವೇರಿಸಿ ತಾನು ನಿವೇದಿಸಿದ ಆಸನದಲ್ಲಿ ಸುಖಾಸೀನನಾಗಿದ್ದ ಅರ್ಜುನನನ್ನು ಕುರಿತು ಭರದ್ವಾಜನು ಕುಶಲಪ್ರಶ್ನೆಯನ್ನು ಮಾಡಿದನು.

೪೭. ಮಧ್ಯಮಪಾಂಡವನೂ ಕೂಡ ಆತನ ಸತ್ಕಾರವನ್ನು ಸ್ವೀಕರಿಸಿ ಆ ಮುನಿವರ್ಯನ ಪ್ರಿಯವಾಕ್ಯಗಳಿಂದ ಮನಸ್ಸಿನಲ್ಲಿಯೇ ಸಂತೋಷವನ್ನು ತಾಳಿದನು.

೪೮. ಬಳಿಕ ಭರದ್ವಾಜನು ಸಕಲ ಇಷ್ಟಾರ್ಥಗಳನ್ನೂ ನೆರವೇರಿಸುವ ಕಾಮಧೇನುವನ್ನು ಸ್ಮರಿಸಲು ಆ ನಂದಿನಿಯು ಎಲ್ಲರಿಗೂ ಬಹುವಿಧಗಳಾದ ಭಕ್ಷ್ಯಭೋಜ್ಯಗಳಿಂದ ಕೂಡಿದ ಅಪ್ರತಿಮವಾದ ಉಪಚಾರವನ್ನು ಕಲ್ಪಿಸಿತು.

೪೯. ಅರ್ಜುನನು ತನ್ನ ಸಹಚರರೊಡನೆ ಯಥೇಚ್ಛವಾಗಿ ಭೋಜನವನ್ನು ಮಾಡಿ ಮಹರ್ಷಿಯನ್ನು ಸೇವಿಸಿ ಅಂದಿನ ಹಗಲಿನ ಶೇಷವನ್ನು ಆಶ್ಚರ್ಯಕರಗಳಾದ ಅನೇಕ ಕಥೆಗಳ ಪ್ರಸಂಗಗಳಿಂದ ಕಳೆದನು.

೫೦. ಬಳಿಕ ಸಾಯಂಕಾಲದ ಸಂಧ್ಯಾಹ್ನಿಕವನ್ನು ಮುಗಿಸಿ ಔಪಾಸನೆಯನ್ನು ಯಥಾವಿಧಿಯಾಗಿ ನೆರವೇರಿಸಿ ಬ್ರಾಹ್ಮಣರಿಂದಲೂ ಮಂತ್ರಿಗಳಿಂದಲೂ ಪರಿವಾರಿತನಾಗಿ ಆ ಮಹರ್ಷಿಯ ಪರ್ಣಶಾಲೆಯನ್ನು ಪ್ರವೇಶಿಸಿದನು.

೫೧. ಅಲ್ಲಿ ಕುಳಿತುಕೊಂಡು ಮುನಿಮುಖ್ಯನ ಆಶೀರ್ವಾದಗಳಿಂದ ಪ್ರಶಸ್ತಿಯನ್ನು ಪಡೆದು ಆ ಸುವರ್ಣಮುಖರೀ ನದಿಯ ಮೇಲೆ ಬೀಸುತ್ತಿದ್ದ ಶೀತಲಾನಿಲನಿಂದ ಆನಂದವನ್ನು ಹೊಂದಿ ಕುಳಿತಿದ್ದನು.

ಸಂಪ್ರಾಪಿತಾ ಕೇನ ಭುವಃ ಪ್ರಭೂತಾ
ಕಸ್ಮಾನ್ಮಹೀಧ್ರಾದಧಿಕಪ್ರಭಾವಾ ।
ಇತಿಪ್ರಭಾವಂ ಪರಿಪೃಚ್ಛ್ಯ ನದ್ಯಾಃ
ಶ್ರೋತುಂ ಮುನೀಂದ್ರಾನ್ಮತಿರಸ್ಯ ಜಜ್ಞೇ ॥ ೫೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ "ಸುವರ್ಣಮುಖರೀ ಮಾಹಾತ್ಮ್ಯಪ್ರಶಂಸಾಯಾಂ ಭರದ್ವಾಜಾಶ್ರಮ ವರ್ಣನಂ "ನಾಮ ತ್ರಿಂಶೋಽಧ್ಯಾಯಃ

---

೫೨. ಅಮಿತಪ್ರಭಾವವುಳ್ಳ ಆ ನದಿಯು ಯಾರಿಂದ ಭೂಮಿಗೆ ತರಲ್ಪಟ್ಟಿತು? ಯಾವ ಪರ್ವತದಲ್ಲಿ ಹುಟ್ಟುವುದು? ಮುಂತಾದ ಪ್ರಶ್ನೆಗಳಿಂದ ಆ ನದಿಯ ಮಾಹಾತ್ಮ್ಯೆಯನ್ನು ಭರದ್ವಾಜ ಮಹರ್ಷಿಯಿಂದ ಕೇಳಿ ತಿಳಿದುಕೊಳ್ಳಬೇಕೆಂಬ ಕುತೂಹಲವು ಆತನಲ್ಲಿ ಉಂಟಾಯಿತು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೇಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ಸುವರ್ಣಮುಖರೀಮಾಹಾತ್ಮ್ಯೆ ಪ್ರಶಂಸೆ — ಭಾರದ್ವಾಜಾಶ್ರಮವರ್ಣನ"ವೆಂಬ ಮುವ್ವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕತ್ರಿಂಶೋಽಧ್ಯಾಯಃ

## ಶಂಕರವಿವಾಹಾಗಸ್ತ್ಯದಕ್ಷಿಣದಿಗ್ಗಮನವರ್ಣನಂ

ಶ್ರೀಸೂತ ಉವಾಚ :—

ಕೃತಸಾಯಂತನವಿಧಿಂ ಹುತಾಶನಸಮದ್ಯುತಿಂ ।
ಸುಖಾಸೀನಂ ಮುನಿಪತಿಂ ಪ್ರಣಮ್ಯ ಭರತರ್ಷಭಃ ॥ ೧ ॥
ತದೀಯಶೀತಲಾಮೋದಸುಧಾಪೂರಾನುಮೋದಿತಃ ।
ಗಂಭೀರಂ ಪ್ರಶ್ರಯೋಪೇತಮಿದಂ ವಚನಮಬ್ರವೀತ್ ॥ ೨ ॥

ಅರ್ಜುನ ಉವಾಚ :—

ಮುನಿಪುಂಗವ ಲೋಕೇಽಸ್ಮಿನ್ಧನ್ಯ ಏಕೋಽಹಮೇವಹಿ ।
ಪುತ್ರಾವಶೇಷಂ ಭವತಾ ಯದೇವಂ ಸಮ್ಯಗಾದೃತಂ ॥ ೩ ॥
ಭವದಾದರಸಂಜಾತಕೌತುಕಂ ಮಮ ಮಾನಸಂ ।
ಭವದ್ವಾಕ್ಯಾಮೃತಂ ದಿವ್ಯಂ ಪಾತುಂ ತ್ವರಯತೀವ ಮಾಂ ॥ ೪ ॥
ಕಸ್ಮಾಚ್ಛೈಲಾದಿಯಂ ಜಾತಾ ಕೇನಾನೀತಾ ಮಹಾನದೀ ।
ಕಿಂ ಪುಣ್ಯಂ ಸ್ನಾನದಾನದ್ಯೈಃ ಕೃತೈಸ್ತತ್ರೋಪಲಭ್ಯತೇ ॥ ೫ ॥

---

## ಕನ್ನಡದ ಅನುವಾದ

### ಶಂಕರ ವಿವಾಹ — ಅಗಸ್ತ್ಯದಕ್ಷಿಣದಿಗ್ಗಮನವರ್ಣನ

೧–೨. ಸೂತನು ಹೇಳುತ್ತಾನೆ:—ಇಂತು ಸಾಯಂಕಾಲದ ಕರ್ತವ್ಯಗಳನ್ನೆಲ್ಲ ಮುಗಿಸಿಕೊಂಡು ಅಗ್ನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿ ಸುಖಾಸನದಲ್ಲಿ ಮಂಡಿಸಿರುವ ಮಹರ್ಷಿಯನ್ನು ಕಂಡು ಪಾಂಡುನಂದನನು ನಮಸ್ಕರಿಸಿ ನದಿಯ ಶೀತಲವಾದ ಸೌರಭದಿಂದಲೂ, ಅಮೃತಪ್ರವಾಹದಿಂದಲೂ ಚೋದಿತನಾಗಿ ಗಂಭೀರವೂ ವಿನಯಪೂರ್ವಕವೂ ಆದ ಮಾತನ್ನಾಡತೊಡಗಿದನು.

೩. ಅರ್ಜುನನು ಕೇಳುತ್ತಾನೆ:—"ಎಲೈ ಮುನಿಶ್ರೇಷ್ಠನೆ! ಇಂತು ನನ್ನನ್ನು ನೀನು ಮಕ್ಕಳಿಗೆಂತೊ ಅಂತು ಆದರದಿಂದ ಉಪಚರಿಸಿರುವೆ. ಆದುದರಿಂದ ಈ ಲೋಕದಲ್ಲಿ ನಾನೊಬ್ಬನೇ ಧನ್ಯನು.

೪. ನಿನ್ನ ಆದರೋಪಚಾರದಿಂದ ಉಂಟಾದ ಕೌತುಕದಿಂದ ಕೂಡಿದ ನನ್ನ ಮನಸ್ಸು ನಿನ್ನ ದಿವ್ಯವಾದ ವಾಕ್ಯಾಮೃತವನ್ನು ಪಾನಮಾಡಲು ಕಾತರಗೊಳ್ಳುತ್ತಿರುವುದು.

೫. ಈ ನದಿಯು ಯಾವ ಪರ್ವತದಿಂದ ಉದ್ಭವಿಸುವುದು? ಯಾವನಿಂದ ಭೂಲೋಕಕ್ಕೆ ತರಲ್ಪಟ್ಟಿತು? ಈ ನದಿಯ ತೀರ್ಥಗಳಲ್ಲಿ ಸ್ನಾನಪಾನಾದಿ ಸತ್ಕಾರ್ಯಗಳನ್ನು ಮಾಡುವುದರಿಂದ ಯಾವ ಪುಣ್ಯವು ಲಭಿಸುವುದು?

ಅಸ್ಯಾಃ ಪ್ರಭಾವಂ ಪ್ರಭವಂ ಪ್ರಹೃಷ್ಟಸ್ಯ ಮಮ ಸನ್ಮನೇ ।
ವಕ್ತುಮರ್ಹಸಿ ಕಾರ್ಯೋಽಹಿ ಭಕ್ತಾನುಗ್ರಹ ಏವ ತೇ ॥ ೬ ॥
ಅರ್ಜುನಸ್ಯ ವಚಃ ಶ್ರುತ್ವಾ ಭರದ್ವಾಜೋ ದ್ವಿಜೋತ್ತಮಃ ।
ತದಾನನಂ ಸಮಾಲೋಕ್ಯ ವಾಕ್ಯಂ ವಾಕ್ಯವಿದಬ್ರವೀತ್ ॥ ೭ ॥

ಭರದ್ವಾಜ ಉವಾಚ :—

ತ್ವಮರ್ಜುನ ಮಹಾಬಾಹೋ ಕೌರವಾನ್ವಯಪಾವನಃ ।
ವಿಶೇಷಾನ್ಮಮ ಮಾನ್ಯೋಽಸಿ ಧರ್ಮಪುತ್ರಾನುಜೋ ಯತಃ ॥ ೮ ॥
ಅನೇಕೇ ಭೂಮಿಪಾದೃಷ್ಟಾ ನ ತೇ ತ್ವಮಿವ ಫಾಲ್ಗುನ ।
ಲೀಲಾರ್ಜವದಯೌದಾರ್ಯಧೈರ್ಯಗಾಂಭೀರ್ಯಶಾಲಿನಃ ॥ ೯ ॥
ಕುಲಂ ವಿದ್ಯಾ ಧನಂ ಚೈವ ಬಲಿನಾಂ ಮದಕಾರಣಂ ।
ಭವಾದೃಶಾನಾಂ ಭವ್ಯಾನಾಂ ತಾನಿ ಪ್ರಶ್ರಯಕಾರಣಂ ॥ ೧೦ ॥
ಪ್ರಾಜ್ಯೇಷು ರಾಜ್ಯಭೋಗೇಷು ವಿದ್ಯಮಾನೇಷು ಕೌರವ ।
ಋತೇ ಭವಂತಂ ಕೋ ವಾನ್ಯೋ ನೋಪೈತಿ ವಿಕೃತೇರ್ವಶಂ ॥ ೧೧ ॥

---

೬. ಈ ನದಿಯ ಮಾಹಾತ್ಮ್ಯೆಯನ್ನೂ ಉತ್ಪತ್ತಿಯನ್ನೂ ಭಕ್ತನಾದ ನನಗೆ ತಿಳಿಸಲು ನೀನೇ ಶಕ್ತನಾಗಿರುವೆ. ಎಲೈ ಮುನಿವರ್ಯನೆ! ಭಕ್ತರಲ್ಲಿ ಅನುಗ್ರಹವೆಂಬುದು ನಿನಗೆ ಕಾರ್ಯವಾಗಿಯೇ ಇರುವುದಲ್ಲವೆ.''

೭. ಅರ್ಜುನನ ಈ ಮಾತುಗಳನ್ನು ಕೇಳಿ ಬ್ರಾಹ್ಮಣೋತ್ತಮನಾದ ಭರದ್ವಾಜನು ಅವನ ಮುಖಕಮಲವನ್ನು ನೋಡುತ್ತ ವಾಕ್ಯಜ್ಞನಾದುದರಿಂದ ಇಂತೆಂದು ಹೇಳಲುಪಕ್ರಮಿಸಿದನು.

೮. ಭರದ್ವಾಜನು ಹೇಳುತ್ತಾನೆ:–''ಮಹಾಪರಾಕ್ರಮಿಯಾದ ಅರ್ಜುನನೆ! ನೀನೇ ಕೌರವವಂಶವನ್ನು ಪಾವನಗೊಳಿಸುವವನು. ಧರ್ಮಪುತ್ರನ ತಮ್ಮನಾದುದರಿಂದ ನೀನು ನನ್ನ ವಿಶೇಷಾಭಿಮಾನಕ್ಕೆ ಪಾತ್ರನಾಗಿರುವೆ.

೯. ಫಾಲ್ಗುನ! ಅಟ್ಟಹಾಸ, ಋಜುಭಾವ, ದಯೆ, ಔದಾರ್ಯ, ಧೈರ್ಯ, ಗಾಂಭೀರ್ಯಾದಿ ಸದ್ಗುಣಗಳುಳ್ಳ ಅನೇಕ ರಾಜರನ್ನು ನಾನು ನೋಡಿರುವೆನು. ಅವರು ಯಾರೂ ನಿನ್ನ ಸಮಾನರಲ್ಲ.

೧೦. ಬಲಿಷ್ಠರಾದವರಿಗೆ ಸತ್ಕುಲ, ವಿದ್ಯೆ ಮತ್ತು ಧನಗಳು ಕೇವಲ ಅಹಂಕಾರಕ್ಕೆ ಕಾರಣಗಳಾಗುವುವು. ಆದರೆ ನಿನ್ನಂತಹ ಸುಕೃತಿಗಳಿಗೆ ಅವುಗಳು ವಿನಯಕ್ಕೆ ಮಾತ್ರ ಕಾರಣಗಳು.

೧೧. ಕೌರವಶ್ರೇಷ್ಠನೆ! ಅಪಾರಗಳಾದ ರಾಜವೈಭವಗಳು ಕೈವಶಗಳಾಗಿರಲು ನಿನ್ನನ್ನುಳಿದು ಮತ್ತೆ ಯಾವನು ತಾನೆ ಮದವೆಂಬ ವಿಕಾರಕ್ಕೆ ವಶನಾಗದಿರುವನು?

ಪರವಾನಸ್ಮಿ ಕೌಂತೇಯ ಗುಣೈರ್ಲೋಕೋತ್ತರೈಸ್ತವ ।
ಕಿಮಸ್ತ್ಯಕಥನೀಯಂ ತೇ ಕೌತುಕೋಪೇತಮಾನಸ ॥ ೧೨ ॥
ಶೃಣು ರಾಜನ್ಕಥಾಂ ದಿವ್ಯಾಂ ಮಯಾ ಮುನಿಮುಖಾಚ್ಛ್ರುತಾಂ ।
ಯಾಂ ಶ್ರುತ್ವಾ ಪಾತಕಾತಂಕಾನ್ಮುಚ್ಯಂತೇ ಸರ್ವಜಂತವಃ । ॥ ೧೩ ॥
ಪೂರ್ವಂ ದಾಕ್ಷಾಯಣೀ ದೇವೀ ಜನಕೇನಾವಮಾನಿತಾ ।
ತ್ಯಕ್ತ್ವಾ ತನುಂ ತಾಂ ನೀಹಾರಗಿರೇರಭವದಾತ್ಮಜಾ ॥ ೧೪ ॥
ಸಪ್ತರ್ಷಿಭಿರುಪಾಗಮ್ಯ ಪ್ರಾರ್ಥಿತೋ ಧರಣೀಧರಃ ।
ಮೃತ್ಯುಂಜಯಾಯ ಸ್ವಾಂ ಪುತ್ರೀಂ ವಿವಾಹೇ ಹಾತುಮುದ್ಯತಃ ॥ ೧೫ ॥
ವೃಷಭಾಂಕೋ ಜಗತ್ಸ್ವಾಮೀ ವಿವೋಢುಂ ಸರ್ವಮಂಗಲಾಂ ।
ಪ್ರಾಪ್ತೋ ಹಿಮವದಾವಾಸಮೋಷಧಿಪ್ರಸ್ಥನಾಮಕಂ ॥ ೧೬ ॥
ತಚ್ಛಾಸನಾತ್ಸಮಾಜಗ್ಮುಃ ಸ್ಥಾವರಾಣಿ ಚರಾಣಿ ಚ ।
ಭೂತಾನಿ ಭೂತನಾಥಸ್ಯ ಕಲ್ಯಾಣಮಭಿನಂದಿತುಂ ॥ ೧೭ ॥

---

೧೨. ಎಲೈ ಕುಂತೀತನಯನೆ! ಲೋಕೋತ್ತರಗಳಾದ ನಿನ್ನ ಸದ್ಗುಣಗಳಿಗೆ ನಾನು ಪರವಶತೆಯನ್ನು ಹೊಂದಿರುವೆನು. ಕೌತುಕದಿಂದ ಕೂಡಿದ ಮನಸ್ಸುಳ್ಳ ನಿನಗೆ ಹೇಳಬಾರದ ವಿಷಯವು ತಾನೆ ಯಾವುದಿರುವುದು?

೧೩. ಓ ರಾಜಪುತ್ರ! ನಾನು ವ್ಯಾಸಮುನಿಯ ಮುಖದಿಂದ ಕೇಳಿದ ದಿವ್ಯ ಕಥೆಯನ್ನು ಹೇಳುವೆನು, ಕೇಳು. ಅದನ್ನು ಕೇಳುವುದರಿಂದ ಸಕಲ ಜಂತುಗಳಿಗೂ ಪಾತಕಗಳೆಂಬ ವಿಘ್ನಗಳು ಕೈಬಿಟ್ಟುಹೋಗುವುವು.

೧೪. ಮುನ್ನು, ದಕ್ಷಪುತ್ರಿಯಾದ ಸತೀದೇವಿಯು ತಂದೆಯ ಅವಮಾನಕರಗಳಾದ ಮಾತುಗಳನ್ನು ತಡೆಯಲಾರದೆ ಶರೀರವನ್ನು ಅಗ್ನಿಯಲ್ಲಿ ತ್ಯಜಿಸಿ ಹಿಮವದ್ರಾಜನ ಮಗಳಾಗಿ ಜನಿಸಿದಳಷ್ಟೆ.

೧೫. ಸಪ್ತರ್ಷಿಗಳು ಬಂದು ಮಹೇಶ್ವರನಿಗಾಗಿ ಕನ್ಯೆಯನ್ನು ಯಾಚಿಸಲು, ಪರ್ವತರಾಜನು ಅವರ ಪ್ರಾರ್ಥನೆಯನ್ನಂಗೀಕರಿಸಿ ಮಗಳಾದ ಪಾರ್ವತೀದೇವಿಯನ್ನು ಕೊಡಲು ಸಮ್ಮತಿಸಿದನು.

೧೬. ಬಳಿಕ ವೃಷಭವಾಹನನೂ, ಜಗನ್ನಾಯಕನೂ ಆದ ಮಹಾದೇವನು ಆ ಸರ್ವಮಂಗಳೆಯನ್ನು ವಿವಾಹವಾಗಲು ಹಿಮವಂತನ ನಿವಾಸವಾದ ಓಷಧಿಪ್ರಸ್ಥನಗರಕ್ಕೆ ಬಂದು ಸೇರಿದನು.

೧೭. ಆತನ ಅಪ್ಪಣೆಯಂತೆ ಸಕಲ ಸ್ಥಾವರ ಜಂಗಮ ಪ್ರಾಣಿಗಳೂ ಭೂತಪತಿಯ ಕಲ್ಯಾಣಮಹೋತ್ಸವವನ್ನು ನೋಡಿ ಅಭಿನಂದಿಸಲು ಹಿಮವತ್ಪರ್ವತದಲ್ಲಿ ನೆರೆದರು.

ತದ್ಭೂರಿಭಾರಸಂಭಗ್ನಾ ಭೂಮಿರುತ್ತರಸಂಶ್ರಯಾ ।
ನಿಮ್ನತಾಮಾಯಯೌ ತಾವದ್ಯಾವತ್ಪಾತಾಲಮಾಸ್ಥಿತಾ ॥ ೧೮ ॥
ನಿರ್ಭಾರಲಾಘವಾದಸ್ಮಾದ್ಭೃಶಂ ದಕ್ಷಿಣಗಾಮಿನೀ ।
ಊರ್ಧ್ವಂಗತಾ ಚ ತಂ ದೃಷ್ಟ್ವಾ ಸರ್ವೇಷಾಮಭವದ್ಭಯಂ ॥ ೧೯ ॥
ಜ್ಞಾತ್ವಾ ತಾಂ ವಿಕೃತಿಂ ಭೂಮೇರ್ದೃಷ್ಟ್ವಾಗಸ್ತ್ಯಂ ಮಹೇಶ್ವರಂ ।
ಇತ ಏಹಿ ಮಹಾಪ್ರಾಜ್ಞೇತ್ಯುಕ್ತ್ವಾ ವಚನಮಬ್ರವೀತ್ ॥ ೨೦ ॥
ಆಗತೇಷು ಸಮಸ್ತೇಷು ಭೂತೇಷ್ವತ್ರ ವಸುಂಧರಾ ।
ತದ್ಭಾರೇಣ ಸಮಾಕ್ರಾಂತಾ ವಿಕೃತಿಂ ಸಮುಪಾಗತಾ ॥ ೨೧ ॥
ತದ್ಭುವಃ ಸಾಮ್ಯಕರಣೇ ತ್ವಮರ್ಹಸಿ ಮಹಾಮತೇ ।
ಋತೇ ತ್ವಾಮತ್ರ ಹಿ ತ್ವತ್ತಃ ಪರೇಣೈತತ್ಕಥಂ ಭವೇತ್ ॥ ೨೨ ॥
ಮತ್ತೇಜಃ ಸಂಭವೋ ಹಿತ್ವಂ ಲೋಕಸಂರಕ್ಷಣೋದ್ಯತಃ ।
ತಸ್ಮಾನ್ಮದ್ವಚನಾದ್ವತ್ಸ ಭುವಮೇತಾಂ ಸಮಾಕುರು ॥ ೨೩ ॥
ಮತ್ಪಾಣಿಗ್ರಹಣಾಲೋಕಕೌತುಕಾಯತ್ತಬುದ್ಧಿಷು ।
ಆಗತೇಷು ಸಮಸ್ತೇಷು ಸ್ಥಾತವ್ಯಂ ಭವತಾಪಿ ಚ ॥ ೨೪ ॥

---

೧೮. ಸಮಸ್ತ ಪ್ರಾಣಿಗಳ ಅಪಾರವಾದ ಭಾರದಿಂದ ಉತ್ತರ ದಿಕ್ಕಿನ ಪ್ರದೇಶವು ಪಾತಾಲಲೋಕದವರೆಗೂ ಹುದುಗಿ ಹೋಯಿತು.

೧೯. ಈ ಕಾರಣದಿಂದಲೇ ದಕ್ಷಿಣ ದಿಕ್ಕಿನ ಭೂಭಾಗವೆಲ್ಲವೂ ಲಾಘವವನ್ನು ಪಡೆದು ಬಹಳ ಎತ್ತರಕ್ಕೆ ಎತ್ತಲ್ಪಟ್ಟಿತು. ಇದನ್ನು ಕಂಡು ಸಕಲರಿಗೂ ಭಯವುಂಟಾಯಿತು.

೨೦. ಭೂಮಿಯ ಈ ವಿಕಾರವನ್ನರಿತು ಮಹಾದೇವನು, ಅಗಸ್ತ್ಯನನ್ನು 'ಮಹಾತ್ಮನೆ! ಇಲ್ಲಿ ಬಾ'ರೆಂಬುದಾಗಿ ಸಮೀಪಕ್ಕೆ ಕರೆದು ಇಂತೆಂದನು.

೨೧. 'ಸಕಲ ಚರಾಚರ ಪ್ರಾಣಿಗಳೂ ಇಲ್ಲಿಗೆ ಬಂದು ಸೇರಲು ಭೂಮಂಡಲವು ಅವುಗಳ ಭಾರದಿಂದ ಕೂಡಿದುದಾಗಿ ಈ ವಿಧವಾದ ವಿಕಾರವನ್ನು ಹೊಂದಿರುವುದು.

೨೨. ಎಲೈ ಮಹಾಪ್ರಾಜ್ಞನೆ! ಭೂಮಿಯನ್ನು ಸಮಗೊಳಿಸಲು ನೀನೊಬ್ಬನೇ ಶಕ್ತನಾಗಿರುವೆ. ನಿನ್ನನ್ನು ಬಿಟ್ಟರೆ ಮತ್ತೆ ಯಾವನಿಂದತಾನೆ ಈ ಮಹತ್ಕಾರ್ಯವು ನೆರವೇರಿಸಲು ಸಾಧ್ಯವಾಗುವುದು ?

೨೩. ನೀನು ನನ್ನ ತೇಜಸ್ಸಿನ ಅಂಶದಿಂದ ಉದ್ಭವಿಸಿರುವೆ. ಲೋಕರಕ್ಷಣಕಾರ್ಯದಲ್ಲಿ ನಿರತನಾಗಿರುವೆ. ಪುತ್ರ! ನನ್ನ ಮಾತುಗಳನ್ನು ನಡೆಸಿಕೊಟ್ಟು ನೀನೇ ಈ ಭೂಮಿಯನ್ನು ಸಮಗೊಳಿಸು.

೨೪. ನನ್ನ ಕಲ್ಯಾಣ ಮಹೋತ್ಸವವನ್ನು ನೋಡುವ ಕುತೂಹಲದಿಂದ

ತ್ವಂ ನ ತಿಷ್ಠಸಿ ಚೇದತ್ರ ನ ಕಶ್ಚಿದ್ವಿಕೃತಿಂ ಭುವಃ ।
ಅಪನೇತುಂ ಹಿ ಶಕ್ನೋತಿ ತದ್ಗಂತವ್ಯಂ ತ್ವಯಾನಘ ॥ ೨೫ ॥
ಇಮಾಂ ಗಿರಿಸುತಾಪಾಣಿಗ್ರಹಕಲ್ಯಾಣಭಾಸುರಾಂ ।
ಮೂರ್ತಿಂ ಪ್ರದರ್ಶಯಿಷ್ಯಾಮಿ ಯತ್ರ ತಿಷ್ಠಸಿ ತತ್ರ ತೇ ॥ ೨೬ ॥
ಇತ್ಯುಕ್ತ್ವಾ ತಂ ಪರಿಷ್ವಜ್ಯ ವಿಸಸರ್ಜ ಮಹೇಶ್ವರಃ ।
ತಥೇತಿ ತಂ ಪ್ರಣಮ್ಯಾಸೌ ಯಯೌ ಯಾಮ್ಯಾಂ ದಿಶಂ ಮುನಿಃ ॥ ೨೭ ॥
ವಿಂಧ್ಯಾದ್ರಿಂ ಸಮತಿಕ್ರಮ್ಯ ದಕ್ಷಿಣಾಮಗತೇ ದಿಶಂ ।
ಅಗಸ್ತ್ಯೇ ಮುನಿಶಾರ್ದೂಲೇ ಮಹೀ ಸಾಮ್ಯಮುಪಾಯಯೌ ॥ ೨೮ ॥
ಭುವೋಽಪನೀಯ ವಿಕೃತಿಂ ಸ್ಥಿತಂ ಕಲಶಜಂ ಮುನಿಂ ।
ತುಷ್ಟುವುರ್ಹರ್ಷತರಲಾಃ ಸುರಗಂಧರ್ವಕಿನ್ನರಾಃ ॥ ೨೯ ॥
ಸ ದದರ್ಶ ತತೋ ಗತ್ವಾ ಕಂಚಿಚ್ಛೈಲಂ ಸಮುನ್ನತಂ ।
ವಿತತೈರ್ಧರಣೀಂ ಪಾದೈರ್ಧೃತ್ವಾ ಸಂಸ್ಥಿತಮಗ್ರತಃ ॥ ೩೦ ॥

---

ಕೂಡಿದ ಬುದ್ಧಿಯುಳ್ಳವರಾಗಿ ಸಕಲರೂ ಇಲ್ಲಿಗೆ ಬಂದು ಸೇರಿರುವುದರಿಂದ ನೀನೊಬ್ಬನೇ ದಕ್ಷಿಣ ದಿಕ್ಕಿನಲ್ಲಿ ನಿಂತುಕೊಳ್ಳಲು ಸಮರ್ಥನು.

೨೫. ನೀನು ಅಲ್ಲಿ ನಿಲ್ಲಲು ನಿರಾಕರಿಸಿದರೆ ಮತ್ತಾರೂ ಭೂಮಿಯ ಈ ವಿಕಾರವನ್ನು ಸರಿಪಡಿಸಲು ಶಕ್ತರಾಗಿಲ್ಲ. ಆದುದರಿಂದ ನಿಷ್ಪಾಪನಾದ ನೀನೇ ಅಲ್ಲಿಗೆ ಹೋಗಬೇಕು.

೨೬. ಎಲೈ ಮುನಿಯೆ! ನಿನ್ನ ಕುತೂಹಲವನ್ನು ಹೋಗಲಾಡಿಸಲು ಈ ನನ್ನ ಗಿರಿಜಾಕಲ್ಯಾಣ ಮಹೋತ್ಸವದ ರಮ್ಯಮೂರ್ತಿಯನ್ನು ನೀನಿರುವಲ್ಲಿಯೇ ನಿನಗೆ ಕಾಣುವಂತೆ ಮಾಡುವೆನು.'

೨೭. ಇಂತೆಂದು ಆತನನ್ನು ಆಲಿಂಗನ ಮಾಡಿಕೊಂಡು ಬೀಳ್ಕೊಡಲು ಹಾಗೆಯೇ ಆಗಲೆಂದು ಅಂಗೀಕರಿಸಿ ಮಹೇಶ್ವರನಿಗೆ ನಮಸ್ಕರಿಸಿ ಆ ಮುನಿವರ್ಯನು ದಕ್ಷಿಣ ದಿಕ್ಕಿಗೆ ಪ್ರಯಾಣಮಾಡಿದನು.

೨೮. ವಿಂಧ್ಯಪರ್ವತವನ್ನು ದಾಟಿ ದಕ್ಷಿಣ ದಿಕ್ಕಿಗೆ ಬರಲು ಮುನಿತಿಲಕನಾದ ಅಗಸ್ತ್ಯನಿಂದ ಭೂಮಿಯು ಮತ್ತೆ ಸಮಭಾವವನ್ನು ಹೊಂದಿತು.

೨೯. ಇಂತು ಭೂಮಿಯ ವಿಕಾರವನ್ನು ಕಳೆದು ದಕ್ಷಿಣ ದಿಕ್ಕಿನಲ್ಲಿ ನಿಂತ ಕುಂಭಸಂಭವ ಮುನಿಯನ್ನು ದೇವತೆಗಳೂ, ಗಂಧರ್ವರೂ, ಕಿನ್ನರರೂ ಹರ್ಷತುಂದಿಲ ಮನಸ್ಕರಾಗಿ ಸ್ತೋತ್ರಮಾಡಿದರು.

೩೦. ಇಂತು ಅಗಸ್ತ್ಯನು ದಕ್ಷಿಣ ದಿಕ್ಕಿನಲ್ಲಿ ಓಡಾಡುತ್ತ ವಿಶಾಲಗಳಾದ ಪಾದಗಳಿಂದ ಭೂಮಿಯನ್ನು ಧರಿಸಿಕೊಂಡು ತನ್ನ ಮುಂದೆ ನಿಂತಿರುವ ಅತ್ಯುನ್ನತವಾದ ಪರ್ವತವೊಂದನ್ನು ಕಂಡನು.

ಮಹೌಷಧೀನಾಂ ರತ್ನಾನಾಮಶೇಷಾಣಾಂ ಸ್ವಯಂಭುವಾ ।
ಅಖಂಡತೇಜೋದೀಪ್ತಾನಾಂ ವಿನಿರ್ಮಿತಮಿವಾಕರಂ ॥ ೩೧ ॥
ಸಮುನ್ನತೈರ್ಯಃ ಶಿಖರೈರ್ನಿಪತದ್ವ್ಯೋಮ ಭೂತಲೇ ।
ಉದಾರಧಾರಾಸಂಪನ್ನೈರ್ದಧತೀವ ನಿರಂತರಂ ॥ ೩೨ ॥
ಶನೈರಾರುಹ್ಯ ತಂ ಶೈಲಮಗಸ್ತ್ಯೋ ಮುನಿಪುಂಗವಃ ।
ನಿವಾಸಾಯ ಮತಿಂ ಚಕ್ರೇ ರಮ್ಯೇ ತಚ್ಛಿಖರಸ್ಥಲೇ ॥ ೩೩ ॥
ತಸ್ಯಾಮೃತೋಪಮೇಯಸ್ಯ ಪದ್ಮೋತ್ಪಲಕುಲಶ್ರಿಯಃ ।
ನಾನಾದ್ರುಮಪರೀತಸ್ಯ ಕಾಸಾರಸ್ಯೋತ್ತರೇ ತಟೇ ॥ ೩೪ ॥
ಮನೋಹರೇ ಮಹೀಭಾಗೇ ವಿಧಾಯಾಶ್ರಮಮುತ್ತಮಂ ।
ಆರಾಧ್ಯ ಪಿತೃದೇವರ್ಷೀನ್ವಿಧಿವದ್ವಾಸ್ತುದೇವತಾಂ ॥ ೩೫ ॥
ಉವಾಸ ಸುಚಿರಂ ತತ್ರ ಮುನಿಸಂಘಸಮನ್ವಿತಃ ।
ದೇವತಾಸಿದ್ಧಗಂಧರ್ವಾಪ್ಸರೋ ಜುಷ್ಟಮಹೀಧರೇ ॥ ೩೬ ॥

---

೩೧. ಅಖಂಡವಾದ ತೇಜಸ್ಸಿನಿಂದ ಬೆಳಗುತ್ತಿರುವ ಮಹೌಷಧಿಗಳಿಂದಲೂ ನವರತ್ನಗಳಿಂದಲೂ ಬ್ರಹ್ಮದೇವನಿಂದಲೇ ನಿರ್ಮಿಸಲ್ಪಟ್ಟಂತೆ ಆ ಪರ್ವತವು ಅವುಗಳಿಗೆ ನೆಲೆವೀಡಾಗಿದ್ದಿತು.

೩೨. ನಿರಂತರವೂ ಅಪರಿಮಿತವಾದ ಜಲಪಾತಗಳಿಂದ ಕೂಡಿದ ಎತ್ತರವಾದ ಶಿಖರಗಳಿಂದ ಭೂಮಿಗೆ ಕಳಚಿಕೊಳ್ಳಲಿರುವ ಆಕಾಶವನ್ನು ಮೇಲಕ್ಕೆತ್ತಿ ಹಿಡಿದಿರುವಂತೆ ಆ ಪರ್ವತವು ಕಾಣುತ್ತಿದ್ದಿತು.

೩೩. ಮುನಿಪುಂಗವನಾದ ಅಗಸ್ತ್ಯನು ಮೆಲ್ಲಮೆಲ್ಲಗೆ ಆ ಪರ್ವತವನ್ನೇರಿ ರಮ್ಯವಾದ ಅದರ ಶಿಖರಪ್ರದೇಶದಲ್ಲಿ ವಾಸಮಾಡಬೇಕೆಂದು ಸಂಕಲ್ಪ ಮಾಡಿದನು.

೩೪–೩೬. ಅಮೃತಕ್ಕೆ ಸಮಾನವಾದ ನೀರಿನಿಂದ ಕೂಡಿದುದೂ, ಪದ್ಮ ಕುಮುದಗಳಿಗೆ ನಿವಾಸವಾದುದೂ, ವಿವಿಧ ವೃಕ್ಷಗಳಿಂದ ಸುತ್ತುವರೆಯಲ್ಪಟ್ಟುದೂ ಆದ ಒಂದು ಉತ್ತಮವಾದ ಸರೋವರದ ಉತ್ತರ ತೀರದಲ್ಲಿ ಮನೋಹರವಾದ ಸಮಭೂಮಿಯಲ್ಲಿ ಆಶ್ರಮವೊಂದನ್ನು ಕಟ್ಟಿಕೊಂಡು, ಪಿತೃಗಳನ್ನೂ, ದೇವತೆಗಳನ್ನೂ, ಮಹರ್ಷಿಗಳನ್ನೂ, ವಾಸ್ತುಪುರುಷರನ್ನೂ ಯಥಾವಿಧಿಯಾಗಿ ಆರಾಧಿಸಿ ದೇವತೆಗಳು, ಸಿದ್ಧರು, ಗಂಧರ್ವರು, ಅಪ್ಸರೆಯರು ಮುಂತಾದವರಿಂದ ನಿಬಿಡಿತವಾದ ಆ ಪರ್ವತದಲ್ಲಿ ತನ್ನೊಡನಿದ್ದ ಮುನಿಸಮೂಹದೊಡನೆ ಬಹಳ ಕಾಲದವರೆಗೂ ಅಲ್ಲಿ ವಾಸಿಸುತ್ತಿದ್ದನು.

ತಪಸ್ಸಮಾವೇಶಿತಚಿತ್ತವೃತ್ತೌ
ತಪೋವನೇ ತಿಷ್ಠತಿ ಕುಂಭಜಾತೇ ॥
ಪ್ರಶಸ್ತಸೌಭಾಗ್ಯಸಮನ್ವಿತೋಽದ್ರಿ
ರಗಸ್ತ್ಯಶೈಲಾಹ್ವಯಮಾಸಸಾದ ॥ ೩೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ "ಶಂಕರವಿವಾಹಾಗಸ್ತ್ಯದಕ್ಷಿಣದಿಗ್ಗಮನವರ್ಣನಂ" ನಾಮೈಕತ್ರಿಂಶೋಽಧ್ಯಾಯಃ

---

೩೭. ಇಂತು ಸಕಲ ಚಿತ್ತವೃತ್ತಿಗಳನ್ನೂ ಆತ್ಮನಲ್ಲಿ ನಿರೋಧಿಸಿ ಅಗಸ್ತ್ಯ ಮಹರ್ಷಿಯು ತನ್ನ ತಪೋವನದಲ್ಲಿ ನೆಲಸಿರಲು ಸಕಲ ಸೌಭಾಗ್ಯಗಳಿಂದ ಕೂಡಿದ ಆ ಪರ್ವತವು ಆತನ ಹೆಸರಿನಿಂದಲೇ ಅಗಸ್ತ್ಯಾದ್ರಿಯೆಂಬ ಹೆಸರನ್ನು ಪಡೆಯಿತು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೇಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ಶಂಕರವಿವಾಹ–ಅಗಸ್ತ್ಯದಕ್ಷಿಣ ದಿಗ್ಗಮನವರ್ಣನ"ವೆಂಬ ಮೂವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾತ್ರಿಂಶೋಽಧ್ಯಾಯಃ

### ಶ್ರೀ ಸುವರ್ಣಮುಖರೀಮಾಹಾತ್ಮ್ಯಪ್ರಶಂಸಾಯಾಂ ಸುವರ್ಣಮುಖರ್ಯಾವಿರ್ಭಾವವರ್ಣನಂ

ಭರದ್ವಾಜ ಉವಾಚ :—

ಸ ಕದಾಚಿನ್ಮುನಿವರಃ ಕೃತಪೌರ್ವಾಹ್ಣಿಕಕ್ರಿಯಃ ।
ವಿವೇಶ ದೇವತಾಗಾರಂ ಸಮಾರಾಧಯಿತುಂ ಶಿವಂ ॥ ೧ ॥
ಅದೃಶ್ಯರೂಪಾ ವಾಗ್ದೇವೀ ತತ್ರಾಶ್ರಾವಿ ಮಹಾತ್ಮನಾ ।
ತೇನಾದ್ಭುತೋಪಪನ್ನೇನ ವ್ಯಕ್ತವರ್ಣಸಮುಜ್ಜ್ವಲಾ ॥ ೨ ॥
ಆಕಾಶವಾಣ್ಯುವಾಚೈನಮಗಸ್ತ್ಯಂ ಜಪತಾಂ ವರಂ ।
ನದೀಹೀನೋ ಹ್ಯಯಂ ದೇಶಃ ಪ್ರಸಿದ್ಧೋಽಪಿ ನ ಶೋಭತೇ ॥ ೩ ॥
ಜ್ಞಾನವಿಜ್ಞಾನವಿಮುಖಃ ಸಾಕಾರ ಇವ ಭೂಸುರಃ ।
ದೀಕ್ಷೇವ ದಕ್ಷಿಣಾಹೀನಾ ಜ್ಯೋತ್ಸ್ನಾಹೀನೇವ ಶರ್ವರೀ ॥ ೪ ॥
ನ ವಿಭಾತಿ ನದೀಹೀನಾ ಪೃಥ್ವೀಯಂ ಭೂಸುರೋತ್ತಮ ।
ಪ್ರವರ್ತಯ ನದೀಂ ಕಾಂಚಿಲ್ಲೋಕಾನಾಂ ಹಿತಕಾಮ್ಯಯಾ ॥ ೫ ॥

---

### ಕನ್ನಡದ ಅನುವಾದ

#### ಶ್ರೀ ಸುವರ್ಣಮುಖರೀಮಾಹಾತ್ಮ್ಯಪ್ರಶಂಸೆ — ಸುವರ್ಣಮುಖರಿಯ ಅವಿರ್ಭಾವವರ್ಣನ

೧. ಭರದ್ವಾಜನು ಹೇಳುತ್ತಾನೆ:—ಆ ಮುನಿಶ್ರೇಷ್ಠನೊಮ್ಮೆ ತನ್ನ ಪ್ರಾತಃಕಾಲದ ನಿತ್ಯಕರ್ಮಗಳನ್ನು ನೆರವೇರಿಸಿಕೊಂಡು ಮಹೇಶ್ವರನನ್ನು ಪೂಜಿಸಲು ದೇವಾಲಯವನ್ನು ಪ್ರವೇಶಿಸಿದನು.

೨. ಮಹಾತ್ಮನೂ, ಅದ್ಭುತಚರಿತ್ರನೂ ಆದ ಆತನಿಗೆ ಆಗ ಸ್ಪಷ್ಟಾಕ್ಷರಗಳಿಂದ ಶೋಭಿಸುತ್ತಿರುವ ಅದೃಶ್ಯವ್ಯಕ್ತಿಯ ಸಂದೇಶವೊಂದು ಕೇಳಿಸಿತು.

೩. ಜಪದಲ್ಲಿ ನಿಷ್ಣಾತನಾದ ಆ ಅಗಸ್ತ್ಯನಿಗೆ ಆಕಾಶವಾಣಿಯು ಇಂತೆಂದಿತು :— "ಎಲೈ ಮುನಿಯೆ! ಈ ಪ್ರದೇಶವು ಪ್ರಸಿದ್ಧವಾಗಿದ್ದರೂ ನದಿಯಿಲ್ಲದಿರುವುದರಿಂದ ಶೋಭಿಸುತ್ತಿಲ್ಲ.

೪. ಜ್ಞಾನವಿಜ್ಞಾನಗಳಿಲ್ಲದೆ ಕೇವಲ ಆಕಾರಮಾತ್ರನಾಗಿರುವ ಬ್ರಾಹ್ಮಣನಂತೆಯೂ, ದಕ್ಷಿಣೆಯಿಲ್ಲದ ದೀಕ್ಷಾವಿಧಿಯಂತೆಯೂ, ಬೆಳುದಿಂಗಳಿಲ್ಲದ ರಾತ್ರಿಯಂತೆಯೂ ಈ ಸ್ಥಳವು ಕಳಾಹೀನವಾಗಿರುವುದು.

೫. ಅಯ್ಯಾ ಬ್ರಾಹ್ಮಣೋತ್ತಮನೆ! ಈ ಪ್ರದೇಶವು ನದಿಯಿಲ್ಲದೆ ಶೋಭಿಸುವುದಿಲ್ಲವಾದುದರಿಂದ ಪ್ರಪಂಚಕ್ಕೆ ಹಿತವನ್ನುಂಟುಮಾಡುವುದಕ್ಕಾಗಿ ಇಲ್ಲಿ ಒಂದು ನದಿಯು ಪ್ರವಹಿಸುವಂತೆ ಪ್ರಯತ್ನಿಸು.

ಅಗಾಧದುರಿತೋದ್ಭೂತಭೀತಿಮೋಚನಶಾಲಿನೀಂ ।
ಹಿತಮೇತತ್ಸುರೌಘಾನಾಮೇತನ್ಮುನಿವರಾರ್ಥಿತಂ ॥ ೬ ॥
ಭದ್ರಮೇತನ್ಮನುಷ್ಯಾಣಾಮೇತದಾಚರ ಸುವ್ರತ ।
ದೇವಾನಾಮೃಷಿವರ್ಯಾಣಾಂ ಭೂಜನಾನಾಂ ಹಿತಾವಹಾಂ ॥ ೭ ॥
ಪಾಪಪಂಕಪ್ರಶಮನೀಂ ಪ್ರವರ್ತಯ ಮಹಾನದೀಂ ॥ ೮ ॥

ಶ್ರೀ ಭರದ್ವಾಜ ಉವಾಚ :—

ತದಾಕರ್ಣ್ಯ ವಚೋ ವಿಪ್ರಃ ಕ್ಷಣಂ ಚಿಂತಾಪರಾಯಣಃ ।
ಸಮಾಪ್ಯ ದೇವತಾಪೂಜಾಂ ಬಹಿರ್ವೇದ್ಯಾಮುಪಾವಿಶತ್ ॥ ೯ ॥
ಆನಾಯಯಾಮಾಸ ತದಾ ತದಾಶ್ರಮಗತಾನ್ಮುನೀನ್ ।
ತೇಷಾಮಕಥಯಚ್ಚಾಸೌ ದೇವವಾಣೀರಿತಂ ವಚಃ ॥ ೧೦ ॥
ತದದ್ಭುತಮುಪಶ್ರುತ್ಯ ಮುನಯೋ ಹೃಷ್ಟಮಾನಸಾಃ ॥ ೧೧ ॥
ಅಭಿವಂದ್ಯ ಮುನಿಶ್ರೇಷ್ಠಂ ಮೈತ್ರಾವರುಣಿಮಬ್ರುವನ್ ॥ ೧೨ ॥

ಮುನಯ ಊಚುಃ :—

ಆಶ್ಚರ್ಯಾಣಾಂ ಮಹಾಶ್ಚರ್ಯಂ ಮಂಗಲಾನಾಂ ಚ ಮಂಗಲಂ ।
ತವೈವ ಶೋಭತೇ ದಿವ್ಯಂ ತ್ವಚ್ಚರಿತ್ರಂ ಕೃಪಾನಿಧೇ ॥ ೧೩ ॥

---

೬. ಆ ನದಿಯು ಅಪಾರ ಪಾಪಗಳಿಂದುಂಟಾದ ಭಯಗಳಿಂದಲೂ ಮನುಷ್ಯರನ್ನು ಬಿಡುಗಡೆಮಾಡುವುದು. ಎಲೈ ಮುನಿವರ್ಯನೆ! ಈ ಕಾರ್ಯವು ದೇವತೆಗಳಿಗೂ ಪ್ರೀತಿಕರವಾಗಿ, ಮಹರ್ಷಿಗಳಿಗೂ ಅಭಿಲಷಿತವಾಗಿರುವುದು.

೭–೮. ಎಲೈ ಸುವ್ರತನೆ! ದೇವತೆಗಳಿಗೂ ಮನುಷ್ಯರಿಗೂ ಮಂಗಳಕರವಾದ ಈ ಕಾರ್ಯವನ್ನು ನೀನೇ ಮಾಡಬೇಕು. ದೇವತೆಗಳಿಗೂ, ಮಹರ್ಷಿಗಳಿಗೂ, ಮನುಷ್ಯರಿಗೂ ಪಾಪಕಶ್ಮಲಗಳನ್ನು ನಿರ್ಮೂಲಗೊಳಿಸಿ ಹಿತವನ್ನುಂಟುಮಾಡುವ ಮಹಾ ನದಿಯೊಂದನ್ನು ಇಲ್ಲಿ ನಿರ್ಮಾಣಮಾಡು.''

೯. ಭರದ್ವಾಜನು ಹೇಳುತ್ತಾನೆ:—ಆಕಾಶವಾಣಿಯ ಈ ಮಾತುಗಳನ್ನು ಕೇಳಿ ಅಗಸ್ತ್ಯನು ಕ್ಷಣಕಾಲ ಚಿಂತಾಕ್ರಾಂತನಾಗಿದ್ದು ತನ್ನ ದೇವತಾರ್ಚನೆಯನ್ನು ಮುಗಿಸಿಕೊಂಡು ಹೊರಗಡೆ ಜಗುಲಿಯ ಮೇಲೆ ಕುಳಿತುಕೊಂಡನು.

೧೦. ಆತನು ತನ್ನ ಆಶ್ರಮದ ಮುನಿಗಳನ್ನೆಲ್ಲ ಬರಮಾಡಿಕೊಂಡು ದಿವ್ಯವಾಣಿಯು ಹೇಳಿದ ಮಾತುಗಳೆಲ್ಲವನ್ನೂ ಕಥನಮಾಡಿದನು.

೧೧–೧೨. ಈ ಅದ್ಭುತವನ್ನು ಕೇಳಿ ಆ ಮುನಿಗಳೆಲ್ಲರೂ ಸಂತುಷ್ಟಾಂತರಂಗರಾಗಿ ಮಿತ್ರಾವರುಣನ ಮಗನಾದ ಆ ಮುನಿವರ್ಯನನ್ನು ಕಂಡು ಹೇಳತೊಡಗಿದರು.

೧೩. ಮುನಿಗಳು ಹೇಳುತ್ತಾರೆ:—''ಎಲೈ ಕೃಪಾಸಮುದ್ರನೆ! ಆಶ್ಚರ್ಯ

ತವ ಹುಂಕಾರಮಾತ್ರೇಣ ಭ್ರಷ್ಟೋ ದೇವಾಧಿರಾಜ್ಯತಃ ।
ನಹುಷಃ ಕೀಟತಾಂ ಪ್ರಾಪ ತತಶ್ಚಿತ್ರಂ ನ ವಿದ್ಯತೇ ॥ ೧೪ ॥
ಸಮಾವೃತಧರಾಚಕ್ರಃ ಕಲ್ಲೋಲಾತಾಡಿತಾಂಬರಃ ।
ಕಿಂ ನ್ವತೋ ವಿದ್ಯತೇ ಚಿತ್ರಂ ಯದಬ್ಧಿಶ್ಚುಲಕೀಕೃತಃ ॥ ೧೫ ॥
ಸೂರ್ಯಮಾರ್ಗನಿರೋಧಾರ್ಥಂ ಪ್ರವೃತ್ತೋ ವಿಂಧ್ಯಭೂಧರಃ ।
ತ್ವಯಾ ಪ್ರಶಾಂತಿಂ ಗಮಿತಃ ಕಿಂ ನ್ವತೋ ವಿದ್ಯತೇ ಪರಂ ॥ ೧೬ ॥
ತವಾದ್ಭುತಾನಿ ಕರ್ಮಾಣಿ ಕಃ ಸ್ತೋತುಂ ಪ್ರಭವೇದ್ಭುವಿ ।
ಅಸ್ಮಿನ್ಮಹಾಭಾಗ್ಯಯೋಗಾತ್ ಪ್ರಾಪ್ತೋಽಸೀತಿ ಶರೀರಿತಾಂ ॥ ೧೭ ॥
ವಯಂ ಕೃತಾರ್ಥಾಃ ಸಂಜಾತಾಸ್ತ್ರೈಲೋಕ್ಯೇ ಯನ್ಮಹಾಮುನೇ ।
ನಿವಸಾಮೋಽತ್ರ ಭವತಾ ಸನಾಥಾ ಹ್ಯಾಶ್ರಮಸ್ಥಲೇ ॥ ೧೮ ॥
ವರ್ಣ್ಯೋ ಹಿ ಯಾಮ್ಯತೋ ದೂರೇ ವಿಷಯೋಽಯಂ ದ್ವಿಜೋತ್ತಮ ।
ಸಮಸ್ತವಸ್ತುಪೂರ್ಣೋಽಪಿ ನದೀಹೀನೋ ನ ರಾಜತೇ ॥ ೧೯ ॥

---

ಗಳಲ್ಲಿ ಮಹದಾಶ್ಚರ್ಯವೂ, ಮಂಗಳಗಳಲ್ಲಿ ಪರಮಮಂಗಳವೂ ಆದ ನಿನ್ನ ದಿವ್ಯಚರಿತ್ರವು ನಿನಗೊಬ್ಬನಿಗೆ ಮಾತ್ರ ಶೋಭಿಸತಕ್ಕುದಾಗಿದೆ.

೧೪. ನಿನ್ನ ಹುಂಕಾರಮಾತ್ರದಿಂದಲೇ ನಹುಷಚಕ್ರವರ್ತಿಯು ಮಹೇಂದ್ರಪದವಿಯಿಂದ ಭ್ರಷ್ಟನಾಗಿ ಸರ್ಪಜನ್ಮವನ್ನು ಹೊಂದಲಿಲ್ಲವೆ! ಇದಕ್ಕಿಂತಲೂ ಆಶ್ಚರ್ಯಕರವಾದುದು ಯಾವುದೂ ಕಾಣಲಿಲ್ಲ.

೧೫. ಭೂಮಂಡಲವನ್ನೇ ಸುತ್ತುವರೆದು ಪೆರ್ದೆರೆಗಳಿಂದ ಆಕಾಶವನ್ನೇ ತಾಡನಮಾಡುತ್ತಿರಲು ಮಹಾಸಮುದ್ರವನ್ನೇ ನೀನು ಆಪೋಶನಮಾಡಿದೆ. ಇದಕ್ಕಿಂತ ವಿಚಿತ್ರ ವ್ಯಾಪಾರವಾವುದಿರುವದು?

೧೬–೧೭. ಸೂರ್ಯನ ಸಂಚಾರಕ್ರಮವನ್ನೇ ಅಡ್ಡಗಟ್ಟಲುಪಕ್ರಮಿಸಿದ ವಿಂಧ್ಯಪರ್ವತವು ನಿನ್ನಿಂದ ಪ್ರಶಮನವನ್ನು ಹೊಂದಿತು. ಈ ಕಾರ್ಯಕ್ಕೆ ಮಿಂಚಿದುದಾವುದು? ನಿನ್ನ ಮಹಾದ್ಭುತ ಕರ್ಮಗಳನ್ನು ಭೂಲೋಕದಲ್ಲಿ ಯಾವನು ತಾನೆ ಬಣ್ಣಿಸಲು ಶಕ್ತನು? ನೀನು ನಮ್ಮ ಪುಣ್ಯೋದಯದಿಂದಲೇ ದೇಹವನ್ನು ಪಡೆದುಬಂದಿರುವಂತೆ ತೋರುತ್ತಿರುವೆ!

೧೮. ಎಲೈ ಮಹಾಮುನಿಯೆ! ನಾವು ಮೂರು ಲೋಕಗಳಲ್ಲಿ ಎಲ್ಲರಿಗಿಂತಲೂ ಕೃತಕೃತ್ಯರೆಂದೆನಿಸಿರುವೆವು. ನಿನ್ನ ಆಶ್ರಮಪ್ರದೇಶದಲ್ಲಿ ನಿನ್ನ ನೇತೃತ್ವದಲ್ಲಿಯೇ ವಾಸಮಾಡುತ್ತಿರುವುದೇ ಇದಕ್ಕೆ ಕಾರಣವು.

೧೯. ದಕ್ಷಿಣದಿಕ್ಕಿಗೆ ಬಹಳ ದೂರದಲ್ಲಿರುವ ಈ ಪ್ರದೇಶವು ವರ್ಣಿಸಲು ಯೋಗ್ಯವೂ ಸಮಸ್ತ ವಸ್ತುಸಂಪೂರ್ಣವೂ ಆಗಿದ್ದರೂ ನದಿಯಿಲ್ಲದುದರಿಂದ ಶೋಭಿಸುತ್ತಿಲ್ಲ.

ಕಿಮುಲಬ್ಧನದೀಸ್ನಾನೇ ನಾಮುನಾ ಹತಜನ್ಮನಾ ।
ಅನದೀಕೇ ಜನಪದೇ ವಾಸಾದಜನನಂ ವರಂ ॥ ೨೦ ॥
ಪರಿಪಾಕಸ್ತು ಭಾಗ್ಯಾನಾಮಸ್ಮಾಕಂ ಸಮುಪಸ್ಥಿತಃ ।
ಯದಾದಿಷ್ಟೋಽಸಿ ವಿಬುಧೈಃ ಪ್ರವರ್ತಯ ಮಹಾನದೀಂ ॥ ೨೧ ॥
ಪ್ರವರ್ತಿತಾಯಾಂ ದೇಶೇಽಸ್ಮಿನ್ಮಹಾನದ್ಯಾಂ ತವಾನಘ ।
ಕದಾ ನು ಖಲು ಯಾಸ್ಯಾಮಃ ಕೃತಸ್ನಾನಾಃ ಕೃತಾರ್ಥತಾಂ ॥ ೨೨ ॥
ಕಿಂ ವಿತರ್ಕೇಣ ಬಹುನಾ ಪ್ರಯತ್ನಃ ಕ್ರಿಯತಾಂ ಧ್ರುವಂ ।
ಸಮಾನೇತುಂ ಜಗದ್ವಂದ್ಯಾಂ ಶರಣ್ಯಾಂ ಸರಿದುತ್ತಮಾಂ ॥ ೨೩ ॥

ಶ್ರೀ ಭರದ್ವಾಜ ಉವಾಚ:—

ಸ ತೇಷಾಂ ವಚನಂ ಹೃದ್ಯಂ ಮಾನಯಿತ್ವಾ ಮಹಾದ್ವಿಜಃ ।
ಸಮಾನೇಷ್ಯಾಮಿ ಸರಿತಮಿತಿ ಚಕ್ರೇ ವಿನಿಶ್ಚಯಂ ॥ ೨೪ ॥
ಮುನೀಶ್ವರೈರನುಜ್ಞಾತಸ್ತಾನಭ್ಯರ್ಚ್ಯ ಸುರಾನಪಿ ।
ವಿಶೇಷಪೂಜಾಂ ವಿಧಿವದ್ವಿಧಾಯ ಪುರವಿದ್ವಿಷಃ ॥ ೨೫ ॥

---

೨೦. ನದೀಸ್ನಾನದ ಅನುಕೂಲವಿಲ್ಲದಿರುವ ಹತಭಾಗ್ಯರಾದ ನಮ್ಮ ಜನ್ಮವು ನಿರರ್ಥಕವು. ನದಿಯಿಲ್ಲದ ದೇಶದಲ್ಲಿ ವಾಸಿಸುವುದಕ್ಕಿಂತ ಹುಟ್ಟದಿರುವುದೇ ಲೇಸು.

೨೧. ದೇವತೆಗಳಿಂದ ಇಲ್ಲಿ ಒಂದು ಮಹಾನದಿಯನ್ನುಂಟುಮಾಡಲು ನೀನು ಆದೇಶವನ್ನು ಪಡೆದಿರುವುದರಿಂದ ನಮ್ಮೆಲ್ಲರ ಪುಣ್ಯಕರ್ಮಗಳ ಫಲ ಪ್ರಾಪ್ತಿಯ ಸಮಯವೊದಗಿರುವುದೆಂದು ತಿಳಿಯುವೆವು.

೨೨. ಎಲೈ ಪಾಪರಹಿತನೆ! ನಿನ್ನ ಅನುಗ್ರಹದಿಂದ ಈ ದೇಶದಲ್ಲಿ ಒಂದು ಮಹಾನದಿಯು ಪ್ರವಹಿಸುತ್ತಿರಲು ಅದರಲ್ಲಿ ಸ್ನಾನಗಳನ್ನು ಮಾಡಿಕೊಂಡು ನಾವು ಎಂದಿಗೆ ಕೃತಾರ್ಥತೆಯನ್ನು ಪಡೆಯುವೆವೊ?

೨೩. ವಿಶೇಷವಾದ ವಾದದಿಂದೇನು? ಲೋಕವಂದ್ಯೆಯೂ, ಶರಣಾಗತರ ಪಾಪಗಳನ್ನು ಕಳೆಯುವವಳೂ ಆಗಿ ಉತ್ತಮ ನದಿಯೆನಿಸಿರುವ ಗಂಗೆಯನ್ನೇ ಇಲ್ಲಿಗೆ ಕರೆದುತರಲು ದೃಢವಾದ ಪ್ರಯತ್ನವನ್ನು ಮಾಡು."

೨೪. ಭರದ್ವಾಜನು ಹೇಳುತ್ತಾನೆ:— ಇಂತು ಹೇಳಿದ ಮಹರ್ಷಿಗಳ ಪ್ರಿಯಾಲಾಪಗಳನ್ನು ಕೇಳಿ ಬ್ರಾಹ್ಮಣೋತ್ತಮನಾದ ಅಗಸ್ತ್ಯನು ಒಡಂಬಟ್ಟು ಗಂಗಾನದಿಯನ್ನೇ ಅಲ್ಲಿಗೆ ಕರೆದುತರಬೇಕೆಂದು ದೃಢಸಂಕಲ್ಪವನ್ನು ಮಾಡಿದನು.

೨೫–೨೬. ಬಳಿಕ ಮುನೀಶ್ವರರ ಅನುಜ್ಞೆಯನ್ನು ಪಡೆದು, ಅವರಿಗೂ ದೇವತೆಗಳಿಗೂ ಉಚಿತಪೂಜೆಯನ್ನು ಮಾಡಿ, ಮಹಾದೇವನಿಗೂ ವಿಧ್ಯುಕ್ತ ರೀತಿಯಿಂದ ವಿಶೇಷ ಪೂಜೆಯನ್ನು ನೆರವೇರಿಸಿ ಉಗ್ರವಾದ ವ್ರತವನ್ನು

ಅಂಗೀಕೃತ್ಯ ವ್ರತಂ ಗಾಢಂ ಬಹುಲಕ್ಲೇಶದುಸ್ಸಹಂ ।
ಅನನ್ಯಸುಲಭಂ ಯತ್ನಾತ್ಸ ಚಕಾರ ಮಹತ್ತಪಃ ॥ ೨೬ ॥
ಘೋರೇಷು ಘರ್ಮದಿವಸೇಷ್ವಂತರಸ್ಥೋ ಹವಿರ್ಭುಜಾಂ ।
ಚತುರ್ಣಾಂ ಸವಿತ್ರನ್ಯಸ್ತದೃಷ್ಟಿರ್ನಾಪಯಯೌ ಕ್ಲಮಂ ॥ ೨೭ ॥
ವಾರ್ಷಿಕೇಷು ದಿನೇಷೂಗ್ರವಾಯುಸಂಪಾತದುಸ್ಸಹೈಃ ।
ಆಸಾರೈಸ್ತಾಡ್ಯಮಾನೋಽಪಿ ನೋದ್ವೇಗಮಗಮದ್ಧೃದಿ ॥ ೨೮ ॥
ಹೇಮಂತೇ ಸಮಯೇ ತಿಷ್ಠನ್ಕಂಠದಘ್ನೇಷು ವಾರಿಷು ।
ಜಪಧ್ಯಾನಪರೋ ಭೂತ್ವಾ ನ ಕಿಂಚಿದ್ವಿಕೃತಿಂ ಯಯೌ ॥ ೨೯ ॥
ತತಃ ಸಮೀಹಿತಾರ್ಥಸ್ಯ ವಿಲಂಬಮವಲೋಕ್ಯ ಸಃ ।
ಪುನರ್ಗಾಢತರಾಂ ನಿಷ್ಠಾಂ ಪ್ರಪೇದೇ ಲೋಕಭೀಷಣಾಂ ॥ ೩೦ ॥
ನಿಗೃಹ್ಯ ಮಾನಸೀಂ ವೃತ್ತಿಂ ನಿರಾಹಾರೋ ಜಿತೇಂದ್ರಿಯಃ ।
ಅವಿಜ್ಞಾತಬಹಿರ್ವೃತ್ತಿಸ್ತಸ್ಥೌ ಪಾಷಾಣವತ್ತದಾ ॥ ೩೧ ॥
ಏವಂ ತಪಸ್ಯತಸ್ತಸ್ಯ ಸರ್ವಾಂಗೇಷು ಹುತಾಶನಃ ।
ಅಭ್ರಂಲಿಹೋ ಜ್ವಲಜ್ಜ್ಯೋತಿರ್ನಿಶ್ಚಕ್ರಾಮ ಭಯಂಕರಃ ॥ ೩೨ ॥

---

ಕೈಕೊಂಡು, ಅನೇಕ ಕ್ಲೇಶಗಳಿಂದ ದುಸ್ಸಾಧ್ಯವೂ, ಇತರರಿಗೆ ಸುಲಭವಲ್ಲದುದೂ ಆದ ತೀವ್ರತಪಸ್ಸನ್ನು ಪ್ರಯತ್ನಪೂರ್ವಕವಾಗಿ ಮಾಡತೊಡಗಿದನು.

೨೭. ತೀಕ್ಷ್ಣಗಳಾದ ಗ್ರೀಷ್ಮಋತುವಿನಲ್ಲಿ ಹಗಲಹೊತ್ತು ನಾಲ್ಕು ಬೆಂಕಿಗಳ ಮಧ್ಯದಲ್ಲಿ ಕುಳಿತು ಸೂರ್ಯನಲ್ಲಿಯೇ ನಟ್ಟದೃಷ್ಟಿಯುಳ್ಳವನಾಗಿದ್ದರೂ ಯಾವ ಕ್ಲೇಶವನ್ನೂ ಹೊಂದಲಿಲ್ಲ.

೨೮. ಮಳೆಗಾಲದ ದಿನಗಳಲ್ಲಿ ಭಯಂಕರವಾದ ಬಿರುಗಾಳಿಯಿಂದ ಸಹಿಸಲಸಾಧ್ಯವಾದ ಜಲಧಾರೆಗಳಿಂದ ಹೊಡೆಯಲ್ಪಟ್ಟರೂ, ಆತನು ಹೃದಯದಲ್ಲಿ ಉದ್ವೇಗವನ್ನು ಹೊಂದಲಿಲ್ಲ.

೨೯. ಹೇಮಂತಋತುವಿನಲ್ಲಿ ಕಂಠದವರೆಗಿನ ನೀರಿನಲ್ಲಿ ನಿಂತು ಜಪಧ್ಯಾನಗಳಲ್ಲಿಯೇ ನಿರತನಾಗಿ ಸ್ವಲ್ಪವೂ ವಿಕಾರವನ್ನು ಪಡೆಯಲಿಲ್ಲ.

೩೦. ಕೆಲವು ಕಾಲದ ಮೇಲೆ ತನ್ನ ಇಷ್ಟಾರ್ಥವು ನೆರವೇರಲು ಬಹಳ ಕಾಲವಾಗುವುದೆಂದು ಯೋಚಿಸಿದವನಾಗಿ ಮತ್ತೂ ಗಾಢತರವೂ ಲೋಕಭಯಂಕರವೂ ಆದ ನಿಷ್ಠೆಯನ್ನನುಸರಿಸುತ್ತಿದ್ದನು.

೩೧. ಮನಸ್ಸಿನ ಸಕಲಬಾಹ್ಯವೃತ್ತಿಗಳನ್ನೂ ನಿರೋಧಿಸಿ, ಆಹಾರವನ್ನು ಬಿಟ್ಟು, ಜಿತೇಂದ್ರಿಯನಾಗಿ, ಬಾಹ್ಯಪ್ರಪಂಚದ ವ್ಯವಹಾರವನ್ನೇ ತಿಳಿಯದೆ ಕಲ್ಲಿನಂತೆ ನಿಶ್ಚಲನಾಗಿ ನಿಂತಿದ್ದನು.

೩೨. ಇಂತು ತಪಸ್ಸನ್ನು ಮಾಡುತ್ತಿದ್ದ ಆಗಸ್ತ್ಯಮುನಿಯ ಶರೀರದಲ್ಲೆಲ್ಲ

ತತೋಽದ್ಭುತಶಿಖಾಜಾಲೈರಾವೃತಾಃ ಸರ್ವತೋ ದಿಶಃ ।
ಸಮುದಗ್ರಭಯೋದ್ವಿಗ್ನಾ ಜನೌಘಾಃ ಪರಿಚುಕ್ರುಶುಃ ॥ ೩೩ ॥
ತದಾ ತಥಾವಿಧಂ ಘೋರಂ ಜಗತ್ಸಂಕ್ಷೋಭಮಾಗತಂ ।
ದೇವಾ ವಿಜ್ಞಾಪಯಾಮಾಸುರ್ನಮಸ್ಕೃತ್ಯಾಬ್ಜಜನ್ಮನೇ ॥ ೩೪ ॥
ತಾನಾಶ್ವಾಸ್ಯ ತತೋ ಬ್ರಹ್ಮಾ ಸಿದ್ಧಗಂಧರ್ವಸೇವಿತಃ ।
ಪ್ರಾದುರಾಸೀತ್ಕುಂಭಭವಃ ಪುರೋಭಾಗೇ ತಪಸ್ಯತಃ ॥ ೩೫ ॥
ತಮಾಗತಂ ಸಮಾಲೋಕ್ಯ ಬ್ರಹ್ಮಾಣಂ ಪರಮಂ ದ್ವಿಜಃ ।
ಪ್ರಣಮ್ಯ ವಿವಿಧೈಃ ಸ್ತೋತ್ರೈಸ್ತೋಷಯಾಮಾಸ ತನ್ಮನಾಃ ॥ ೩೬ ॥
ತತಸ್ತಂ ವಿನಯಾನಮ್ರಮಗಸ್ತ್ಯಂ ವೀಕ್ಷ್ಯ ಪದ್ಮಭೂಃ ।
ಪ್ರಸಾದಸುಮುಖೋ ಭೂತ್ವಾ ಪೂತಾಂ ಗಿರಿಮುಪಾದದೇ ॥ ೩೭ ॥

ಬ್ರಹ್ಮೋವಾಚ :—

ಪರಿತುಷ್ಟೋಽಸ್ಮಿ ತಪಸಾ ದುಶ್ಚರೇಣ ತವಾನಘ ।
ವೃಣೀಷ್ವ ಯದ್ಯದಿಷ್ಟಂ ತೇ ತತ್ತದ್ದಾಸ್ಯಾಮಿ ಸುವ್ರತ ॥ ೩೮ ॥

---

ಆಕಾಶವನ್ನು ಮುಟ್ಟುವ ಜ್ವಾಲೆಗಳಿಂದ ಬೆಳಗುತ್ತಿರುವ ಭಯಂಕರವಾದ ಬೆಂಕಿಯು ಹೊರಟಿತು.

೩೩. ಈ ಅದ್ಭುತ ಜ್ವಾಲೆಗಳ ಸಮೂಹಗಳಿಂದ ಹತ್ತು ದಿಕ್ಕುಗಳೂ ವ್ಯಾಪಿತಗಳಾದುವು. ಸಕಲ ಜನರೂ ಮಿತಿಮೀರಿದ ಭಯದಿಂದ ತತ್ತಳಿಸುತ್ತ ರೋದನಮಾಡತೊಡಗಿದರು.

೩೪. ಆಗ ಈ ವಿಧವಾದ ಘೋರವಾದ ಜಗನ್ನಾಶವುಂಟಾಗುತ್ತಿರುವುದನ್ನು ಕಂಡು ದೇವತೆಗಳೆಲ್ಲರೂ ಸತ್ಯಲೋಕಕ್ಕೆ ಹೋಗಿ ಬ್ರಹ್ಮದೇವನಿಗೆ ನಮಸ್ಕರಿಸಿ ನಡೆದ ವಿಷಯವನ್ನು ಆತನಿಗೆ ಬಿನ್ನವಿಸಿದರು.

೩೫. ಚತುರ್ಮುಖನು ಅವರೆಲ್ಲರನ್ನೂ ಸಂತವಿಟ್ಟು ಸಿದ್ಧರಿಂದಲೂ ಗಂಧರ್ವರಿಂದಲೂ ಪರಿವಾರಿತನಾಗಿ ತಪಸ್ಸನ್ನು ಮಾಡುತ್ತಿದ್ದ ಅಗಸ್ತ್ಯನ ಮುಂದುಗಡೆಯಲ್ಲಿ ಪ್ರತ್ಯಕ್ಷನಾಗಿ ನಿಂತನು.

೩೬. ಇಂತು ಬ್ರಹ್ಮದೇವನು ಬಂದು ನಿಲ್ಲಲು ಆ ಬ್ರಾಹ್ಮಣೋತ್ತಮನು ಕಂಡು ಆತನಲ್ಲಿ ನೆಲೆಗೊಳಿಸಿದ ಮನಸ್ಸಿನಿಂದಲೇ ನಮಸ್ಕರಿಸಿ ವಿಧವಿಧಗಳಾದ ಸ್ತೋತ್ರಗಳಿಂದ ಆತನನ್ನು ಸಂತೋಷಗೊಳಿಸಿದನು.

೩೭. ಬಳಿಕ ವಿನಯದಿಂದ ಬಾಗಿದ ಶರೀರದಿಂದ ನಿಂತಿದ್ದ ಅಗಸ್ತ್ಯನನ್ನು ಕಂಡು ಬ್ರಹ್ಮದೇವನು ಪ್ರಸನ್ನಮನಸ್ಕನಾಗಿ ಶ್ರೇಷ್ಠಗಳಾದ ಈ ಮಾತುಗಳನ್ನಾಡತೊಡಗಿದನು.

೩೮. ಬ್ರಹ್ಮನು ಹೇಳುತ್ತಾನೆ:—"ವ್ರತಕರ್ಶಿತನಾದ ಎಲೈ ಪಾಪರಹಿತನೆ!

ಅಗಸ್ತ್ಯ ಉವಾಚ :—

ತವ ಪ್ರಸಾದಾತ್ಸಕಲಮುಪಪನ್ನಂ ಮಮ ಪ್ರಭೋ ।
ಸಂಪ್ರಯಚ್ಛಸಿ ಚೇತ್ಕಾಮಂ ಯಾಚೇ ನಿಶ್ಶಂಕಯಾಧಿಯಾ ॥ ೩೯ ॥
ನದೀಹೀನಮಿಮಂ ದೇಶಂ ದೃಷ್ಟ್ವಾ ಖಿದ್ಯತಿ ಮೇ ಮನಃ ।
ಅರ್ಥಾವಬೋಧರಹಿತಂ ಶ್ರುತಿಪಾಠಮಿವಾಧಿಕಂ ॥ ೪೦ ॥
ಉರ್ವೀಂ ಪಾವಯಿತುಂ ದಕ್ಷಾಂ ರಕ್ಷಿತುಂ ಚ ಮಹಾನದೀಂ ।
ಪ್ರಸಾದಂ ಕುರು ದೇವೇಶ ಮಮೇಷ್ಟಮಿದಮೇವ ಹಿ ॥ ೪೧ ॥

ಶ್ರೀ ಭರದ್ವಾಜ ಉವಾಚ :—

ಅಗಸ್ತ್ಯಸ್ಯ ವಚಃ ಶ್ರುತ್ವಾ ಭೂಯಾದೇವಮಿತಿ ಬ್ರುವನ್ ।
ಸಸ್ಮಾರ ಮನಸಾ ಬ್ರಹ್ಮಾ ಸುರವರ್ತ್ಮಾಶ್ರಯಾಂ ನದೀಂ ॥ ೪೨ ॥
ಅಥೋಪೇತ್ಯ ವಿಯದ್ಗಂಗಾ ಪುರಸ್ತಾತ್ಪರಮೇಷ್ಠಿನಃ ।
ಅತಿಷ್ಠನ್ಮುಕುಟನ್ಯಸ್ತಪ್ರಶಸ್ತಾಂಜಲಿಭಾಸುರಾ ॥ ೪೩ ॥
ಸ್ವಶಾಸನಾತ್ಸಮಾಯಾತಾಂ ವಿನಯಾನತಮಸ್ತಕಾಂ ।
ತಾಂ ಸರ್ವಜಗತಾಂ ಧಾತ್ರೀಮಿದಂ ವಚನಮಬ್ರವೀತ್ ॥ ೪೪ ॥

---

ದುಸ್ಸಾಧ್ಯವಾದ ನಿನ್ನ ತಪಸ್ಸಿನಿಂದ ನಾನು ಸಂತೋಷಗೊಂಡಿರುವೆನು. ನಿನಗೆ ಇಷ್ಟವಾದುವುಗಳೆಲ್ಲವನ್ನೂ ಕೇಳು. ಅವುಗಳನ್ನೆಲ್ಲ ನೆರವೇರಿಸಿಕೊಡುವೆನು."

೩೯–೪೦. ಅಗಸ್ತ್ಯನು ಹೇಳುತ್ತಾನೆ:—"ಲೋಕಪಿತಾಮಹನೆ! ನಿನ್ನ ಅನುಗ್ರಹದಿಂದಲೇ ನನಗೆ ಸಕಲವೂ ಸಂಪೂರ್ಣವಾಗಿರುವುದು. ಆದರೂ ನನ್ನ ಇಷ್ಟವೊಂದನ್ನು ನೆರವೇರಿಸುವೆಯಾದರೆ ನಿಸ್ಸಂಶಯವಾದ ಮನಸ್ಸಿನಿಂದ ಯಾಚಿಸುತ್ತೇನೆ. ಅರ್ಥಜ್ಞಾನಶೂನ್ಯನಾದವನ ಅಪಾರ ವೇದಾಧ್ಯಯನದಂತೆ ಸಕಲವಸ್ತುಸಮೃದ್ಧಿಯುಳ್ಳದ್ದಾದರೂ ನದೀಹೀನವಾಗಿರುವ ಈ ದೇಶವನ್ನು ನೋಡಿ ನನ್ನ ಮನಸ್ಸು ಖೇದಗೊಳ್ಳುತ್ತಿರುವುದು.

೪೧. ಸಮೃದ್ಧವಾದ ಈ ಪ್ರದೇಶವನ್ನು ಪವಿತ್ರಗೊಳಿಸುವುದಕ್ಕೂ ಸಸ್ಯಾದಿಗಳಿಂದ ರಕ್ಷಿಸುವುದಕ್ಕೂ ನೀನು ಒಂದು ಮಹಾನದಿಯನ್ನು ಅನುಗ್ರಹಿಸು. ದೇವೋತ್ತಮನೆ! ಇದೊಂದೇ ನನಗೆ ಅಭಿಲಾಷೆಯಾಗಿರುವುದು."

೪೨. ಭರದ್ವಾಜನು ಹೇಳುತ್ತಾನೆ:—ಅಗಸ್ತ್ಯನ ಈ ಮಾತುಗಳನ್ನು ಕೇಳಿ ಹಾಗೆಯೇ ಆಗಲೆಂದು ಒಡಂಬಟ್ಟು ಬ್ರಹ್ಮನು ಆಕಾಶಗಂಗೆಯನ್ನು ಮನಸ್ಸಿನಲ್ಲಿಯೇ ಧ್ಯಾನಿಸಿದನು.

೪೩. ತತ್ಕ್ಷಣದಲ್ಲಿಯೇ ಗಂಗಾದೇವಿಯು ಪವಿತ್ರಗಳಾದ ತನ್ನ ಕೈಗಳಿಂದ ಅಂಜಲಿಯನ್ನು ತಲೆಯಲ್ಲಿಟ್ಟು ತಾಳಿ ಬ್ರಹ್ಮದೇವನಿದುರಿನಲ್ಲಿ ಬಂದು ನಿಂತಳು.

೪೪. ತನ್ನ ಅಪ್ಪಣೆಯಂತೆ ಬಂದು ನಿಂತಿರುವವಳೂ, ವಿನಯದಿಂದ

ಬ್ರಹ್ಮೋವಾಚ :—

ಗಂಗೇ ಮಯಾನುಶಾಸ್ಯಾಸಿ ಕಾರ್ಯೇ ಲೋಕೋಪಕಾರಕೇ ।
ತವಾಪಿ ಲೋಕರಕ್ಷಾಯಾಂ ಮಮೇವ ನಿಯತಾ ಸ್ಥಿತಿಃ ॥ ೪೫ ॥
ದೇಶೇ ನದೀವಿಹೀನೇಽತ್ರ ಪ್ರವರ್ತಯಿತುಮಾಪಗಾಂ ।
ಹಿತಾರ್ಥಂ ಸರ್ವಲೋಕಾನಾಂ ಕುಂಭಜನ್ಮಾ ಸಮೀಹತೇ ॥ ೪೬ ॥
ತಸ್ಮಾತ್ತ್ವಮವತೀರ್ಯೋರ್ವೀಂ ಸ್ವಾಂಶೇನೈಕೇನ ಭೂಜನಾನ್ ।
ಪುನೀಹಿ ಗಚ್ಛ ವಸುಧಾಮೇತದ್ದರ್ಶಿತವರ್ತ್ಮನಾ ॥ ೪೭ ॥
ಭೂಲೋಕೇ ಸಂಪ್ರವೃತ್ತೇ ತು ಪ್ರವಾಹೇ ಸಿದ್ಧಿಕಾಂಕ್ಷಿಣಃ ।
ಸೇವಿಷ್ಯಂತೇ ಸುರವರಾ ಮುನಿವರ್ಯಾಶ್ಚ ಸಂತತಂ ॥ ೪೮ ॥
ನದೀಷೂತ್ತಮತಾಂ ಯಾಹಿ ತ್ರಾಹಿ ತ್ವತ್ಸಂಶ್ರಯಾನ್ಜನಾನ್ ।
ಕುರು ಪ್ರಿಯಮಗಸ್ತ್ಯಸ್ಯ ಗಚ್ಛ ಭದ್ರೇ ಯಥಾಸುಖಂ ॥ ೪೯ ॥

ಭರದ್ವಾಜ ಉವಾಚ :—

ಇತ್ಯುಕ್ತ್ವಾಂತರ್ದಧೇ ಬ್ರಹ್ಮಾ ತಯಾ ನದ್ಯಾ ಚ ತೇನ ಚ ।
ಪ್ರಣಾಮಪೂಜನಸ್ತೋತ್ರೈರ್ವಿಶೇಷೈರಭಿನಂದಿತಃ ॥ ೫೦ ॥

---

ಬಗ್ಗಿದ ತಲೆಯುಳ್ಳವಳೂ, ಸಕಲಲೋಕಜನನಿಯೂ ಆದ ಆಕೆಯನ್ನು ಕಂಡು ಚತುರ್ಮುಖನಿಂತು ಹೇಳತೊಡಗಿದನು.

೪೫. ಬ್ರಹ್ಮನು ಹೇಳುತ್ತಾನೆ:—"ಎಲೌ ಗಂಗೆಯೇ! ಲೋಕೋಪಕಾರಕವಾದ ಒಂದು ಕೆಲಸದಲ್ಲಿ ಈಗ ನಿನ್ನನ್ನು ನಿಯೋಜಿಸಬೇಕಾಗಿರುವುದು. ನನಗಿರುವಂತೆಯೇ ನಿನಗೂ ಲೋಕರಕ್ಷಣಕಾರ್ಯದಲ್ಲಿ ಒಂದು ಸ್ಥಾನವಿರುವುದಲ್ಲವೆ!

೪೬. ಸಕಲ ಪ್ರಾಣಿಗಳಿಗೂ ಹಿತವನ್ನುಂಟುಮಾಡುವ ಆಕಾಂಕ್ಷೆಯಿಂದ ಈ ಅಗಸ್ತ್ಯಮುನಿಯು ನದೀಹೀನವಾದ ಈ ಪ್ರದೇಶದಲ್ಲಿ ಒಂದು ನದಿಯನ್ನು ಉಂಟುಮಾಡಲು ಇಚ್ಛಿಸುತ್ತಿರುವನು.

೪೭—೪೮. ಆದುದರಿಂದ ನೀನು ಭೂಲೋಕಕ್ಕೆ ನಿನ್ನ ಒಂದಂಶದಿಂದಿಳಿದು ಹೋಗಿ ಈತನು ತೋರಿದ ಮಾರ್ಗದಲ್ಲಿ ಪ್ರವಹಿಸುತ್ತ ಭೂಮಿಯನ್ನೂ, ಭೂಲೋಕದ ಜನರನ್ನೂ ಪಾವನಗೊಳಿಸು. ನೀನು ಭೂಲೋಕದಲ್ಲಿ ಪ್ರವಹಿಸುತ್ತಿರಲು ನಿನ್ನ ನೀರಿನಲ್ಲಿ, ಕಾರ್ಯಸಿದ್ಧಿಗಳನ್ನು ಅಪೇಕ್ಷಿಸುವ ಸಕಲ ದೇವೋತ್ತಮರೂ, ಮುನಿಶ್ರೇಷ್ಠರೂ ನಿರಂತರವೂ ಸೇವೆಮಾಡುತ್ತಿರುವರು.

೪೯. ನೀನು ನದಿಗಳಲ್ಲಿ ಉತ್ತಮಸ್ಥಾನವನ್ನು ಹೊಂದು. ನಿನ್ನನ್ನು ಸೇವಿಸುವ ಸಕಲರನ್ನೂ ರಕ್ಷಿಸು. ಅಗಸ್ತ್ಯನಿಗೆ ಪ್ರಿಯನ್ನುಂಟುಮಾಡು. ಎಲೌ ಮಂಗಳಾಂಗಿಯೆ! ಇನ್ನು ನೀನು ಸುಖವಾಗಿ ಹೋಗಿ ಬಾ."

೫೦. ಭರದ್ವಾಜನು ಹೇಳುತ್ತಾನೆ:—ಇಂತೆಂದು ಬ್ರಹ್ಮನು ಗಂಗಾದೇವಿ

ಅಥ ಗಂಗಾ ಮುನಿಪತೇಃ ಪುರಸ್ತಾತ್ಸ್ವಾಂಶಸಂಭವಾಂ ।
ದಿವ್ಯತೇಜೋಮಯೀಂ ಮೂರ್ತಿಂ ದರ್ಶಯಿತ್ವಾ ವಚೋಽಬ್ರವೀತ್॥೫೧॥

ಗಂಗೋವಾಚ :—

ಮದೀಯಾಂಶೋಽಯಮವನಿಂ ಸಂಪ್ರಾಪ್ಯ ಮುನಿವಲ್ಲಭ ।
ಪೂರಯಿಷ್ಯತಿ ತೇಽಭೀಷ್ಟಂ ನದೀರೂಪಂ ಸಮಾಶ್ರಿತಃ ॥ ೫೨ ॥

ಭರದ್ವಾಜ ಉವಾಚ :—

ಇತ್ಯುಕ್ತ್ವಾ ಸಿದ್ಧವಾಹಿನ್ಯಾಂ ಗತಾಯಾಂ ತತ್ಪ್ರಯುಕ್ತಯಾ ।
ಗಂತವ್ಯಂ ವರ್ತ್ಮನಾ ಕೇನೇತ್ಯುಕ್ತೇ ಮುನಿರುವಾಚ ತಾಂ ॥ ೫೩ ॥

ಅಗಸ್ತ್ಯ ಉವಾಚ :—

ಗಚ್ಛನ್ಪುರಸ್ತಾತ್ಕಲ್ಯಾಣಿ ತ್ವದೀಯಗಮನೋಚಿತಂ ।
ಅಹಂ ಪ್ರದರ್ಶಯಿಷ್ಯಾಮಿ ಮಾರ್ಗಂ ತ್ವಂ ಮಾಮನುವ್ರಜ ॥ ೫೪ ॥
ಇತ್ಯುಕ್ತಾ ಮುನಿನಾ ತೇನ ಸಂಪ್ರಹೃಷ್ಟಾ ತವಾನಘ ।
ಯದಿಷ್ಟಂ ತತ್ಕರಿಷ್ಯೇಽಹಮಿತಿ ಪ್ರೋವಾಚ ಸಾ ಶುಭಾ ॥ ೫೫ ॥

---

ಯಿಂದಲೂ, ಅಗಸ್ತ್ಯಮುನಿಯಿಂದಲೂ ನಮಸ್ಕಾರ, ಪೂಜೆ, ಸ್ತೋತ್ರಗಳೇ ಮುಂತಾದ ವಿಶೇಷ ಸತ್ಕಾರಗಳಿಂದ ಪೂಜಿತನಾಗಿ ಅಂತರ್ಧಾನವನ್ನೈದಿದನು.

೫೧. ಬಳಿಕ ಗಂಗೆಯು ಮುನೀಶ್ವರನ ಎದುರಿನಲ್ಲಿ ನಿಂತು ತನ್ನ ಅಂಶದಿಂದ ಉದ್ಭವಿಸಿದ ದಿವ್ಯ ತೇಜೋಮಯವಾದ ರೂಪವುಳ್ಳ ಸ್ತ್ರೀ ಮೂರ್ತಿಯನ್ನು ತೋರಿಸಿ ಇಂತೆಂದಳು :—

೫೨. ಗಂಗೆಯು ಹೇಳುತ್ತಾಳೆ:—"ಎಲೈ ಮುನಿಶ್ರೇಷ್ಠನೆ! ನನ್ನ ಅಂಶ ರೂಪಳಾದ ಈಕೆಯು ನದೀರೂಪವನ್ನು ಧರಿಸಿ ಭೂಲೋಕಕ್ಕೆ ಬಂದು ನಿನ್ನ ಇಷ್ಟಾರ್ಥಗಳನ್ನು ನೆರವೇರಿಸುವಳು."

೫೩. ಭರದ್ವಾಜನು ಹೇಳುತ್ತಾನೆ:—ಇಂತೆಂದು ಹೇಳಿ ಆಕಾಶವಾಹಿನಿಯಾದ ಆ ಗಂಗೆಯು ಹೊರಟುಹೋಗಲು ಆಕೆಯ ಅಂಶಭೂತಳಾದ ನದೀ ಲಲನೆಯು "ಮುನಿವರ! ನಾನು ಯಾವ ದಾರಿಯಲ್ಲಿ ಪ್ರವಹಿಸಲಿ" ಎಂಬುದಾಗಿ ಕೇಳಲು ಅಗಸ್ತ್ಯನು ಆಕೆಗೆ ಹೇಳತೊಡಗಿದನು :—

೫೪. ಅಗಸ್ತ್ಯನು ಹೇಳುತ್ತಾನೆ:—"ಓ ಕಲ್ಯಾಣಿ! ನಾನು ಮುಂದೆ ಹೋಗುತ್ತ ನಿನ್ನ ಪ್ರವಾಹಕ್ಕೆ ಅನುಕೂಲವಾದ ಮಾರ್ಗವನ್ನು ತೋರಿಸಿ ಕೊಡುವೆನು. ಆದುದರಿಂದ ನೀನು ನನ್ನನ್ನೇ ಅನುಸರಿಸುತ್ತಿರು."

೫೫. ಇಂತೆಂದು ಆ ಮುನಿವರ್ಯನು ಹೇಳಲು ಆ ಶುಭಾಂಗಿಯು ಸಂತೋಷದಿಂದೊಡಗೂಡಿ "ಎಲೈ ಪಾಪರಹಿತನೆ! ನಿನ್ನ ಇಷ್ಟದಂತೆ ನಾನು ನಡೆದುಕೊಳ್ಳುವೆನು" ಎಂಬುದಾಗಿ ಹೇಳಿದಳು.

ಅಥ ಮುನಿರವತೀರ್ಯ ತಾಂ ನಗೇಂದ್ರಾ
ದ್ಧೃತತಟನೀತನುಮಭ್ರಸಂಗಿಶೃಂಗಾತ್ ।
ಮುದಿತತರಮನಾ ಯಯೌ ಪುರಸ್ತಾ
ತ್ತದಭಿಮತಾಂ ಪದವೀಂ ಪ್ರದರ್ಶಯನ್ಸಃ ॥ ೫೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ "ಶ್ರೀ ಸುವರ್ಣಮುಖರೀಮಾಹಾತ್ಮ್ಯಪ್ರಶಂಸಯಾಂ ಸುವರ್ಣ ಮುಖರ್ಯಾವಿರ್ಭಾವವರ್ಣನಂ" ನಾಮ ದ್ವಾತ್ರಿಂಶೋಽಧ್ಯಾಯಃ

---

೫೬. ಬಳಿಕ ಆ ಮುನೀಂದ್ರನು ಆಕಾಶವನ್ನು ಮುಟ್ಟುತ್ತಿರುವ ಶೃಂಗಗಳುಳ್ಳ ಆ ಪರ್ವತದಿಂದ ಪ್ರವಾಹರೂಪಳಾದ ಆಕೆಯನ್ನು ಕೆಳಕ್ಕಿಳಿಸಿ ಸಂತುಷ್ಟ ಮನಸ್ಸಿನಿಂದ ನದೀಪ್ರವಾಹಕ್ಕೆ ಅನುಕೂಲವಾದ ಮಾರ್ಗವನ್ನು ತೋರಿಸುತ್ತ ಮುಂದೆ ಮುಂದೆ ನಡೆದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೇಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ಶ್ರೀ ಸುವರ್ಣಮುಖರೀಮಾಹಾತ್ಮ್ಯ ಪ್ರಶಂಸೆ—ಸುವರ್ಣಮುಖರಿಯ ಆವಿರ್ಭಾವವರ್ಣನ"ವೆಂಬ ಮುವ್ವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯಸ್ತ್ರಿಂಶೋಽಧ್ಯಾಯಃ

### ಸುವರ್ಣಮುಖರೀ ಪ್ರಭಾವ ಪ್ರಶಂಸಾವರ್ಣನಂ

ಭರದ್ವಾಜ ಉವಾಚ :—

ತದಾ ದಿವ್ಯವಿಮಾನಸ್ಥಾಃ ಶಕ್ರಮುಖ್ಯಾಃ ದಿವೌಕಸಃ ।
ಅಗಸ್ತ್ಯಮನುಯಾಂತೀಂ ತಾಮನುಜಗ್ಮುರ್ಮಹಾಪದಾಂ ॥ ೧ ॥
ನವಾವತಾರಾಂ ತಾಂ ದಿವ್ಯಾಂ ಸರ್ವೇ ಚ ಮುನಿಪುಂಗವಾಃ ।
ಕೃತಾಂಜಲಿಪುಟಾಃ ಸ್ತೋತ್ರೈರನುಯಾತಾಃ ಸಿಷೇವಿರೇ ॥ ೨ ॥
ಸಿದ್ಧಚಾರಣಗಂಧರ್ವಾಃ ಸಂಭೂತಾಶ್ಚ ಸಹಸ್ರಶಃ ।
ತಾಂ ನದೀಂ ತಂ ಮುನೀಂದ್ರಂ ಚ ಪ್ರಶಶಂಸುಃ ಶುಭೈಃ ಸ್ತವೈಃ ॥ ೩ ॥
ಸುಧೋಪಮಾನಮುಮಲಂ ದಿಷ್ಟ್ಯಾ ಲಬ್ಧಮಿದಂ ಜಲಂ ।
ಇತ್ಯೌತ್ಸುಕ್ಯರಸಾಯತ್ತಾ ನನಂದುರ್ಧರಣೀಜನಾಃ ॥ ೪ ॥
ತದಾ ನಿದೇಶಾದ್ದೇವಸ್ಯ ಪದ್ಮಯೋನೇಃ ಸಮೀರಣಃ ।
ಶೃಣ್ವತಾಂ ಸರ್ವದೇವಾನಾಮಿದಂ ವಚನಮಬ್ರವೀತ್ ॥ ೫ ॥

---

### ಕನ್ನಡದ ಅನುವಾದ

#### ಸುವರ್ಣಮುಖರೀಪ್ರಭಾವಪ್ರಶಂಸಾವರ್ಣನ

೧. ಭರದ್ವಾಜನು ಹೇಳುತ್ತಾನೆ:—ಆಗ ಮಹೇಂದ್ರನೇ ಮೊದಲಾದ ದೇವತೆಗಳೆಲ್ಲರೂ ತಮ್ಮ ವಿಮಾನಗಳಲ್ಲಿ ಕುಳಿತು ಅಗಸ್ತ್ಯನನ್ನು ಅನುಸರಿಸುತ್ತಿರುವ ಆ ಮಹಾನದಿಯನ್ನು ಹಿಂಬಾಲಿಸುತ್ತಿದ್ದರು.

೨. ಆಕಾಶಗಂಗೆಯ ಹೊಸ ಅವತಾರವಾದ ಆ ನದಿಯನ್ನು ಸಕಲ ಮುನಿಶ್ರೇಷ್ಠರೂ ಕೈಗಳನ್ನು ಜೋಡಿಸಿ ಸ್ತೋತ್ರಮಾಡುತ್ತ ಅನುಸರಿಸಿಹೋಗುತ್ತ ಸೇವಿಸಿದರು.

೩. ಸಿದ್ಧರೂ, ಚಾರಣರೂ, ಗಂಧರ್ವರೂ, ಸಾವಿರಗಟ್ಟಲೆಯಾಗಿ ಗುಂಪುಗೂಡಿ ಆ ನದಿಯನ್ನೂ ಆ ಅಗಸ್ತ್ಯಮುನಿವರ್ಯನನ್ನೂ ಅನೇಕ ಮಂಗಳ ಸ್ತೋತ್ರಗಳಿಂದ ಪ್ರಶಂಸಿಸಿದರು.

೪. ತಮ್ಮ ಪೂರ್ವಪುಣ್ಯದ ಫಲವಾಗಿಯೇ ಅಮೃತಸಮಾನವಾದ ಈ ನದಿಯ ಜಲವು ತಮಗೆ ದೊರಕಿತೆಂದು ಕುತೂಹಲಿತಸ್ವಾಂತರಾಗಿ ಭೂಲೋಕದ ಜನರೆಲ್ಲರೂ ಸಂತೋಷಗೊಂಡರು.

೫. ಆಗ ಲೋಕಕರ್ತನಾದ ಬ್ರಹ್ಮನ ಅಪ್ಪಣೆಯ ಮೇರೆಗೆ ಸಕಲದೇವತೆಗಳೂ ಕೇಳುತ್ತಿರಲು ವಾಯುದೇವನು ಈ ವಾಕ್ಯಗಳನ್ನು ಹೇಳಿದನು.

ಸುವರ್ಣಮಿವ ಲೋಕಾನಾಂ ಭಾಗಧೇಯಾದಿಯಂ ನದೀ ।
ನೀತಾ ಭುವಮಗಸ್ತ್ಯೇನ ಮುಖರೀಕೃತದಿಙ್ಮುಖಾ ॥ ೬ ॥
ತಸ್ಮಾದ್ಯಾಸ್ಯತಿ ವಿಖ್ಯಾತಿಂ ಸರ್ವಲೋಕಾಭಿನಂದಿತಾಂ ।
ಸುವರ್ಣಮುಖರೀನಾಮ್ನಾ ಧಾಮ್ನಿ ಕೈವಲ್ಯಸಂಪದಃ ॥ ೭ ॥
ಏಷಾ ಸುವರ್ಣಮುಖರೀ ಸರಿತ್ಸು ಸಕಲಾಸ್ವಪಿ ।
ವಿಶಿಷ್ಟಾ ಸೇವನೀಯಾ ಚ ಬ್ರಹ್ಮಣೋ ವಚನಂ ತ್ವಿದಂ ॥ ೮ ॥

ಭರದ್ವಾಜ ಉವಾಚ :—

ಶ್ರುತ್ವೇತ್ಥಂ ಪವನೇನೋಕ್ತಂ ವಚನಂ ಕುಂಭಸಂಭವಃ ।
ತುತೋಷ ವಿಸ್ಮಯಾಕ್ರಾಂತಃ ಸ್ವಾಂತಃ ಪುಲಕಿತಾಂಗಕಃ ॥ ೯ ॥
ಏವಮೇಷಾ ದಿವ್ಯನದೀ ಸ್ನಾನಪಾನಾದಿಕಲ್ಪನೈಃ ।
ಸೌಖ್ಯಾವಹಾ ಮನುಷ್ಯಾಣಾಂ ಪ್ರತಿಷ್ಠಾಮಗಮದ್ಭುವಿ ॥ ೧೦ ॥
ಆಜ್ಞಯಾ ಪದ್ಮಗರ್ಭಸ್ಯ ತಟಿನ್ಯಾಕಾಶವಾಹಿನೀ ।
ಸುವರ್ಣಮುಖರೀ ನಾಮ್ನಾ ಪುನಾತ್ಯಾತ್ಮೈಕಸಂಶ್ರಯಾನ್ ॥ ೧೧ ॥

---

೬. ವಾಯುದೇವನು ಹೇಳುತ್ತಾನೆ:—"ಸುವರ್ಣದಂತೆ ಸಕಲಲೋಕಗಳ ಪುಣ್ಯದಿಂದ ಈ ನದಿಯು ಭೂಲೋಕಕ್ಕೆ ಅಗಸ್ತ್ಯನಿಂದ ಕರೆತರಲ್ಪಟ್ಟು ಸಕಲ ದಿಕ್ಕುಗಳನ್ನೂ ತನ್ನ ಮಧುರಧ್ವನಿಯಿಂದ ಪ್ರತಿಧ್ವನಿತವನ್ನಾಗಿ ಮಾಡುತ್ತಿರುವುದು.

೭. ಆದುದರಿಂದ ಈ ನದಿಯು ಕೈವಲ್ಯೈಕ ನಿಲಯವಾದ ಈ ಪ್ರದೇಶದಲ್ಲಿ ಸುವರ್ಣಮುಖರಿಯೆಂಬ ಹೆಸರಿನಿಂದ ಸಕಲ ಲೋಕಗಳಲ್ಲಿಯೂ ವಿಸ್ತರಿಸಿದ ಪ್ರಖ್ಯಾತಿಯನ್ನು ಹೊಂದುವುದು.

೮. ಈ ಸುವರ್ಣಮುಖರಿಯು ಭೂಲೋಕದ ಸಕಲನದಿಗಳಲ್ಲಿಯೂ ವೈಶಿಷ್ಟ್ಯವನ್ನು ಹೊಂದಿರುವುದರಿಂದ ಬ್ರಹ್ಮದೇವನ ಆಜ್ಞಾನುಸಾರವಾಗಿ ಸರ್ವಜನರಿಂದಲೂ ಸೇವೆಗೊಳ್ಳಲು ಅರ್ಹವಾಗಿರುವುದು."

೯. ಭರದ್ವಾಜನು ಹೇಳುತ್ತಾನೆ:—ಇಂತು ವಾಯುದೇವನು ಹೇಳಿದ ಮಾತನ್ನು ಕೇಳಿ ಅಗಸ್ತ್ಯಮಹಾಮುನಿಯು ವಿಸ್ಮಯವನ್ನು ಹೊಂದಿ ತನ್ನ ಮೈಯೆಲ್ಲವೂ ಪುಲಕಿತವಾಗಲು ಬಹಳವಾಗಿ ಸಂತೋಷಗೊಂಡನು.

೧೦. ಇಂತು ಆ ದಿವ್ಯನದಿಯು ಸ್ನಾನಪಾನಾದಿಗಳಿಗೆ ಉಪಯೋಗಕರವಾಗಿ ಮನುಷ್ಯರಿಗೆ ಸೌಖ್ಯವನ್ನುಂಟುಮಾಡುತ್ತ ಭೂಲೋಕದಲ್ಲಿ ಪ್ರಖ್ಯಾತಿಯನ್ನು ಹೊಂದಿತು.

೧೧. ಆಕಾಶವಾಹಿನಿಯಾದ ಆ ನದಿಯು ಬ್ರಹ್ಮನ ಆಜ್ಞೆಯನ್ನನುಸರಿಸಿ ಭೂಲೋಕಕ್ಕೆ ಸುವರ್ಣಮುಖರಿಯಾಗಿ ಬಂದು ತನ್ನನ್ನೇ ಆಶ್ರಯಿಸಿದ ಅನನ್ಯ ಭಕ್ತರನ್ನು ಪಾವನಗೊಳಿಸುವುದು.

ಬಹೂನ್ಗಿರೀಂದ್ರಾನ್ವನಮಂಡಲಂ ಚ
ದೇಶಾನನೇಕಾನ್ಸರಿದುತ್ತಮೇಯಂ ।
ಕ್ರಮಾದತಿಕ್ರಮ್ಯ ನಿಷೇವ್ಯಮಾಣಾ
ಮಹಾನದೀಭಿರ್ಗಿರಿಸಂಭವಾಭಿಃ ॥ ೧೨ ॥
ರೋಗಾಹತಾನಾಮಧಿಕಾತುರಾಣಾ
ಮನಾಮಯೈಕಪ್ರತಿಪಾದಕಾನಿ ।
ಅಂತರ್ಬಹಿಸ್ಸಂಭೃತಭೂರಿತಾಪ
ನಿವಾರಣಾನಿ ಪ್ರಿಯಕಾರಣಾನಿ ॥ ೧೩ ॥
ವಿಹಾರಲೋಲ ದ್ವಿರದಪ್ರಕಾಂಡ
ಶುಂಡಾಮಹಾಘಾತರಯೋತ್ಥಿತೇನ ।
ಪುಷ್ಪೋಪಹಾರಂ ಪೃಷತೋತ್ಕರೇಣ
ಹರ್ಷಾದ್ದದಾತೀವ ದಿವಾಕರಸ್ಯ ॥ ೧೪ ॥
ಸೌಗಂಧಿಕಾಂಭೋರುಹಕೈರವಾಣಾಂ
ಸೌರಭ್ಯಸಂವಾಸಿತದಿಙ್ಮುಖಾನಾಂ ।
ದ್ವಿರೇಫಭಾಗ್ಯೈಕ ನಿಕೇತನಾನಾ
ಮಾಧಾರಭೂತಾನ್ಪ್ರತಿನಿರ್ಮಲಾನಿ ॥ ೧೫ ॥

---

೧೨. ಈ ನದಿಯು ಅನೇಕ ಉನ್ನತಪರ್ವತಗಳನ್ನೂ, ಅರಣ್ಯಗಳನ್ನೂ, ದೇಶಗಳನ್ನೂ ಕ್ರಮವಾಗಿ ದಾಟಿಕೊಂಡು ಗಿರಿಗಳಲ್ಲಿ ಹುಟ್ಟುವ ಅನೇಕ ಮಹಾ ನದಿಗಳ ಜಲರೂಪವಾದ ಸೇವೆಯನ್ನು ಕೈಕೊಂಡಿತು.

೧೩. ರೋಗಪೀಡಿತರಾದವರಿಗೂ, ಮನಸ್ಸಿನಲ್ಲಿ ಕಾತುರತೆಯುಳ್ಳವರಿಗೂ ಅಸದೃಶವಾದ ಸೌಖ್ಯವನ್ನುಂಟುಮಾಡುವುದಾಗಿ ಆಧ್ಯಾತ್ಮಿಕ, ಆಧಿಭೌತಿಕ ಗಳಾದ ಮಹತ್ತರ ಪಾಪಗಳೆಲ್ಲವನ್ನೂ ನಿವಾರಿಸಿ ಈ ನದಿಯ ಜಲವು ಪ್ರಿಯ ವನ್ನುಂಟುಮಾಡುವುದು.

೧೪. ಜಲಕ್ರೀಡೆಯಲ್ಲಿ ನಿರತವಾಗಿರುವ ಆನೆಗಳ ಉದ್ದವಾದ ಸೊಂಡಿಲು ಗಳ ಹೊಡೆತದ ರಭಸದಿಂದ ಮೇಲಕ್ಕೆದ್ದ ನೀರಿನ ಹನಿಗಳು ನದ್ಯಭಿಮಾನಿ ದೇವತೆಯು ಸೂರ್ಯನಿಗೆ ಸಂತೋಷದಿಂದೆರಚುತ್ತಿರುವ ಪುಷ್ಪಗಳೋ ಎಂಬಂತೆ ಕಾಣುತ್ತಿದ್ದುವು.

೧೫. ಸುವಾಸನೆಯಿಂದ ದಿಕ್ಕುಗಳೆಲ್ಲವನ್ನೂ ವ್ಯಾಪಿಸಿ ದುಂಬಿಗಳಿಗೆ ಅನನ್ಯಾಶ್ರಯಗಳೆನಿಸಿದ ಸೌಗಂಧಿಕಗಳಾದ ಕಮಲಗಳೂ ಕುಮುದಗಳೂ ಈ ನದಿಯ ನಿರ್ಮಲಜಲವನ್ನೇ ಆಧಾರಮಾಡಿಕೊಂಡಿದ್ದುವು.

ಲೀಲಾವಗಾಹೋತ್ಸುಕನಾಕನಾರೀ
ಸೀಮಂತಸಿಂದೂರರಜೋಽರುಣಾನಿ ।
ತತ್ಕೇಶಪಾಶಚ್ಯುತಪಾರಿಜಾತ
ಪ್ರಸೂನಗಂಧೈರಧಿವಾಸಿತಾನಿ ॥ ೧೬ ॥
ಸಾ ಬಿಭ್ರತೀ ಸಂಭೃತಮಂಗಳಾನಿ
ಸಾನೂನ್ಯಪಂಕಾನ್ಯತಿನಿರ್ಮಲಾನಿ ।
ಸುಧೋಪಮಾನಾನಿ ಸುರೇಂದ್ರಸೂನೋಃ
ಪಯಾಂಸಿಪಾಪಪ್ರತಿಘಾತುಕಾನಿ ॥ ೧೭ ॥
ಅಗಸ್ತ್ಯಶೈಲಾತ್ಸಮವಾಪ್ತಜನ್ಮಾ
ನೀತಾ ಭುವಂ ಕುಂಭಸಮುದ್ಭವೇನ ।
ಪ್ರಶಸ್ತತೀರ್ಥೌಘವಿರಾಜಮಾನಾ
ಸಮಾಯಯೌ ದಕ್ಷಿಣವಾರಿರಾಶಿಂ ॥ ೧೮ ॥
ಶೀಕರಾಕ್ಷತವಿನ್ಯಾಸೈ ರತ್ನದೀಪಾರ್ಪಣೈರಪಿ ।
ಪ್ರತ್ಯುದ್ಯಯುಸ್ತಾಮಂಭೋಧೇರ್ವೀಚಯೋಽಭಿಮುಖಾಗತಾಃ ॥ ೧೯ ॥
ತರಂಗಹಸ್ತೈರಾಲಿಂಗ್ಯ ಸಂಭಾವ್ಯೈನಾಂ ಸಮಾಗತಾಂ ।
ಚಕಾರ ಸರಿತಾಂ ನಾಥಃ ಪ್ರಿಯಮಾಘೋಷಭಾಷಣೈಃ ॥ ೨೦ ॥

---

೧೬. ಕ್ರೀಡಾಸ್ನಾನಗಳಲ್ಲಿ ಆಸಕ್ತರಾಗಿದ್ದ ದೇವಕನ್ಯೆಯರ ಕುಂಕುಮ ಸಿಂದೂರಗಳ ಧೂಳಿನಿಂದ ಕೆಂಪೊಗೆದು, ಅವರ ತಲೆಗೂದಲುಳಿಂದುದುರಿದ ಪಾರಿಜಾತಪುಷ್ಪಗಳ ವಾಸನೆಯಿಂದ ಆ ನದಿಯ ಜಲವು ಸುಗಂಧಭರಿತವಾಗಿದ್ದಿತು.

೧೭. ಸಮಸ್ತಮಂಗಳಪ್ರದವೂ, ರುಚಿಕರವೂ, ಪಂಕರಹಿತವೂ, ಅತಿ ನಿರ್ಮಲವೂ, ಅಮೃತಸಮಾನವೂ, ಪಾಪಸಮೂಲೋನ್ಮೂಲಕವೂ ಆದ ನೀರಿನಿಂದ ಆ ನದಿಯು ತುಂಬಿ ತುಳುಕಿ ಹರಿಯುತ್ತಿದ್ದಿತು.

೧೮. ಅಗಸ್ತ್ಯಪರ್ವತದಲ್ಲಿ ಜನ್ಮವನ್ನು ಪಡೆದು, ಆತನಿಂದಲೇ ಭೂಲೋಕಕ್ಕೆ ತರಲ್ಪಟ್ಟು, ಅನೇಕ ಪ್ರಶಸ್ತತೀರ್ಥಗಳಿಂದ ಕೂಡಿದ ಈ ಸುವರ್ಣಮುಖರೀನದಿಯು ಇಂತು ಪ್ರವಹಿಸಿ ದಕ್ಷಿಣ ಸಮುದ್ರವನ್ನು ಸೇರಿತು.

೧೯. ಸಮುದ್ರದ ಅಲೆಗಳೂ ಈ ನದಿಯನ್ನೆದುರಿಸಿ ತುಂತುರುಗಳೆಂಬ ಅಕ್ಷತೆಗಳಿಂದಲೂ ನವರತ್ನಗಳೆಂಬ ದೀಪದ ಸಾಲುಗಳಿಂದಲೂ ಸುಖಾಗಮನವನ್ನು ಬಯಸಿದುವು.

೨೦. ಸಮುದ್ರರಾಜನು ತರಂಗಗಳೆಂಬ ಬಾಹುಗಳಿಂದ ಈ ನದೀವನಿತೆಯನ್ನು ಆಲಿಂಗಿಸಿ ತನ್ನಲ್ಲಿಗೆ ಬಂದು ಸೇರಿದುದಕ್ಕಾಗಿ ಸಂಭಾವನೆಯನ್ನಿತ್ತು ಘೋಷವೆಂಬ ಮಧುರವಾಕ್ಯಗಳಿಂದ ಪ್ರಿಯವನ್ನುಂಟುಮಾಡುತ್ತಿದ್ದನು.

ಪ್ರಾಪ್ತಾಯಾಮನುಕೂಲಾಯಾಂ ತದಾ ತಸ್ಯಾಮುಪಾಂನಿಧೇಃ ।
ಪ್ರಹೃಷ್ಟೇನ ತರಂಗೇಣ ಜೀವನಂ ವವೃಧೇತರಾಂ ॥ ೨೧ ॥
ಇತ್ಥಂ ಸಂಸೃಜ್ಯ ಸರಿತಮಗಸ್ತ್ಯಸ್ತಾಮುದನ್ವತಾ ।
ಸ್ತುತ್ವಾ ಯಯೌ ಸಮಾಮಂತ್ರ್ಯ ಕೃತಕೃತ್ಯೋ ಯದೃಚ್ಛಯಾ ॥ ೨೨ ॥

ಅರ್ಜುನ ಉವಾಚ :—

ತ್ವಯೈಷ ಕಥಿತೋ ಬ್ರಹ್ಮನ್ಮಹಾನದ್ಯಾಃ ಸಮುದ್ಭವಃ ।
ಅಸ್ಯಾಃ ಪ್ರಭಾವಂ ಭಗವನ್ನಿದಾನೀಂ ಶ್ರೋತುಮುತ್ಸಹೇ ॥ ೨೩ ॥

ಭರದ್ವಾಜ ಉವಾಚ :—

ಅಂಹೋನಿಬರ್ಹಣಂ ಸರ್ವಶ್ರೇಯಸಾಮೇಕಕಾರಣಂ ।
ಶೃಣು ಮಾಹಾತ್ಮ್ಯಮಸ್ಯಾಸ್ತೇ ಕಥಯಿಷ್ಯಾಮಿ ಪಾಂಡವ ॥ ೨೪ ॥
ಪಾಶ್ಚಾತ್ಯಂ ಜನ್ಮ ಸಂಪ್ರಾಪ್ಯ ಜ್ಞಾನಿನಾಂ ಕರ್ಮಣಃ ಕ್ಷಯೇ ।
ಸುವರ್ಣಮುಖರೀಸ್ನಾನಂ ಸಿದ್ಧ್ಯೇದ್ಬ್ರಹ್ಮತ್ವಕಾರಣಂ ॥ ೨೫ ॥
ಏತಾಂ ಸುವರ್ಣಮುಖರೀಂ ಯೋಜನಾನಾಂ ಶತೈರಪಿ ।
ಸ್ಮೃತ್ವಾ ಮನುಷ್ಯಃ ಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೨೬ ॥

---

೨೧. ಸಮುದ್ರನಿಗೆ ಅನುಕೂಲಳಾದ ಪತ್ನಿಯಂತೆ ಸುವರ್ಣಮುಖರಿಯು ಪ್ರಾಪ್ತಳಾಗಲು ಸಂತೋಷ ತರಂಗಗಳಿಂದ ಆತನ ಜೀವನವು (ಜಲವು) ಅತಿಶಯವಾದ ವೃದ್ಧಿಯನ್ನು ಹೊಂದಿತು.

೨೨. ಇಂತು ಪುಣ್ಯನದಿಯೊಂದನ್ನುಂಟುಮಾಡಿ ಅಗಸ್ತ್ಯನು ಅದನ್ನು ಸಮುದ್ರದೊಡನೆ ಸೇರಿಸಿ ಸ್ತೋತ್ರಮಾಡಿ ಕೃತಕೃತ್ಯನಾಗಿ ಸ್ವೇಚ್ಛೆಯಾಗಿ ಹೊರಟು ಹೋದನು.

೨೩. ಅರ್ಜುನನು ಹೇಳುತ್ತಾನೆ :—"ಬ್ರಾಹ್ಮಣೋತ್ತಮನೆ! ಈ ಮಹಾನದಿಯ ಉದ್ಭವದ ಪ್ರಕಾರವನ್ನು ಇಲ್ಲಿಯವರೆಗೂ ವಿವರಿಸಿರುವೆ. ಇನ್ನು ಈ ನದಿಯ ಮಾಹಾತ್ಮ್ಯೆಯನ್ನು ಕೇಳಲು ಕುತೂಹಲಪಡುತ್ತಿರುವೆನು."

೨೪. ಭರದ್ವಾಜನು ಹೇಳುತ್ತಾನೆ:—ಸಕಲಪಾಪಗಳನ್ನು ನಿವಾರಿಸುವುದೂ, ಸರ್ವಶ್ರೇಯಸ್ಸುಗಳನ್ನುಂಟುಮಾಡುವುದೂ ಆದ ಈ ಸುವರ್ಣಮುಖರಿಯ ಮಾಹಾತ್ಮ್ಯವನ್ನು ಹೇಳುವೆನು. ಅರ್ಜುನಾ! ಶ್ರದ್ಧೆಯಿಂದ ಕೇಳು.

೨೫-೨೬. ಜ್ಞಾನಿಗಳಿಗೂ ಸಹ ಬ್ರಹ್ಮಪ್ರಾಪ್ತಿಗೆ ಕಾರಣವಾದ ಸುವರ್ಣಮುಖರೀನದಿಯ ಸ್ನಾನವು ಸರ್ವಕರ್ಮಕ್ಷಯವಾದ ಮೇಲೆ ಕಡೆಯ ಜನ್ಮದಲ್ಲಿಯೇ ದೊರೆಯುವುದು. ಈ ಸುವರ್ಣಮುಖರಿಯನ್ನು ಸ್ಮರಿಸುವ ಮಾತ್ರದಿಂದ ನೂರು ಯೋಜನಗಳ ದೂರದಲ್ಲಿರುವ ಮನುಷ್ಯನೂ ಕೂಡ ಸಕಲ ಪಾಪಗಳಿಂದಲೂ ಮೋಕ್ಷವನ್ನು ಹೊಂದುವುದರಲ್ಲಿ ಸಂದೇಹವಿಲ್ಲ.

ನಿಃಕ್ಷಿಪ್ತಮಸ್ಥಿ ಜಂತೂನಾಂ ಸುವರ್ಣಮುಖರೀಜಲೇ ।
ಸೋಪಾನತಾಂ ಸಮಾಯಾತಿ ಬ್ರಹ್ಮಲೋಕಾಧಿರೋಹಣೇ ॥ ೨೭ ॥
ಸ್ಮರಂತಃ ಸ್ವರ್ಣಮುಖರೀಂ ಯತ್ರ ಕುತ್ರಾಪಿ ಮಾನವಾಃ ।
ತೋಯಾಂತರೇಷು ಸ್ನಾತ್ವಾಪಿ ಲಭಂತೇ ಫಲಮುತ್ತಮಂ ॥ ೨೮ ॥
ತಾವದೇವಾಭಿಭೂಯಂತೇ ನರಾಃ ಪಾತಕಕೋಟಿಭಿಃ ।
ಸುವರ್ಣಮುಖರೀಸ್ನಾನಂ ಯಾವತ್ತಲ್ಲಭ್ಯತೇ ಶುಭಂ ॥ ೨೯ ॥
ದಿವ್ಯಾಂತರಿಕ್ಷಭೌಮಾನಿ ತೀರ್ಥಾನಿ ನಿಜಸಿದ್ಧಯೇ ।
ಸ್ಮರಂತ್ಯಹರಹಃ ಪ್ರಾತಃ ಸುವರ್ಣಮುಖರೀಂ ನದೀಂ ॥ ೩೦ ॥
ಅಗಸ್ತ್ಯಾಚಲಸಂಭೂತಾ ದಕ್ಷಿಣೋದಧಿಗಾಮಿನೀ ।
ಪಾಪಾನಿ ಸ್ವರ್ಣಮುಖರೀ ಸ್ಮರಣಾದೇವ ನಾಶಯೇತ್ ॥ ೩೧ ॥
ಸುವರ್ಣಮುಖರೀ ಸ್ನಾನಲೋಲುಪೇನಾಂತರಾತ್ಮನಾ ।
ವಾಂಛಂತಿ ಮರ್ತ್ಯತಾಮೇವ ದೇವಾಃ ಶಕ್ರಪುರೋಗಮಾಃ ॥ ೩೨ ॥
ಸುವರ್ಣಮುಖರೀತೋಯಪುಷ್ಟಸಸ್ಯಾನ್ನಭೋಜಿನಃ ।
ನ ಲಿಪ್ಯಂತೇ ಮಹಾಪಾಪೈರ್ದುರ್ಭೋಜನಶತೋದ್ಭವೈಃ ॥ ೩೩ ॥

---

೨೭–೨೯. ಯಾವ ಪ್ರಾಣಿಯ ಅಸ್ಥಿಗಳು ಈ ನದಿಯಲ್ಲಿ ಹಾಕಲ್ಪಡುವುವೊ, ಆ ಜಂತುಗಳಿಗೆ ಅವುಗಳೇ ಸ್ವರ್ಗಾರೋಹಣಕ್ಕೆ ಸೋಪಾನಗಳಾಗಿ ಪರಿಣಮಿಸುವುವು. ಈ ಸುವರ್ಣಮುಖರಿಯನ್ನು ಸ್ಮರಿಸುತ್ತ ಮಾನವರು ಎಲ್ಲಿಯಾದರೂ ಯಾವ ಜಲದಲ್ಲಾದರೂ ಸ್ನಾನವನ್ನು ಮಾಡಿದರೂ ಉತ್ತಮಫಲವನ್ನು ಪಡೆಯುವರು. ಮನುಷ್ಯರಿಗೆ ಶುಭಪ್ರದವಾದ ಸುವರ್ಣಮುಖರಿಯ ಸ್ನಾನವು ಎಲ್ಲಿಯವರೆಗೆ ಲಭ್ಯವಾಗುವುದಿಲ್ಲವೋ ಆವರೆಗೆ ಮಾತ್ರ ಅವರು ಅನೇಕಕೋಟಿ ಪಾಪಗಳಿಂದ ಅಭಿಭೂತರಾಗಿರುವರು.

೩೦. ಸ್ವರ್ಗ, ಅಂತರಿಕ್ಷ, ಭೂಲೋಕಗಳಲ್ಲಿರುವ ಸಕಲ ತೀರ್ಥಗಳೂ ತಮ್ಮ ಪವಿತ್ರತೆಯ ಸಿದ್ಧಿಗಾಗಿ ಪ್ರತಿದಿನವೂ ಪ್ರಾತಃಕಾಲದಲ್ಲಿ ಸುವರ್ಣಮುಖರೀನದಿಯನ್ನು ಸ್ಮರಿಸುತ್ತಿರುವುವು.

೩೧. ಅಗಸ್ತ್ಯಪರ್ವತದಲ್ಲಿ ಉದ್ಭವಿಸಿ ದಕ್ಷಿಣಸಮುದ್ರವನ್ನು ಸೇರುವ ಈ ಸುವರ್ಣಮುಖರಿಯು ಸ್ಮರಿಸಿದ ಮಾತ್ರದಿಂದಲೇ ಸಕಲ ಪಾತಕಗಳನ್ನೂ ನಾಶಗೊಳಿಸುವುದು.

೩೨. ಮಹೇಂದ್ರನೇ ಮುಂತಾದ ದೇವತೆಗಳೂ ಸುವರ್ಣಮುಖರೀ ನದಿಯಲ್ಲಿ ಸ್ನಾನಮಾಡುವ ಭಾಗ್ಯವನ್ನು ಪಡೆಯುವುದಕ್ಕಾಗಿ ಭೂಲೋಕದಲ್ಲಿ ಮನುಷ್ಯಜನ್ಮವನ್ನು ಪಡೆಯಲಿಚ್ಛಿಸುತ್ತಿರುವರು.

೩೩. ಸುವರ್ಣ ಮುಖರಿಯ ನೀರಿನಿಂದ ಬೆಳೆದ ಧಾನ್ಯಗಳನ್ನು ಯಾರು

ಅಪಿ ನಿಷ್ಕಮಿತಂ ಪೀತಂ ಸುವರ್ಣಮುಖರೀಜಲಂ ।
ನಾಶಯೇದದ್ರಿತುಲ್ಯಾನಿ ಹ್ಯಾಶು ಪಾಪಾನಿ ದೇಹಿನಾಂ ॥ ೩೪ ॥
ಪ್ರಾಪ್ಯಾಪಿ ಮಾನುಷಂ ಜನ್ಮ ಸುವರ್ಣಮುಖರೀಜಲೇ ।
ಯೇ ವಾ ಸ್ನಾನಂ ನ ಕುರ್ವಂತಿ ತೇಷಾಂ ಜನ್ಮ ನಿರರ್ಥಕಂ ॥ ೩೫ ॥
ಸುವರ್ಣಮುಖರೀಸ್ನಾನಂ ಯದೇಕಂ ವಿಧಿನಾ ಕೃತಂ ।
ಜಾಹ್ನವೀಸ್ನಾನಕೋಟೀನಾಂ ಸಮಂ ಭವತಿ ಪರ್ವಸು ॥ ೩೬ ॥
ಗೋವಿಂದ ಇವ ದೇವೇಷು ನಕ್ಷತ್ರೇಷ್ವಿವ ಚಂದ್ರಮಾಃ ।
ನರೇಷ್ವಿವ ಮಹೀಪಾಲೋ ಭೂರುಹೇಷ್ವಿವ ಕಲ್ಪಕಃ ॥ ೩೭ ॥
ಮಹಾಭೂತೇಷ್ವಿವ ವಿಯನ್ಮಾಯೇವಾಖಿಲಶಕ್ತಿಷು ।
ಗಾಯತ್ರೀವ ಚ ಮಂತ್ರೇಷು ವಜ್ರಂ ದೇವಾಯುಧೇಷ್ವಿವ ॥ ೩೮ ॥
ತತ್ತ್ವೇಷ್ವಿವಾತ್ಮನಸ್ತತ್ತ್ವಂ ರುದ್ರಾಧ್ಯಾಯೋ ಯಜುಷ್ವಿವ ।
ಅನಂತ ಇವ ನಾಗೇಷು ಹಿಮಾಚಲ ಇವಾದ್ರಿಷು ॥ ೩೯ ॥
ಪೋತ್ರಿಕ್ಷೇತ್ರಮಿವ ಕ್ಷೇತ್ರೇಷ್ವಿಂದ್ರಿಯೇಷ್ವಿವ ಮಾನಸಂ ।
ನದೀಷ್ವಿವ ಚ ಸರ್ವಾಸು ಸುವರ್ಣಮುಖರೀ ವರಾ ॥ ೪೦ ॥

---

ಭೋಜನಮಾಡುವರೊ, ಅವರು ಇತರ ನೂರಾರು ದುಷ್ಟಾನ್ನಭೋಜನ ದಿಂದುಂಟಾದ ಮಹಾಪಾಪಗಳಿಂದ ಸಂಪರ್ಕವನ್ನು ಹೊಂದುವುದಿಲ್ಲ.

೩೪. ಒಂದು ನಿಷ್ಕವು ಮುಳುಗುವಷ್ಟು ಸುವರ್ಣಮುಖರೀಜಲವನ್ನು ಪಾನಮಾಡಿದರೂ ಮನುಷ್ಯರ ಪರ್ವತಾಕಾರವಾದ ಪಾಪಗಳೂ ನಾಶವನ್ನು ಹೊಂದುವುವು.

೩೫. ಮನುಷ್ಯಜನ್ಮವನ್ನು ಹೊಂದಿದ್ದರೂ ಯಾವನು ಸುವರ್ಣಮುಖರೀ ನದಿಯಲ್ಲಿ ಸ್ನಾನವನ್ನು ಮಾಡುವುದಿಲ್ಲವೊ, ಅವನ ಜನ್ಮವು ನಿಷ್ಫಲವೆಂದೇ ತಿಳಿಯಬೇಕು.

೩೬. ಸುವರ್ಣಮುಖರಿಯಲ್ಲಿ ವಿಧ್ಯುಕ್ತರೀತಿಯಿಂದ ಮಾಡಿದ ಪ್ರತಿಯೊಂದು ಸ್ನಾನವೂ ಪರ್ವದಿವಸಗಳಲ್ಲಿ ಮಾಡಿದ ಒಂದು ಕೋಟಿ ಗಂಗಾಸ್ನಾನಗಳಿಗೆ ಸಮಾನವೆನಿಸಿರುವುದು.

೩೭–೪೦. ದೇವತೆಗಳಲ್ಲಿ ಮಹಾವಿಷ್ಣುವೂ, ನಕ್ಷತ್ರಗಳಲ್ಲಿ ಚಂದ್ರನೂ, ಮನುಷ್ಯರಲ್ಲಿ ಚಕ್ರವರ್ತಿಯೂ, ವೃಕ್ಷಗಳಲ್ಲಿ ಕಲ್ಪವೃಕ್ಷವೂ, ಮಹಾ ಭೂತಗಳಲ್ಲಿ ಆಕಾಶವೂ, ಸಕಲ ಶಕ್ತಿಗಳಲ್ಲಿ ಮಾಯಾಶಕ್ತಿಯೂ, ಮಂತ್ರಗಳಲ್ಲಿ ಗಾಯತ್ರಿಯೂ, ದೇವತೆಗಳ ಆಯುಧಗಳಲ್ಲಿ ವಜ್ರಾಯುಧವೂ, ತತ್ತ್ವಗಳಲ್ಲಿ ಆತ್ಮತತ್ತ್ವವೂ, ಯಜುಸ್ಸುಗಳಲ್ಲಿ ರುದ್ರಾಧ್ಯಾಯವೂ, ನಾಗರಲ್ಲಿ ಅನಂತನೂ,

ನಿತ್ಯಂ ಸ್ಮರನ್ನಮಸ್ಕುರ್ಯಾತ್ಕೀರ್ತಯೇನ್ಮನಸಾರ್ಚಯೇತ್ ।
ಶುದ್ಧಿಕ್ಷೇಮಶಿವಾಪೇಕ್ಷೀ ಸುವರ್ಣಮುಖರೀಂ ಶುಭಾಂ ॥ ೪೧ ॥
ಅಗಸ್ತ್ಯಾಚಲಸಂಭೂತಾಂ ದಕ್ಷಿಣೋದಧಿಗಾಮಿನೀಂ ।
ಸಮಸ್ತಪಾಪಹಂತ್ರೀಂ ತ್ವಾಂ ಸುವರ್ಣಮುಖರೀಂ ಶ್ರಯೇ ॥ ೪೨ ॥
ಮಹಾಪಾತಕವಿಪ್ಲುಷ್ಟಂ ಗಾತ್ರಂ ಮಮ ತವೋದಕೈಃ ।
ಕ್ಷಾಲಯಾಮಿ ಜಗದ್ಧಾತ್ರಿ ಶ್ರೇಯಸಾ ಯೋಜಯಸ್ವ ಮಾಂ ॥ ೪೩ ॥
ಇತಿ ಸೂಕ್ತದ್ವಯಂ ಸಮ್ಯಗುಚ್ಚಾರ್ಯ ನಿಯತೋ ನರಃ ।
ಸುವರ್ಣಮುಖರೀತೋಯೇ ಸ್ನಾತ್ವಾ ಶುದ್ಧಃ ಪ್ರಮೋದತೇ ॥ ೪೪ ॥
ಬ್ರಹ್ಮಣಾ ನಿರ್ಮಿತಾ ಪೂರ್ವಮಗಸ್ತ್ಯೇನ ಸಮಾಹೃತಾ ।
ಸ್ವಯಂ ಮಂದಾಕಿನೀ ಮೂರ್ತಾ ಸುವರ್ಣಮುಖರೀ ವರಾ ॥ ೪೫ ॥
ಏವಂ ಪ್ರಭಾವಾ ದಿವ್ಯೇಯಂ ಕೀರ್ತನೀಯಾ ಶುಭಾರ್ಥಿಭಿಃ ।
ಮನಸಾ ಭಕ್ತಿಯುಕ್ತೇನ ಸ್ನಾತವ್ಯಾ ಶುಭಕಾಂಕ್ಷಿಭಿಃ ॥ ೪೬ ॥

---

ಪರ್ವತಗಳಲ್ಲಿ ಹಿಮಾಚಲವೂ, ಕ್ಷೇತ್ರಗಳಲ್ಲಿ ವರಾಹಕ್ಷೇತ್ರವೂ, ಇಂದ್ರಿಯಗಳಲ್ಲಿ ಮನಸ್ಸೂ ಹೇಗೆ ಸರ್ವೋತ್ತಮಗಳಾಗಿರುವುವೊ, ಹಾಗೆಯೇ ಸಕಲ ನದಿಗಳಲ್ಲಿ ಈ ಸುವರ್ಣಮುಖರಿಯು ಉತ್ಕೃಷ್ಟವೆನಿಸಿರುವುದು.

೪೧. ಮನಶ್ಶುದ್ಧಿಯನ್ನೂ, ಕ್ಷೇಮವನ್ನೂ, ಆರೋಗ್ಯವನ್ನೂ ಅಪೇಕ್ಷಿಸುವ ಮಾನವನು ನಿತ್ಯದಲ್ಲಿಯೂ ಪವಿತ್ರವಾದ ಸುವರ್ಣಮುಖರಿಯನ್ನು ಸ್ಮರಿಸಿ ನಮಸ್ಕರಿಸಬೇಕು; ಸ್ತೋತ್ರಮಾಡಬೇಕು; ಮನಸ್ಸಿನಲ್ಲಿಯೇ ಪೂಜಿಸಬೇಕು.

೪೨. "ಅಗಸ್ತ್ಯಶೈಲದಲ್ಲಿ ಹುಟ್ಟಿದುದೂ, ದಕ್ಷಿಣ ಸಮುದ್ರವನ್ನು ಸೇರುವುದೂ, ಸಕಲಪಾಪಗಳನ್ನು ನಾಶಗೊಳಿಸುವುದೂ, ಆದ ಸುವರ್ಣ ಮುಖರಿಯೆಂಬ ನಿನ್ನನ್ನು ಆಶ್ರಯಿಸಿರುವೆನು.

೪೩. ಲೋಕಮಾತೆಯೆ! ಅನೇಕ ಮಹಾಪಾತಕಗಳಿಂದ ತುಂಬಿದ ಈ ನನ್ನ ಶರೀರವನ್ನು ನಿನ್ನ ಜಲದಲ್ಲಿ ತೊಳೆದು ನಿಷ್ಪಾಪನಾಗುವೆನು. ನನಗೆ ಶ್ರೇಯಸ್ಸನ್ನುಂಟುಮಾಡು."

೪೪. ಎಂತೆಂಬ ಎರಡು ಶ್ಲೋಕಗಳನ್ನು ಚೆನ್ನಾಗಿ ಜಪಿಸುತ್ತ ನಿಯಮದಿಂದ ಮನುಷ್ಯನು ಸುವರ್ಣಮುಖರಿಯ ಜಲದಲ್ಲಿ ಸ್ನಾನಮಾಡಲು ಪರಿಶುದ್ಧನಾಗಿ ಸಂತೋಷವನ್ನು ಹೊಂದುವನು.

೪೫. ಬ್ರಹ್ಮನಿಂದ ಸೃಷ್ಟವಾಗಿ ಮೊದಲು ಅಗಸ್ತ್ಯನಿಂದ ಭೂಲೋಕಕ್ಕೆ ತರಲ್ಪಟ್ಟು ಸ್ವತಃ ದೇವಗಂಗೆಯ ಅವತಾರವೆಂದೆನಿಸಿದ ಸುವರ್ಣಮುಖರೀ ನದಿಯೇ ಸರ್ವೋತ್ತಮವು.

೪೬. ಇಂತಹ ಮಹಾತ್ಮ್ಯೆಯುಳ್ಳ, ಈ ನದಿಯು ಸಕಲ ಶ್ರೇಯಸ್ಕಾಮಿ

ಸೋಮಸೂರ್ಯೋಽಪರಾಗೇಷು ಸ್ನಾನದಾನಾದಿಕಂ ಕೃತಂ ।
ಸ್ಯಾದಮೇಯಫಲಂ ಪಾರ್ಥ ಸುವರ್ಣಮುಖರೀತಟೇ ॥ ೪೭ ॥
ಸಂಕ್ರಾಂತಾವಯನೇ ಪುಣ್ಯೇ ವ್ಯತೀಪಾತೇಽಥ ವಾಸರೇ ।
ಸುವರ್ಣಮುಖರೀಸ್ನಾನಂ ಕುಲಕೋಟಿಂ ಸಮುದ್ಧರೇತ್ ॥ ೪೮ ॥
ಜನ್ಮರ್ಕ್ಷೇ ಜನ್ಮದಿವಸೇ ಸುವರ್ಣಮುಖರೀಜಲೇ ।
ಸ್ನಾತ್ವಾ ವಿಧಿವದಾಪ್ನೋತಿ ಕ್ಷೇಮಾರೋಗ್ಯಸುಖಶ್ರಿಯಃ ॥ ೪೯ ॥
ದುಸ್ಸ್ವಪ್ನವಿಘ್ನಜಂ ಭೂತಗ್ರಹದುಸ್ಸ್ಥಾನಜಂ ತಥಾ ।
ಸುವರ್ಣಮುಖರೀತೋಯೇ ಸ್ನಾತ್ವಾ ತರತಿ ಕಿಲ್ಬಿಷಂ ॥ ೫೦ ॥
ಸುವರ್ಣಮುಖರೀತೀರೇ ಗೋಪಾದಪ್ರಮಿತಾಂ ಭುವಂ ।
ದತ್ತ್ವಾ ಸರ್ವಮಹೀದಾನಾದ್ಯತ್ಫಲಂ ತದವಾಪ್ನುಯಾತ್ ॥ ೫೧ ॥

---

ಗಳಿಗೂ ಸ್ತೋತ್ರಾರ್ಹವಾಗಿರುವುದು. ಶುಭವನ್ನು ಕೋರುವವರು ಭಕ್ತಿಯುಕ್ತ ವಾದ ಮನಸ್ಸಿನಿಂದ ಈ ನದಿಯಲ್ಲಿ ಸ್ನಾನವನ್ನು ಮಾಡಬೇಕು.

೪೭. ಎಲೈ ಪಾರ್ಥನೆ! ಸೂರ್ಯಚಂದ್ರರ ಗ್ರಹಣಕಾಲಗಳಲ್ಲಿ ಸುವರ್ಣ ಮುಖರೀನದಿಯ ದಡದಲ್ಲಿ ಮಾಡಿದ ಸ್ನಾನದಾನಾದಿ ಶುಭಕರ್ಮಗಳು ಅಪರಿ ಮಿತವಾದ ಫಲವನ್ನು ಕೊಡುವುವು.

೪೮. ಸೂರ್ಯಸಂಕ್ರಾಂತಿಗಳಲ್ಲಿಯೂ, ಉತ್ತರಾಯಣ ದಕ್ಷಿಣಾಯನ ದಿನಗಳಲ್ಲಿಯೂ, ಪುಣ್ಯತಿಥಿಗಳಲ್ಲಿಯೂ, ವ್ಯತೀಪಾತ ದಿವಸಗಳಲ್ಲಿಯೂ, ಹರಿ ವಾಸರಗಳಲ್ಲಿಯೂ ಸುವರ್ಣಮುಖರಿಯಲ್ಲಿ ಮಾಡಿದ ಸ್ನಾನವು ಒಂದೊಂದೂ ಕುಲಕೋಟಿಗಳನ್ನುದ್ಧರಿಸುವುದು.

೪೯. ಯಾವ ಮಾನವನಾದರೂ ಜನ್ಮನಕ್ಷತ್ರದ ದಿನದಲ್ಲಾಗಲಿ ಜನ್ಮ ತಿಥಿಯ ದಿವಸದಲ್ಲಾಗಲಿ ಸುವರ್ಣಮುಖರಿಯಲ್ಲಿ ಸಂಕಲ್ಪಪೂರ್ವಕವಾಗಿ ಸ್ನಾನವನ್ನು ಮಾಡಿದರೆ ಅವನು ಸಕಲಕ್ಷೇಮ, ಆರೋಗ್ಯ, ಸೌಖ್ಯ, ಐಶ್ವರ್ಯ ಗಳನ್ನು ಪಡೆಯುವನು.

೫೦. ದುಸ್ಸ್ವಪ್ನಗಳಿಂದಲೂ, ವಿಘ್ನಗಳಿಂದಲೂ, ಭೂತಪ್ರೇತಾದಿಗ ಳಿಂದಲೂ, ಜನನಕಾಲದಲ್ಲಿ ದುಸ್ಸ್ಥಾನಗಳಲ್ಲಿರುವ ಕ್ರೂರ ಗ್ರಹಗಳಿಂದಲೂ ಉಂಟಾಗುವ ಕಿಲ್ಬಿಷಗಳೆಲ್ಲವೂ ಸುವರ್ಣಮುಖರಿಯ ನೀರಿನ ಸ್ನಾನದಿಂದ ಮಾಯವಾಗುವುವು.

೫೧. ಸುವರ್ಣಮುಖರಿಯ ತೀರದಲ್ಲಿ ಗೋಷ್ಪಾದದಷ್ಟು ಭೂಮಿಯನ್ನು ದಾನಮಾಡಿದರೂ ಸಕಲಪೃಥ್ವಿಯನ್ನೂ ದಾನಮಾಡಿದ ಫಲವು ಮನುಷ್ಯನಿಗೆ ಲಭಿಸುವುದು.

ಧೇನುಂ ಸವಸ್ತ್ರಾಲಂಕಾರಾಂ ಸುವರ್ಣಮುಖರೀತಟೇ ।
ದತ್ವಾ ವಿಪ್ರಾಯ ವಿಧಿವದ್ಯಾತಿ ಬ್ರಹ್ಮ ಸನಾತನಂ ॥ ೫೨ ॥
ಪುಣ್ಯಕಾಲೇಷು ದಾನಾದಿ ವಿಧೇಯಾನ್ಯಖಿಲಾನ್ಯಪಿ ।
ಇಹಾಮುತ್ರ ಫಲಪ್ರಾಪ್ತ್ಯೈ ಸುವರ್ಣಮುಖರೀತಟೇ ॥ ೫೩ ॥
ಜಪೋ ಹೋಮಸ್ತಪೋ ದಾನಂ ಪಿತೃಕರ್ಮ ಸುರಾರ್ಚನಂ ।
ಕೃತಂ ಭವೇಚ್ಛತಗುಣಂ ಸುವರ್ಣಮುಖರೀತಟೇ ॥ ೫೪ ॥
ಅನ್ಯತ್ತೇ ಕಥಯಿಷ್ಯಾಮಿ ವಿಧೇಯಂ ವ್ರತಮುತ್ತಮಂ ।
ಸುವರ್ಣಮುಖರೀತೀರೇ ಪ್ರತಿವರ್ಷಂ ಸುಖಾರ್ಥಿಭಿಃ ॥ ೫೫ ॥
ಮೇಘಕಾಲೇ ರವಿಕರೈಸ್ತಿರೋಧಾನಮುಪಾಗತಃ ।
ಯದೋದೇತಿ ಮುನಿಃ ಶ್ರೀಮಾನ್ಮಿತ್ರಾವರುಣನಂದನಃ ॥ ೫೬ ॥
ತಸ್ಮಿನ್ದಿನೇ ಯೇ ನಿಯತಾಃ ಸ್ನಾನಮಸ್ಯಾಂ ಪ್ರಕುರ್ವತೇ ।
ತೈಃ ಕಲ್ಪಂ ಚ ಸುರಾವಾಸೇ ಸ್ಥೀಯತೇ ಕುರುನಂದನ ॥ ೫೭ ॥
ತದಾಗಸ್ತ್ಯಸ್ಯ ಯದ್ರೂಪಂ ಸುವರ್ಣೇನ ವಿನಿರ್ಮಿತಂ ।
ವಿಧಿನಾ ದದತೇ ಪಾರ್ಥ ತೇ ಯಾಂತಿ ಬ್ರಹ್ಮ ಶಾಶ್ವತಂ ॥ ೫೮ ॥

---

೫೨. ವಸ್ತ್ರಗಳಿಂದಲೂ ಕನಕಶೃಂಗಾದಿ ಅಲಂಕಾರಗಳಿಂದಲೂ ಕೂಡಿದ ಆಕಳನ್ನು ಸುವರ್ಣಮುಖರಿಯ ದಡದಲ್ಲಿ ಬ್ರಾಹ್ಮಣೋತ್ತಮನಿಗೆ ದಾನ ಮಾಡಲು ಶಾಶ್ವತವಾದ ಬ್ರಹ್ಮಲೋಕವು ಲಭಿಸುವುದು.

೫೩. ಇಹಲೋಕದಲ್ಲಿ ಸೌಖ್ಯಗಳನ್ನೂ ಪರದಲ್ಲಿ ಶಾಶ್ವತ ಫಲವನ್ನೂ ಪಡೆಯಲು ಸುವರ್ಣಮುಖರಿಯ ದಡದಲ್ಲಿ ಸಕಲ ದಾನಗಳೂ ಪುಣ್ಯಕಾಲಗಳಲ್ಲಿ ಕರ್ತವ್ಯಗಳಾಗಿ ಹೇಳಲ್ಪಟ್ಟಿರುವುವು.

೫೪. ಈ ಸುವರ್ಣಮುಖರಿಯ ದಡದಲ್ಲಿ ಮಾಡಿದ ಜಪ, ಹೋಮ, ತಪಸ್ಸು, ದಾನ, ಪಿತೃಶ್ರಾದ್ಧ, ದೇವಪೂಜೆ ಮುಂತಾದ ಶುಭಕರ್ಮಗಳು ಇತರ ಕಡೆಗಳಲ್ಲಿ ಕೊಡುವುದರ ನೂರು ಪಾಲಿನಷ್ಟು ಪುಣ್ಯಫಲವನ್ನು ಕೊಡುವುವು.

೫೫. ಸುವರ್ಣಮುಖರಿಯ ತೀರಪ್ರದೇಶದಲ್ಲಿ ಸುಖವನ್ನು ಬಯಸುವವರು ಪ್ರತಿ ವರ್ಷದಲ್ಲಿಯೂ ಮಾಡಬೇಕಾದ ಉತ್ತಮ ವ್ರತವೊಂದನ್ನು ನಿನಗೆ ವಿಸ್ತರಿಸುವೆನು.

೫೬–೫೮. ವರ್ಷರ್ತುವಿನಲ್ಲಿ ಸೂರ್ಯನ ಕಿರಣಗಳಿಂದ ಕಣ್ಮರೆಯನ್ನು ಹೊಂದಿದುದಾಗಿ ಮಿತ್ರಾವರುಣರ ಮಗನಾದ ಅಗಸ್ತ್ಯನ ಹೆಸರಿನ ನಕ್ಷತ್ರವು ಉದಯಿಸುವ ದಿನದಲ್ಲಿ ನಿಯಮದಿಂದ ಈ ನದಿಯಲ್ಲಿ ಯಾವ ಮಾನವರು ಸ್ನಾನವನ್ನು ಮಾಡುವರೊ, ಅವರು ಕಲ್ಪಾಂತದವರೆಗೂ ಸ್ವರ್ಗಲೋಕದಲ್ಲಿ ಸುಖದಿಂದ ವಾಸಮಾಡುವರು. ಆ ಸಮಯದಲ್ಲಿ ಅಗಸ್ತ್ಯಮಹಾಮುನಿಯ

ಅರ್ಜುನ ಉವಾಚ :—

ವಿಧಿನಾ ಕೇನ ಕರ್ತವ್ಯಂ ವ್ರತಮೇತನ್ಮಹಾಮುನೇ ।
ತನ್ಮಮಾಚಕ್ಷ್ವ ಸಕಲಂ ಜಿಜ್ಞಾಸೋಸ್ತು ಮಹಾತ್ಮನಃ ॥ ೫೯ ॥

ಭರದ್ವಾಜ ಉವಾಚ :—

ಅಗಸ್ತ್ಯಸ್ಯೋದಯದಿನಂ ಜ್ಞಾತ್ವಾ ನಿಯತಮಾನಸಃ ।
ಸ್ವಶಕ್ತ್ಯಾ ಕಾರಯೇದ್ರೂಪಂ ತಸ್ಯ ಹೇಮ್ನಾ ಮಹಾಮುನೇಃ ॥ ೬೦ ॥
ಸುವರ್ಣಭಾಸ್ವರಚ್ಛಾಯಂ ಜಟಾಬಂಧಮನೋಹರಂ ।
ದಧಾನಂ ಕರಪದ್ಮಾಭ್ಯಾಮಕ್ಷಮಾಲಾಂ ಕಮಂಡಲುಂ ॥ ೬೧ ॥
ವಸಾನಂ ಮೃದುಲಂ ವಲ್ಕಂ ಮೃಗಚರ್ಮೋತ್ತರೀಯಕಂ ।
ಸೌಮ್ಯಂ ಭಸ್ಮಾಂಕರುಚಿರಂ ರುದ್ರಾಕ್ಷಕೃತಭೂಷಣಂ ॥ ೬೨ ॥
ಏವಂ ವಿಧಾಯ ತದ್ರೂಪಂ ಸ್ನಾತ್ವಾ ನಿಯತಮಾನಸಃ ।
ಆಚಾರ್ಯಂ ಗಂಧಪುಷ್ಪಾದ್ಯೈರಲಂಕೃತ್ಯ ಯಥಾವಿಧಿ ॥ ೬೩ ॥
ಶಾಲೇಯತಂಡುಲಾನಾಂ ತಾಮಾಢಕಸ್ಯೋಪರಿ ಸ್ಥಿತಾಂ ।
ವಸ್ತ್ರದ್ವಯಸಮಾಯುಕ್ತಾಂ ಪ್ರತಿಮಾಂ ಪ್ರತಿಪೂಜಯೇತ್ ॥ ೬೪ ॥

---

ಪ್ರತಿಮೆಯನ್ನು ಚಿನ್ನದಲ್ಲಿ ಮಾಡಿಸಿ ವಿಧಿಪೂರ್ವಕವಾಗಿ ದಾನಮಾಡುವವರು ಶಾಶ್ವತವಾದ ಬ್ರಹ್ಮಪದವಿಯನ್ನು ಹೊಂದುವರು.

೫೯. ಎಲೈ ಮಹರ್ಷಿಯೆ! ಮಹಾತ್ಮನಾದ ಅಗಸ್ತ್ಯನಿಗೆ ಸಂಬಂಧಿಸಿದ ಈ ವ್ರತವನ್ನು ಯಾವ ವಿಧಾನದಿಂದ ಆಚರಿಸಬೇಕು? ಅದನ್ನೆಲ್ಲ ತಿಳಿಯಲಪೇಕ್ಷಿಸುತ್ತಿರುವ ನನಗೆ ಹೇಳುವವನಾಗು.

೬೦. ಭರದ್ವಾಜನು ಹೇಳುತ್ತಾನೆ:—ಅಗಸ್ತ್ಯನಕ್ಷತ್ರವು ಉದಯಿಸುವ ದಿವಸವನ್ನು ತಿಳಿದುಕೊಂಡು ನಿಷ್ಠೆಯಿಂದ ಮನೋನಿಗ್ರಹವನ್ನು ಮಾಡಿ, ತನ್ನ ಶಕ್ತಿಗೆ ತಕ್ಕಂತೆ ಮಹಾಮುನಿಯಾದ ಅಗಸ್ತ್ಯನ ಪ್ರತಿಮೆಯನ್ನು ಮಾಡಿಸಬೇಕು.

೬೧. ಆ ಪ್ರತಿಮೆಯು ಚಿನ್ನದ ಮಿರುಗುವ ಬಣ್ಣದಿಂದ ಕೂಡಿ, ತಲೆಯಲ್ಲಿ ಕಟ್ಟಿದ ಜಡೆಗಳಿಂದ ಮನೋಹರವಾಗಿ, ಕರಕಮಲಗಳಲ್ಲಿ ಜಪಮಾಲೆಯನ್ನೂ ಕಮಂಡಲುವನ್ನೂ ಧರಿಸುವಂತೆ ಮಾಡಿಸಬೇಕು.

೬೨. ಮೃದುವಾದ ನಾರುಡೆಯನ್ನುಡಿಸಿ ಜಿಂಕೆಯ ಚರ್ಮದ ಉತ್ತರೀಯದಿಂದಲೂ, ಭಸ್ಮಧಾರಣದಿಂದಲೂ, ರುದ್ರಾಕ್ಷಿಗಳ ಅಲಂಕಾರಗಳಿಂದಲೂ ಕೂಡಿದುದಾಗಿ ಆ ಮೂರ್ತಿಯು ಪ್ರಸನ್ನಮುಖವುಳ್ಳದಾಗಿರಬೇಕು.

೬೩–೬೪. ಇಂತಹ ಸುವರ್ಣವಿಗ್ರಹವೊಂದನ್ನು ನಿರ್ಮಿಸಿ ಸ್ನಾನವನ್ನು ಮಾಡಿ ಮನಸ್ಸನ್ನು ಏಕಾಗ್ರಗೊಳಿಸಿ ಆಚಾರ್ಯಸ್ಥಾನದಲ್ಲಿ ಒಬ್ಬ ಬ್ರಾಹ್ಮಣೋತ್ತಮನನ್ನು ಕುಳ್ಳಿರಿಸಿ ಗಂಧಪುಷ್ಪ ಮೊದಲಾದುಗಳಿಂದ ಅವನನ್ನು ಸತ್ಕರಿಸಿ

ವಿಂಧ್ಯಸಂಸ್ತಂಭನೋ ವಾರ್ಧಿಚುಲಕೀಕೃತಪೇಶಲಃ ।
ಬ್ರಹ್ಮಾದಿಸರ್ವದೇವಾನಾಂ ತೇಜಸಾ ಸುಪ್ರಕಾಶಿತಃ ॥ ೬೫ ॥
ಅಗಸ್ತ್ಯಃ ಕುಂಭಸಂಭೂತೋ ದೇವಾಸುರನಮಸ್ಕೃತಃ ।
ಪ್ರೀತಿಮಾಪ್ನೋತು ಮಹತೀಂ ದಾನೇನಾನೇನ ಮೇ ಪ್ರಭುಃ ॥ ೬೬ ॥
ಇಮಂ ಮಂತ್ರಂ ಸಮುಚ್ಚಾರ್ಯ ಧಾರಾಪೂರ್ವಂ ಸದಕ್ಷಿಣಂ ।
ದತ್ವಾ ವಿಮುಕ್ತಃ ಪಾಪೇಭ್ಯೋ ಯಾತಿ ಬ್ರಹ್ಮ ಸನಾತನಂ ॥ ೬೭ ॥
ಜನ್ಮಾಂತರಕೃತೈರ್ನಾನಮಿಹ ಜನ್ಮಕೃತೈರಪಿ ।
ಮಹಾಪಾಪೋಪಪಾಪೌಘೈರ್ಮುಚ್ಯತೇ ನಾತ್ರ ಸಂಶಯಃ ॥ ೬೮ ॥
ಬ್ರಹ್ಮಾದ್ಯಾಃ ಸಕಲಾ ದೇವಾಃ ಸನಕಾದ್ಯಾ ಮಹರ್ಷಯಃ ।
ಚರಾಚರಾಣಿ ಭೂತಾನಿ ಪ್ರೀತಿಂ ಯಾಂತಿ ನ ಸಂಶಯಃ ॥ ೬೯ ॥
ಕೃತ್ವಾ ವ್ರತಮಿದಂ ಪುಣ್ಯಮಗಸ್ತ್ಯಸ್ಯ ಚ ಸನ್ಮುನೇಃ ।
ಪ್ರೀತ್ಯರ್ಥಂ ಭೋಜಯೇದ್ವಿಪ್ರಾನ್ಯಥಾಶಕ್ತಿ ಸದಕ್ಷಿಣಂ ॥ ೭೦ ॥

---

ವಿಧ್ಯುಕ್ತರೀತಿಯಿಂದ ಪೂಜಿಸಿದ ಬಳಿಕ ಆಢಕ (೩೨ ಸೇರು) ಪ್ರಮಾಣದ ಶಾಲಿ ತಂಡುಲದ ರಾಶಿಯಮೇಲೆ ಆ ಪ್ರತಿಮೆಯನ್ನಿರಿಸಿ ಅದಕ್ಕೆ ಎರಡು ವಸ್ತ್ರಗಳನ್ನು ಹೊದಿಸಿ ಪೂಜೆಯನ್ನಾಚರಿಸಬೇಕು.

೬೫–೬೭. "ವಿಂಧ್ಯ ಪರ್ವತವನ್ನು ಸ್ತಂಭನಗೊಳಿಸಿದವನೂ, ಸಮುದ್ರವನ್ನು ಏಕಾಪೋಶನ ಮಾಡಿದ ಮಹಾತ್ಮನೂ, ಬ್ರಹ್ಮನೇ ಮೊದಲಾದ ಸಕಲ ದೇವತೆಗಳ ತೇಜಸ್ಸಿನಿಂದ ಪ್ರಕಾಶಿಸುತ್ತಿರುವವನೂ, ಕುಂಭದಲ್ಲಿ ಜನಿಸಿದವನೂ, ದೇವದಾನವರಿಂದ ನಮಸ್ಕರಿಸಲ್ಪಟ್ಟವನೂ, ಲೋಕನಾಯಕನೂ ಆದ ಅಗಸ್ತ್ಯ ಮುನಿಯು ನನ್ನ ಈ ಪ್ರತಿಮಾದಾನದಿಂದ ಮಹತ್ತರವಾದ ಸಂತೋಷವನ್ನು ಹೊಂದಲಿ." ಎಂಬೀ ಮಂತ್ರವನ್ನುಚ್ಚರಿಸಿ ಧಾರೆಯನ್ನೆರೆದು ದಕ್ಷಿಣೆಯೊಡನೆ ಪ್ರತಿಮೆಯನ್ನು ದಾನಮಾಡಲು ಮಾನವನು ಸಕಲ ಪಾಪಗಳಿಂದಲೂ ಮುಕ್ತನಾಗಿ ಅನಾದ್ಯಂತವಾದ ಬ್ರಹ್ಮಪದವಿಯನ್ನು ಹೊಂದುವನು.

೬೮. ಪೂರ್ವದ ಜನ್ಮಾಂತರಗಳಲ್ಲಿಯೂ ನಡೆಯುತ್ತಿರುವ ಜನ್ಮದಲ್ಲಿಯೂ ಮಾಡಿರುವ ಮಹಾಪಾಪಗಳೂ, ಉಪಪಾತಕಗಳೂ ಎಲ್ಲವೂ ನಾಶವಾಗುವುದರಲ್ಲಿ ಸಂದೇಹವಿಲ್ಲ.

೬೯–೭೦. ಬ್ರಹ್ಮಾದಿ ಸಕಲ ದೇವತೆಗಳೂ ಸನಕಾದಿ ಸರ್ವಮಹರ್ಷಿಗಳೂ, ಸಪ್ತಲೋಕಗಳ ಚರಾಚರಭೂತಗಳೂ ತೃಪ್ತಿಯನ್ನು ಹೊಂದುವುದರಲ್ಲಿ ಸಂಶಯವಿಲ್ಲ. ಮಹಾಮುನಿಯಾದ ಅಗಸ್ತ್ಯನ ಹೆಸರಿನಲ್ಲಿ ಈ ವ್ರತವನ್ನು ಆಚರಿಸಿದವನು ಬಳಿಕ ಆತನ ಒಲುಮೆಯನ್ನು ಪಡೆಯಲು ಶಕ್ತ್ಯನುಸಾರವಾಗಿ ಬ್ರಾಹ್ಮಣರಿಗೆ ದಕ್ಷಿಣೆಯೊಡನೆ ಭೋಜನವನ್ನು ಮಾಡಿಸಬೇಕು.

ತಸ್ಮಿನ್ಕರ್ಮಣಿ ಚಾಶಕ್ತೋ ಯಥಾಶಕ್ತಿ ಮಹೀಸುರಾನ್ ।
ಸ್ವರ್ಣಧಾನ್ಯಾದಿದಾನೇನ ತೋಷಯೇದ್ಭಕ್ತಿಸಂಯುತಃ ॥ ೭೧ ॥
ತಿಥಿಂ ನ ವಿತಥೀಕುರ್ಯಾತ್ತಾಂ ಯತ್ನೇನ ಸಮಾಚರೇತ್ ।
ಯತ್ಕಿಂಚಿದಪಿ ಚಾವಶ್ಯಂ ಕರ್ಮ ಕುರ್ಯಾಚ್ಚ ಪೂರುಷಃ ॥ ೭೨ ॥
ಮಹಾಮುನೇರಗಸ್ತ್ಯಸ್ಯ ಪರಿಪಕ್ವಂ ತಪಃಫಲಃ ।
ನದೀ ಸುವರ್ಣಮುಖರೀ ಕೀರ್ತನೀಯಾ ಸುರಾಸುರೈಃ ॥ ೭೩ ॥
ಏವಂ ತೇ ಕಥಿತಃ ಸಮ್ಯಙ್ಮಹಾನದ್ಯಾಃ ಸಮುದ್ಭವಃ ।
ಪ್ರಭಾವಶ್ಚ ತದಾಚಕ್ಷ್ವ ಯದ್ಭೂಯಃ ಶ್ರೋತುಮಿಚ್ಛಸಿ ॥ ೭೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ "ಸುವರ್ಣಮುಖರೀಪ್ರಭಾವಪ್ರಶಂಸಾವರ್ಣನಂ" ನಾಮ ತ್ರಯಸ್ತ್ರಿಂಶೋಽಧ್ಯಾಯಃ

---

೭೧. ಈ ಕರ್ಮವನ್ನು ಸಮಗ್ರವಾಗಿ ನೆರವೇರಿಸಲು ಅಶಕ್ತನಾದವನು ತನಗೆ ಅನುಕೂಲವಿದ್ದಂತೆ ಬ್ರಾಹ್ಮಣರಿಗೆ ಚಿನ್ನ ಮತ್ತು ಧಾನ್ಯಗಳನ್ನಿತ್ತು ಭಕ್ತಿಯಿಂದ ಅವರನ್ನು ಸಂತೋಷಪಡಿಸಬೇಕು.

೭೨. ಆ ಶುಭತಿಥಿಯನ್ನು ವ್ಯರ್ಥಗೊಳಿಸದೆ ಪ್ರಯತ್ನಪೂರ್ವಕವಾಗಿ ಆಚರಿಸಲೇಬೇಕು. ಮನುಷ್ಯನು ಯಾವ ವಿಧವಾದ ಅಲ್ಪಕಾರ್ಯವನ್ನಾದರೂ ಅವಶ್ಯಕವಾಗಿ ಮಾಡಬೇಕು.

೭೩. ಮಹಾಮುನಿಯಾದ ಅಗಸ್ತ್ಯನ ಉಗ್ರತಪಸ್ಸಿನ ಪೂರ್ಣಫಲರೂಪವಾಗಿರುವ ಈ ಸುವರ್ಣಮುಖರೀ ನದಿಯು ಸಕಲ ದೇವದಾನವರ ಸ್ತೋತ್ರಗಳಿಗೂ ಪಾತ್ರವಾಗಿರುವುದು.

೭೪. ಇಂತು ನಿನಗೆ ಈ ಮಹಾನದಿಯು ಉದ್ಭವಿಸಿದ ಕಥೆಯನ್ನೂ ಅದರ ಮಹಾತ್ಮ್ಯೆಯನ್ನೂ ಹೇಳಿರುವೆನು. ಇನ್ನು ಮೇಲೆ ಏನನ್ನು ಕೇಳಲಿಚ್ಛಿಸುವೆ ಎಂಬುದನ್ನು ಹೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೇಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ಸುವರ್ಣಮುಖರೀಪ್ರಭಾವಪ್ರಶಂಸಾವರ್ಣನ"ವೆಂಬ ಮುವ್ವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಸ್ತ್ರಿಂಶೋಽಧ್ಯಾಯಃ

### ಅಗಸ್ತ್ಯತೀರ್ಥಾದಿ ವಿವಿಧತೀರ್ಥಮಾಹಾತ್ಮ್ಯವರ್ಣನಂ

ಅರ್ಜುನ ಉವಾಚ :—

ಶ್ರೋತ್ರಾಂಜಲಿಭ್ಯಾಂ ಪೀತ್ವಾಪಿ ಭವದ್ವಾಕ್ಯಾಮೃತಂ ಮುಹುಃ ।
ಮನೋ ನೋಪೈತಿ ಮೇ ತೃಪ್ತಿಂ ಭೂಯಃ ಶ್ರವಣಕಾಂಕ್ಷಯಾ ॥ ೧ ॥
ಕ್ರಿಯಾಸಮಭಿಹಾರೋ ಮೇ ತ್ವದ್ವಾಕ್ಯಾಕರ್ಣನೈಷಿಣಃ ।
ಮನಃ ಖೇದಾಯ ಮಾಭೂತ್ತೇ ಕರುಣಾಭರಿತಾತ್ಮನಃ ॥ ೨ ॥
ಇದಾನೀಂ ಶ್ರೋತುಮಿಚ್ಛಾಮಿ ನದ್ಯಾಮಸ್ಯಾಂ ಮಹಾಮುನೇ ।
ಕುತ್ರ ಕುತ್ರ ಸಮರ್ಥಾನಿ ತೀರ್ಥಾನ್ಯಘನಿಬರ್ಹಣೇ ॥ ೩ ॥
ಕಾಃ ಕಾಃ ಪುಣ್ಯತರಂಗಿಣ್ಯಃ ಸಂಗತಾ ಅನಯಾ ಮುನೇ ।
ಕುತ್ರ ಸ್ನಾನೇನ ಕೃತಾಘಾ ನೋಪಯಾಂತಿ ಯಮಾದ್ಭಯಂ ॥ ೪ ॥
ಹರಾಚ್ಯುತಾದಿದೇವಾನಾಂ ಪುಣ್ಯಾನ್ಯಾಯತನಾನಿ ಚ ।
ಯಾನಿ ಯಾನಿ ಚ ಪುಣ್ಯಾನಿ ತಿಷ್ಠಂತ್ಯಸ್ಯಾಸ್ತಟದ್ವಯೇ ॥ ೫ ॥

---

## ಕನ್ನಡದ ಅನುವಾದ

### ಅಗಸ್ತ್ಯತೀರ್ಥಾದಿ ವಿವಿಧತೀರ್ಥಮಾಹಾತ್ಮ್ಯವರ್ಣನ

೧. ಅರ್ಜುನನು ಹೇಳುತ್ತಾನೆ:—ನಿನ್ನ ವಾಕ್ಯಾಮೃತವನ್ನು ಕಿವಿಗಳಿಂದ ಪಾನಮಾಡುತ್ತಿದ್ದರೂ, ಮತ್ತೆ ಮತ್ತೆ ಕೇಳಬೇಕೆಂಬ ಕುತೂಹಲದಿಂದ ನನ್ನ ಮನಸ್ಸು ತೃಪ್ತಿಯನ್ನು ಹೊಂದುತ್ತಿಲ್ಲ.

೨. ಆದುದರಿಂದ ಪ್ರಶ್ನರೂಪವಾದ ಈ ನನ್ನ ವ್ಯಾಪಾರವು ನಿನ್ನ ವಾಕ್ಯಗಳನ್ನೇ ಕೇಳಲಿಚ್ಛಿಸುವ ನನ್ನಿಂದ ಹೊರಟುದಾಗಿ ಕರುಣಾರಸಪೂರಿತಾಂತರಂಗನಾದ ನಿನ್ನ ಮನಸ್ಸಿಗೆ ದುಃಖವನ್ನುಂಟುಮಾಡದಿರಲಿ.

೩–೪. ಎಲೈ ಮಹಾಮುನಿಯೆ! ಈಗ ಈ ನದಿಯ ತೀರದಲ್ಲಿ ಯಾವ ಯಾವ ಪಾಪನಾಶಕಗಳಾದ ತೀರ್ಥಗಳು ಎಲ್ಲಿ ನೆಲಸಿರುವುವೆಂಬುದನ್ನು ಕೇಳಲಿಚ್ಛಿಸುವೆನು. ಯಾವ ಯಾವ ಪುಣ್ಯನದಿಗಳು ಈ ನದಿಯೊಡನೆ ಸೇರುವುವು? ಯಾವ ತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಪಾಪಗಳನ್ನು ಮಾಡಿದವರು ಯಮಭಯವನ್ನೂ ಕೂಡ ಹೊಂದದಿರುವರು?

೫. ವೇದವೇದಾಂಗಪಾರಂಗತನೆ! ಶಿವನಾರಾಯಣಾದಿ ದೇವತೆಗಳ ಯಾವ ಯಾವ ಪುಣ್ಯನಿವಾಸಗಳು ಈ ಸುವರ್ಣಮುಖರಿಯ ಎರಡು ತೀರಗಳಲ್ಲಿರುವುವು?

ತೇಷು ಕ್ಷೇತ್ರೇಷು ಮನುಜೈರ್ಯತ್ಫಲಂ ಸಮವಾಪ್ಯತೇ ।
ವಿಹಿತೈರ್ವಿಧಿವತ್ಸ್ನಾನದಾನಾದಿ ಶುಭಕರ್ಮಭಿಃ ॥ ೬ ॥
ಸೋಪಾಖ್ಯಾನಮಿದಂ ಸರ್ವಂ ವೇದಿತುಂ ವೇದವಿತ್ತಮ ।
ಸಂಜಾತಾ ಮಹತೀ ಪ್ರೀತಿರ್ವಿಸ್ತಾರ್ಯಾಚಕ್ಷ್ವ ಮೇಕ್ರಮಾತ್ ॥ ೭ ॥

ಭರದ್ವಾಜ ಉವಾಚ:—

ಯತ್ಪೃಷ್ಟಂ ಭವತಾ ಪಾರ್ಥ ಕ್ರಮಾದ್ವಿಸ್ತಾರ್ಯ ಕಥ್ಯತೇ ।
ಆರಭ್ಯಾಗಸ್ತ್ಯತೀರ್ಥೇಂದ್ರಾದಸ್ಯಾಸ್ತೀರ್ಥೌಘವೈಭವಂ ॥ ೮ ॥
ಅಖಂಡಜ್ಞಾನರೂಪೇಣ ಸರ್ವಲೋಕಹಿತೈಷಿಣಾ ।
ಸುರಾಸುರಾಣಾಂ ಸಂಭಾವ್ಯೇನಾಗಸ್ತ್ಯೇನ ಮಹಾತ್ಮನಾ ॥ ೯ ॥
ವಸುಧಾಮವತೀರ್ಣಾಯಾಂ ಪ್ರಥಮಂ ತದ್ಧರಾಧರಾತ್ ।
ಸ್ನಾತ್ವಾ ಯತ್ರ ಮಹಾನದ್ಯಾಂ ಸಂಪ್ರಾಪ್ನೋತಿ ಕೃತಾರ್ಥತಾಂ ॥ ೧೦ ॥
ಅಗಸ್ತ್ಯತೀರ್ಥಮಿತ್ಯುಕ್ತಂ ಪಾವನಂ ತಜ್ಜಗತ್ತ್ರಯೇ ।
ತತ್ರ ಸ್ನಾನೇನ ಶುದ್ಧಿಃ ಸ್ಯಾನ್ಮಹಾಪಾತಕಿನಾಮಪಿ ॥ ೧೧ ॥

---

೬. ಆ ಕ್ಷೇತ್ರಗಳಲ್ಲಿ ವಿಧ್ಯುಕ್ತವಿಧಾನದಿಂದ ಮಾಡಿದ ಸ್ನಾನ ದಾನಗಳೇ ಮೊದಲಾದ ಶುಭಕರ್ಮಗಳಿಂದ ಮನುಜರು ಯಾವ ಯಾವ ಪುಣ್ಯಫಲಗಳನ್ನು ಹೊಂದುವರು ?

೭. ಈ ವಿಷಯವನ್ನೆಲ್ಲ ಇತಿಹಾಸಸಮನ್ವಿತವಾಗಿ ತಿಳಿಯಲು ನನಗೆ ಅತ್ಯಂತ ಕುತೂಹಲವುಂಟಾಗಿರುವುದು. ಆದುದರಿಂದ ಕ್ರಮವಾಗಿ ನನಗೆ ವಿಸ್ತರಿಸಿ ತಿಳಿಸುವವನಾಗು.

೮. ಭರದ್ವಾಜನು ಹೇಳುತ್ತಾನೆ:—ಎಲೈ ಅರ್ಜುನನೆ! ಅಗಸ್ತ್ಯ ತೀರ್ಥವನ್ನು ಮೊದಲುಗೊಂಡು ಈ ನದಿಯ ಎರಡು ಕಡೆಗಳಲ್ಲಿರುವ ತೀರ್ಥಸಮೂಹದ ವೈಭವವನ್ನು ವಿಸ್ತಾರವಾಗಿ ತಿಳಿಸುವೆನು, ಕೇಳು.

೯–೧೦. ಅಖಂಡವಾದ ಜ್ಞಾನವುಳ್ಳವನೂ, ಲೋಕಹಿತಾಕಾಂಕ್ಷಿಯೂ, ಸಕಲ ದೇವದಾನವಸಮೂಹಗಳಿಂದ ನಮಸ್ಕೃತನೂ ಮಹಾತ್ಮನೂ ಆದ ಅಗಸ್ತ್ಯಮುನಿಯಿಂದ ಭೂಲೋಕಕ್ಕೆ ತರಲ್ಪಟ್ಟು ಪರ್ವತದಿಂದಿಳಿಯುವ ಸುವರ್ಣಮುಖರಿಯಲ್ಲಿ ಮೊದಲಿನಲ್ಲಿಯೇ ಸ್ನಾನವನ್ನು ಮಾಡುವುದರಿಂದ ಮನುಷ್ಯರು ಕೃತಕೃತ್ಯತೆಯನ್ನು ಪಡೆಯುವರು.

೧೧. ಮೂರು ಲೋಕಗಳಲ್ಲಿಯೂ ಪವಿತ್ರತಮವಾದ ಅಗಸ್ತ್ಯ ತೀರ್ಥವು ಅಲ್ಲಿಯೇ ನೆಲಸಿರುವುದು. ಅಲ್ಲಿ ಸ್ನಾನವನ್ನು ಮಾಡುವುದರಿಂದ ಮಹಾಪಾತಕಗಳನ್ನು ಮಾಡಿದವರಿಗೂ ಕೂಡ ವಿಶುದ್ಧಿಯುಂಟಾಗುವುದು.

ಅನೇಕಜನ್ಮಾರ್ಜಿತಮಹಾಪಾತಕಸಂಹತಿಂ ।
ನಿರಸ್ಯ ದಿವಿ ಮೋದಂತೇ ತತ್ರ ಸ್ನಾನರತಾ ನರಾಃ ॥ ೧೨ ॥
ಯೇ ತತ್ರ ತೀರ್ಥೇ ಯತಯಃ ಕೃತಸ್ನಾನಾ ಯತೇಂದ್ರಿಯಾಃ ।
ಗೋಭೂತಿಲ ಹಿರಣ್ಯಾದಿ ಮಹಾದಾನಾನಿಕುರ್ವತೇ ॥ ೧೩ ॥
ತೇ ಪ್ರಾಪ್ನುವಂತಿ ಸಂಪೂರ್ಣಂ ಗಂಗಾದ್ವಾರೇ ಸಮಾಹಿತೈಃ ।
ವಿಹಿತಾನಾಂ ಶತಗುಣಂ ದಾನಾನಾಂ ಫಲಮರ್ಜುನ ॥ ೧೪ ॥
ಅತ್ರಾಸ್ತಿ ಭಗವಾನೀಶಃ ಖ್ಯಾತೋಽಗಸ್ತ್ಯೇಶಸಂಜ್ಞಯಾ ।
ಸ್ಥಾಪಿತೋಽಗಸ್ತ್ಯಮುನಿನಾ ಲೋಕಾನಂದವಿಧಾಯಿನಾ ॥ ೧೫ ॥
ಸ್ನಾತ್ವಾ ತಸ್ಯಾಂ ಮಹಾನದ್ಯಾಂ ತಲ್ಲಿಂಗಂ ಪೂಜಯಂತಿ ಯೇ ।
ದಶಾನಾಮಶ್ವಮೇಧಾನಾಂ ಫಲಂ ಸಂಪ್ರಾಪ್ನುವಂತಿ ತೇ ॥ ೧೬ ॥
ಧನೂರಾಶಿಂ ಪರಿತ್ಯಜ್ಯ ಯದಾ ಮಕರಮಂಶುಮಾನ್ ।
ವಿಶೇತ್ತದಯನಂ ಪುಣ್ಯಮುತ್ತರಂ ಪರಿಕೀರ್ತಿತಂ ॥ ೧೭ ॥
ತಸ್ಮಿನ್ದಿನೇ ಯೇ ನಿಯತಾ ನದ್ಯಾಂ ಸ್ನಾತ್ವಾ ಸಮಾಹಿತಾಂ ।
ಪಶ್ಯಂತಿ ಪಾರ್ವತೀನಾಥಮಗಸ್ತ್ಯೇಶಂ ಸುರಾರ್ಚಿತಂ ॥ ೧೮ ॥

---

೧೨. ಅಲ್ಲಿಯೇ ನಿತ್ಯವೂ ಸ್ನಾನಮಾಡುವುದರಲ್ಲಿ ಆಸಕ್ತರಾದ ಜನರು ಪೂರ್ವಜನ್ಮಗಳಲ್ಲಿ ಸಂಗ್ರಹಿಸಿದ ಅನೇಕ ಮಹಾಪಾತಕಗಳನ್ನೆಲ್ಲ ನಿಶ್ಶೇಷವಾಗಿ ಕಳೆದುಕೊಂಡು ಸ್ವರ್ಗದಲ್ಲಿ ಸುಖಪಡುವರು.

೧೩–೧೪. ಯಾವ ಯತಿಗಳು ಜಿತೇಂದ್ರಿಯರಾಗಿ ಆ ತೀರ್ಥದಲ್ಲಿ ಸ್ನಾನ ಮಾಡಿ ಗೋಭೂಮಿತಿಲಸ್ವರ್ಣಾದಿ ಮಹಾದಾನಗಳನ್ನು ಕೊಡುವರೊ, ಅವರು ಗಂಗಾದ್ವಾರದಲ್ಲಿ ಸಮಾಹಿತಮನಸ್ಕರಾಗಿ ಆ ದಾನಗಳನ್ನೇ ಮಾಡಿದುದರ ನೂರರಷ್ಟು ಪುಣ್ಯವನ್ನು ಹೊಂದುವರು.

೧೫. ಲೋಕಕ್ಕೆ ಸಂತೋಷವನ್ನುಂಟುಮಾಡುವವನಾದ ಅಗಸ್ತ್ಯಮುನಿಯಿಂದ ಸ್ಥಾಪಿತವಾದ ಮಾಹೇಶ್ವರಲಿಂಗವು ಅಗಸ್ತ್ಯೇಶ್ವರನ ಹೆಸರಿನಿಂದಲೇ ಇಲ್ಲಿ ಪ್ರಖ್ಯಾತಿಯನ್ನು ಪಡೆದಿರುವುದು.

೧೬. ಆ ಮಹಾನದಿಯಲ್ಲಿ ಸ್ನಾನವನ್ನು ಮಾಡಿ ಅಗಸ್ತ್ಯೇಶ್ವರ ಲಿಂಗವನ್ನು ಪೂಜಿಸುವ ಮಾನವರು ಹತ್ತು ಅಶ್ವಮೇಧಯಜ್ಞಗಳನ್ನು ಮಾಡಿದ ಫಲವನ್ನು ಪಡೆಯುವರು.

೧೭. ಸೂರ್ಯನು ಧನುಸ್ಸನ್ನು ಬಿಟ್ಟು ಮಕರ ರಾಶಿಯನ್ನು ಪ್ರವೇಶಿಸುವ ಸಮಯವೇ ಉತ್ತರಾಯಣವೆಂಬ ಪುಣ್ಯಕಾಲವೆಂದು ಹೇಳಲ್ಪಟ್ಟಿರುವುದು.

೧೮–೧೯. ಆ ದಿವಸದಲ್ಲಿ ಯಾರು ನಿಯತೇಂದ್ರಿಯರಾಗಿ ಸಮಾಧಿಸ್ಥವಾದ ಮನಸ್ಸಿನಿಂದ ಸುವರ್ಣಮುಖರಿಯಲ್ಲಿ ಸ್ನಾನವನ್ನು ಮಾಡಿ ದೇವಪೂಜಿತ

ಅಗ್ನಿಷ್ಟೋಮಸಹಸ್ರಸ್ಯ ವಾಜಪೇಯಶತಸ್ಯ ಚ ।
ಫಲಂ ಸಂಪ್ರಾಪ್ಯ ಮೋದಂತೇ ದಿವಿ ದೇವಗಣಾರ್ಚಿತಾಃ ॥ ೧೯ ॥
ಮೃಗಸಂಕ್ರಮವೇಳಾಯಾಂ ಪುರುಷೈರ್ಮಂಗಲಾರ್ಥಿಭಿಃ ।
ಅವಶ್ಯಮೇವ ಕರ್ತವ್ಯಮಗಸ್ತ್ಯೇಶಸ್ಯ ದರ್ಶನಂ ॥ ೨೦ ॥
ಐಶಾನ್ಯಾಂ ತಸ್ಯ ತೀರ್ಥಸ್ಯ ದೇಶೇ ಕ್ರೋಶಮಿತೇಽರ್ಜುನ ।
ಅಸ್ತಿ ತೀರ್ಥತ್ರಯಂ ಖ್ಯಾತಂ ದೇವರ್ಷಿಪಿತೃನಾಮಭಿಃ ॥ ೨೧ ॥
ದೇವರ್ಷಿಪಿತರಸ್ತತ್ರ ಮುನಿನಾ ತೇನ ಪೂಜಿತಾಃ ।
ಪ್ರದದುರ್ಹೃಷ್ಟಮನಸಃ ಸರ್ವಾನ್ಸಮಭಿವಾಂಛಿತಾನ್ ॥ ೨೨ ॥
ತದಾ ದೇವರ್ಷಿಪಿತೃಭಿರಿದಂ ತೀರ್ಥತ್ರಯಂ ಕ್ರಮಾತ್ ।
ಅಸ್ಮನ್ನಾಮಭಿರೀಡ್ಯಂ ಸ್ಯಾದಿತ್ಯುಕ್ತಂ ತಸ್ಯ ಸನ್ನಿಧೌ ॥ ೨೩ ॥
ತಸ್ಮಿನ್ಸ್ತೀರ್ಥತ್ರಯೇ ಯೇ ತು ಸ್ನಾತ್ವಾ ವಿಹಿತತರ್ಪಣಾಃ ।
ಋಣತ್ರಯವಿನಿರ್ಮುಕ್ತಾಸ್ತೇ ಯಾಂತಿ ದಿವಮಕ್ಷಯಾಂ ॥ ೨೪ ॥

---

ವಾದ ಅಗಸ್ತ್ಯೇಶ್ವರನೆಂಬ ಮಹೇಶ್ವರನನ್ನು ದರ್ಶನಮಾಡುವರೊ, ಅವರು ಒಂದು ಸಾವಿರ ಅಗ್ನಿಷ್ಟೋಮಗಳ ಮತ್ತು ಒಂದು ನೂರು ವಾಜಪೇಯಗಳ ಫಲವನ್ನು ಪಡೆದು ಸಕಲ ದೇವತೆಗಳಿಂದಲೂ ಪೂಜೆಗೊಳ್ಳುವರಾಗಿ ಸ್ವರ್ಗಲೋಕದಲ್ಲಿ ಸಂತೋಷಪಡುವರು.

೨೦. ಮಾರ್ಗಶಿರ ಮಾಸದ ಸಂಕ್ರಮಣ ಸಮಯದಲ್ಲಿ ಪುರುಷರು ಮಂಗಳಕಾಮರಾಗಿ ಅಗಸ್ತ್ಯೇಶ್ವರನ ದರ್ಶನವನ್ನು ಅವಶ್ಯಕವಾಗಿ ಮಾಡಬೇಕು.

೨೧. ಎಲೈ ಅರ್ಜುನನೆ! ಆ ತೀರ್ಥಕ್ಕೆ ಈಶಾನ್ಯ ದಿಕ್ಕಿನಲ್ಲಿ ಒಂದು ಕ್ರೋಶದ ದೂರದಲ್ಲಿ ದೇವ ತೀರ್ಥ, ಋಷಿ ತೀರ್ಥ ಮತ್ತು ಪಿತೃ ತೀರ್ಥಗಳೆಂಬ ಮೂರು ತೀರ್ಥಗಳಿರುವುವು.

೨೨. ಆ ಅಗಸ್ತ್ಯಮುನಿಯೇ ಅವುಗಳಲ್ಲಿ ದೇವತೆಗಳನ್ನೂ, ಪಿತೃಗಳನ್ನೂ, ಮಹರ್ಷಿಗಳನ್ನೂ ಪೂಜಿಸಿದನು. ಅವರೆಲ್ಲರೂ ಸಂತುಷ್ಟಾಂತರಂಗರಾಗಿ ಆತನಿಗೆ ಸಕಲಾಭೀಷ್ಟಗಳನ್ನೂ ಪೂರ್ಣಗೊಳಿಸಿದರು.

೨೩. ಆಗ ಅವರೆಲ್ಲರೂ ಕೂಡಿ, "ಇಂದಿನಿಂದ ಈ ಮೂರು ತೀರ್ಥಗಳೂ ಕ್ರಮವಾಗಿ ನಮ್ಮ ಹೆಸರುಗಳಿಂದ ಪ್ರಸಿದ್ಧಿಯನ್ನು ಹೊಂದಲಿ" ಎಂಬುದಾಗಿ ಆತನ ಸಮ್ಮುಖದಲ್ಲಿ ಅಪ್ಪಣೆಮಾಡಿದನು.

೨೪. ಆ ಮೂರು ತೀರ್ಥಗಳಲ್ಲಿ ವಿಧಿಸ್ನಾನಗಳನ್ನು ಮಾಡಿ ತರ್ಪಣಗಳನ್ನು ನೆರವೇರಿಸಲು ಮಾನವರು ಈ ಮೂರು (ದೇವ, ಋಷಿ, ಪಿತೃ) ಋಣಗಳಿಂದಲೂ ಮುಕ್ತರಾಗಿ ಶಾಶ್ವತವಾಗಿ ಸ್ವರ್ಗಲೋಕವನ್ನು ಹೊಂದುವರು.

ತತಃ ಪ್ರಾಗುತ್ತರಕ್ಕೋಣ್ಯಾಂ ಯೋಜನದ್ವಯಸೀಮನಿ ।
ಪ್ರಾಪ್ತಾ ಸುವರ್ಣಮುಖರೀಂ ವೇಣಾನಾಮ ಮಹಾನದೀ ॥ ೨೫ ॥
ಸಮುದಗ್ರರಯಾ ಘಾತನಿಪಾತಿತತಟದ್ರುಮಾ ।
ಕುಲ್ಯಾನಿರ್ಗತವಾಃಪೂರಸಮಾಪ್ಲಾವಿತಕಾನನಾ ॥ ೨೬ ॥
ಉತ್ತುಂಗಪುಲಿನೋತ್ಸಂಗಖೇಲತ್ಕೋಕಕುಲಾಕುಲಾ ।
ಅಂಬುಜಾಮೋದಲೋಲಾಲಿಮಾಲಾಲೀಲಾರವಾನ್ವಿತಾ ॥ ೨೭ ॥
ಅತಿಕ್ರಮ್ಯ ಸಮುತ್ತುಂಗಾನನೇಕಾನ್ಧರಣೀಧರಾನ್ ।
ಪ್ರಭೂತತೋಯರುಚಿರಾ ಸುವರ್ಣಮುಖರೀಂ ಗತಾ ॥ ೨೮ ॥
ನದೀದ್ವಯವ್ಯತಿಕರೇ ಕೃತಸ್ನಾನಾ ಯಥಾವಿಧಿ ।
ದಶಾನಾಮಶ್ವಮೇಧಾನಾಮಖಂಡಂ ಪ್ರಾಪ್ನುಯುಃ ಫಲಂ ॥ ೨೯ ॥
ಸಂಗತಾ ವೇಣಯಾ ಪುಣ್ಯಾ ಸುವರ್ಣಮುಖರೀ ನದೀ ।
ಗಿರಿದುರ್ಗಮಮಾರ್ಗೇಣ ಯಯಾವುತ್ತರವಾಹಿನೀ ॥ ೩೦ ॥

---

೨೫. ಆ ಕ್ಷೇತ್ರಕ್ಕೆ ಈಶಾನ್ಯದಲ್ಲಿ ಎರಡು ಯೋಜನಗಳ ದೂರದಲ್ಲಿ ವೇಣಾ ಎಂಬ ಮಹಾನದಿಯು ಸವರ್ಣಮುಖರಿಯೊಡನೆ ಸಂಗಮವಾಗುವುದು.

೨೬. ಆ ನದಿಯು ಅತ್ಯಂತ ರಭಸದಿಂದೋಡುವ ನೀರಿನಿಂದ ತೀರದ ವೃಕ್ಷಗಳನ್ನು ಕೆಡವುತ್ತ ಕಾಲುವೆಗಳಲ್ಲಿ ಹರಿಯುವ ಪ್ರವಾಹಗಳಿಂದ ಅರಣ್ಯ ಪ್ರದೇಶಗಳನ್ನು ಮುಳುಗಿಸುತ್ತಿರುವುದು.

೨೭. ಉನ್ನತಗಳಾದ ಮರಳುದಿಣ್ಣೆಗಳಮೇಲೆ ಆಡುತ್ತಿರುವ ಚಕ್ರವಾಕ ಸಮೂಹಗಳ ನಾದದಿಂದಲೂ, ಕಮಲಗಳ ಸುವಾಸನೆಗೆ ಮೋಹಗೊಂಡ ದುಂಬಿ ವಿಂಡುಗಳ ಝೇಂಕಾರದಿಂದಲೂ ನದಿಯು ರಮ್ಯವಾಗಿದ್ದಿತು.

೨೮. ಬಹಳ ಎತ್ತರವಾಗಿರುವ ಅನೇಕಪರ್ವತಗಳನ್ನು ದಾಟಿಕೊಂಡು ಅವುಗಳ ನೀರುಗಳನ್ನೆಲ್ಲ ಸ್ವೀಕರಿಸಿ ಅಧಿಕವಾದ ಜಲದಿಂದ ಮನೋಹರವಾಗಿ ವೇಣಾ ನದಿಯು ಸುವರ್ಣಮುಖರಿಯೊಡನೆ ಸೇರುವುದು.

೨೯. ಆ ಎರಡು ನದಿಗಳ ಸಂಗಮಸ್ಥಾನದಲ್ಲಿ ಯಥಾವಿಧಿಯಾಗಿ ಸ್ನಾನಗಳನ್ನು ಮಾಡಿದವರು ಹತ್ತು ಅಶ್ವಮೇಧಗಳನ್ನು ಮಾಡಿದ ಅಖಂಡಪುಣ್ಯವನ್ನು ಸಂಪಾದಿಸುವರು.

೩೦. ಇಂತು ಪುಣ್ಯಪ್ರದೆಯಾದ ವೇಣಾನದಿಯೊಡನೆ ಸೇರಿ ಸುವರ್ಣಮುಖರಿಯು ಬೆಟ್ಟಗಳಿಂದ ಕಠಿನವಾದ ಮಾರ್ಗದಲ್ಲಿ ಉತ್ತರದಿಕ್ಕಿಗೆ ಪ್ರವಹಿಸುತ್ತಿರುವುದು.

ಮಧ್ಯಗೇನ ಮಹೀಧ್ರಾಣಾಂ ಮಾರ್ಗೇಣ ವಿಷಮೇಣ ಸಾ ।
ಗತ್ವಾ ವಿರೇಜೇ ತಟಿನೀ ಯೋಜನಾನಾಂ ಚತುಷ್ಟಯಂ ॥ ೩೧ ॥
ಪೂರ್ವತಸ್ತಸ್ಯ ದೇಶಸ್ಯ ವಿಷಯೇ ಸಾರ್ಧಯೋಜನೇ ।
ಉದಕ್ಕೂಲೇ ಮಹಾನದ್ಯಾಃ ಪ್ರಾಗ್ವಾಹಿನ್ಯಾ ಮನೋಹರೇ ॥ ೩೨ ॥
ಅಗಸ್ತ್ಯೇಶ್ವರನಾಮಾಸ್ತೇ ಖ್ಯಾತಂ ಲಿಂಗಂ ಪುರದ್ವಿಷಃ ।
ಸ್ಮರಣಂ ದೇವಮರ್ತ್ಯಾನಾಂ ಸಮಸ್ತಾಘನಿವಾರಣಂ ॥ ೩೩ ॥
ತತ್ರ ಸ್ನಾತ್ವಾ ಮಹಾನದ್ಯಾಂ ಯೇ ನರಾ ನಿಯತೇಂದ್ರಿಯಾಃ ।
ಪಶ್ಯಂತಿ ಪಾರ್ವತೀನಾಥಮಗಸ್ತ್ಯೇನ ಪ್ರತಿಷ್ಠಿತಂ ॥ ೩೪ ॥
ಅನೇಕೈಃ ಪೂರ್ವಜನನೈರಾರ್ಜಿತಂ ಪಾಪಸಂಚಯಂ ।
ತೇ ನಿರಸ್ಯ ಸುರಾವಾಸೇ ಮೋದಂತೇ ಕಾಲಮಕ್ಷಯಂ ॥ ೩೫ ॥
ತತಃ ಸೋದಙ್ಮುಖೀ ಭೂತ್ವಾ ಸುವರ್ಣಮುಖರೀ ಯಯೌ ।
ಯೋಜನಾರ್ಧಮಿದಂ ದೇಶಂ ತೀರ್ಥಸಂಘಸಮನ್ವಿತಾ ॥ ೩೬ ॥
ತಸ್ಮಿನ್ದೇಶೇ ತು ಹಿಂತಾಲತಾಲಸಾಲಮನೋರಮೇ ।
ಗತಾ ಸುವರ್ಣಮುಖರೀಂ ನದೀ ವ್ಯಾಘ್ರಪದಾಹ್ವಯಾ ॥ ೩೭ ॥

---

೩೧. ಅನೇಕ ಪರ್ವತಗಳ ನಡುವೆ ಕಠಿನವಾದ ಮಾರ್ಗದಿಂದ ಹರಿಯುತ್ತ ನಾಲ್ಕು ಯೋಜನಗಳವರೆಗೂ ನದಿಯು ರಂಜಿಸುತ್ತಿರುವುದು.

೩೨-೩೩. ಆ ಪ್ರದೇಶಕ್ಕೆ ಪೂರ್ವದಲ್ಲಿ ಒಂದೂವರೆ ಯೋಜನಗಳ ದೂರದಲ್ಲಿ ಪೂರ್ವಕ್ಕೆ ಪ್ರವಹಿಸುತ್ತಿರುವ ನದಿಯು ಮನೋಹರವಾದ ಉತ್ತರ ತೀರದಲ್ಲಿ ಅಗಸ್ತ್ಯೇಶ್ವರನೆಂಬ ಹೆಸರಿನ ಮಾಹೇಶ್ವರಲಿಂಗವೊಂದು ನೆಲಸಿ ಪ್ರಖ್ಯಾತಿಯನ್ನು ಪಡೆದಿರುವುದು. ದೇವತೆಗಳಿಗೂ, ಮನುಷ್ಯರಿಗೂ ಅದನ್ನು ಸ್ಮರಿಸಿದ ಮಾತ್ರದಿಂದಲೇ ಸಮಸ್ತ ಪಾಪಗಳೂ ದೂರವಾಗುವುವು.

೩೪-೩೫. ಆ ಮಹಾನದಿಯಲ್ಲಿ ಸ್ನಾನವನ್ನು ಮಾಡಿ ಜಿತೇಂದ್ರಿಯರಾದ ಯಾವ ಮನುಷ್ಯರು ಅಗಸ್ತ್ಯಮುನಿಯಿಂದ ಪ್ರತಿಷ್ಠಿಸಲ್ಪಟ್ಟ ಮಹೇಶ್ವರನನ್ನು ನೋಡುವರೊ, ಅವರು ಅನೇಕ ಪೂರ್ವಜನ್ಮಗಳಲ್ಲಿ ಆರ್ಜಿಸಿದ ಪಾಪರಾಶಿಯನ್ನು ಕಳೆದುಕೊಂಡು ಬಹಳಕಾಲದವರೆಗೂ ಸ್ವರ್ಗಲೋಕದಲ್ಲಿ ಸಂತೋಷಪಡುವರು.

೩೬. ಬಳಿಕ ಆ ನದಿಯು ಉತ್ತರವಾಹಿನಿಯಾಗಿ ಹೊರಟು ಅನೇಕ ತೀರ್ಥಗಳನ್ನೊಳಗೊಂಡು ಆ ದೇಶದಲ್ಲಿಯೇ ಅರ್ಧಯೋಜನದವರೆಗೂ ಹರಿದು ಹೋಗುವುದು.

೩೭. ಹಿಂತಾಲ, ತಾಲ, ಸಾಲ ಮುಂತಾದ ವೃಕ್ಷಗಳಿಂದ ಮನೋಹರವಾದ ಆ ಪ್ರದೇಶದಲ್ಲಿ ವ್ಯಾಘ್ರಪದಾ ಎಂಬ ಹೆಸರಿನ ನದಿಯು ಸುವರ್ಣಮುಖರಿಯನ್ನು ಸೇರುವುದು.

ದುರ್ವಾರಭೂರಿದುರಿತವಿನಿವಾರಣಪೇಶಲಾ ।
ನೀರಂಧ್ರತೀರವಾನೀರವನವಮಂಡಲಮಂಡಿತಾ ॥ ೩೮ ॥
ಸಿದ್ಧಗಂಧರ್ವಲಲನಾಸಲಿಲಾಗಾಹನಶಾಲಿನೀ ।
ತಪಸ್ವಿಕನ್ಯಾನಿಕ್ಷಿಪ್ತಬಲಿಪುಷ್ಪವಿರಾಜಿತಾ ॥ ೩೯ ॥
ಹಂಸಕಾರಂಡವಕ್ರೌಂಚಕುಲಕೋಲಾಹಲಾಕುಲಾ ।
ಪ್ರಾಕ್ಪ್ರವಾಹಾ ಸಮಾಗತ್ಯ ಶೈಲಾಂತರಗತಾಧ್ವನಾ ॥ ೪೦ ॥
ಸಂಗಮೇ ಸರಿತೋಸ್ತತ್ರ ಕೃತಸ್ನಾನಾ ನರೋತ್ತಮಾಃ ।
ಸಮಗ್ರಮಶ್ವಮೇಧಾನಾಂ ದಶಾನಾಂ ಪ್ರಾಪ್ನುಯುಃ ಫಲಂ ॥ ೪೧ ॥
ತತ್ರ ವ್ಯಾಘ್ರಪದಾಖ್ಯಾಯಾಸ್ತಟೇ ಲೋಕಮಲಾಪಹೇ ।
ಅನಘಂ ಸರ್ವಪಾಪಘ್ನಂ ಶಂಖತೀರ್ಥಂ ವಿರಾಜಿತೇ ॥ ೪೨ ॥
ಬ್ರಹ್ಮರ್ಷಿನಿಯುತಾವಾಸಂ ಸುರಗಂಧರ್ವಸೇವಿತಂ ।
ದರ್ಶನಸ್ನಾನಪಾನಾದ್ಯೈರಮಿತಾನಂದ ದಾಯಕಂ ॥ ೪೩ ॥

---

೩೮. ಆ ನದಿಯು ಕಳೆಯಲಸಾಧ್ಯಗಳಾದ ಮಹಾಪಾತಕಗಳನ್ನೂ ನಿವಾರಿಸುವುದರಲ್ಲಿ ಸರ್ವಶಕ್ತವೂ, ದಡಗಳಲ್ಲಿ ನಿಬಿಡವಾಗಿ ಬೆಳೆದಿರುವ ಬಳ್ಳಿಗಳ ಪೊದೆಗಳಿಂದ ಅಲಂಕೃತವೂ ಆಗಿರುವುದು.

೩೯. ಸಿದ್ಧರು, ಗಂಧರ್ವರು ಮುಂತಾದ ದೇವಸ್ತ್ರೀಯರ ಕ್ರೀಡೆಗಳ ಮತ್ತು ಸ್ನಾನಪ್ರದೇಶದಿಂದಲೂ, ತಪಸ್ವಿಸ್ತ್ರೀಯರಿಂದ ಅರ್ಪಿಸಲ್ಪಟ್ಟ ಬಲಿಪುಷ್ಪಗಳಿಂದಲೂ ಆ ನದಿಯು ವಿರಾಜಿಸುತ್ತಿರುವುದು.

೪೦. ಹಂಸ, ಕಾರಂಡವ, ಕ್ರೌಂಚ ಮುಂತಾದ ಜಲಪಕ್ಷಿಗಳ ಸಮೂಹದ ಕೋಲಾಹಲದಿಂದ ತುಂಬಿದುದಾಗಿ ಪರ್ವತಗಳ ಮಧ್ಯದ ಕಣಿವೆಗಳಲ್ಲಿ ಹರಿಯುವ ವ್ಯಾಘ್ರಪದವೆಂಬ ಆ ನದಿಯು ಪೂರ್ವವಾಹಿನಿಯಾಗಿ ಸುವರ್ಣಮುಖರಿಯನ್ನು ಸೇರುವುದು.

೪೧. ಆ ಎರಡು ನದಿಗಳ ಸಂಗಮಸ್ಥಾನದಲ್ಲಿ ಸ್ನಾನವನ್ನು ಮಾಡಿದ ಮನುಷ್ಯೋತ್ತಮರು ಹತ್ತು ಅಶ್ವಮೇಧಗಳನ್ನು ಸಮಗ್ರವಾಗಿ ಆಚರಿಸಿದ ಪುಣ್ಯಫಲವನ್ನು ಹೊಂದುವರು.

೪೨. ವ್ಯಾಘ್ರಪದವೆಂಬ ಲೋಕಪಾಪನಾಶಕವಾದ ಆ ತೀರದಲ್ಲಿಯೇ ನಿಷ್ಕಲ್ಮಷವೂ, ಸಕಲಪಾಪಘ್ನವೂ ಆದ ಶಂಖತೀರ್ಥವು ಕಂಗೊಳಿಸುತ್ತಿರುವುದು.

೪೩. ಆ ತೀರ್ಥವು ಬ್ರಹ್ಮರ್ಷಿಗಳಿಗೆ ಪ್ರಿಯವಾದ ನಿವಾಸವೂ, ದೇವತೆಗಳಿಂದಲೂ ಗಂಧರ್ವರಿಂದಲೂ ಸೇವಿತವೂ, ದರ್ಶನ, ಸ್ನಾನ, ಪಾನಾದಿ ಸೇವೆಗಳಿಂದ ಅಪರಿಮಿತಾನಂದವನ್ನುಂಟುಮಾಡುವುದೂ ಆಗಿರುವುದು.

F

ತತ್ರಾಸ್ತೇ ಭಗವಾನೀಶಃ ಶಂಖೇಶೋ ನಾಮ ಫಾಲ್ಗುನ ।
ಶಂಖನಾಮ್ನಾ ಮುನೀಂದ್ರೇಣ ಲಿಂಗರೂಪಂ ಪ್ರತಿಷ್ಠಿತಂ ॥ ೪೪ ॥
ಯೇ ತತ್ರ ತೀರ್ಥೇ ಸುಸ್ನಾತಾಃ ಪಶ್ಯಂತಿ ವೃಷವಾಹನಂ ।
ದಶಾಶ್ವಮೇಧಜಂ ಪುಣ್ಯಂ ಲಬ್ಧ್ವಾ ಯಾಂತಿ ಸುರಾಲಯಂ ॥ ೪೫ ॥
ಯುಕ್ತಾ ತಯಾ ವ್ಯಾಘ್ರಪದಾಭಿಧಾನಯಾ
ಗತ್ವಾ ತತೋ ಯೋಜನಸಮ್ಮಿತಾಂ ಭುವಂ ।
ಯಯೌ ಮುನೀಂದ್ರೈರ್ವೃಷಭಾಚಲಾಂತಿಕಂ
ಸಂಸೇವ್ಯಮಾನಾ ಶುಭನಿರ್ಮಲೋದಕಾ ॥ ೪೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ "ಅಗಸ್ತ್ಯತೀರ್ಥಾದಿ ವಿವಿಧತೀರ್ಥಮಾಹಾತ್ಮ್ಯವರ್ಣನಂ"ನಾಮ ಚತುಸ್ತ್ರಿಂಶೋಽಧ್ಯಾಯಃ

---

೪೪. ಅಲ್ಲಿ ಶಂಖವೆಂಬ ಮಹಾಮುನಿಯಿಂದ ಪ್ರತಿಷ್ಠೆಗೊಳಿಸಲ್ಪಟ್ಟ ಲಿಂಗರೂಪಿಯಾದ ಪರಮೇಶ್ವರನು ಶಂಖೇಶ್ವರನೆಂಬ ಹೆಸರಿನಿಂದ ಪ್ರಸಿದ್ಧನಾಗಿರುವನು.

೪೫. ಯಾರು ಆ ತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು ವೃಷಭವಾಹನನಾದ ಶಂಖೇಶ್ವರನ ದರ್ಶನವನ್ನು ಮಾಡುವರೊ, ಅವರು ಹತ್ತು ಅಶ್ವಮೇಧಗಳ ಪುಣ್ಯವನ್ನು ಸಂಪಾದಿಸಿ ಸ್ವರ್ಗಲೋಕಕ್ಕೆ ತೆರಳುವರು.

೪೬. ವ್ಯಾಘ್ರಪದವೆಂಬ ನದಿಯೊಡನೆ ಕೂಡಿದಮೇಲೆ ಒಂದು ಯೋಜನದವರೆಗೂ ಪ್ರವಹಿಸಿ ಮಂಗಳಪ್ರದವೂ, ನಿರ್ಮಲವೂ ಆದ ನೀರಿನಿಂದ ಕೂಡಿ ಮುನಿವರ್ಯರಿಂದ ಸೇವೆಗೊಳ್ಳುತ್ತಿರುವ ಸುವರ್ಣಮುಖರೀ ನದಿಯು ವೃಷಭಾಚಲದ ಸಮೀಪವನ್ನು ಸೇರುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೇಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ಅಗಸ್ತ್ಯತೀರ್ಥಾದಿ ವಿವಿಧತೀರ್ಥ ಮಾಹಾತ್ಮ್ಯವರ್ಣನ"ವೆಂಬ ಮುವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚತ್ರಿಂಶೋಽಧ್ಯಾಯಃ

### ಸುವರ್ಣಮುಖರೀಮಾಹಾತ್ಮ್ಯೇ ವಿಷ್ಣುಮಾಹಾತ್ಮ್ಯಪ್ರಸ್ತಾವೇ ಸೃಷ್ಟ್ಯಾದಿವರ್ಣನಂ

ಭರದ್ವಾಜ ಉವಾಚ :—

ಸುವರ್ಣಮುಖರೀಂ ತತ್ರ ಸಂಗತಾ ಮಂಗಲಪ್ರದಾ ।
ಕಲ್ಯಾ ನಾಮ ನದೀ ಪುಣ್ಯಾ ಕಾಲಿಂದೀ ಜಾಹ್ನವೀಮಿವ ॥ ೧ ॥
ವೃಷಭಾಚಲಸಂಭೂತಾ ತೀರ್ಥರಾಜವಿರಾಜಿತಾ ।
ನದೀನಾಮುತ್ತಮಾ ಕಲ್ಯಾ ಕಲುಷೌಘವಿನಾಶಿನೀ ॥ ೨ ॥
ನಾನಾತರುಲತಾವ್ರಾತ ವಿಭೂಷಿತತಟದ್ವಯಾ ।
ಮುನಿಸಂಘಸುಖಾವಾಸಾ ಪುಣ್ಯಾಶ್ರಮಸಮುತ್ಕಟಾ ॥ ೩ ॥
ದ್ವಿಜದತ್ತಾರ್ಘ್ಯವಿಲಸತ್ಕುಶಾಕ್ಷತಲಸತ್ತಟಾ ।
ಅಪ್ಸರಃ ಕುಚಕಸ್ತೂರೀಪಂಕಕ್ಷಾಲನಪಂಕಿಲಾ ॥ ೪ ॥
ದಂತಾವಲಕಟಶ್ಚ್ಯೋತನ್ಮದಾಂಬುಸುರಭೀಕೃತಾ ।
ವಿಪ್ರಭೂಪಾಲವಿತತಮುಖಯೂಪಶತಾವೃತಾ ॥ ೫ ॥

---

### ಕನ್ನಡದ ಅನುವಾದ

#### ಸುವರ್ಣಮುಖರೀಮಾಹಾತ್ಮ್ಯ—ವಿಷ್ಣುಮಾಹಾತ್ಮ್ಯಪ್ರಸ್ತಾವ—ಸೃಷ್ಟ್ಯಾದಿವರ್ಣನ

೧. ಭರದ್ವಾಜನು ಹೇಳುತ್ತಾನೆ:—ಅಲ್ಲಿ ಕಲ್ಯಾ ಎಂಬ ಹೆಸರಿನ ಶುಭಪ್ರದೆಯಾದ ನದಿಯು ಯಮುನೆಯು ಗಂಗಾನದಿಯನ್ನು ಸೇರುವಂತೆ ಸುವರ್ಣಮುಖರಿಯನ್ನು ಸೇರುವುದು.

೨. ಈ ಕಲ್ಯಾನದಿಯು ವೃಷಭಾದ್ರಿಯಲ್ಲಿ ಹುಟ್ಟಿ ಅನೇಕ ಉತ್ತಮ ತೀರ್ಥಗಳಿಂದ ವಿರಾಜಿಸುತ್ತ ಪಾಪಕೋಟಿಗಳನ್ನು ನಾಶಮಾಡುವ ಪವಿತ್ರ ನದಿಯಾಗಿರುವುದು.

೩. ಅದರ ಎರಡು ದಡಗಳಲ್ಲಿಯೂ ವಿಧವಿಧಗಳಾದ ಗಿಡಗಳೂ, ಬಳ್ಳಿಗಳೂ ಶೋಭಿಸುತ್ತಿರುವುವು. ಮುನಿಮಂಡಲಗಳು ಸುಖವಾಗಿ ಅಲ್ಲಿ ವಾಸಮಾಡುತ್ತಿರುವರು. ಅವರ ಅನೇಕ ಪವಿತ್ರಾಶ್ರಮಗಳಿಂದ ಆ ಪ್ರದೇಶವು ತುಂಬಿರುವುದು.

೪. ಬ್ರಾಹ್ಮಣರು ಅರ್ಘ್ಯಪಾದ್ಯಾದಿಗಳನ್ನರ್ಪಿಸಿದ ಕುಶ, ಅಕ್ಷತೆಗಳಿಂದ ದಡಗಳು ರಂಜಿಸುತ್ತಿರುವುವು. ಅಪ್ಸರಸ್ತ್ರೀಯರ ಕುಚಕುಂಕುಮ ಮತ್ತು ಕಸ್ತೂರಿಗಳ ಕರ್ದಮದಿಂದ ಪ್ರವಾಹವು ಕೂಡಿರಂಜಿಸುತ್ತಿರುವುದು.

೫. ಆನೆಗಳ ಕುಂಭಗಳಿಂದ ಸ್ರವಿಸುತ್ತಿರುವ ಮದಧಾರೆಗಳ ಸೌಗಂಧ್ಯದಿಂದೊಪ್ಪಿ ಅನೇಕ ಬ್ರಾಹ್ಮಣರಿಂದಲೂ ಮಹಾರಾಜರಿಂದಲೂ ನೆರ

ಅನಾವಿಲಜಲಾಪೂರತೋಷಿತಾಶೇಷಮಾನವಾ ।
ಏಕೈವಾಲಂ ಪರಾ ಕರ್ತುಂ ಮಹಾನದ್ಯೋಽಸ್ತು ಪಾತಕಂ ॥ ೬ ॥
ತಯೋಃ ಸಂಗತಯೋಃ ಸ್ತೋತುಂ ಮಹಿಮಾನಂ ಕ ಈಶತೇ ।
ಯತ್ರ ಬ್ರಹ್ಮಶಿಲಾನಾಮ ಸರಿನ್ಮಧ್ಯೇ ಚ ವರ್ತತೇ ॥ ೭ ॥
ಅಗಸ್ತ್ಯತಪಸಾ ಪಶ್ಚಾದ್ಗಯಾ ಸಾನ್ನಿಧ್ಯಮೇತಿ ಚ ।
ನದೀದ್ವಯಜಲೇ ತತ್ರ ಸ್ನಾತಾಃ ಪುಣ್ಯೇ ಕುರೂದ್ವಹ ॥ ೮ ॥
ಮಖಾನಾಂ ಪೌಂಡರೀಕಾಣಾಂ ಶತಸ್ಯ ಫಲಮಾಪ್ನುಯುಃ ।
ಬ್ರಹ್ಮಹತ್ಯಾದಿಪಾಪಾನಿ ಸಮಾಯಾಂತಿ ಪರಿಕ್ಷಯಂ ॥ ೯ ॥
ತತ್ರಾಭಿಷೇಕಪೂತಾನಾಂ ನದೀದ್ವಿತಯಸಂಗಮೇ ।
ಸಂಗತಾ ಭವನಾಶಿನ್ಯಾ ಕೃಷ್ಣವೇಣೀವ ಪಾವನೀ ॥ ೧೦ ॥
ರಾಜತೇ ಸ್ವರ್ಣಮುಖರೀ ಕಲ್ಯಯಾ ಸಂಗತಾ ತದಾ ॥ ೧೧ ॥
ಅಥೋದೀಚ್ಯಾಂ ಮಹಾನದ್ಯಾ ಯೋಜನಾರ್ಧೇ ವಿರಾಜತೇ ।
ಯೋಜನೋತ್ಸೇಧಸಹಿತೋ ವಿಖ್ಯಾತೋ ವೇಂಕಟಾಚಲಃ ॥ ೧೨ ॥

---

ವೇರಿಸಲ್ಪಟ್ಟ ಮಹಾಯಜ್ಞಗಳ ಕುರುಹುಗಳಾದ ನೂರಾರು ಯೂಪಸ್ತಂಭಗಳಿಂದ ನದಿಯ ತೀರಪ್ರದೇಶವು ತುಂಬಿರುವುದು.

೬. ಆ ನದಿಯು ಅಖಂಡವಾದ ಜಲಪ್ರವಾಹದಿಂದ ಸಕಲ ಮಾನವರನ್ನೂ ಸಂತೋಷಪಡಿಸುತ್ತಿರುವುದು. ಈ ಎರಡು ನದಿಗಳಲ್ಲಿ ಮನುಷ್ಯರ ಪಾತಕಗಳನ್ನು ಕಳೆಯಲು ಒಂದೇ ಸಾಕಾಗಿರುವುದು.

೭. ಆ ಎರಡೂ ಸಂಗಮಿಸಿದ ಕ್ಷೇತ್ರದ ಮಹಿಮೆಯನ್ನೂ ಸ್ತೋತ್ರ ಮಾಡಲು ಯಾವನು ತಾನೆ ಶಕ್ತನಾದಾನು? ಅಲ್ಲಿಯೇ ನದೀ ಮಧ್ಯದಲ್ಲಿ ಬ್ರಹ್ಮಶಿಲೆಯೆಂಬ ಪ್ರದೇಶವಿರುವುದು.

೮–೧೧. ಅಗಸ್ತ್ಯ ಮಹಾಮುನಿಯ ತಪಃಪ್ರಭಾವದಿಂದ ಈ ಕ್ಷೇತ್ರವು ಗಯೆಯ ಸಾನ್ನಿಧ್ಯವನ್ನು ಹೊಂದಿರುವುದು. ಎಲೈ ಕೌರವ ಮುಖ್ಯನಾದ ಅರ್ಜುನನೆ! ಈ ಎರಡು ನದಿಗಳ ಸಂಗಮಸ್ಥಾನದಲ್ಲಿ ಸ್ನಾನವನ್ನು ಮಾಡಿದವರು ಒಂದುನೂರು ಪೌಂಡರೀಕ ಯಜ್ಞಗಳನ್ನು ಮಾಡಿದ ಫಲವನ್ನು ಹೊಂದುವರು. ಆ ನದಿಗಳ ಸಂಗಮದಲ್ಲಿ ಸ್ನಾನವನ್ನು ಮಾಡಿ ಪುನೀತರಾದವರಿಗೆ ಬ್ರಹ್ಮಹತ್ಯೆಯೇ ಮುಂತಾದ ಮಹಾಪಾತಕಗಳೂ ತತ್ಕ್ಷಣದಲ್ಲಿಯೇ ನಾಶವನ್ನೈದುವುವು. ಭವನಾಶಿನಿಯೊಡನೆ ಪವಿತ್ರೆಯಾದ ಕೃಷ್ಣವೇಣಿಯು ಸೇರುವಂತೆ ಕಲ್ಯಾನದಿಯಿಂದೊಡಗೂಡಿದ ಸುವರ್ಣಮುಖರೀ ನದಿಯು ವಿರಾಜಿಸುತ್ತಿರುವುದು.

೧೨. ಆ ಮಹಾನದಿಗೆ ಉತ್ತರ ದಿಕ್ಕಿನಲ್ಲಿ ಅರ್ಧಯೋಜನದ ದೂರದಲ್ಲಿ ಒಂದು ಯೋಜನದ ಎತ್ತರವುಳ್ಳ ವೇಂಕಟಾಚಲವು ಶೋಭಿಸುತ್ತಿರುವುದು.

ಸರ್ವೇಷಾಮೇವ ತೀರ್ಥಾನಾಮಾಶ್ರಯೋಽಯಂ ನಗೋತ್ತಮಃ ।
ಅಂಜನಾನಂತವೃಷಭನೀಲಕೇಸರಿಪೋತ್ರಿಣಃ ॥ ೧೩ ॥
ಏತಾನ್ಯುಪವನಾನ್ಯದ್ರೇಃ ಸ್ಯುರ್ನಾರಾಯಣವೇಂಕಟೌ ॥ ೧೪ ॥
ವರಾಹವಪುಷಾ ಪೂರ್ವಂ ಸ್ವೀಕೃತತ್ವಾನ್ಮಧುದ್ವಿಷಾ ।
ವರಾಹಕ್ಷೇತ್ರಮಿತ್ಯಾರ್ಯೈಃ ಕೀರ್ತಿತೋಽಯಂ ಮಹೀಧರಃ ॥ ೧೫ ॥
ಸುವರ್ಣಮುಖರೀತೀರೇ ವಿಖ್ಯಾತೇ ವೇಂಕಟಾಚಲೇ ।
ನಿವಸತ್ಯಚ್ಯುತೋ ನಿತ್ಯಮಬ್ಧೀಂದ್ರತನಯಾನ್ವಿತಃ ॥ ೧೬ ॥
ತಸ್ಮಿನ್ಗತಾ ಶ್ರಿಯಾ ಸಾರ್ಧಂ ವಸಂತಂ ವೇಂಕಟಾಧಿಪಂ ।
ಸೇವಂತೇ ಸಿದ್ಧಗಂಧರ್ವಮುನಿಮಾನವದಾನವಾಃ ॥ ೧೭ ॥
ತಸ್ಮಿನ್ನಿನ್ಯಸ್ತಚಿತ್ತಾನಾಂ ಭಕ್ತಾನಾಂ ಪುರುಷೋತ್ತಮೇ ।
ವಾಂಛಿತಾನ್ಯಾಶು ಸಿಧ್ಯಂತಿ ನಶ್ಯಂತಿ ವಿಪದೋಽರ್ಜುನ ॥ ೧೮ ॥
ಯೇ ಸ್ಮರಂತಿ ಜಗನ್ನಾಥಂ ವೇಂಕಟಾದ್ರಿನಿವಾಸಿನಂ ।
ನಿರಸ್ತದೋಷಾಸ್ತೇ ಯಾಂತಿ ಶಾಶ್ವತಂ ಪದಮವ್ಯಯಂ ॥ ೧೯ ॥

---

೧೩–೧೪. ಈ ಪರ್ವತಶ್ರೇಷ್ಠವು ಭೂಲೋಕದ ಸಕಲ ತೀರ್ಥಗಳಿಗೂ ಆಶ್ರಯವಾಗಿರುವುದು. ಈ ಪರ್ವತದಲ್ಲಿ ಅಂಜನ, ಅನಂತ, ವೃಷಭ, ನೀಲ, ಕೇಸರಿ, ವರಾಹ, ನಾರಾಯಣ, ವೇಂಕಟ ಮುಂತಾದ ಅನೇಕ ಉಪವನಗಳಿರುವುವು.

೧೫. ಶ್ರೀ ಮಹಾವಿಷ್ಣುವು ಮುನ್ನು ವರಾಹ ಶರೀರವನ್ನು ಸ್ವೀಕರಿಸಿ ಈ ಕ್ಷೇತ್ರದಲ್ಲಿ ನೆಲಸಿದ್ದುದರಿಂದ ಈ ಪರ್ವತವು ವರಾಹ ಕ್ಷೇತ್ರವೆಂದು ಪ್ರಾಜ್ಞರಿಂದ ಹೇಳಲ್ಪಡುತ್ತಿರುವುದು.

೧೬. ಸುವರ್ಣಮುಖರಿಯ ತೀರದಲ್ಲಿ ಪ್ರಖ್ಯಾತವಾಗಿರುವ ವೇಂಕಟಾಚಲದಲ್ಲಿ ಶ್ರೀ ನಾರಾಯಣನು ಮಹಾಲಕ್ಷ್ಮೀ ಸಮೇತನಾಗಿ ಯಾವಾಗಲೂ ವಾಸಮಾಡುತ್ತಿರುವನು.

೧೭. ಆ ಪರ್ವತದಲ್ಲಿ ಲಕ್ಷ್ಮೀ ಸಮೇತನಾಗಿ ವಾಸಮಾಡುತ್ತಿರುವ ವೇಂಕಟೇಶ್ವರನನ್ನು ಸಿದ್ಧರೂ, ಗಂಧರ್ವರೂ, ಮುನಿವರ್ಯರೂ, ಮನುಷ್ಯರೂ, ದಾನವರೂ ನಿತ್ಯವೂ ಸೇವಿಸುತ್ತಿರುವರು.

೧೮. ಎಲೈ ಅರ್ಜುನನೆ! ಶ್ರೀ ಪುರುಷೋತ್ತಮನಲ್ಲಿಯೇ ಮನಸ್ಸನ್ನು ನಿಲ್ಲಿಸಿದ ಭಕ್ತರಿಗೆ ಸಕಲಾಭೀಷ್ಟಗಳೂ ಲಭಿಸಿ ಕಷ್ಟಗಳೆಲ್ಲ ನಾಶವಾಗುವುವು.

೧೯. ವೇಂಕಟಾಚಲನಿವಾಸಿಯೂ ಲೋಕನಾಯಕನೂ ಆದ ಆ ಸ್ವಾಮಿಯನ್ನು ಯಾರು ಸ್ಮರಿಸುವರೊ, ಅವರು ಸಮಸ್ತ ದೋಷಗಳಿಂದಲೂ ಬಿಡುಗಡೆಯನ್ನು ಹೊಂದಿ ಶಾಶ್ವತವೂ ಅನಂತವೂ ಆದ ಸ್ಥಾನವನ್ನು ಹೊಂದುವರು.

ಅರ್ಜುನ ಉವಾಚ :—

ವೇಂಕಟಾದ್ರೌ ಮಹಾಪುಣ್ಯೇ ಸುರಾಸುರನಮಸ್ಕೃತಃ ।
ಕಥಂ ಪ್ರಾದುರಭೂದ್ದೇವೋ ಭಗವಾನ್ಕಮಲಾಪತಿಃ ॥ ೨೦ ॥
ಕಸ್ಯ ವಾ ಕೃತಿನಸ್ತತ್ರ ಪ್ರಸನ್ನೋ ನಿಜಮದ್ಭುತಂ ।
ರೂಪಂ ಪ್ರಕಾಶಯಾಂಚಕ್ರೇ ಭಕ್ತಿಮುಕ್ತಿಫಲಪ್ರದಂ ॥ ೨೧ ॥
ವಿಷ್ಣೋರ್ದೇವಾಧಿದೇವಸ್ಯ ಮಹಿಮಾನಂ ಮಹಾಮುನೇ ।
ಶ್ರೋತುಮಿಚ್ಛಾಮಿ ತತ್ತ್ವೇನ ತನ್ಮೇ ಕಥಯ ವಿಸ್ತರಾತ್ ॥ ೨೨ ॥

ಭರದ್ವಾಜ ಉವಾಚ :—

ಶೃಣು ವೇಂಕಟನಾಥಸ್ಯ ಮಹಿಮಾನಂ ಸಮಾಹಿತಃ ।
ವಿಸ್ತರೇಣ ಸಮಾಖ್ಯಾತುಂ ಬ್ರಹ್ಮಣಾಪಿ ನ ಶಕ್ಯತೇ ॥ ೨೩ ॥
ಧನ್ಯೋಽಸಿ ದೇವದೇವಸ್ಯ ಮಾಹಾತ್ಮ್ಯಂ ಮಧುವಿದ್ವಿಷಃ ।
ಯದ್ಭಕ್ತಿಯುಕ್ತಾಭೂತ್ತಾತ ಶ್ರೋತುಂ ಮತಿರರಿಂದಮ ॥ ೨೪ ॥
ಕೃತಪುಣ್ಯೋಽಸ್ಮ್ಯಹಂ ಪಾರ್ಥ ಸರ್ವಭೂತಪತೇರ್ಹರೇಃ ।
ಪವಿತ್ರಾಣಿ ಚರಿತ್ರಾಣಿ ಸ್ತೋಷ್ಯಂತೇ ಯನ್ಮಯಾಧುನಾ ॥ ೨೫ ॥

---

೨೦-೨೧. ಅರ್ಜುನನು ಕೇಳುತ್ತಾನೆ:—ಸಕಲ ದೇವದಾನವರಿಂದ ನಮಸ್ಕೃತನೂ, ದೇವದೇವನೂ, ಷಡ್ಗುಣೈಶ್ವರ್ಯಪೂರಿತನೂ ಆದ ಲಕ್ಷ್ಮೀರಮಣನು ಮಹಾ ಪುಣ್ಯಕ್ಷೇತ್ರವಾದ ವೇಂಕಟಾಚಲದಲ್ಲಿ ಹೇಗೆ ಅವತಾರ ಮಾಡುವವನಾದನು? ಯಾವ ಪುಣ್ಯಪುರುಷರಲ್ಲಿ ಪ್ರಸನ್ನನಾಗಿ ಸ್ವಾಮಿಯು ಭಕ್ತಿಮುಕ್ತಿಗಳನ್ನು ಕೊಡುವ ತನ್ನ ಅದ್ಭುತ ರೂಪವನ್ನು ಇಲ್ಲಿ ಪ್ರಕಟನಗೊಳಿಸಿದನು?

೨೨. ಎಲೈ ಮಹಾಮುನಿಯೆ! ದೇವತೆಗಳಿಗೆ ಅಧಿದೇವತೆಯಾದ ಮಹಾವಿಷ್ಣುವಿನ ಮಹಿಮೆಯನ್ನು ಕೇಳಲು ಇಚ್ಛಿಸುವೆನು. ಅದನ್ನು ಯಥಾರ್ಥವಾಗಿಯೂ, ವಿಸ್ತಾರವಾಗಿಯೂ ನನಗೆ ತಿಳಿಸಬೇಕು.

೨೩. ಭರದ್ವಾಜನು ಹೇಳುತ್ತಾನೆ:— ವೇಂಕಟೇಶ್ವರನ ಮಾಹಾತ್ಮ್ಯೆಯನ್ನು ಶ್ರದ್ಧಾತತ್ಪರನಾಗಿ ಕೇಳು. ಅದನ್ನು ಸಮೂಲಾಗ್ರವಾಗಿ ತಿಳಿಸಲು ಬ್ರಹ್ಮದೇವನಿಗೂ ಶಕ್ಯವಾಗಲಾರದು.

೨೪. ಶತ್ರುಂಜಯನಾದ ಅರ್ಜುನನೆ! ದೇವಾಧಿದೇವನಾದ ಮಧುವೈರಿಯ ಮಾಹಾತ್ಮ್ಯೆಯನ್ನು ಭಕ್ತಿಸಹಿತವಾದ ಮನಸ್ಸಿನಿಂದ ಕೇಳಲು ಕುತೂಹಲಪಡುತ್ತಿರುವ ನೀನೇ ಧನ್ಯನು.

೨೫. ಸಕಲಪ್ರಾಣಿಗಳ ಸ್ವಾಮಿಯಾದ ಶ್ರೀಹರಿಯ ಪುಣ್ಯಚರಿತ್ರೆಯನ್ನು ಅನುವಾದ ಮಾಡುವ ಸದವಕಾಶವು ಇಂದು ದೊರಕಿದುದರಿಂದ ನಾನೂ ಧನ್ಯನಾದೆನು.

ಪುರಾ ಭಾಗೀರಥೀತೀರೇ ಜನಕಾಯ ಮಹಾತ್ಮನೇ ।
ಕ್ರತುದೀಕ್ಷಾಪ್ರಸಕ್ತಾಯ ವಿಶುದ್ಧಜ್ಞಾನಶಾಲಿನೇ ॥ ೨೬ ॥
ವಾಮದೇವೇನ ಕಥಿತಾಂ ಕಥಾಂ ಪಾಪಪ್ರಣಾಶಿನೀಂ ।
ಕಥಯಿಷ್ಯಾಮಿ ತೇ ಪಾರ್ಥ ವಿಷ್ಣುಕೀರ್ತನಪಾವನೀಂ ॥ ೨೭ ॥
ಸರ್ವೇಷಾಮೇವ ಭೂತಾನಾಮಾದ್ಯೋ ನಾರಾಯಣಃ ಪ್ರಭುಃ ।
ಜಗನ್ಮಯೋ ಜಗತ್ಕರ್ತಾ ಚಿತ್ಸ್ವರೂಪೋ ನಿರಂಜನಃ ॥ ೨೮ ॥
ಸಹಸ್ರಶೀರ್ಷಾ ಭಗವಾನ್ಸಹಸ್ರಾಕ್ಷಃ ಸಹಸ್ರಪಾತ್ ।
ಯಸ್ಯ ಭಾಸಾ ಜಗದಿದಂ ವಿಭಾತಿ ಸಚರಾಚರಂ ॥ ೨೯ ॥
ತಸ್ಮಾತ್ಪರತರಂ ತೇಜಸ್ತಸ್ಮಾತ್ಪರತರಂ ತಪಃ ।
ತಸ್ಮಾತ್ಪರತರಂ ಜ್ಞಾನಂ ಯೋಗಸ್ತಸ್ಮಾತ್ಪರೋ ನ ಚ ॥ ೩೦ ॥
ವಿದ್ಯಾ ತಸ್ಮಾದಪಿ ಪರಾ ನಾಸ್ತಿ ಪಾರ್ಥ ನರರ್ಷಭ ।
ಸರ್ವೇಷ್ವಪಿ ಚ ಭೂತೇಷು ಸದಾ ಸನ್ನಿಹಿತಃ ಪ್ರಭುಃ ॥ ೩೧ ॥
ಸರ್ವಾಣ್ಯಪಿ ಚ ಭೂತಾನಿ ತಸ್ಮಿನ್ನೇವಾಸತೇ ಸುಖಂ ।
ಸ ಏವ ಯಜ್ಞೋ ಯಜ್ವಾ ಚ ಸಾಧನಂ ಸ್ರುಕ್ಸ್ರುವಾದಿಕಂ ॥ ೩೨ ॥

---

೨೬-೨೭. ಎಲೈ ಪಾರ್ಥನೆ! ಗಂಗಾತೀರದಲ್ಲಿ ಯಜ್ಞವನ್ನು ಮಾಡಲು ಉದ್ಯುಕ್ತನಾದ ನಿರ್ಮಲ ಜ್ಞಾನಸಂಪನ್ನನಾದ ಜನಕ ಮಹಾತ್ಮನಿಗೆ ವಾಮದೇವ ನೆಂಬ ಮಹರ್ಷಿಯು ಹೇಳಿದ ಪಾಪನಾಶಕವೂ ವಿಷ್ಣುಚರಿತ್ರಾನ್ವಿತವೂ ಆದ ಪವಿತ್ರ ಕಥೆಯನ್ನು ನಿನಗೆ ವಿಸ್ತರಿಸುವೆನು.

೨೮. ಸಕಲ ಭೂತಗಳಿಗೂ ನಾರಾಯಣನೇ ಆದಿಕರ್ತನಾದ ಪ್ರಭುವು; ಆತನೇ ಲೋಕಮಯನು; ಜಗತ್ತಿನ ಸೃಷ್ಟಿಕರ್ತನು; ಜ್ಞಾನಸ್ವರೂಪನು; ನಿರಂಜನನು.

೨೯. ಪರಮಾತ್ಮನು ಅನಂತಶೀರ್ಷನು; ಅನಂತ ನೇತ್ರನು; ಅನಂತ ಪಾದನು. ಆತನ ಚೈತನ್ಯದಿಂದಲೇ ಸ್ಥಾವರ ಜಂಗಮಾತ್ಮಕವಾದ ಸಕಲ ಪ್ರಪಂಚವೂ ಪ್ರಕಾಶಿಸುತ್ತಿರುವುದು.

೩೦. ಪರಮಾತ್ಮನ ಅಂತರ್ಯಾಮಿತ್ವದ ಈ ಜ್ಞಾನಕ್ಕಿಂತ ಹೆಚ್ಚಿನದಾದ ತೇಜಸ್ಸಾಗಲಿ, ತಪಸ್ಸಾಗಲಿ, ಜ್ಞಾನವಾಗಲಿ, ಯೋಗವಾಗಲಿ ಯಾವುದೂ ಇರುವುದಿಲ್ಲ.

೩೧. ನರೋತ್ತಮನಾದ ಓ ಪಾರ್ಥನೆ! ಅದಕ್ಕಿಂತ ಉತ್ತಮವಾದ ವಿದ್ಯೆಯೂ ಇಲ್ಲವೇ ಇಲ್ಲ. ಜಗನ್ನಿಯಾಮಕನು ಸಕಲ ಭೂತಗಳಲ್ಲಿಯೂ ಸದಾ ಸನ್ನಿಹಿತನಾಗಿರುವನು.

೩೨. ಸಕಲ ಭೂತಗಳೂ ಆತನಲ್ಲಿಯೇ ಸುಖವಾಗಿ ನೆಲಸಿರುವುವು; ಆತನೇ

ಫಲಂ ಫಲಪ್ರದಾತಾ ಚ ತತ್ಸಂಪ್ರಾಪ್ಯಾ ಗತಿಸ್ತಥಾ ।
ವಹ್ನೌ ಪ್ರಣೀತೇ ಪಶುನಾ ಪ್ರೋಕ್ಷಿತೇನ ಪ್ರಜುಹ್ವತಿ ।
ಯೇ ತಂ ಪ್ರಯಾಂತಿ ತೇ ಯಾಂತಿ ಗತಿಂ ತತ್ಪ್ರತಿಪಾದಿತಾಂ ॥ ೩೩ ॥
ಕರ್ಮಬಂಧಂ ಪಶುಂ ಕೃತ್ವಾ ಜ್ಞಾನಾಗ್ನೌ ಸಂಪ್ರವರ್ತಿತೇ ।
ಯೇ ಜುಹ್ವತೇ ತಮುದ್ದಿಶ್ಯ ತೇ ತತ್ಸಾಯುಜ್ಯಭಾಗಿನಃ ॥ ೩೪ ॥
ಹರಿಃ ಸದಾಶಿವೋ ಬ್ರಹ್ಮಾ ಮಹೇಂದ್ರಃ ಪರಮಃ ಸ್ವರಾಟ್ ।
ಸರ್ವೇಶ್ವರಸ್ಯ ತಸ್ಯೈತೇ ಪರ್ಯಾಯಾಃ ಪರಿಕೀರ್ತಿತಾಃ ॥ ೩೫ ॥
ಸಮಾಹಿತೋಽನುಸಂಧತ್ತೇ ಯ ಇದಂ ಪರಮಾತ್ಮನಃ ।
ನಾರಾಯಣಸ್ಯ ಮಾಹಾತ್ಮ್ಯಂ ಸ ನ ಯಾತಿ ಪುನರ್ಭವಂ ॥ ೩೬ ॥
ಚಿದಾನಂದಮಯಃ ಸಾಕ್ಷೀ ನಿರ್ಗುಣೋ ನಿರುಪಾಧಿಕಃ ।
ನಿತ್ಯೋಽಪಿ ಭಜತೇ ತಾಂ ತಾಮವಸ್ಥಾಂ ಸ ಯದೃಚ್ಛಯಾ ॥ ೩೭ ॥

---

ಯಜ್ಞವು; ಯಜಮಾನನು, ಸೃಕ್ಸ್ರುವಾದಿ ಯಜ್ಞಸಾಧನಗಳೂ ಆತನೇ ಆಗಿರುವನು.

೩೩. ಯಜ್ಞಫಲವೂ ಫಲವನ್ನು ಕೊಡುವ ದೈವವೂ ಆತನೇ. ಆತನ ಪದವೇ ಸಕಲರಿಗೂ ಪ್ರಾಪ್ಯವಾದ ಮೋಕ್ಷಪದವಿಯು. ಯಾರು ಅಗ್ನ್ಯಾಧಾನವನ್ನು ಮಾಡಿ ಅದರಲ್ಲಿ ಪ್ರೋಕ್ಷಿತವಾಗಿ ಪರಿಶುದ್ಧವಾದ ಪಶುವನ್ನು ಆಹುತಿಯನ್ನಾಗಿ ಕೊಡುವರೊ, ಅವರು ಆತನನ್ನೇ ಹೊಂದಿ ಆತನ ವಾಕ್ಯಗಳಾದ ವೇದಗಳಲ್ಲಿ ಪ್ರತಿಪಾದಿಸಲ್ಪಟ್ಟ ಸದ್ಗತಿಯನ್ನು ಪಡೆಯುವರು.

೩೪. ಜ್ಞಾನವೆಂಬ ಅಗ್ನಿಯನ್ನು ಪ್ರಜ್ವಲಿಸಿ ಕರ್ಮಪಾಶವೆಂಬ ಪಶುವನ್ನು ಯಾರು ಅದರಲ್ಲಿ ಹೋಮಮಾಡುವರೊ, ಅವರು ಪರಮಾತ್ಮನ ಪ್ರೀತಿಗಾಗಿ ಮಾಡಿದ ಆ ಕರ್ಮದಿಂದ ಆತನ ಸಾಯುಜ್ಯಪದವಿಯಲ್ಲಿ ಭಾಗಿಗಳಾಗುವರು.

೩೫. ಹರಿ, ಸದಾಶಿವ, ಬ್ರಹ್ಮ, ಮಹೇಂದ್ರ, ಪರಮಾತ್ಮ, ಸ್ವರಾಟ್ ಮುಂತಾದ ಪದಗಳೆಲ್ಲವೂ ಸರ್ವೇಶ್ವರನಾದ ಒಬ್ಬ ಮೂರ್ತಿಗೇ ಪರ್ಯಾಯ ನಾಮಗಳೆಂದು ಹೇಳಲ್ಪಟ್ಟಿರುವುವು.

೩೬. ಯಾವನು ಸಮಾಹಿತವಾದ ಮನಸ್ಸಿನಿಂದ ಅಂತರಾತ್ಮನಾದ ನಾರಾಯಣನ ಮಾಹಾತ್ಮ್ಯವನ್ನು ಅನುಸಂಧಾನಮಾಡುವನೊ, ಅವನಿಗೆ ಮತ್ತೆ ಸಂಸಾರದ ಭಯವುಂಟಾಗಲಾರದು.

೩೭. ಆತನು ಜ್ಞಾನಾನಂದಮಯನೂ, ಜಗತ್ಸಾಕ್ಷಿಯೂ, ಗುಣಾತೀತನೂ, ಅಪರಿಚ್ಛಿನ್ನನೂ, ಶಾಶ್ವತನೂ ಆಗಿದ್ದರೂ ಸ್ವೇಚ್ಛೆಯಿಂದಲೇ ಆಯಾ ಅವಸ್ಥೆಗಳನ್ನು ಸ್ವೀಕರಿಸುವನು.

ಪವಿತ್ರಾಣಾಂ ಪವಿತ್ರಂ ಯೋ ಹ್ಯಗತೀನಾಂ ಪರಾ ಗತಿಃ ।
ದೈವತಂ ದೇವತಾನಾಂ ಚ ಶ್ರೇಯಸಾಂ ಶ್ರೇಯ ಉತ್ತಮಂ ॥ ೩೮ ॥
ಬೋಧ್ಯಾನಾಂ ಬೋಧ್ಯ ಏಕೋಽಸೌ ಧ್ಯೇಯಾನಾಂ ಧ್ಯೇಯ ಉತ್ತಮಃ ।
ವಿನಯಾನಾಂ ಸಮಧಿಕೋ ವಿನಯೋ ನಯಸಂಯುತಃ ॥ ೩೯ ॥
ತೇಜಸಾಂ ಜನಕಂ ತೇಜಃ ಪ್ರಕೃಷ್ಟಂ ತಪಸಾಂ ತಪಃ ।
ಆಧಾರಃ ಸರ್ವಭೂತಾನಾಮನಾದ್ಯಂತೋ ಜನಾರ್ದನಃ ॥ ೪೦ ॥
ತಸ್ಯೇದಂ ಭಾವವಿಜ್ಞಾನೇ ಮೂಢಾ ಬ್ರಹ್ಮಾದಯೋಽಪಿ ಚ ।
ಅಜೋ ಗೃಹ್ಣಾತಿ ಜನನಂ ಸರ್ವಾತ್ಮಾ ಹಂತಿ ವಿದ್ವಿಷಃ ॥ ೪೧ ॥
ಸ್ವತಂತ್ರೋಽಪಿ ಸ್ವಭಕ್ತಾನಾಂ ಪರತಂತ್ರಃ ಪ್ರವರ್ತತೇ ।
ಸ ಸಾಕ್ಷೀ ಕರ್ಮಣಾಂ ದೇವಃ ಸರ್ವಜ್ಞೋ ಗರುಡಧ್ವಜಃ ॥ ೪೨ ॥
ತಸ್ಯ ಸ್ವರೂಪಂ ಮುನಯೋ ಮೃಗಯಂತೇ ಸಮಾಹಿತಾಃ ।
ಸಂಕರ್ಷಣೋ ವಾಸುದೇವಃ ಪ್ರದ್ಯುಮ್ನಶ್ಚ ತಥಾ ಪುನಃ ॥ ೪೩ ॥
ಅನಿರುದ್ಧ ಇತಿ ಖ್ಯಾತಂ ತನ್ಮೂರ್ತೀನಾಂ ಚತುಷ್ಟಯಂ ।
ಕೀರ್ತಿತಃ ಪ್ರಣವಃ ಪಶ್ಚಾದ್ಧೃದಯಂ ತಸ್ಯ ಭಾಸ್ವರಂ ॥ ೪೪ ॥

---

೩೮. ಪವಿತ್ರವಸ್ತುಗಳಲ್ಲಿ ಪರಮಪವಿತ್ರನೂ, ಗತಿವಿಹೀನರಿಗೆ ಉತ್ತಮ ಗತಿಯೂ, ದೇವತೆಗಳಲ್ಲಿ ಉತ್ತಮದೈವತವೂ, ಶ್ರೇಯಸ್ಸುಗಳಲ್ಲಿ ಪರಮ ಶ್ರೇಯಸ್ಕಾರಕನೂ ಆಗಿರುವನು ಆತನೇ!

೩೯. ಜ್ಞೇಯ ವಸ್ತುಗಳಲ್ಲಿ ಆತನೇ ಬೋಧ್ಯನು; ಧ್ಯೇಯಗಳಲ್ಲಿ ಉತ್ತಮ ಧ್ಯೇಯನು. ವಿನಯಗಳಲ್ಲಿ ಅತ್ಯಧಿಕ ವಿನಯನಾಗಿ ನಯಸಹಿತನಾಗಿರುವನು.

೪೦. ಸೂರ್ಯಾದಿ ತೇಜಸ್ಸುಗಳಿಗೆಲ್ಲ ಕಾರಣನಾದ ತೇಜವೂ, ತಪಸ್ಸುಗಳಿಗೆಲ್ಲ ಉತ್ಕೃಷ್ಟವಾದ ತಪವೂ, ಸಕಲ ಭೂತಗಳಿಗೂ ಆಧಾರನೂ ಆದ ಈ ಜನಾರ್ದನನು ಸ್ವತಃ ಆದ್ಯಂತರಹಿತನಾಗಿರುವನು.

೪೧. ಆತನ ಪೂರ್ಣಸ್ವರೂಪವನ್ನು ತಿಳಿಯುವುದರಲ್ಲಿ ಬ್ರಹ್ಮಾದಿದೇವತೆಗಳೂ ಮೂಢರಾಗಿರುವರು. ಆತನು ಜನನರಹಿತನಾದರೂ ಸ್ವೇಚ್ಛೆಯಿಂದ ಅವತಾರಗಳನ್ನೆತ್ತುತ್ತಾನೆ. ಸಕಲ ಭೂತಗಳ ಅಂತರ್ಯಾಮಿಯಾದರೂ ದ್ವೇಷಿಗಳನ್ನು ನಿಗ್ರಹಿಸುವನು.

೪೨. ಸರ್ವತಂತ್ರ ಸ್ವತಂತ್ರನಾದರೂ ತನ್ನ ಭಕ್ತರಿಗೆ ಅಧೀನನಾಗಿಯೇ ನಡೆದುಕೊಳ್ಳುವನು. ಆತನೇ ನಮ್ಮ ಎಲ್ಲ ಕರ್ಮಗಳ ಸಾಕ್ಷಿಯು, ದೇವದೇವನು, ಸರ್ವಜ್ಞನು, ಗರುಡಲಾಂಛನನು.

೪೩–೪೪. ಮಹಾಮುನಿಗಳೆಲ್ಲರೂ ಏಕಾಗ್ರಚಿತ್ತಗಳಿಂದ ಆತನ ಸ್ವರೂಪವನ್ನೇ ಅರಸುತ್ತಿರುವರು. ಆತನಿಗೆ ಸಂಕರ್ಷಣ, ವಾಸುದೇವ, ಪ್ರದ್ಯುಮ್ನ

ಭಗವಾನ್ವಾಸುದೇವಶ್ಚ ಮಂತ್ರೋಽಯಂ ತತ್ಪ್ರಕಾಶಕಃ ॥ ೪೫ ॥
ಮಂತ್ರರಾಜಮಿಮಂ ನಿತ್ಯಂ ಪ್ರಜಪೇದ್ಯಃ ಸಮಾಹಿತಃ ।
ಸ ವಿಷ್ಣೋಃ ಕರುಣಾಯೋಗಾತ್ಸಿದ್ಧೀನಾಂ ಭಾಜನಂ ಭವೇತ್ ॥ ೪೬ ॥
ಆಪನ್ನಿವಾರಕಃ ಸಂಪತ್ಪ್ರಾಪಕೋ ಭುಕ್ತಿಮುಕ್ತಿದಃ ।
ಯಥಾ ಸಸರ್ಜ ಭೂತಾನಿ ಕಲ್ಪಾದೇವೇಷ ಮಾಧವಃ ।
ತತ್ಸರ್ವಂ ಕಥಯಿಷ್ಯಾಮಿ ಸಮಾಹಿತಮನಾಃ ಶೃಣು ॥ ೪೭ ॥
ತಸ್ಯ ಚಿಂತಯತಃ ಸರ್ಗಂ ತೇಜೋರೂಪಂ ಪರಂ ಹರೇಃ ।
ವಿರಿಂಚ ಇತಿ ವಿಖ್ಯಾತಂ ರಾಜಸಂ ಗುಣಮಾಶ್ರಿತಂ ॥ ೪೮ ॥
ತಸ್ಯ ದೇವಸ್ಯ ವದನಾಚ್ಛಕ್ರೋ ದೇವಃ ಸಪಾವಕಃ ।
ಜಜ್ಞೇ ಯಶ್ಚ ತ್ರಿಲೋಕೇಶಃ ಪಾಕಕರ್ಮಣಿ ಯಃ ಪ್ರಭುಃ ॥ ೪೯ ॥
ಮನಸಶ್ಚಾಭವಚ್ಚಂದ್ರಃ ಕರುಣಾನಿತ್ಯಶೀತಲಾತ್ ।
ಅಪಾಂ ಸರ್ವೌಷಧೀನಾಂ ಚ ವಿಪ್ರಾಣಾಂ ರಕ್ಷಕಃ ಸದಾ ॥ ೫೦ ॥

---

ಅನಿರುದ್ಧ ಎಂಬ ನಾಲ್ಕು ರೂಪಗಳು ಪ್ರಖ್ಯಾತಗಳಾಗಿರುವುವು. ಓಂಕಾರವೇ ಆತನ ತೇಜೋಮಯವಾದ ಹೃದಯವೆಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವುದು.

೪೫. "ಓ ನಮೋ ಭಗವತೇ ವಾಸುದೇವಾಯ" ಎಂಬ ಮಂತ್ರವೇ ಆತನನ್ನು ತೋರಿಸುವ ಮಂತ್ರವಾಗಿರುವುದು.

೪೬. ಯಾವನು ಸರ್ವೋತ್ತಮವಾದ ಈ ಮಂತ್ರವನ್ನು ನಿತ್ಯವೂ ಏಕಾಗ್ರ ಚಿತ್ತದಿಂದ ಜಪಿಸುವನೊ, ಅವನು ಶ್ರೀಹರಿಯ ಕೃಪೆಗೆ ಪಾತ್ರನಾಗಿ ಸಕಲ ಸಿದ್ಧಿಗಳನ್ನೂ ಪಡೆದು ಸುಖಿಸುವನು.

೪೭. ಈ ಮಂತ್ರವು ಸಕಲ ಕಷ್ಟಗಳನ್ನೂ ನಿವಾರಿಸಿ ಭುಕ್ತಿಮುಕ್ತಿಗಳನ್ನು ಕೊಡುವುದು. ಈ ನಾರಾಯಣನು ಭೂತಗಳನ್ನೆಲ್ಲ ಸೃಷ್ಟಿಮಾಡಿದ ಪ್ರಕಾರವನ್ನು ವಿಸ್ತರಿಸುವೆನು. ಶ್ರದ್ಧೆಯಿಂದ ಕೇಳುವವನಾಗು

೪೮–೪೯. ಶ್ರೀಹರಿಯು ಪ್ರಪಂಚವನ್ನು ಸೃಷ್ಟಿಮಾಡಬೇಕೆಂದು ಚಿಂತಿಸುತ್ತಿರಲು ಆತನ ಪರಾತ್ಪರವಾದ ತೇಜೋರೂಪವು ರಜೋಗುಣಮಯವಾಗಿ ಬ್ರಹ್ಮನೆಂಬ ಹೆಸರಿನಿಂದ ಪ್ರಖ್ಯಾತವಾಯಿತು. ಆ ದೇವದೇವನ ಮುಖದಿಂದ ಮೂರು ಲೋಕಗಳಿಗೆ ಒಡೆಯನಾದ ಮಹೇಂದ್ರನೂ ಸಕಲ ಪದಾರ್ಥಗಳನ್ನು ಪಚನಮಾಡುವ ಅಗ್ನಿದೇವನೂ ಹುಟ್ಟಿದರು.

೫೦. ಲೋಕಕಾರುಣ್ಯದಿಂದ ಶೀತಲವಾದ ಆತನ ಮನಸ್ಸಿನಿಂದ ಚಂದ್ರನು ಉದ್ಭವಿಸಿ ನಿರಂತರವೂ ನೀರುಗಳಿಗೂ, ಓಷಧಿವನಸ್ಪತಿಗಳಿಗೂ, ಬ್ರಾಹ್ಮಣರಿಗೂ ಪರಿಪಾಲಕನಾದನು.

ನೇತ್ರಾಭ್ಯಾಮುದಭೂತ್ಸೂರ್ಯಸ್ತಸ್ಯ ವಿಶ್ವಪ್ರಕಾಶಕಃ ।
ಶೀತೋಷ್ಣವರ್ಷಕೃತ್ಕಾಲಕಾರಣಂ ತೇಜಸಾಂ ನಿಧಿಃ ॥ ೫೧ ॥
ಪ್ರಾಣೇಭ್ಯೋಽಸ್ಯ ಜಗತ್ಪ್ರಾಣಃ ಸಮೀರಃ ಸಮಜಾಯತ ।
ಧರ್ತಾ ಗ್ರಹರ್ಕ್ಷಸ್ವರ್ಗಂಗಾ ವಿಮಾನಾನಾಂ ಮಹಾಬಲಃ ॥ ೫೨ ॥
ನಾಭಿದೇಶಾತ್ಸಮುತ್ಪನ್ನಮಂತರಿಕ್ಷಂ ಮಹಾತ್ಮನಃ ।
ತಸ್ಯಾಸೀಚ್ಛಿರಸೋ ವ್ಯೋಮ ಭೂತಸಂಭವಕಾರಣಂ ॥ ೫೩ ॥
ಪಾದಾಂಬುಜಾಭ್ಯಾಮುದಭೂದ್ಭೂಮಿರ್ಭೂತಗಣಾಶ್ರಯಾ ।
ವಿನಿಸ್ಸೃತಾ ದಿಶಃ ಸರ್ವಾಃ ಶ್ರೋತ್ರಾಭ್ಯಾಂ ಪರಮಾತ್ಮನಃ ॥ ೫೪ ॥
ಭೂರ್ಭುವಾದ್ಯಾಸ್ತಥಾ ಲೋಕಾಃ ಸ್ಮರಣಾತ್ತಸ್ಯ ಜಜ್ಞಿರೇ ।
ರಸಾತಲಾದಿಲೋಕಾಶ್ಚ ಯಕ್ಷರಕ್ಷೋಗಣಾದಯಃ ॥ ೫೫ ॥
ಮುಖಬಾಹೂರುಪಾದೇಭ್ಯೋ ಜನಯಾಮಾಸ ಸ ಕ್ರಮಾತ್ ।
ಬ್ರಾಹ್ಮಣಾನ್ಕ್ಷತ್ರಿಯಾನ್ವೈಶ್ಯಾಞ್ಛೂದ್ರಾದೀಂಶ್ಚ ಕುರೂದ್ವಹ ॥ ೫೬ ॥

---

೫೧. ನೇತ್ರಗಳಿಂದ ಸಕಲ ಬ್ರಹ್ಮಾಂಡಕ್ಕೆ ಪ್ರಕಾಶವನ್ನುಂಟುಮಾಡುವವನೂ, ಶೀತ, ಉಷ್ಣ, ವರ್ಷ ಮುಂತಾದುವುಗಳನ್ನುಂಟುಮಾಡುವ ಭೂತಭವಿಷ್ಯದ್ವರ್ತಮಾನಾತ್ಮಕವಾದ ಕಾಲಕ್ಕೆ ಕಾರಣಭೂತನೂ, ತೇಜಸ್ಸಿನ ನಿಧಿಯೂ ಆದ ಸೂರ್ಯನು ಹುಟ್ಟಿದನು.

೫೨. ಪ್ರಾಣದಿಂದ ಲೋಕಕ್ಕೆ ಪ್ರಾಣಸಮನೂ, ಅಕಾಶದಲ್ಲಿ ಗ್ರಹ, ನಕ್ಷತ್ರ, ಆಕಾಶಗಂಗೆ, ವಿಮಾನಗಳನ್ನು ನಿಲ್ಲಿಸಿರುವ ಅಪ್ರತಿಮ ಬಲಶಾಲಿಯೂ ಆದ ವಾಯುದೇವನು ಉದ್ಭವಿಸಿದನು.

೫೩. ಆ ಮಹಾತ್ಮನ ನಾಭಿದೇಶದಿಂದ ಅಂತರಿಕ್ಷವುಂಟಾಯಿತು. ಆತನ ಶಿರಸ್ಸಿನಿಂದ ಭೂತಗಳ ಶರೀರಗಳಿಗೆ ಉಪಾದಾನಕಾರಣವಾದ ಆಕಾಶವು ಹೊರಟಿತು.

೫೪. ಆತನ ಪಾದಗಳಿಂದಲೇ ಸಮಸ್ತ ಪ್ರಾಣಿಕೋಟಿಗಳಿಗೂ ಆಶ್ರಯಭೂತವಾದ ಭೂಮಿಯು ಹುಟ್ಟಿತು. ಪರಮಾತ್ಮನ ಕಿವಿಗಳಿಂದ ಸಕಲ ದಿಕ್ಕುಗಳೂ ಹೊರಕ್ಕೆ ಬಂದವು.

೫೫. ಭೂಲೋಕ, ಭುವರ್ಲೋಕ, ಸ್ವರ್ಲೋಕಗಳೇ ಮುಂತಾದ ಏಳು ಊರ್ಧ್ವಲೋಕಗಳೂ, ರಸಾತಲಾದಿ ಏಳು ಅಧೋಲೋಕಗಳೂ ಯಕ್ಷರಾಕ್ಷಸರ ಸಮೂಹಗಳೂ ಉಂಟಾದುವು.

೫೬. ಬಳಿಕ ಆತನು ಮುಖ, ಬಾಹುಗಳು, ತೊಡೆಗಳು ಮತ್ತು ಪಾದಗಳಿಂದ ಕ್ರಮವಾಗಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರನ್ನು ಸೃಜಿಸಿದನು.

ಛಂದಾಂಸಿ ಯಜ್ಞಸ್ತುರಗಾ ಗಾವೋ ಮೇಷಾವಿಕಾದಯಃ ।
ಅತರ್ಕ್ಯಪ್ರಭಾವಂ ತಸ್ಮಾದುತ್ಪತ್ತಿಂ ಪ್ರತಿಪೇದಿರೇ ॥ ೫೭ ॥
ಸಂಕಲ್ಪಾದ್ದೇವದೇವಸ್ಯ ತಸ್ಯ ಸ್ಥಾವರಜಂಗಮಂ ।
ಭೂತಜಾತಮಭೂತ್ಕಾಲೋ ಭೂತೋ ಭಾವೀ ಭವಂಸ್ತಥಾ ॥ ೫೮ ॥
ಪಿಬತ್ಯಂಬು ಸಮುದ್ರಾಣಾಂ ವಡವಾನಲರೂಪಧೃಕ್ ।
ಕಲ್ಪಾಂತಕಾಲೇ ತತ್ಸರ್ವಂ ವಿಸೃಜತ್ಯಾತ್ಮನಿ ಸ್ಥಿತಂ ॥ ೫೯ ॥
ಸಂಚಾರಯತಿ ಭೂತಾನಾಂ ವೃತ್ತಿಂ ಸೂರ್ಯೇಂದುರೂಪಧೃಕ್ ।
ತಮೋನಿರಸನಾಚ್ಚಾಪಿ ಕಾಲಧರ್ಮಪ್ರವರ್ತನಾತ್ ॥ ೬೦ ॥
ಜಗಂತಿ ಕಲ್ಪವಿರಮೇ ವನ್ಯಸ್ಯ ಸ್ವೋದರಾಂತರೇ ।
ಲೀಲಾಬಾಲಾಕೃತಿಃ ಶೇತೇ ವಟಪತ್ರೇ ಮಹಾಂಬುಧೌ ॥ ೬೧ ॥
ಅಥ ಚೋದಗ್ರಭೋಗೀಂದ್ರ ಭೋಗತಲ್ಪೇ ಸುಖೋಚಿತೇ ।
ಯೋಗನಿದ್ರಾಮವಾಪ್ನೋತಿ ಸದ್ವಿತೀಯೋಽಬ್ಜವಾಸಯಾ ॥ ೬೨ ॥
ನಾಭಿಕಾಸಾರಸಂಭೂತಾಜ್ಜನಯಾಮಾಸ ಪಂಕಜಾತ್ ।
ಸರ್ವೇಷಾಂ ಜಗತಾಂ ನಾಥೋ ವಿಧಾತಾರಂ ಚತುರ್ಮುಖಂ ॥ ೬೩ ॥

---

೫೭. ವೇದಗಳೂ, ಯಜ್ಞವೂ, ಕುದುರೆಗಳೂ, ಪಶುಗಳು, ಮೇಕೆಗಳು, ಕುರಿಗಳು ಮುಂತಾದ ವಿಚಿತ್ರ ಸೃಷ್ಟಿಯೂ ಎಲ್ಲವೂ ಬುದ್ಧಿಯ ನಿಶ್ಚಯಕ್ಕೆ ನಿಲಕದುದಾಗಿ ಆತನಿಂದಲೇ ಉತ್ಪತ್ತಿಯನ್ನು ಹೊಂದಿರುವುದು.

೫೮. ದೇವೋತ್ತಮನಾದ ಆತನ ಸಂಕಲ್ಪಮಾತ್ರದಿಂದಲೇ ಚರಾಚರಾತ್ಮಕವಾದ ಸಕಲ ಪ್ರಾಣಿಸಮೂಹವೂ ಭೂತಭವಿಷ್ಯದ್ವರ್ತಮಾನ ಭೇದಗಳನ್ನೊಳಕೊಂಡ ಕಾಲವೂ ಉಂಟಾದುವು.

೫೯–೬೦. ಆತನೇ ಬಡಬಾಗ್ನಿಯ ರೂಪವನ್ನು ಧರಿಸಿ ಸಪ್ತಸಮುದ್ರಗಳ ನೀರನ್ನು ಶೋಷಿಸುವನು. ತನ್ನಲ್ಲಿರುವ ಆ ಜಲವನ್ನೆಲ್ಲ ಪ್ರಳಯಕಾಲದಲ್ಲಿ ಹೊರತಳ್ಳಿ ವರ್ಷವನ್ನು ಸುರಿಸುವನು. ಸೂರ್ಯಚಂದ್ರರ ರೂಪವನ್ನು ಸ್ವೀಕರಿಸಿಕೊಂಡು ಕತ್ತಲೆಯನ್ನು ಕಳೆಯುವುದರಿಂದಲೂ, ಕಾಲಸ್ವರೂಪಿಯಾಗಿ ಪ್ರವರ್ತಿಸುವುದರಿಂದಲೂ ಸಮಸ್ತ ಪ್ರಾಣಿಗಳ ವ್ಯಾಪಾರಗಳನ್ನೂ ನಡೆಸುತ್ತಿರುವನು.

೬೧. ಕಲ್ಪಾವಸಾನದಲ್ಲಿ ಹದಿನಾಲ್ಕು ಲೋಕಗಳನ್ನೂ ತನ್ನ ಹೊಟ್ಟೆಯೊಳಲಿಟ್ಟುಕೊಂಡು ಮಾಯಾಶಿಶುವಿನ ರೂಪವನ್ನು ತಾಳಿ ಮಹಾ ಸಮುದ್ರದ ಮೇಲೆ ಆಲದೆಲೆಯಲ್ಲಿ ಮಲಗಿರುವನು.

೬೨. ಬಳಿಕ ಲಕ್ಷ್ಮೀಸಮೇತನಾಗಿ ಆದಿಶೇಷನ ವಿಶಾಲವಾದ ಶರೀರವೆಂಬ ಸೌಖ್ಯಪ್ರದವಾದ ಪರ್ಯಂಕದಲ್ಲಿ ಯೋಗನಿದ್ರೆಯನ್ನು ಹೊಂದುವನು.

೬೩. ಸಕಲ ಭುವನಗಳಿಗೂ ಆದಿಕಾರಣನಾದ ಈ ನಾರಾಯಣನು ತನ್ನ

ಲೀಲಾ ಹ್ಯೇಷಾ ಮುಕುಂದಸ್ಯ ಸ್ವೇಚ್ಛಾಯೋಗಪ್ರವರ್ತಿನಃ ।
ವಿಜ್ಞಾಯತೇ ನ ಕೇನಾಪಿ ಯಾಥಾರ್ಥ್ಯೇನ ಸ ಈಶ್ವರಃ ॥ ೬೪ ॥
ಯದಾ ಧರ್ಮಸ್ಯ ಹಾನಿಃ ಸ್ಯಾದಧರ್ಮೋ ವರ್ಧತೇ ಯದಾ ।
ಯದಾ ವಾ ಮಹತೀಂ ಪೀಡಾಂ ಭಜಂತೇ ದೇವತಾಗಣಾಃ ॥ ೬೫ ॥
ಯದಾವಲೇಪದುರ್ವಾರಾ ಯಾಂತಿ ವೃದ್ಧಿಂ ಸುರದ್ವಿಷಃ ।
ಭೂಮೇರ್ಭೂನಿಜನಾನಾಂ ಚ ಯದೋದೇತಿ ಮಹದ್ಭಯಂ ॥ ೬೬ ॥
ಯದಾ ವಾ ನಿಜಭಕ್ತಾನಾಂ ಸಾಧೂನಾಮನಿವಾರಿತಾ ।
ದುರಂತಾತಂಕಜನನೀ ವಿಪತ್ಸಮುಪಜಾಯ ತೇ ॥ ೬೭ ॥
ತದಾ ತದನುರೂಪಾಣಿ ರೂಪಾಣ್ಯಾಸ್ಥಾಯ ಕೌತುಕಾತ್ ।
ಅಧರ್ಮಮವಧೂಯಾಶು ಕುರುತೇ ಜಗತೋ ಹಿತಂ ॥ ೬೮ ॥

ಸೃಜತಿವಿವಿಧಸಮಾಖ್ಯೋ ರಾಜಸೇನಾತ್ಮನಾಸೌ
ವಹತಿ ಹರಿಸಮಾಖ್ಯಃ ಸತ್ತ್ವನಿಷ್ಠಃ ಪ್ರಪಂಚಂ ।
ಹರತಿ ಹರಸಮಾಖ್ಯಸ್ತಾಮಸೀಮೇತ್ಯ ವೃತ್ತಿಂ
ಮಧುಮಥನಮಹಿಮ್ನಾಮಸ್ತಿ ವೇತ್ತಾ ನ ಕೋಽಪಿ ॥೬೯॥

---

ನಾಭಿಯೆಂಬ ಸರೋವರದಿಂದುದ್ಭವಿಸಿದ ಕಮಲದಲ್ಲಿ ಚತುರ್ಮುಖನಾದ ಬ್ರಹ್ಮದೇವನನ್ನು ಸೃಷ್ಟಿಮಾಡಿದನು.

೬೪. ತನ್ನ ಯೋಗಮಾಯೆಯ ಸಹಾಯದಿಂದ ಸ್ವೇಚ್ಛೆಯಾಗಿ ಪ್ರವರ್ತಿಸುತ್ತಿರುವ ಮಹಾವಿಷ್ಣುವಿನ ಲೀಲೆಯೇ ಈ ಬ್ರಹ್ಮಾಂಡವಾಗಿರುವುದು. ಸರ್ವಶಕ್ತನಾದ ಈಶ್ವರನನ್ನು ಯಥಾರ್ಥವಾಗಿ ತಿಳಿಯಲು ಯಾರಿಗೂ ಸಾಧ್ಯವಾಗಲಾರದು.

೬೫–೬೮. ಯಾವಯಾವ ಕಾಲದಲ್ಲಿ ಧರ್ಮಕ್ಕೆ ಚ್ಯುತಿಯುಂಟಾಗುವುದೊ, ಅಧರ್ಮವು ತಲೆಯೆತ್ತುವುದೊ, ದೇವತೆಗಳು ಅತಿಶಯವಾದ ಹಿಂಸೆಯನ್ನು ಹೊಂದುವರೊ, ರಾಕ್ಷಸರು ಅವರನ್ನು ದ್ವೇಷಿಸಿ ತಡೆಯಿಲ್ಲದೆ ದುಷ್ಕೃತ್ಯಗಳನ್ನು ಮಾಡುತ್ತ ವೃದ್ಧಿಯನ್ನು ಹೊಂದುವರೊ, ಭೂಮಿಗೂ, ಭೂಲೋಕನಿವಾಸಿಗಳಿಗೂ ಮಹತ್ತರವಾದ ಭಯವುಂಟಾಗುವುದೊ, ತನ್ನ ಭಕ್ತರಾದ ಸಾಧುಗಳಿಗೆ ನಿವಾರಿಸಲಸಾಧ್ಯವಾದ ದುಃಖಕರವಾದ ವಿಪತ್ಪರಂಪರೆಯುಂಟಾಗುವುದೊ, ಆ ಸಮಯಗಳಲ್ಲಿ ಆಯಾ ಸನ್ನಿವೇಶಕ್ಕೆ ಸರಿಯಾದ ರೂಪಗಳನ್ನು ತನ್ನ ಮಾಯೆಯಿಂದ ಸ್ವೀಕರಿಸಿ ಅಧರ್ಮವನ್ನು ನಿರ್ಮೂಲಗೊಳಿಸಿ ಶ್ರೀ ಹರಿಯು ಲೋಕಕಲ್ಯಾಣವನ್ನುಂಟುಮಾಡುತ್ತಿರುವನು.

೬೯. ತನ್ನ ರಜೋಗುಣದಿಂದ ಬ್ರಹ್ಮನೆಂಬ ಹೆಸರನ್ನು ಹೊಂದಿ ಬ್ರಹ್ಮಾಂಡವನ್ನು ಸೃಷ್ಟಿಮಾಡುವನು. ಸತ್ತ್ವಗುಣದಲ್ಲಿ ನೆಲೆಗೊಂಡು ಹರಿಯೆಂಬ

ಯಜ್ಞಾಂಗೈಃ ಕೃತಸಕಲಾಂಗಸಂಧಿಬಂಧಂ
ವರಾಹಂ ವಪುರಧಿಗಮ್ಯ ಲೋಕನಾಥಃ ।
ಶೈಲೇಽಸ್ಮಿನ್ನಭಜದಸೌ ಯಥಾನಿವಾಸಂ
ತದ್ವಕ್ಷ್ಯೇ ಶೃಣು ವಿಬುಧಾಧಿನಾಥಸೂನೋ ॥ ೭೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹ ಸಂವಾದೇ "ಸುವರ್ಣಮುಖರೀಮಾಹಾತ್ಮ್ಯೇ ವಿಷ್ಣುಮಾಹಾತ್ಮ್ಯಪ್ರಸ್ತಾವೇ ಸೃಷ್ಟ್ಯಾದಿ ವರ್ಣನಂ" ನಾಮ ಪಂಚತ್ರಿಂಶೋಽಧ್ಯಾಯಃ

---

ಹೆಸರಿನಿಂದ ಪ್ರಪಂಚವನ್ನು ರಕ್ಷಣೆಮಾಡುವನು. ತಮೋಗುಣವೃತ್ತಿಯನ್ನು ಹೊಂದಿ ಹರನೆಂಬ ಹೆಸರನ್ನು ಪಡೆದು ಸಕಲವನ್ನೂ ತನ್ನಲ್ಲಿಯೇ ಲಯಗೊಳಿಸು ವನು. ಮಧುಸೂದನನ ಮಹಿಮೆಗಳನ್ನು ಸಮಗ್ರವಾಗಿ ತಿಳಿದವನು ಯಾವನು ತಾನೆ ಇರುವನು?

೭೦. ದೇವೇಂದ್ರತನಯನಾದ ಎಲೈ ಅರ್ಜುನನೆ! ಲೋಕನಾಯಕನಾದ ಶ್ರೀ ಹರಿಯು ಯಜ್ಞಗಳ ಸೃಕ್ಸ್ರುವಾದಿಗಳಿಂದ ಮಾಡಲ್ಪಟ್ಟ ಅವಯವಗಳುಳ್ಳ ವರಾಹರೂಪವನ್ನು ಧರಿಸಿ ಈ ವೇಂಕಟಾಚಲದಲ್ಲಿ ನಿವಾಸವನ್ನು ಹೇಗೆ ಮಾಡಿಕೊಂಡನೆಂಬುದನ್ನು ತಿಳಿಸುವೆನು, ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೇಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ಸುವರ್ಣಮುಖರೀ ಮಾಹಾತ್ಮ್ಯ— ವಿಷ್ಣುಮಾಹಾತ್ಮ್ಯಪ್ರಸ್ತಾವ—ಸೃಷ್ಟ್ಯಾದಿವರ್ಣನ"ವೆಂಬ ಮೂವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್ತ್ರಿಂಶೋಽಧ್ಯಾಯಃ

### ಸುವರ್ಣಮುಖರೀ ಮಾಹಾತ್ಮ್ಯಪ್ರಶಂಸಾಯಾಂ ವರಾಹಾವತಾರವರ್ಣನಂ

ಭರದ್ವಾಜ ಉವಾಚ :—

ಪುರಾ ನಿಶಾತ್ಯಯೇ ಧಾತುಃ ಪ್ರಬುದ್ಧೋ ಮಧುಸೂದನಃ ।
ಪುನಃ ಪ್ರವೃತ್ತಿಂ ಭೂತಾನಾಮನ್ವಿಯೇಷ ಧಿಯಾ ಭೃಶಂ ॥ ೧ ॥
ವಿನಾ ವಸುಮತೀಮನ್ಯೇ ಭೂತೌಘಧರಣಕ್ಷಮಾಂ ।
ನ ಭವಂತೀತಿ ಹೃದಯೇ ತರ್ಕಸ್ತಸ್ಯಾಜನಿಷ್ಟ ಚ ॥ ೨ ॥
ಅಪಶ್ಯತ್ಪ್ರಣಿಧಾನೇನ ಮಹೀಂ ಪಾತಾಲಗೋಚರಾಂ ।
ಅತಿಮಂತ್ರಭಯೋದ್ವಿಗ್ನಾಂ ಪರೀತಾಂ ಮಹತಾಂಬುನಾ ॥ ೩ ॥
ಪ್ರತಿಪೇದೇ ತದಾ ರೂಪಂ ಭೂಸಮುದ್ಧರಣೋಚಿತಂ ।
ಉಪಕರ್ಮೋಷ್ಠಮನಲಜಿಹ್ವಂ ಪ್ರಣವಘೋಷಣಂ ॥ ೪ ॥
ಚತುರಾಮ್ನಾಯಚರಣಂ ಪ್ರಾಯಶ್ಚಿತ್ತಖುರಾಂಚಿತಂ ।
ಪ್ರಾಗ್ವಂಶಕಾಯಂ ವಿಲಸದ್ದರ್ಭರೋಮಾವಲೀಯುತಂ ॥ ೫ ॥

---

## ಕನ್ನಡದ ಅನುವಾದ

### ಸುವರ್ಣಮುಖರೀಮಾಹಾತ್ಮ್ಯಪ್ರಶಂಸೆ— ವರಾಹಾವತಾರವರ್ಣನ

೧. ಭರದ್ವಾಜನು ಹೇಳುತ್ತಾನೆ:—ಪೂರ್ವದಲ್ಲಿ ಬ್ರಹ್ಮನ ನಿದ್ರಾಸಮಯವು ಮುಗಿಯಲು ಶ್ರೀಮನ್ನಾರಾಯಣನು ಎಚ್ಚತ್ತು ಮತ್ತೆ ಭೂತಗಳನ್ನು ಸೃಷ್ಟಿಮಾಡಬೇಕೆಂದು ಮನಸ್ಸಿನಲ್ಲಿಯೇ ಬಹಳವಾಗಿ ಆಲೋಚಿಸಿದನು.

೨. ಭೂಲೋಕವಲ್ಲದೆ ಮತ್ತಾರಿಂದಲೂ ಪ್ರಾಣಿಸಮೂಹಗಳನ್ನು ಧರಿಸುವ ಸಾಮರ್ಥ್ಯವು ಉಂಟಾಗಲಾರದೆಂದು ಆತನ ಹೃದಯದಲ್ಲಿ ವಿತರ್ಕವುಂಟಾಯಿತು.

೩. ತದೇಕಧ್ಯಾನದಿಂದ ಯೋಚಿಸುತ್ತಿರಲು ಅತ್ಯಂತ ಭಯದಿಂದ ಕೂಡಿ ಅಪಾರವಾದ ಸಮುದ್ರೋದಕದಿಂದಾವರಿಸಲ್ಪಟ್ಟು ಪಾತಾಲಲೋಕದಲ್ಲಿ ಸೇರಿದ್ದ ಭೂಮಿಯನ್ನು ಜ್ಞಾನದೃಷ್ಟಿಯಿಂದಲೇ ತಿಳಿದುಕೊಂಡನು.

೪. ಆಗ ಭೂಲೋಕವನ್ನು ಮೇಲಕ್ಕೆ ತರಲು ಸಮರ್ಥವಾದ ವರಾಹರೂಪವನ್ನು ಸ್ವೀಕರಿಸಿದನು. ಆ ವರಾಹಮೂರ್ತಿಗೆ ಉಪಕರ್ಮಗಳೇ ತುಟಿಗಳಾದುವು. ಅಗ್ನಿಯೇ ನಾಲಗೆ; ಪ್ರಣವವೇ ಘುರ್ಘುರನಾದ;

೫. ನಾಲ್ಕು ವೇದಗಳೇ ಪಾದಗಳು; ಪ್ರಾಶ್ಚಿತ್ತಗಳೇ ಕಾಲ್ಗೊರಸುಗಳು; ಪ್ರಾಗ್ವಂಶವೆಂಬ ಶಾಲೆಯೇ ದೇಹ; ಶುಭ್ರವಾದ ದರ್ಭೆಗಳೇ ಕೂದಲುಗಳಾಗಿದ್ದುವು.

ಪ್ರವರ್ಗ್ಯಾವರ್ತಸಂಪನ್ನಂ ದಕ್ಷಿಣಾಗ್ನ್ಯುದರಾನ್ವಿತಂ ।
ಸ್ರುಕ್ತುಂಡಮುಖಿಲೈಃ ಸರ್ವೈಃ ಸಂವಿಭಕ್ತಾಂಗಸಂಧಿಕಂ ॥ ೬ ॥
ದಿವ್ಯಸೂಕ್ತಸಟಾಜಾಲಂ ಪರಬ್ರಹ್ಮಶಿರಸ್ತಥಾ ।
ಹವ್ಯಕವ್ಯರಯೋಪೇತಂ ವಿಶುದ್ಧಪಶುಜಾನುಕಂ ॥ ೭ ॥
ಉಕ್ತಾತ್ಯುಕ್ತಾದಿಕಚ್ಛಂದೋಮಾರ್ಗಮಂತ್ರಬಲಾನ್ವಿತಂ ।
ಸರ್ವಯಜ್ಞಮಯಂ ದಿವ್ಯಂ ವಾರಾಹಂ ರೂಪಮಾಸ್ಥಿತಃ ॥ ೮ ॥
ಅನ್ವೇಷ್ಟುಂ ಧರಣೀಮಬ್ಧೇರ್ವಿವೇಶ ಸಲಿಲಾಂತರಂ ।
ದಂಷ್ಟ್ರಾಬಾಲಶಶಾಂಕೋತ್ಥಲಸತ್ಕಾಂತಿಚಯೈರ್ಹಠಾತ್ ॥ ೯ ॥
ಕಲ್ಪಾಂತಸಮಯಸ್ಫೀತಂ ತಮಿಸ್ರಮಪಸಾರಯನ್ ।
ಅಭಿಭೂತಾಂಬುಭೃದ್ಘೋಷೈರ್ಮುಹುರ್ಬ್ರಹ್ಮಾಂಡಕಂದರಾಂ ॥ ೧೦ ॥
ನಿನಾದಮುಖರಾಂ ಕುರ್ವನ್ಘೋರೈರ್ಘುರುಘುರುಸ್ವನೈಃ ।
ಖುರಪ್ರಖುರವಿನ್ಯಾಸೈರ್ಜರ್ಜರೀಕೃತವಿಗ್ರಹಂ ॥ ೧೧ ॥
ಇತಸ್ತತೋ ವಿಲುಠಯನ್ನುರಗಾಣಾಮಧೀಶ್ವರಂ ।
ತೀವ್ರೈರ್ನಿಶ್ವಾಸಪವನೈರಾಪಾತಾಲಂ ಸರಿತ್ಪತೇಃ ।
ಪ್ರಾಪಯನ್ನತಲಸ್ಪರ್ಶಮಂತರಂ ದರ್ಶನೀಯತಾಂ ॥ ೧೨ ॥

---

೬. ಪ್ರವರ್ಗ್ಯವೇ ಕೂದಲಿನ ಸುಳಿ; ದಕ್ಷಿಣಾಗ್ನಿಯೇ ಹೊಟ್ಟೆ; ಸ್ರುಕ್ಕೇ ಮುಖ; ಇಂತು ಆ ವರಾಹ ದೇಹವು ಸಕಲ ಯಜ್ಞೋಪಕರಣಗಳಿಂದ ಮಾಡಲ್ಪಟ್ಟದ್ದಿತು.

೭–೮. ದಿವ್ಯಸೂಕ್ತಗಳೆಂಬ ಮುಳ್ಳುಗಳಿಂದಲೂ, ಪರಬ್ರಹ್ಮನೆಂಬ ತಲೆಯಿಂದಲೂ, ಹವ್ಯಕವ್ಯಗಳೆಂಬ ಉಪಹಾರಗಳಿಂದಲೂ, ಪರಿಶುದ್ಧವಾದ ಪಶುಗಳೆಂಬ ಮೊಣಕಾಲುಗಳಿಂದಲೂ, ಉಕ್ತ, ಅತ್ಯುಕ್ತ ಮುಂತಾದ ಛಂದೋಭೇದಗಳಿಂದೊಡಗೂಡಿದ ಮಂತ್ರಗಳೆಂಬ ಶರೀರದಾರ್ಢ್ಯದಿಂದಲೂ ಪರಮಾತ್ಮನು ಸಕಲ ಯಜ್ಞಾತ್ಮಕವಾದ ಸೂಕರಶರೀರವನ್ನು ಸ್ವೀಕರಿಸಿದ್ದನು.

೯–೧೨. ಬಳಿಕಲಾತನು ಭೂಮಿಯನ್ನು ಹುಡುಕುವುದಕ್ಕಾಗಿ ಸಮುದ್ರವನ್ನು ಪ್ರವೇಶಿಸಿದನು. ಕೋರೆದಾಡೆಗಳೆಂಬ ಚಂದ್ರಮಂಡಲಗಳಿಂದ ಹೊರಚೆಲ್ಲುತ್ತಿರುವ ಬೆಳದಿಂಗಳುಗಳಿಂದ ಪ್ರಳಯಕಾಲದ ಅಂಧತಮಸ್ಸನ್ನು ನಾಶಗೊಳಿಸುತ್ತ ವೇಗವಾಗಿ ಆ ಸಾಗರೋದಕದಲ್ಲಿ ಮುಳುಗಿದನು. ದಟ್ಟವಾಗಿ ಕವಿದ ಮೇಘಗಳ ಧ್ವನಿಯನ್ನು ಹೋಲುವ ಭಯಂಕರವಾದ ಘುರ್ಘುರನಾದದಿಂದ ಬ್ರಹ್ಮಾಂಡದ ಮೂಲೆ ಮೂಲೆಗಳನ್ನೂ ಪ್ರತಿಧ್ವನಿಗಳಿಂದ ತುಂಬುತ್ತ, ಗೊರಸುಗಳ ತೀಕ್ಷ್ಣವಾದ ಹೊಡೆತಗಳಿಂದ ನಾಗಾಧಿಪನಾದ ಆದಿಶೇಷನ ಶರೀರವನ್ನು ಶಿಥಿಲಗೊಳಿಸಿ ಅಲ್ಲಾಡಿಸುತ್ತ, ದೀರ್ಘನಿಶ್ವಾಸಗಳನ್ನು ಬಿಟ್ಟು ಮುಖ

ಅತಿದೀರ್ಘೇಣ ಪೋತ್ರೇಣ ಮಗ್ನೋನ್ಮಗ್ನೇನ ವಾರಿಧೇಃ ।
ಸಂಕ್ಷೋಭಿತಾನಿ ಪಾಥಾಂಸಿ ಕುರ್ವನ್ನಂತರ್ಯಯೌ ತದಾ ॥ ೧೩ ॥
ಸ ಪ್ರಪಾತಾಲಮೂಲಾಧಃಸ್ಥಿತಾಂ ತೋಯೇ ಭಯಾಕುಲಾಂ ।
ವೇಪಮಾನಾಂ ಸಮಾಲೋಕ್ಯ ಧರಣೀಂ ಹೃಷ್ಟಮಾನಸಃ ॥ ೧೪ ॥
ತಾಮಾರೋಪ್ಯ ಸ್ವದಂಷ್ಟ್ರಾಗ್ರಮುನ್ಮಮಜ್ಜ ಸರಿತ್ಪತೇಃ ।
ಸಂಸ್ತೂಯಮಾನೋ ಮುನಿಭಿರ್ಜನಲೋಕನಿವಾಸಿಭಿಃ ॥ ೧೫ ॥
ತಸ್ಮಿನ್ನುದ್ವಹತಿ ಪ್ರೇಮ್ಣಾ ದೇವೇ ವಸುಮತೀಂ ಕ್ಷಣಂ ।
ಪ್ರತಿಸಾರಾ ಬಭೂವಾಧೋ ವಾರಿಧೇರ್ಮಂಗಲೋಚಿತಾ ॥ ೧೬ ॥
ತದುತ್ತಾರಣವೇಲಾಯಾಂ ವರಾಹವಪುಷೋಽರ್ಜುನ ।
ಗಂಭೀರಘೋಷೈರಂಭೋಧಿಃ ಪ್ರಾಪ ಮಂಗಲತೂರ್ಯತಾಂ ॥ ೧೭ ॥
ಉದ್ವೃತ್ತವೀಚಿವಿಕ್ಷಿಪ್ತ ಶೀಕರಾಸಾರಸಂಗತಃ ।
ಭೇಜೇ ಮುಕ್ತಾಫಲಚಯೋ ಮಂಗಲಾಕ್ಷತವಿಭ್ರಮಂ ॥ ೧೮ ॥

---

ವಾಯುವಿನಿಂದ ಸಮುದ್ರದ ಪಾತಾಲದವರೆಗಿನ ಅಗಾಧವಾದ ಆಳವನ್ನು ಎಲ್ಲರಿಗೂ ತೋರಿಸುವಂತಿದ್ದಿತು.

೧೩. ಅತಿಪ್ರಮಾಣದ ತನ್ನ ದೇಹದ ಮಜ್ಜನೋನ್ಮಜ್ಜನಗಳಿಂದ ಸಮುದ್ರದ ನೀರನ್ನೆಲ್ಲ ಉಲ್ಲಕಲ್ಲೋಲಮಾಡುತ್ತ ಆ ಸ್ವಾಮಿಯು ಒಳಹೊಕ್ಕನು.

೧೪. ಬಳಿಕ ಪಾತಾಲಲೋಕದ ಕೆಳಗಡೆಯಲ್ಲಿ ನೆಲಸಿ ಭಯದಿಂದ ಉದ್ವಿಗ್ನಳಾಗಿ ನಡುಗುತ್ತಿರುವ ಭೂದೇವಿಯನ್ನು ಕಂಡು ಆ ದೇವನು ಸಂತುಷ್ಟಹೃದಯನಾದನು.

೧೫. ಆ ಭೂಗೋಳವನ್ನು ತನ್ನ ಕೋರೆಹಲ್ಲುಗಳಮೇಲೆ ಹೊತ್ತು ಜನಲೋಕದಲ್ಲಿದ್ದ ಮಹಾ ಮುನಿಗಳಿಂದ ಸ್ತೋತ್ರಗಳನ್ನು ಕೇಳುತ್ತಿರುವವನಾಗಿ ಸಮುದ್ರದಿಂದ ಮೇಲಕ್ಕೆ ಬಂದನು.

೧೬. ಇಂತು ಆ ದೇವದೇವನು ಪ್ರೀತಿಯಿಂದ ಭೂಮಿಯನ್ನುಮೇಲಕ್ಕೆತ್ತುತ್ತಿರಲು ಭೂಗೋಳವು ಸಮುದ್ರದಿಂದ ಜಗತ್ಕಲ್ಯಾಣಕ್ಕಾಗಿ ಮಾಡಲ್ಪಟ್ಟ ಲೇಹದ ಗುಳಿಗೆಯಂತೆ ಕಾಣುತ್ತಿತ್ತು.

೧೭. ಎಲೈ ಅರ್ಜುನನೆ! ಭೂಮಿಯುದ್ಧರಣಕಾಲದಲ್ಲಿ ಆ ವರಾಹ ಮೂರ್ತಿಗೆ ಸಮುದ್ರದ ಘೋಷವು ಮಂಗಳವಾದ್ಯಗಳ ಭೋರ್ಗರೆಯುವಿಕೆಯಂತೆ ತೋರುತ್ತಿದ್ದಿತು.

೧೮. ಮೇಲೆ ಮೇಲೆರಗುತ್ತಿರುವ ತೆರೆಗಳಿಂದ ಚೆದುರಿದ ತುಂತುರಿನಿಂದೊಡಗೂಡಿದ ಸಮುದ್ರದ ಮುತ್ತುಗಳ ರಾಶಿಯು ಲಾಜಾಕ್ಷತೆಗಳ ಭ್ರಮೆಯನ್ನುಂಟುಮಾಡುತ್ತಿದ್ದಿತು.

ಉದೂಢಾ ತೇನ ದೇವೇನ ಸಾ ಬಭೌ ಸಲಿಲಾಪ್ಲುತಾ ।
ಗಾಢರಾಗಸಮುತ್ಪನ್ನಸ್ವೇದಕ್ಲಿನ್ನತನೂರಿವ ॥ ೧೯ ॥
ಇತ್ಥಮುದ್ಧೃತ್ಯ ಭಗವಾನ್ಮಹೀಂ ಪಾತಾಲಮೂಲತಃ ।
ಸದೃಢಂ ಸ್ಥಾಪಯಾಮಾಸ ಮಧ್ಯೇಽಂಬುನಿಧಿಪಾಥಸಾಂ ॥ ೨೦ ॥
ತೇನೋದ್ಧೃತಾಯಾಂ ಮೇದಿನ್ಯಾಂ ಪೂರ್ಣಂ ತದ್ಭೂನಭೋಂತರೇ ।
ಜಲಂ ತತ್ಕೃತಮರ್ಯಾದಾವ್ಯವಚ್ಛಿನ್ನಮಭೂತ್ತದಾ ॥ ೨೧ ॥
ಸಂಸ್ಥಾಪ್ಯ ಪೃಥಿವೀಮಿತ್ಥಂ ತದೀಯಾಧಾರ ಸಿದ್ಧಯೇ ।
ದಿಗ್ಗಜಾನಹಿರಾಜಂ ಚ ಕಮಠಂ ಚ ನ್ಯವೇಶಯತ್ ॥ ೨೨ ॥
ತೇಷಾಮಪಿ ಚ ಸರ್ವೇಷಾಮಾಧಾರತ್ವೇನ ಸಾದರಂ ।
ಅವ್ಯಕ್ತರೂಪಾಂ ಸ್ವಾಂ ಶಕ್ತಿಂ ಯುಯೋಜ ಚ ದಯಾನಿಧಿಃ ॥ ೨೩ ॥
ತತೋ ಧರಾಂ ಸಮುದ್ಧೃತ್ಯ ಸ್ಥಿತಂ ಕಿಟಿತನುಂ ಹರಿಂ ।
ತುಷ್ಟುವುಃ ಸನಕಾದ್ಯಾಸ್ತಂ ಜನಲೋಕನಿವಾಸಿನಃ ॥ ೨೪ ॥
ತದಾ ವರಾಹವಪುಷಮಾರಾಧ್ಯ ಪುರುಷೋತ್ತಮಂ । ॥ ೨೫ ॥

---

೧೯. ಅಪರಿಮಿತಾನುರಾಗದಿಂದುಂಟಾದ ಬೆವರಿನಿಂದ ತೊಯ್ದ ದೇಹದಂತೆ ಭೂಮಿಯು ಪರಮಾತ್ಮನಿಂದ ಮೇಲಕ್ಕೆ ತರಲ್ಪಟ್ಟು ಸಮುದ್ರೋದಕದಿಂದ ಶೋಭಿಸುತ್ತಿದ್ದಿತು.

೨೦. ಇಂತು ಭಗವಂತನು ಪಾತಾಲತಲದಿಂದ ಭೂಮಿಯನ್ನು ಮೇಲಕ್ಕೆ ತಂದು ಸಮುದ್ರದ ನೀರಿನ ಮಧ್ಯದಲ್ಲಿ ಅದನ್ನು ಸ್ಥಿರವಾಗಿ ನೆಲೆಗೊಳಿಸಿದನು.

೨೧. ಇಂತು ಭೂಮಂಡಲವು ಉದ್ಧೃತವಾಗಲು ಭೂಮ್ಯಾಕಾಶಗಳನ್ನು ವ್ಯಾಪಿಸಿದ ಸಮುದ್ರೋದಕವು ಪರಮಾತ್ಮನಿಂದ ಮಾಡಲ್ಪಟ್ಟ ಕಟ್ಟಳೆಯಂತೆ ತನ್ನ ಎಲ್ಲೆಗಳಲ್ಲಿಯೇ ತಡೆಯಲ್ಪಟ್ಟಿತು.

೨೨. ಬಳಿಕಲಾ ಮಹಾವಿಷ್ಣುವು ಭೂಮಿಯನ್ನಿಂತು ನೆಲೆಗೊಳಿಸಿ ಅದನ್ನು ಭದ್ರಪಡಿಸುವುದಕ್ಕಾಗಿ ಅಷ್ಟದಿಗ್ಗಜಗಳನ್ನೂ ಆದಿಶೇಷನನ್ನೂ ಕೂರ್ಮನನ್ನೂ ನೇಮಿಸಿದನು.

೨೩. ಇವುಗಳಿಗೂ ಕೂಡ ಆಯಾಸವಾಗಬಾರದೆಂಬ ಆದರದಿಂದ ಕರುಣಾಸಮುದ್ರನಾದ ಆ ಶ್ರೀ ಹರಿಯು ಅವ್ಯಕ್ತರೂಪಿಯಾದ ತನ್ನ ಶಕ್ತಿಯನ್ನು ಅವರಲ್ಲಿ ಆವಾಹಿಸಿದನು.

೨೪. ಆಗ ಭೂಮಿಯನ್ನುದ್ಧಾರಮಾಡಿ ನಿಂತ ವರಾಹಶರೀರಿಯಾದ ಶ್ರೀಹರಿಯನ್ನು ಜನಲೋಕನಿವಾಸಿಗಳಾದ ಸನಕಾದಿ ಮಹರ್ಷಿಗಳು ಬಹುವಿಧವಾಗಿ ಸ್ತೋತ್ರಮಾಡಿದರು.

೨೫–೨೬. ಬ್ರಹ್ಮದೇವನೂ ವರಾಹಸ್ವಾಮಿಯನ್ನು ಆರಾಧನೆಮಾಡಿ

ತದಾಜ್ಞಯಾ ಜಗದ್ಬ್ರಹ್ಮಾ ಯಥಾಪೂರ್ವಮಕಲ್ಪಯತ್ ॥ ೨೬ ॥

ಅರ್ಜುನ ಉವಾಚ :—

ಕಲ್ಪಾಂತಸಲಿಲೇ ಮಗ್ನಾ ಕಥಂ ತಿಷ್ಠತಿ ಭೂರಿಯಂ ।
ಸಪ್ತಪಾತಾಲಲೋಕಾಧಃ ಕಿಮಾಧಾರಾ ಮಹಾಮುನೇ ॥ ೨೭ ॥
ಕಲ್ಪಕಾಲಃ ಕಿಯಾನೇಷ ಸ್ಯಾತ್ತದ್ವೃತ್ತಿಶ್ಚ ಕೀದೃಶೀ ॥ ೨೮ ॥
ಏತದ್ವಿಸ್ತಾರ್ಯ ಸಕಲಂ ಮಮ ಬ್ರಹ್ಮನ್ಮುನೇ ವದ ॥ ೨೯ ॥

ಭರದ್ವಾಜ ಉವಾಚ :—

ವಿನಾಡಿಕಾನಾಂ ಷಷ್ಟ್ಯಾ ಸ್ಯಾನ್ನಾಡಿಕೈಕಾ ದಿನಂ ಭವೇತ್ ।
ತತ್ಷಷ್ಟ್ಯಾ ದಿವಸಾಸ್ತ್ರಿಂಶನ್ಮಾಸಃ ಪಕ್ಷದ್ವಯಾತ್ಮಕಃ ॥ ೩೦ ॥
ಮಾಸೌ ದ್ವಾವೃತುರಿತ್ಯುಕ್ತಸ್ತೈಃ ಷಡ್ಭಿರ್ವತ್ಸರೋ ಭವೇತ್ ।
ಅಯನದ್ವಿತಯಾಕಾರಃ ಶೀತವರ್ಷೋಷ್ಣಸಂಶ್ರಯಃ ॥ ೩೧ ॥
ದೇವಾಸುರಾಣಾಮನ್ಯೋನ್ಯಮಹೋರಾತ್ರಂ ವಿಪರ್ಯಯಾತ್ ।
ಉತ್ತರಂ ದಕ್ಷಿಣಂ ಭಾನೋರಯನೇ ದ್ವೇ ಯಥಾಕ್ರಮಂ ॥ ೩೨ ॥

---

ಆತನ ಆಜ್ಞೆಯನ್ನನುಸರಿಸಿ ಪೂರ್ವಕಲ್ಪದಲ್ಲಿದ್ದಂತೆಯೇ ಚರಾಚರಮಯವಾದ ಜಗತ್ತನ್ನು ಸೃಜಿಸಿದನು.

೨೭. ಅರ್ಜುನನು ಕೇಳುತ್ತಾನೆ:—"ಮಹಾಮುನಿಯೆ! ಕಲ್ಪಾಂತದಲ್ಲಿ ಈ ಭೂಮಿಯು ನೀರಿನಲ್ಲಿ ಮುಳುಗಿ ಹೇಗೆ ನಿಂತಿರುವುದು? ಸಪ್ತಪಾತಾಲಗಳ ಕೆಳಗೆ ಇದಕ್ಕೆ ಯಾವ ಆಧಾರವಿರುವುದು?

೨೮–೨೯. ಈ ಕಲ್ಪಕಾಲವೆಂಬುದು ಯಾವ ಪ್ರಮಾಣವುಳ್ಳದು? ಆ ಸಮಯದಲ್ಲಿ ನಡೆಯುವ ವ್ಯಾಪಾರವೇನು? ಓ ಬ್ರಾಹ್ಮಣೋತ್ತಮನೆ! ಇದೆಲ್ಲವನ್ನೂ ನನಗೆ ವಿಸ್ತಾರವಾಗಿ ತಿಳಿಸು."

೩೦. ಭರದ್ವಾಜನು ಹೇಳುತ್ತಾನೆ:—ಅರುವತ್ತು ವಿಘಳಿಗೆಗಳಿಗೆ ಒಂದು ಘಳಿಗೆಯೆಂದು ಹೆಸರು. ಅಂತಹ ಅರುವತ್ತು ಘಳಿಗೆಗಳ ಕಾಲಕ್ಕೆ ಒಂದು ದಿನವೆನ್ನುವರು. ಮೂವತ್ತು ದಿವಸಗಳಿಗೆ ಶುಕ್ಲಕೃಷ್ಣಪಕ್ಷಗಳಿಂದೊಡಗೂಡಿದ ಒಂದು ಮಾಸವಾಗುವುದು.

೩೧. ಎರಡು ಮಾಸಗಳಿಗೆ ಒಂದು ಋತುವೆಂದು ಹೆಸರು. ಆರು ಋತುಗಳಾಗಲು ಒಂದು ಸಂವತ್ಸರವೆನಿಸುವುದು. ಆ ಸಂವತ್ಸರವು ಶೀತ, ವರ್ಷ, ಉಷ್ಣ ಮುಂತಾದುವುಳಿಗೆ ಕಾರಣವಾಗಿ ಎರಡು ಅಯನಗಳಿಂದ ಕೂಡಿರುವುದು.

೩೨. ಈ ಅಯನಗಳು ಅನ್ಯೋನ್ಯ ವ್ಯತ್ಯಾಸದಿಂದ ದೇವದಾನವರಿಗೆ ಅಹೋರಾತ್ರಗಳೆನಿಸಿರುವುವು. ಇಂತು ಸೂರ್ಯನಿಗೆ ಕ್ರಮವಾಗಿ ಉತ್ತರಾಯಣ ದಕ್ಷಿಣಾಯಣಗಳು ಪ್ರಾಪ್ತವಾಗುವುವು.

ಮಾನುಷಾಬ್ದೈಃ ಖಖವ್ಯೋಮಖಾಕ್ಷಿಪಾವಕಸಾಗರೈಃ ।
ಮಹಾಯುಗಂ ಭವೇತ್ಪಾರ್ಥ ಕೃತಾದ್ಯಾಕಾರಸಂಯುತಂ ॥ ೩೩ ॥
ಸಪ್ತತ್ಯಾ ಸೈಕಯಾ ಕಾಲೋ ಯುಗಾನಾಮಂತರಂ ಮನೋಃ ।
ಅಸ್ಮಿನ್ಶ್ವೇತವರಾಹಾಖ್ಯೇ ಕಲ್ಪೇ ಜಾತಾನ್ಮನೂನ್ಶೃಣು ॥ ೩೪ ॥
ಸ್ವಾಯಂಭುವಃ ಸ್ಯಾತ್ಪ್ರಥಮಸ್ತತಃ ಸ್ವಾರೋಚಿಷೋ ಮನುಃ ।
ಉತ್ತಮಸ್ತಾಮಸಾಖ್ಯಶ್ಚ ರೈವತಶ್ಚಾಕ್ಷುಷಾಹ್ವಯಃ ॥ ೩೫ ॥
ಏತೇ ಗತಾಃ ಪ್ರಾಙ್ಮನವಃ ಷಟ್‌ಸೇಂದ್ರಾಸುರತಾಪಸಾಃ ।
ವೈವಸ್ವತೋ ವರ್ತತೇಽದ್ಯ ಸಪ್ತಮೋ ಮನುರರ್ಜುನ ॥ ೩೬ ॥
ಆದಿತ್ಯವಸುರುದ್ರಾದ್ಯಾಸ್ತತ್ಕಾಲೇ ದೇವತಾಗಣಾಃ ।
ಇಷ್ಟ್ವಾಶ್ವಮೇಧಶತಕಂ ತೇಜಸ್ವೀ ಪ್ರಾಪ ಶಕ್ರತಾಂ ॥ ೩೭ ॥
ವಿಶ್ವಾಮಿತ್ರೋಽಹಮತ್ರಿಶ್ಚ ಜಮದಗ್ನಿಶ್ಚ ಕಶ್ಯಪಃ ।
ವಸಿಷ್ಠೋ ಗೌತಮಶ್ಚೈವ ತೇ ವೈ ಸಪ್ತರ್ಷಯೋಽರ್ಜುನ ॥ ೩೮ ॥

---

೩೩. ಎಲೈ ಪಾರ್ಥನೆ! ಮನುಷ್ಯಮಾನದಿಂದ ನಲವತ್ತುಮೂರು ಲಕ್ಷದ ಇಪ್ಪತ್ತುಸಾವಿರ ವರ್ಷಗಳಿಗೆ ಕೃತ, ತ್ರೇತ, ದ್ವಾಪರ ಮತ್ತು ಕಲಿಯುಗಗಳಿಂದ ಕೂಡಿದ ಒಂದು ಮಹಾಯುಗವಾಗುವುದು.

೩೪. ಎಪ್ಪತ್ತೊಂದು ಮಹಾಯುಗಗಳಾಗಲು ಒಂದು ಮನ್ವಂತರವೆಂದು ಹೇಳುವರು. ಈಗ ನಡೆಯುತ್ತಿರುವ ಶ್ವೇತವರಾಹಕಲ್ಪದಲ್ಲಿರುವ ಮನುಗಳನ್ನು ಹೇಳುವೆನು, ಕೇಳು.

೩೫. ಮೊದಲನೆಯವನು ಸ್ವಾಯಂಭುವನು. ಬಳಿಕ ಸ್ವಾರೋಚಿಷನೆಂಬ ಮನುವು. ಬಳಿಕ ಕ್ರಮವಾಗಿ ಉತ್ತಮ, ತಾಮಸ, ರೈವತ ಮತ್ತು ಚಾಕ್ಷುಷಮನುಗಳು.

೩೬. ಈ ಆರು ಮನುಗಳೂ ತಮ್ಮ ತಮ್ಮ ಮನ್ವಂತರಗಳಿಗೆ ಸಂಬಂಧಪಟ್ಟ ಇಂದ್ರರು, ದೇವತೆಗಳು ಮತ್ತು ಋಷಿಗಳೊಡನೆ ಆಗಿ ಹೋಗಿರುವರು. ಎಲೈ ಅರ್ಜುನನೆ! ಈಗ ಏಳನೆಯವನಾದ ವೈವಸ್ವತಮನುವಿನ ಕಾಲವು ನಡೆಯುತ್ತಿರುವುದು.

೩೭. ಪ್ರಥಮದಲ್ಲಿ ಆದಿತ್ಯರೂ, ವಸುಗಳೂ, ರುದ್ರರೂ, ಇತರ ದೇವತಾಗಣಗಳೂ ನೂರು ಅಶ್ವಮೇಧ ಯಜ್ಞಗಳನ್ನು ಮಾಡಿರುವರು. ಅವರಲ್ಲಿ ಅತ್ಯಂತ ತೇಜಸ್ವಿಯಾದವನು ಮಹೇಂದ್ರಪದವಿಯನ್ನು ಪಡೆದಿರುವನು.

೩೮. ಈ ಮನ್ವಂತರದಲ್ಲಿ ವಿಶ್ವಾಮಿತ್ರ, ನಾನು (ಭರದ್ವಾಜನು), ಅತ್ರಿ, ಜಮದಗ್ನಿ, ಕಶ್ಯಪ, ವಸಿಷ್ಠ, ಗೌತಮ — ಇವರೇ ಸಪ್ತರ್ಷಿಗಳಾಗಿರುವವರು.

ಇಕ್ಷ್ವಾಕುಪ್ರಮುಖಾಃ ಶೂರಾಃ ಮನುಪುತ್ರಾಃ ಮಹಾಬಲಾಃ ।
ಅವನಿಂ ಪಾಲಯಾಮಾಸುರ್ನಿತ್ಯಂ ಧರ್ಮಪರಾಯಣಾಃ ॥ ೩೯ ॥
ಸೂರ್ಯದಕ್ಷ ಬ್ರಹ್ಮಧರ್ಮರುದ್ರಾಣಾಂ ಪಂಚ ಸೂನವಃ ।
ಸಾವರ್ಣಿರೌಚ್ಯ ಭೌಮಾದ್ಯಾ ಭವಿಷ್ಯನ್ಮನುಸಪ್ತಕಂ ॥ ೪೦ ॥
ಚತುರ್ದಶ ವಿಧಾತುಸ್ತೇ ಭವಂತಿ ಮನವೋऽಹನಿ ।
ತತ್ಕಲ್ಪಸಂಜ್ಞಂ ತಸ್ಯಾಂತೇ ನಿಶಾಸ್ಯಾತ್ತತ್ಸಮಾ ಶೃಣು ॥ ೪೧ ॥
ದಿನಾವಸಾನಸಮಯೇ ಬ್ರಹ್ಮಣಃ ಪಾಂಡುನಂದನ ।
ಜಾಯತೇऽವಗ್ರಹೋ ಘೋರಃ ಪೃಥಿವ್ಯಾಂ ಶತವಾರ್ಷಿಕಃ ॥ ೪೨ ॥
ತಸ್ಮಿನ್ನವಗ್ರಹೇ ಪೃಥ್ವ್ಯಾಂ ನೀರಸಾಯಾಂ ಧನಂಜಯ ।
ಚತುರ್ವಿಧಾನಿ ಭೂತಾನಿ ಸಮಾಯಾಂತಿ ಪರಿಕ್ಷಯಂ ॥ ೪೩ ॥
ತದಾ ತಪ್ತಶಿಖಾಕಾರೈರುಪೇತೋ ಧರ್ಮದೀಧಿತಿಃ ।
ಮಯೂಖೈರಗ್ನಿಸದೃಶೈರ್ವಮದ್ಭಿಃ ಪಾವಕಚ್ಛಟಾಃ ॥ ೪೪ ॥

---

೩೯. ಮನುವಂಶಸಂಭೂತರಾದ ಇಕ್ಷ್ವಾಕುವೇ ಮೊದಲಾದ ಶೂರರೂ ಬಲಶಾಲಿಗಳೂ ಆದ ಚಕ್ರವರ್ತಿಗಳು ಸತತವೂ ಧರ್ಮೈಕತತ್ಪರರಾಗಿದ್ದು ಭೂಮಿಯನ್ನು ಪಾಲನೆಮಾಡಿದರು.

೪೦. ಸೂರ್ಯಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ದಕ್ಷ ಸಾವರ್ಣಿ, ರೌಚ್ಯ ಮತ್ತು ಭೌಮಗಳೆಂಬ ಏಳು ಮನ್ವಂತರಗಳು ಮುಂದೆ ನಡೆಯಲಿರುವುವು.

೪೧. ಬ್ರಹ್ಮನ ಒಂದು ಹಗಲಿನಲ್ಲಿ ಹದಿನಾಲ್ಕು ಮನ್ವಂತರಗಳು ನಡೆಯುವುವು. ಅದನ್ನೇ ಕಲ್ಪವೆಂದು ಕರೆಯುವರು. ಆ ಕಲ್ಪಾಂತದಲ್ಲಿ ಅದೇ ಪ್ರಮಾಣದ ರಾತ್ರಿಯುಂಟಾಗುವ ವಿವರವನ್ನು ಕೇಳು.

೪೨. ಎಲೈ ಅರ್ಜುನನೆ! ಬ್ರಹ್ಮನ ಒಂದು ಹಗಲು ಮುಗಿಯಲು ಭೂಮಿಯಲ್ಲಿ ಒಂದು ನೂರು ವರ್ಷಗಳವರೆಗೂ ಭಯಂಕರವಾದ ಕ್ಷಾಮವೊಂದು ಸಂಭವಿಸುವುದು.

೪೩. ಧನಂಜಯನೆ! ಆ ಕ್ಷಾಮಕಾಲದಲ್ಲಿ ಮಳೆಯು ಸುರಿಯದೆ ಭೂಮಿಯು ರಸಹೀನವಾಗಲು ಜರಾಯುಜ, ಸ್ವೇದಜ, ಅಂಡಜ ಮತ್ತು ಉದ್ಭಿಜ್ಜಗಳೆಂಬ ನಾಲ್ಕು ಬಗೆಯ ಜೀವರಾಶಿಗಳೂ ನಾಶವನ್ನು ಹೊಂದುವುವು.

೪೪. ಆಗ ಸೂರ್ಯದೇವನು ಕೆಂಜಡೆಗಳನ್ನು ಹೋಲುತ್ತ ಅಗ್ನಿಯ ತಾಪದಿಂದೊಡಗೂಡಿ ಬೆಂಕಿಯ ಕಿಡಿಗಳನ್ನು ಕಾರುತ್ತಿರುವ ಕಿರಣಗಳಿಂದ ಸುಡುತ್ತಿರುವನು.

ವಿನಷ್ಟಗ್ರಾಮನಗರ ಶೈಲವೃಕ್ಷಾದಿಕಾನನಾ ।
ಕೂರ್ಮಪೃಷ್ಠೋಪಮೋರ್ವೀ ಸ್ಯಾತ್ತಪ್ತಾಯಃ ಪಿಂಡಸನ್ನಿಭಾ ॥ ೪೫ ॥
ತತೋ ವಿಧಾತುರ್ಗಾತ್ರೇಭ್ಯಃ ಸಮುತ್ಪನ್ನಾ ಮಹಾಘನಾಃ ।
ಆಚ್ಛಾದಯಂತೋ ಗಗನಂ ಗರ್ಜಿತಧ್ವಾನ ಬಂಧುರಾಃ ॥ ೪೬ ॥
ಸಿತಪೀತಾರುಣಶ್ಯಾಮಾಶ್ಚಿತ್ರವರ್ಣಾಶ್ಚ ಭೀಷಣಾಃ ।
ಶೈಲೇಭ ಸೌಧವೃಕ್ಷಾದಿನಾನಾರೂಪಸಮನ್ವಿತಾಃ ॥ ೪೭ ॥
ತೇ ಶತಾಬ್ದಮಿತಂ ಕಾಲಂ ಮಹಾವೃಷ್ಟಿಂ ವಿತನ್ವತೇ ।
ತೇನಾಂಭಸಾ ಶಮಂ ಯಾತಿ ಸೂರ್ಯೋದ್ಭೂತೋ ಮಹಾನಲಃ ॥ ೪೮ ॥
ಭೂಯಶ್ಚ ಶತವರ್ಷಾಣಿ ವರ್ಷಂತ್ಯುಗ್ರಂ ಮಹಾಘನಾಃ ।
ತದಂಭಸಾ ಸಮುದ್ವೇಲಾ ವಿಕೃತಿಂ ಯಾತಿ ವಾರ್ಧಯಃ ॥ ೪೯ ॥
ಕಲ್ಪಾಂತಾಂಬುದ ನಿರ್ಮುಕ್ತಂ ಲೋಕಾನ್ವ್ಯಾಪ್ನೋತಿ ತಜ್ಜಲಂ ।
ಭೂರ್ಭುವಃ ಸ್ವರ್ಮಹರ್ಲೋಕಾನಾವೃಣೋತಿ ತಮೋ ಮಹತ್ ॥೫೦॥

---

೪೫. ಹಳ್ಳಿಗಳು, ಪಟ್ಟಣಗಳು, ಪರ್ವತಗಳು, ಮರಗಳು, ಕಾಡುಗಳು ಮುಂತಾದುವನ್ನು ಕಳೆದುಕೊಂಡ ಭೂಲೋಕವು ಆಮೆಯ ಚಿಪ್ಪಿನಂತೆ ಕಠಿನವೂ, ಕಾದ ಕಬ್ಬಿಣದ ಗುಂಡಿನಂತೆ ಸಹಿಸಲಸಾಧ್ಯವೂ ಆಗುವುದು.

೪೬. ಬಳಿಕ ಬ್ರಹ್ಮನ ದೇಹದಿಂದ ಹೊರಟ ಮಹಾಮೇಘಗಳು ತಮ್ಮ ಘರ್ಜನೆಗಳಿಂದ ಕೂಡಿ ಆಕಾಶವನ್ನೆಲ್ಲ ವ್ಯಾಪಿಸಿಕೊಳ್ಳುವುವು.

೪೭. ಆ ಮೇಘಗಳು ಬಿಳಿಪು, ಹಳದಿ, ಕೆಂಪು, ಕಪ್ಪು, ಮಿಶ್ರ ಮುಂತಾದ ಬಣ್ಣಗಳಿಂದ ಭಯಂಕರಗಳಾಗಿ ಪರ್ವತ, ಆನೆ, ಮನೆ, ಮರ ಮುಂತಾದ ಪದಾರ್ಥಗಳ ರೂಪಗಳನ್ನು ಹೊಂದಿರುವುವು.

೪೮. ಅವುಗಳು ಒಂದು ನೂರು ವರ್ಷಗಳಕಾಲ ಅಗಾಧವಾದ ಮಳೆಯನ್ನು ಸುರಿಸುವುವು. ಆ ನೀರಿನಿಂದ ಸೂರ್ಯನ ಬಿಸಿಲಿನ ಬೇಗೆಯು ಉಪಶಮನವನ್ನು ಹೊಂದುವುದು.

೪೯. ಪ್ರಳಯಕಾಲದ ಈ ಮೇಘಗಳು ಮತ್ತೆ ಒಂದು ನೂರು ವರ್ಷಗಳ ಕಾಲ ಮಳೆಗರೆಯಲು ಆ ನೀರಿನಿಂದ ಸಮುದ್ರಗಳೆಲ್ಲವೂ ವಿಕಾರವನ್ನು ಹೊಂದಿ ತಮ್ಮ ಎಲ್ಲೆಗಳನ್ನು ಮೀರಿ ಉಕ್ಕುವುವು.

೫೦. ಕಲ್ಪಾಂತಕಾಲದಲ್ಲಿ ಸುರಿಯುವ ಈ ಜಲವು ಸಕಲಲೋಕಗಳನ್ನೂ ವ್ಯಾಪಿಸುವುದು. ಸೂರ್ಯರಶ್ಮಿಯೇ ಕಾಣದಂತಾಗಿ ಭೂಲೋಕ, ಭುವರ್ಲೋಕ, ಸುವರ್ಲೋಕ ಮತ್ತು ಮಹರ್ಲೋಕಗಳನ್ನು ಅಪ್ರತಿಮವಾದ ಅಂಧಕಾರವು ಆವರಿಸುವುದು.

ತದಾ ನಿಮಗ್ನಾ ಸಲಿಲೇ ಮಹೀ ಪಾತಾಲಮೂಲಗಾ ।
ಅನಷ್ಟಾ ಕಥಮಪ್ಯಾಸ್ತೇ ಬ್ರಹ್ಮಶಕ್ತ್ಯವಲಂಬಿತಾ ॥ ೫೧ ॥
ಅಥ ನಿಃಶ್ವಾಸ ಸಂಭೂತೋ ಮಾರುತೋ ಬ್ರಹ್ಮಣೋಽರ್ಜುನ ।
ಉತ್ಸಾರಯತಿ ತಾನ್ಸರ್ವಾನ್ಕಲ್ಪಾಂತೋತ್ಥಾನ್ಮಹಾಘನಾನ್ ॥ ೫೨ ॥
ಏವಂ ಪ್ರವೃದ್ಧಃ ಪವನಃ ಶತಸಂವತ್ಸರಾತ್ಮಕಂ ।
ಕಾಲಂ ನಿರಂತರಂ ವಾತಿ ದುರ್ನಿವಾರರಯೋತ್ಥಿತಃ ॥ ೫೩ ॥
ತಮುಗ್ರಮನಿಲಂ ಹಿತ್ವಾ ಹರೇರ್ನಾಭಿಸರೋರುಹೇ ।
ಯೋಗನಿದ್ರಾಮವಾಪ್ನೋತಿ ತಸ್ಮಿನ್ನಾಥಸಿ ಪದ್ಮಭೂಃ ॥ ೫೪ ॥
ಯೋಗನಿದ್ರಾನುಷಕ್ತಸ್ಯ ಯಾತಿ ತಸ್ಯ ಜಗದ್ವಿಭೋಃ ।
ತಾವತೀ ಶರ್ವರೀ ಪಾರ್ಥ ದಿನಂ ಯಾವತ್ಪ್ರಮಾಣಕಂ ॥ ೫೫ ॥
ನಿಶಾಯಾಂ ಸಮತೀತಾಯಾಮುತ್ಥಿತೋ ವೇಗವಾನ್ಪುನಃ ।
ಸೃಜತ್ಯಖಿಲಜಂತೂನ್ಸ್ವೈ ಪೂರ್ವವಚ್ಛಾಸನಾದ್ಧರೇಃ ॥ ೫೬ ॥

---

೫೧. ಆಗ ಭೂಮಿಯು ನೀರಿನಲ್ಲಿ ಮುಳುಗಿ ಪಾತಾಲದ ಕೆಳಗೆ ಹೋಗಿ ಬ್ರಹ್ಮಶಕ್ತಿಯ ಆಧಾರಮಾತ್ರದಿಂದ ಸಂಪೂರ್ಣನಾಶವನ್ನು ಹೊಂದದೆ ನೆಲೆಯಾಗಿನಿಲ್ಲುವುದು.

೫೨. ಎಲೈ ಅರ್ಜುನನೆ! ಬಳಿಕ ಬ್ರಹ್ಮನ ನಿಶ್ಯ್ವಾಸದಿಂದುಂಟಾದ ಬಿರುಗಾಳಿಯು ಪ್ರಳಯಕಾಲಯದಲ್ಲಿ ನೆರೆದಿರುವ ಆ ಮಹಾಮೇಘಗಗಳೆಲ್ಲ ವನ್ನೂ ಚೆದರಿಸಿ ನಾಶಮಾಡುವುದು.

೫೩. ಹೀಗೆ ಹುಟ್ಟಿದ ಗಾಳಿಯು ಒಂದು ನೂರು ವರ್ಷಗಳ ಪರಿಮಿತಿ ಯುಳ್ಳ ಕಾಲದವರೆಗೂ ತಡೆಯಲಸಾಧ್ಯವಾದ ವೇಗದಿಂದ ಕೂಡಿ ಎಡಬಿಡದೆ ಬೀಸುತ್ತಿರುವುದು.

೫೪. ಬಳಿಕ ಬ್ರಹ್ಮದೇವನು ಭಯಂಕರವಾದ ಬಿರುಗಾಳಿಯನ್ನು ಉಪ ಸಂಹರಿಸಿ ಸಮುದ್ರದಲ್ಲಿ ಶೇಷಶಯನನಾದ ಮಹಾವಿಷ್ಣುವಿನ ನಾಭೀಕಮಲದಲ್ಲಿ ಯೋಗನಿದ್ರೆಯನ್ನು ಹೊಂದುವನು.

೫೫. ಪಾರ್ಥನೆ! ಸೃಷ್ಟಿಕರ್ತನಾದ ಬ್ರಹ್ಮದೇವನು ಯೋಗನಿದ್ರಾಸಕ್ತ ನಾಗಲು ಅಹಃಪ್ರಮಾಣಕ್ಕೆ ಸಮಾನವಾದ ಕಾಲದ ರಾತ್ರಿಯು ಕಳೆದು ಹೋಗುವುದು.

೫೬. ಇಂತು ರಾತ್ರಿಯು ಕಳೆಯಲು ಆ ಬ್ರಹ್ಮನು ಮತ್ತೆ ಬೇಗನೆಯೆ ಎಚ್ಚತ್ತು ಪರಮಾತ್ಮನ ಆಜ್ಞಾನುಸಾರವಾಗಿ ಪೂರ್ವಕಲ್ಪದ ಸೃಷ್ಟಿಕ್ರಮವನ್ನನು ಸರಿಸಿ ಸಕಲ ಜಂತುಗಳನ್ನೂ ಸೃಷ್ಟಿಮಾಡುವನು.

ಕಲ್ಪೇ ಕಲ್ಪೇ ಸಮುಚಿತೈ ರೂಪೈಃ ಪಾತಿ ಜಗದ್ಧರಿಃ ।
ಅಸ್ಮಿನ್ಕಲ್ಪೇ ಶ್ವೇತವರ್ಣಾಂ ಪ್ರಾಪ್ತವಾನ್ಯಜ್ಞಪೋತ್ರಿತಾಂ ॥ ೫೭ ॥
ವರಾಹವಪುಷಾ ದೇವೋ ವಿಹರನ್ನವನೀತಲೇ ।
ಸ್ವಪೂರ್ವನಿಯತಾವಾಸಂ ಪ್ರಪೇದೇ ವೇಂಕಟಾಚಲಂ ॥ ೫೮ ॥
ಸ್ವಾಮಿಪುಷ್ಕರಿಣೀ ತೀರೇ ಚರಂಶ್ಚಿರಮಧೋಕ್ಷಜಃ ।
ಭಕ್ತ್ಯಾ ಪರಮಯಾ ಯುಕ್ತಮಪಶ್ಯಜ್ಜಲಜಾಸನಂ ॥ ೫೯ ॥
ಸಂಪೂಜ್ಯ ಪ್ರಾರ್ಥಯಾಮಾಸ ಬ್ರಹ್ಮಾ ತಂ ಭೂತಭಾವನಂ ।
ಪುರಾತನೀಂ ನಿಜಾಂ ಸ್ವಾಮಿನ್ಸ್ಸಜ ದಿವ್ಯಾಂ ತನೂಮಿತಿ ॥ ೬೦ ॥
ಗೃಹೀತ್ವಾನುನಯಂ ತಸ್ಯ ತ್ಯಕ್ತ್ವಾ ತಾಂ ಸೂಕರಾಕೃತಿಂ ।
ಅನನ್ಯಭಜನೀಯಾಂ ಸ್ವಾಂ ಪ್ರಾಪ ವಿಶ್ವಾತ್ಮಿಕಾಂ ತನುಂ ॥ ೬೧ ॥
ತಥಾ ಸ್ಥಿತಂ ಗಿರೌ ತತ್ರ ಕೃತ್ವಾಪ್ಯುತ್ಸಾಹಮೂರ್ಜಿತಂ ।
ದ್ರಷ್ಟುಂ ನ ಶೇಕುಃ ಸರ್ವೇಽಪಿ ಕಾಲೇನ ಬಹುನಾಪಿ ಚ ॥ ೬೨ ॥

---

೫೭. ಪ್ರತಿಯೊಂದು ಕಲ್ಪದಲ್ಲಿಯೂ ಶ್ರೀಹರಿಯು ಆಯಾ ಕಲ್ಪಕ್ಕೆ ಅನುರೂಪವಾದ ಅವತಾರವನ್ನೆತ್ತಿ ಜಗತ್ತನ್ನು ಪಾಲಿಸುತ್ತಿರುವನು. ಈ ಕಲ್ಪದಲ್ಲಿ ಆತನು ಬಿಳಿಯ ಬಣ್ಣದ ಯಜ್ಞಮೂರ್ತಿಯಾದ ಸೂಕರರೂಪವನ್ನು ಧರಿಸಿದನು.

೫೮. ಸ್ವಾಮಿಯು ಬಹಳಕಾಲ ಭೂಮಿಯಲ್ಲಿ ವರಾಹಶರೀರದಿಂದ ವಿಹರಿಸುತ್ತ ತನಗೆ ಅನಾದಿಕಾಲದಿಂದ ಪ್ರೀತಿಪಾತ್ರವಾದ ವೇಂಕಟಾಚಲದಲ್ಲಿ ಬಂದು ನೆಲಸಿದನು.

೫೯. ಬಳಿಕ ಮಹಾವಿಷ್ಣುವು ಸ್ವಾಮಿ ಪುಷ್ಕರಿಣಿಯ ತೀರದಲ್ಲಿ ಓಡಾಡುತ್ತಿರಲು ಅಪರಿಮಿತವಾದ ಭಕ್ತಿಯಿಂದೊಡಗೂಡಿ ನಿಂತಿದ್ದ ಬ್ರಹ್ಮನನ್ನು ಅಲ್ಲಿ ಕಂಡನು.

೬೦. ಆಗ ಬ್ರಹ್ಮದೇವನು ಸಕಲ ಭೂತಗಳ ಅಂತರ್ಯಾಮಿಯಾದ ಆ ಪರಮಾತ್ಮನನ್ನು ಕುರಿತು "ಎಲೈ ಸ್ವಾಮಿಯೆ ! ಅನಾದಿಯೂ ಸಹಜವೂ ಆದ ನಿನ್ನ ದಿವ್ಯಶರೀರವನ್ನು ಸ್ವೀಕರಿಸು" ಎಂಬುದಾಗಿ ಪ್ರಾರ್ಥಿಸಿದನು.

೬೧. ಶ್ರೀಹರಿಯು ಆತನ ಪ್ರಾರ್ಥನೆಯನ್ನಂಗೀಕರಿಸಿ ತನ್ನ ವರಾಹರೂಪವನ್ನು ತ್ಯಜಿಸಿ ಇತರರಿಗೆ ಭಜಿಸಲಸಾಧ್ಯವಾದ ತನ್ನ ವಿಶ್ವಾತ್ಮಕ ರೂಪವನ್ನು ಸ್ವೀಕರಿಸಿದನು.

೬೨. ಇಂತು ವೇಂಕಟಾಚಲದಲ್ಲಿ ನೆಲಸಿದ ಪರಮಾತ್ಮನನ್ನು ಸಕಲರೂ ಬಹಳ ಉತ್ಸಾಹಭರಿತರಾಗಿ ಸೇವಿಸಿದರೂ ಬಹುಕಾಲದವರೆಗೂ ಆತನನ್ನು ನೋಡಲು ಶಕ್ತರಾಗಲಿಲ್ಲ.

ಅರ್ಜುನ ಉವಾಚ :—

ದರ್ಶನಸ್ಮರಣಾದೀನಾಂ ಹರಿರಿತ್ಥಮಗೋಚರಃ ।
ಕಥಂ ಪ್ರತ್ಯಕ್ಷತಾಂ ಪ್ರಾಪ ಮಾನುಷಾಣಾಂ ಮಹಾಮುನೇ ॥ ೬೩ ॥
ಭಾಗ್ಯಭೂತೋಽಥ ಜಗತಾಂ ಯಃ ಕೋ ವಾರಾಧ್ಯ ತಂ ವಿಭುಂ ।
ಇಹ ಪ್ರಕಾಶಯಾಮಾಸ ಕಥಾಮೇತಾಂ ನಿವೇದಯ ॥ ೬೪ ॥
ಹರಿಕಥಾಶ್ರವಣಂ ದುರಿತಾಪಹಂ
ಕಥಯತಾಂ ಸಕಲಾಗಮವಿದ್ಭವಾನ್ ।
ಸುಕೃತಿನಾಂ ನನು ಸಂಪ್ರತಿ ಧುರ್ಯತಾ
ಮುನಿವರೇಣ್ಯ ಮಮಾದ್ಯ ಸಮಾಗತಾ ॥ ೬೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ "ಸುವರ್ಣಮುಖರೀಮಾಹಾತ್ಮ್ಯಪ್ರಶಂಸಾಯಾಂ ವರಾಹಾವತಾರವರ್ಣನಂ" ನಾಮ ಷಟ್ತ್ರಿಂಶೋಽಧ್ಯಾಯಃ

---

೬೩. ಅರ್ಜುನನು ಕೇಳುತ್ತಾನೆ:—"ಮಹಾಮುನಿಯೆ! ಇಂದ್ರಿಯಗಳಿಗೂ ಮನಸ್ಸಿಗೂ ಸಿಲುಕದ ಶ್ರೀಹರಿಯು ಮನುಷ್ಯರಿಗೆ ಪ್ರತ್ಯಕ್ಷನಾದುದೆಂತು?

೬೪. ಯಾವ ಮಹಾತ್ಮನು ಲೋಕಗಳಿಗೆಲ್ಲ ಭಾಗ್ಯಭೂತನಾಗಿ ಜನಿಸಿ ಆ ವಿಶ್ವವ್ಯಾಪಕನನ್ನು ಪೂಜಿಸಿ ಇಲ್ಲಿ ಪ್ರಕಾಶಗೊಳಿಸಿದನು? ಆ ಚರಿತ್ರೆಯೆಲ್ಲವನ್ನೂ ನನಗೆ ತಿಳಿಸುವವನಾಗು.

೬೫. ಎಲೈ ಮುನಿವರೇಣ್ಯನೆ! ಹರಿಕಥೆಯ ಶ್ರವಣವೇ ಸಕಲ ಪಾಪಗಳನ್ನೂ ನಾಶಮಾಡುವುದು. ಅನುವಾದಕರಲ್ಲೆಲ್ಲ ನೀನೇ ಸಕಲಶಾಸ್ತ್ರಗಳನ್ನೂ ತಿಳಿದವನಾಗಿರುವೆ. ನಿನ್ನ ದರ್ಶನಲಾಭದಿಂದ ಈಗ ನನಗೆ ಪುಣ್ಯವಂತರಲ್ಲಿ ಅಗ್ರಸ್ಥಾನವು ಲಭಿಸಿತು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೇಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ಸುವರ್ಣಮುಖರೀಮಾಹಾತ್ಮ್ಯ ಪ್ರಶಂಸೆ—ವರಾಹಾವತಾರವರ್ಣನ"ವೆಂಬ ಮುವ್ವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತತ್ರಿಂಶೋಽಧ್ಯಾಯಃ

ಸುವರ್ಣಮುಖರೀಮಾಹಾತ್ಮ್ಯ ಪ್ರಶಂಸಾಯಾಂ ಶ್ರೀ ವೇಂಕಟಾಚಲಂ ಪ್ರತಿ ಶಂಖಾಗಸ್ತ್ಯಾದ್ಯಾಗಮನವರ್ಣನಂ

ಭರದ್ವಾಜ ಉವಾಚ :—

ಶೃಣು ಪಾರ್ಥ ಪ್ರವಕ್ಷ್ಯಾಮಿ ಕಥಾಮಾಶ್ಚರ್ಯಕಾರಿಣೀಂ ।
ಯಥಾಽಸೌ ಭಗವಾನಸ್ಮಿನ್ಸ್ಥಲೇ ಪ್ರಾಪ ಪ್ರಕಾಶತಾಂ ॥ ೧ ॥
ಶ್ರುತಾಭಿಧಾನೋ ನೃಪತಿರಸ್ತಿ ಹೈಹಯವಂಶಜಃ ।
ಯಃ ಪ್ರಜಾಃ ಸ್ವಾ ಇವ ಚಿರಂ ಶಶಾಸ ಧರಣೀಂ ಶುಭಾಂ ॥ ೨ ॥
ತಸ್ಯ ಪುತ್ರೋ ಗುಣನಿಧಿಃ ಶಂಖೋನಾಮ ಮಹೀಪತಿಃ ।
ಪಾಲಯಾಮಾಸ ವಸುಧಾಂ ಸರ್ವಶಾಸ್ತ್ರವಿಶಾರದಃ ॥ ೩ ॥
ತಸ್ಯ ವಿಷ್ಣೌ ಜಗನ್ನಾಥೇ ಪುಂಡರೀಕಾಯತೇಕ್ಷಣೇ ।
ಬಭೂವ ನಿಶ್ಚಲಾ ಭಕ್ತಿಃ ಪರಿತ್ಯಕ್ತಾನ್ಯಸಂಶ್ರಯಾ ॥ ೪ ॥
ದೇವದೇವಂ ಜಗನ್ನಾಥಮನಂತಂ ಪುರುಷೋತ್ತಮಂ ।
ಪ್ರಗಾಢನಿಶ್ಚಯೋ ನಿತ್ಯಂ ಧ್ಯಾಯನ್ನದ್ಭುತವೈಭವಂ ॥ ೫ ॥

---

### ಕನ್ನಡದ ಅನುವಾದ

ಸುವರ್ಣಮುಖರೀಮಾಹಾತ್ಮ್ಯ ಪ್ರಶಂಸೆ— ಶ್ರೀ ವೇಂಕಟಾಚಲಕ್ಕೆ ಶಂಖ, ಅಗಸ್ತ್ಯ ಮುಂತಾದ ಮುನಿಗಳ ಆಗಮನ

೧. ಭರದ್ವಾಜನು ಹೇಳುತ್ತಾನೆ:—ಎಲೈ ಪಾರ್ಥನೆ! ಭಗವಂತನು ಈ ಪರ್ವತದಲ್ಲಿ ಹೇಗೆ ದೃಗ್ಗೋಚರನಾದನೆಂಬ ವಿಷಯಕ್ಕೆ ಸಂಬಂಧಿಸಿದ ಆಶ್ಚರ್ಯಕರವಾದ ಕಥೆಯೊಂದನ್ನು ಹೇಳುವೆನು ; ಕೇಳು.

೨. ಪೂರ್ವದಲ್ಲಿ ಹೇಹಯನ ವಂಶದಲ್ಲಿ ಶ್ರುತನೆಂಬ ಮಹಾರಾಜನೊಬ್ಬನಿದ್ದನು. ಆತನು ಪ್ರಜೆಗಳನ್ನು ತನ್ನ ಮಕ್ಕಳಂತೆಯೇ ಪಾಲಿಸುತ್ತ ಬಹಳ ಕಾಲ ಈ ಪವಿತ್ರಭೂಮಿಯನ್ನಾಳಿ ಸ್ವರ್ಗಸ್ಥನಾದನು.

೩. ಆತನ ಮಗನಾದ ಶಂಖನೆಂಬ ಭೂಪಾಲಕನು ಗುಣಗಣಾನ್ವಿತನೂ ಸಕಲಶಾಸ್ತ್ರಪಾರಂಗತನೂ ಆಗಿ ಭೂಮಿಯನ್ನಾಳುತ್ತಿದ್ದನು.

೪. ಆತನಿಗೆ ಇತರ ದೇವತೆಗಳ ಆಶ್ರಯವನ್ನೊಪ್ಪದೆ ಲೋಕನಾಯಕನೂ, ತಾವರೆಯೆಲೆಯಂತೆ ಕಣ್ಣುಗಳುಳ್ಳವನೂ, ಆದ ಮಹಾ ವಿಷ್ಣುವಿನಲ್ಲಿಯೇ ಭಕ್ತಿಯು ನಿಶ್ಚಲವಾಗಿ ನಿಂತಿತು.

೫-೬. ದೇವಾಧಿದೇವನೂ, ಜಗನ್ನಾಥನೂ, ಆದ್ಯಂತರಹಿತನೂ, ಪುರುಷೋತ್ತಮನೂ ಆದ ಆತನ ಅದ್ಭುತವಾದ ವೈಭವವನ್ನೇ ನಿರಂತರದಲ್ಲಿಯೂ ಧ್ಯಾನಿಸುತ್ತ ಸ್ಥಿರವಾದ ಮನಸ್ಸುಳ್ಳವನಾಗಿ ವೇದಪ್ರತಿಪಾದ್ಯನೂ ಮಧುಸೂದ

ಚಕ್ರೇ ವ್ರತಾನಿ ದಾನಾನಿ ಪುಣ್ಯಾನಿ ವಿವಿಧಾನಿ ಚ ।
ವೇದವೇದ್ಯಸ್ಯ ನಿಯತಂ ಪ್ರೀತ್ಯರ್ಥಂ ಮಧುವಿದ್ವಿಷಃ ॥ ೬ ॥
ತಮುದ್ದಿಶ್ಯೈವ ವಿದಧೇ ವಾಜಿಮೇಧಾದಿಕಾನ್ಕ್ರತೂನ್ ।
ಯಥೋಕ್ತದಿಕ್ಷಿಣಾಯೋಗಾತ್ಪ್ರೀಣಿತಾಶೇಷಭೂಸುರಃ ॥ ೭ ॥
ಇಷ್ಟಾಪೂರ್ತಾತ್ಮಕಂ ಚಕ್ರೇ ಕರ್ಮಜಾತಮತಂದ್ರಿತಃ ।
ವಿನ್ಯಸ್ತಹೃದಯೋ ನಿತ್ಯಂ ಕೇಶವೇ ಭಕ್ತವತ್ಸಲೇ ॥ ೮ ॥
ಸ್ಮರತ್ಯಜಸ್ರಂ ಗೋವಿಂದಂ ಜಪತ್ಯಚ್ಯುತಮವ್ಯಯಂ ।
ಪೂಜಯತ್ಯಬ್ಜನಯನಂ ಸಂಕೀರ್ತಯತಿ ಶಾರ್ಙ್ಗಿಣಂ ॥ ೯ ॥
ಶೃಣೋತಿ ಸತತಂ ರಾಜಾ ಸಂಸಾರಾರ್ಣವತಾರಿಣೀಃ ।
ಪೌರಾಣಿಕೈಃ ಸಮಾಖ್ಯಾತಾಃ ಪವಿತ್ರಾ ವೈಷ್ಣವೀಃ ಕಥಾಃ ॥ ೧೦ ॥
ಬ್ರಾಹ್ಮಣಾನರ್ಚತಿ ಸ್ಮಾಯಂ ಹರಿಪ್ರೀತ್ಯರ್ಥಮೇವ ಚ ।
ಇತ್ಥಂ ಸರ್ವಾತ್ಮನಾ ಯುಕ್ತೋಽಪ್ಯಶ್ರಾಂತಃ ಪೃಥಿವೀಪತಿಃ ॥ ೧೧ ॥
ನಾಪಶ್ಯಚ್ಛಾಶ್ವತೈಶ್ವರ್ಯಂ ಸ್ವತಂತ್ರಂ ಪುರುಷೋತ್ತಮಂ. ॥ ೧೨ ॥

---

ನನೂ ಆದ ಆತನನ್ನೇ ಪ್ರೀತಿಗೊಳಿಸಲು ನಿಯಮಸಹಿತನಾಗಿ ಅನೇಕವಿಧಗಳಾದ ವ್ರತಗಳನ್ನೂ ದಾನಗಳನ್ನೂ ಇತರ ಪುಣ್ಯಕರ್ಮಗಳನ್ನೂ ಆ ಮಹಾರಾಜನು ಮಾಡುತ್ತಿದ್ದನು.

೭. ವಿಷ್ಣುಪ್ರೀತ್ಯರ್ಥವಾಗಿಯೇ ಆತನು ಶಾಸ್ತ್ರೋಕ್ತದಕ್ಷಿಣೆಗಳನ್ನು ಕೊಟ್ಟು ಅನೇಕ ಬ್ರಾಹ್ಮಣರನ್ನು ತೃಪ್ತಿಗೊಳಿಸಿ ವಾಜಪೇಯವೇ ಮೊದಲಾದ ಯಜ್ಞಗಳನ್ನು ನೆರವೇರಿಸಿದನು.

೮–೧೦. ಭಕ್ತವತ್ಸಲನಾದ ಕೇಶವನಲ್ಲಿಯೇ ಅರ್ಪಿಸಿದ ಹೃದಯವುಳ್ಳವನಾಗಿ ಇಷ್ಟಾಪೂರ್ತಗಳೆನಿಸಿದ ಸಕಲ ಕರ್ಮಗಳನ್ನೂ ಎಡಬಿಡದೆ ಶ್ರದ್ಧೆಯಿಂದ ಮಾಡುತ್ತಿದ್ದನು. ಆ ಮಹಾರಾಜನು ಯಾವಾಗಲೂ ಗೋವಿಂದನನ್ನು ಸ್ಮರಿಸುವನು. ಆದ್ಯಂತರಹಿತನಾದ ಅಚ್ಯುತನ ನಾಮವನ್ನು ಜಪಿಸುತ್ತಿರುವನು. ಕಮಲನೇತ್ರನಾದ ಆತನನ್ನೇ ಪೂಜಿಸುವನು. ಶಾರ್ಙ್ಗಧನುರ್ಧಾರಿಯಾದ ಆತನ ನಾಮಗಳನ್ನೇ ಹೊಗಳುತ್ತಿರುವನು. ನಿರಂತರದಲ್ಲಿಯೂ ಪೌರಾಣಿಕರಿಂದ ನಿರೂಪಿಸಲ್ಪಡುತ್ತಿರುವ ಸಂಸಾರಸಾಗರತರಣೋಪಾಯಗಳಾದ ಪವಿತ್ರವಾದ ವಿಷ್ಣುಲೀಲೆಗಳ ಕಥೆಗಳನ್ನೇ ಕೇಳುತ್ತಿರುವನು.

೧೧–೧೨. ಹರಿಪ್ರೀತ್ಯರ್ಥವಾಗಿಯೇ ನಿತ್ಯವೂ ಬ್ರಾಹ್ಮಣಪೂಜೆಯನ್ನು ಮಾಡುವನು. ಇಂತಾ ಮಹಾರಾಜನು ನಿರಂತರವೂ ಸಂಪೂರ್ಣಮನಸ್ಸಿನಿಂದ ವಿಷ್ಣುಸೇವೆಯಲ್ಲಿ ತೊಡಗಿದ್ದರೂ ಆತನಿಗೆ ಶಾಶ್ವತೈಶ್ವರ್ಯನೂ, ಸರ್ವತಂತ್ರ ಸ್ವತಂತ್ರನೂ ಆದ ಪುರುಷೋತ್ತಮನ ದರ್ಶನವು ಲಭಿಸಲಿಲ್ಲ.

ಸಶೋಕಾಕ್ರಾಂತಹೃದಯಃ ಪರಾಂ ಚಿಂತಾಮುಪಾಗಮತ್ ॥ ೧೩ ॥

ಶಂಖ ಉವಾಚ :—

ಪರಃ ಸಹಸ್ರೈರ್ಜನನೈರತೀತೈರ್ದುಷ್ಕೃತಂ ಬಹು ।
ಕೃತಂ ಮಯಾ ಯದಪ್ರಾಪ್ತಂ ಹೃಷೀಕೇಶಸ್ಯ ದರ್ಶನಂ ॥ ೧೪ ॥
ಉಪಾರ್ಜಿತಾನಾಂ ತಪಸಾಮನೇಕೈಃ ಪೂರ್ವಜನ್ಮಭಿಃ ।
ಅಖಂಡಂ ಹಿ ಫಲಂ ವಿಷ್ಣೋರ್ದರ್ಶನಂ ಮಧುಘಾತಿನಃ ॥ ೧೫ ॥
ಕಥಂ ನು ಯಾಯಾದ್ಭಗವಾನ್ವಿಷಯಂ ಮಮ ನೇತ್ರಯೋಃ ।
ಕದಾ ವಾ ಲಭ್ಯತೇ ಶ್ರೇಯಸ್ತದ್ವಾಕ್ಯಾಕರ್ಣನಾತ್ಮಕಂ ॥ ೧೬ ॥
ಹಾ ಧಿಙ್ಮಾಂ ವಿಹಿತಾಗಸ್ಕಂ ಕ್ರಿಯಾಸಾಫಲ್ಯವರ್ಜಿತಂ ।
ನಾರಾಯಣಕೃಪಾದೂರಂ ಸಂಸಾರಕ್ಲೇಶಗೋಚರಂ ॥ ೧೭ ॥

ಭರದ್ವಾಜ ಉವಾಚ :—

ಇತಿ ಚಿಂತಾಕುಲೇ ತಸ್ಮಿನ್ರಾಜ್ಞಿ ಜೀವಿತನಿಃಸ್ಪೃಹೇ ।
ಅದೃಶ್ಯಮೂರ್ತಿಸ್ಸರ್ವೇಷಾಂ ಶೃಣ್ವತಾಮಾಹ ಕೇಶವಃ ॥ ೧೮ ॥

---

೧೩. ಇದರಿಂದ ಆತನು ದುಃಖದಿಂದ ತುಂಬಿದ ಮನಸ್ಸುಳ್ಳವನಾಗಿ ಅಪಾರವಾದ ಚಿಂತೆಗೊಳಗಾದನು.

೧೪. ಶಂಖನು ಹೇಳುತ್ತಾನೆ:—"ನಿಜವಾಗಿಯೂ ನಾನು ಹಿಂದೆ ಸಾವಿರಾರು ಜನ್ಮಗಳಲ್ಲಿ ಅಪಾರವಾದ ಪಾಪವನ್ನು ಗಳಿಸಿರಬೇಕು. ಆದುದರಿಂದಲೇ ನನಗೆ ಹೃಷೀಕೇಶನ ದರ್ಶನಲಾಭವು ದೊರಕಲಿಲ್ಲ.

೧೫. ಹಿಂದಿನ ಅನೇಕ ಜನ್ಮಗಳಲ್ಲಿ ಆರ್ಜನೆಮಾಡಿದ ಪುಣ್ಯಗಳ ಅಖಂಡವಾದ ಫಲರೂಪವಾಗಿಯೇ ಮಧುಸೂದನನಾದ ಮಹಾವಿಷ್ಣುವಿನ ದರ್ಶನವು ಲಭಿಸುವುದು.

೧೬. ಭಗವಂತನು ನನ್ನ ಕಣ್ಣುಗಳಿಗೆ ಯಾವ ಪ್ರಯತ್ನದಿಂದ ಗೋಚರನಾಗುವನೊ? ಆತನ ವಾಕ್ಯಗಳನ್ನು ಕೇಳುವ ಶ್ರೇಯಸ್ಸು ನನಗೆ ಉಂಟಾಗುವುದೆಂತೊ?

೧೭. ಪಾಪಗಳನ್ನು ಮಾಡಿದವನೂ, ಸತ್ಕ್ರಿಯಾಹೀನನೂ, ನಾರಾಯಣನ ಕೃಪೆಗೆ ದೂರನೂ, ಸಂಸಾರಕ್ಲೇಶದಲ್ಲಿ ಸಿಕ್ಕಿ ನರಳುತ್ತಿರುವವನೂ ಆದ ನನ್ನ ಜನ್ಮಕ್ಕೆ ಧಿಕ್ಕಾರವಿರಲಿ."

೧೮. ಭರದ್ವಾಜನು ಹೇಳುತ್ತಾನೆ:—ಇಂತಾ ಮಹಾರಾಜನು ಚಿಂತಾಕ್ರಾಂತನಾಗಿ ಜೀವಿತದಲ್ಲಿಯೇ ಆಶೆಯಿಲ್ಲದವನಾಗಿರಲು, ಶ್ರೀ ಹರಿಯು ಎಲ್ಲರೂ ಕೇಳುತ್ತಿರುವಂತೆಯೇ ಅಶರೀರವಾಣಿಯಿಂದ ಹೇಳತೊಡಗಿದನು.

ಶ್ರೀ ಭಗವಾನುವಾಚ :—

ಮಾ ಶೋಕಸ್ಯ ವಶಂ ಯಾಯಾಃ ಶೃಣು ವಕ್ಷ್ಯಾಮಿ ತೇ ಹಿತಂ ।
ಮದೇಕಶರಣಂ ಸಾಧುಂ ತ್ವಾಂ ತ್ಯಕ್ಷ್ಯಾಮಿ ಕಥಂ ನೃಪ ॥ ೧೯ ॥
ಅಯಂ ವೇಂಕಟನಾಮಾದ್ರಿಸ್ತ್ರಿಷು ಲೋಕೇಷು ವಿಶ್ರುತಃ ।
ವೈಕುಂಠಾದಪಿ ಮೇ ರಾಜನ್ನಾವಾಸೋಽತಿಪ್ರಿಯಾವಹಃ ॥ ೨೦ ॥
ತಂ ಗತ್ವಾ ಭೂಧರವರಂ ತವ ಭಕ್ತ್ಯಾ ತಪಸ್ಯತಃ ।
ಗತೇ ಸಹಸ್ರೇ ವರ್ಷಾಣಾಂ ಯಾಸ್ಯಾಮ್ಯಾಲೋಕನೀಯತಾಂ ॥ ೨೧ ॥
ಭವಾನಿವೋದ್ಯತೋಽಗಸ್ತ್ಯೋ ಮಮ ದರ್ಶನಮಂಜಸಾ ।
ಕ್ವ ವಾ ಸಂದೃಶ್ಯತೇ ವಿಷ್ಣುರೇವಮಾಹ ಚತುರ್ಮುಖಂ ॥ ೨೨ ॥
ವೃಷಭಾದ್ರೌ ಹರಿರ್ದ್ರಷ್ಟುಂ ಲಭ್ಯತೇ ನಿಯತಾತ್ಮಭಿಃ ।
ಗಚ್ಛ ತತ್ರೇತಿ ಮುನಯೇ ಕಥಯಾಮಾಸ ಪದ್ಮಭೂಃ ॥ ೨೩ ॥
ಅಂಭೋಜಸಂಭವೇನೇತ್ಥಮಾದಿಷ್ಟಃ ಕುಂಭಸಂಭವಃ ।
ಅಂಜನಾದ್ರೌ ಮಹಾವಾಸೇ ತಪಸ್ತಪ್ತುಂ ಸಮೇಷ್ಯತಿ ॥ ೨೪ ॥

---

೧೯—೨೦. ಭಗವಂತನು ಹೇಳುತ್ತಾನೆ:—"ನೀನು ದುಃಖದ ವಶವನ್ನು ಹೊಂದಬೇಡ. ನಿನಗೆ ಉತ್ತರೋತ್ತರದಲ್ಲಿ ಹಿತವನ್ನುಂಟುಮಾಡುವುದನ್ನು ಹೇಳುವೆನು, ಕೇಳು. ನನ್ನನ್ನೇ ಅನನ್ಯಭಕ್ತಿಯಿಂದ ಶರಣುಹೊಂದಿ ಸಾಧುವಾಗಿರುವ ನಿನ್ನನ್ನು ಹೇಗೆತಾನೇ ತ್ಯಜಿಸಿಯೇನು? ವೇಂಕಟಾಚಲವೆಂಬ ಈ ಪರ್ವತವು ಮೂರು ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆದಿರುವುದು. ಈ ಪ್ರದೇಶವು ನನಗೆ ವೈಕುಂಠಕ್ಕಿಂತಲೂ ಪ್ರಿಯತಮವಾದ ನೆಲೆಯಾಗಿರುವುದು.

೨೧. ನೀನು ಆ ಪರ್ವತೋತ್ತಮವನ್ನು ಸೇರಿ ಭಕ್ತಿಯಿಂದ ತಪಸ್ಸನ್ನು ಮಾಡುತ್ತಿರು. ಒಂದು ಸಾವಿರ ವರ್ಷಗಳಾದಮೇಲೆ ನಾನು ನಿನಗೆ ಪ್ರತ್ಯಕ್ಷ ದರ್ಶನವನ್ನು ಕೊಡುವೆನು.

೨೨. ನಿನ್ನಂತೆಯೇ ಪೂರ್ವದಲ್ಲಿ ಅಗಸ್ತ್ಯನು ನನ್ನ ದರ್ಶನಕ್ಕಾಗಿ ಹಂಬಲಿಸುತ್ತ ಬ್ರಹ್ಮದೇವನನ್ನು ಕುರಿತು "ವಿಷ್ಣುವು ಎಲ್ಲಿ ದೃಗ್ಗೋಚರನಾಗುವನು?" ಎಂದು ಪ್ರಶ್ನೆಮಾಡಿದನು.

೨೩. "ಇಂದ್ರಿಯಗಳನ್ನೂ ಮನಸ್ಸನ್ನೂ ನಿಗ್ರಹಿಸಿದವರಿಗೆ ವೃಷಭಾಚಲದಲ್ಲಿ ಶ್ರೀ ಹರಿಯ ದರ್ಶನವು ಲಭಿಸುವುದು, ನೀನು ಅಲ್ಲಿಗೆ ಹೊರಡು" ಎಂಬುದಾಗಿ ಚತುರ್ಮುಖನು ಆ ಮಹಾಮುನಿಗೆ ಅಪ್ಪಣೆಯನ್ನಿತ್ತನು.

೨೪. ಇಂತು ಬ್ರಹ್ಮದೇವನಿಂದ ಆದೇಶವನ್ನು ಪಡೆದ ಕುಂಭಸಂಭವ ಮುನಿಯು ಮಹಾತ್ಮರ ನಿವಾಸವಾದ ಅಂಜನಾಚಲದಲ್ಲಿ ತಪಸ್ಸನ್ನು ಮಾಡಲು ಬಂದು ಸೇರುವನು.

ತಸ್ಮಿನ್ಮಹೀಧರೇ ಪುಣ್ಯೇ ಕೃತಾವಾಸೋ ಭವಾನಪಿ ।
ಆರಾಧ್ಯ ಮಾಂ ತಪೋನಿಷ್ಠೋ ಮಮ ದರ್ಶನಮಾಪ್ಸ್ಯಸಿ ॥ ೨೫ ॥

ಭರದ್ವಾಜ ಉವಾಚ :—

ಇತ್ಯಾಜ್ಞಪ್ತೋ ಭಗವತಾ ಶಂಖೋ ದಾನವವೈರಿಣಾ ।
ಜಗಾಮ ಪ್ರೀತಿಮತುಲಾಂ ಧನ್ಯೋಽಸ್ಮೀತಿ ಸ್ವಚೇತಸಿ ॥ ೨೬ ॥
ವಿನ್ಯಸ್ಯ ತನಯಂ ವಜ್ರಂ ಪ್ರಜಾಪಾಲನಕರ್ಮಣಿ ।
ಗೋವಿಂದದರ್ಶನಾಪೇಕ್ಷೀ ನಾರಾಯಣಗಿರಿಂ ಯಯೌ ॥ ೨೭ ॥
ತಸ್ಯ ಶೃಂಗೇ ಸಮುತ್ತುಂಗೇ ಸ್ವಾಮಿಪುಷ್ಕರಿಣೀಂ ಶುಭಾಂ ।
ದಿವ್ಯೈಃ ಪಯೋಭಿರಾಪೂರ್ಣಾಮಪಶ್ಯದಮೃತೋಪಮೈಃ ॥ ೨೮ ॥
ಅನೇಕಸಿದ್ಧಗಂಧರ್ವದೇವರ್ಷಿಗಣಸೇವಿತಾಂ ।
ಭವತಾಪಪ್ರಶಮನೀಂ ಸರ್ವತೀರ್ಥಸಮಾಶ್ರಯಾಂ ॥ ೨೯ ॥
ಜಲಕಾಕಬಕಕ್ರೌಂಚಹಂಸಕಾರಂಡವಾಕುಲಾಂ ।
ಕುಮುದೋತ್ಪಲರಾಜೀವಸೌಗಂಧಿಕ ಮನೋಹರಾಂ ॥ ೩೦ ॥
ತಾಂ ದೃಷ್ಟ್ವಾ ಪದ್ಮಿನೀಂ ದಿವ್ಯಾಂ ತತ್ತೀರೇ ವಿಹಿತೋಟಜಃ ।
ತೋಷಿತಃ ಸ್ನಾನಪಾನಾದ್ಯೈರ್ನಿರ್ವಿಕಲ್ಪಮನೋಗತಿಃ ॥ ೩೧ ॥

---

೨೫. ಪುಣ್ಯಪ್ರದವಾದ ಆ ಪರ್ವತದಲ್ಲಿಯೇ ನೀನೂ ವಾಸಮಾಡುತ್ತ ತಪಸ್ಸನ್ನಾಚರಿಸಿ ನನ್ನನ್ನೇ ಪೂಜಿಸುತ್ತಿರಲು ನನ್ನ ದರ್ಶನವನ್ನು ಹೊಂದುವೆ.''

೨೬–೨೭. ಭರದ್ವಾಜನು ಹೇಳುತ್ತಾನೆ:—ಇಂತು ದಾನವಧ್ವಂಸಿಯಾದ ಭಗವಂತನಿಂದ ಆಜ್ಞಪ್ತನಾಗಿ ಶಂಖಮಹಾರಾಜನು ತಾನೇ ಧನ್ಯನೆಂದು ಮನಸ್ಸಿನಲ್ಲಿಯೇ ಅಪರಿಮಿತಾನಂದವನ್ನು ಹೊಂದಿದನು. ವಜ್ರನೆಂಬ ತನ್ನ ಮಗನನ್ನು ಪ್ರಜಾರಕ್ಷಣಕಾರ್ಯಕ್ಕಾಗಿ ಸಿಂಹಾಸನದಲ್ಲಿ ಕುಳ್ಳಿರಿಸಿ ಭಗವಂತನನ್ನು ನೋಡಬೇಕೆಂಬ ಕಾತುರತೆಯಿಂದ ನಾರಾಯಣಾಚಲಕ್ಕೆ ಪ್ರಯಾಣಮಾಡಿದನು.

೨೮. ಅದರ ಮೇಲ್ಗಡೆಯಲ್ಲಿ ನಿರ್ಮಲವೂ ಅಮೃತಸಮಾನವೂ ಆದ ನೀರಿನಿಂದ ತುಂಬಿದ ಪವಿತ್ರವಾದ ಸ್ವಾಮಿಪುಷ್ಕರಿಣಿಯನ್ನು ಕಂಡನು.

೨೯. ಆ ತೀರ್ಥವು ಅನೇಕ ಸಿದ್ಧರಿಂದಲೂ, ಗಂಧರ್ವರಿಂದಲೂ, ದೇವತೆಗಳಿಂದಲೂ, ಮಹರ್ಷಿಗಣಗಳಿಂದಲೂ ಸೇವಿಸಲ್ಪಟ್ಟು ಸಂಸಾರತಾಪವನ್ನು ನಿರ್ಮೂಲಗೊಳಿಸಿ ಸಕಲ ತೀರ್ಥಗಳಿಗೂ ಆಶ್ರಯಭೂತವಾಗಿರುವುದು.

೩೦. ನೀರು ಕಾಗೆಗಳು, ಬಕಪಕ್ಷಿಗಳು, ಕ್ರೌಂಚಗಳು, ಹಂಸಗಳು, ಬಾತುಗಳು ಮುಂತಾದ ಪಕ್ಷಿಗಳಿಂದ ನಿಬಿಡವಾಗಿ ನೈದಿಲೆ, ತಾವರೆ, ಕಮಲ ಮುಂತಾದ ಪುಷ್ಪಗಳ ಸುವಾಸನೆಯಿಂದ ಆ ಸರೋವರವು ಮನೋಹರವಾಗಿದ್ದಿತು.

೩೧–೩೨. ಶಂಖನು ದಿವ್ಯವಾದ ಆ ಸರೋವರವನ್ನು ಕಂಡು ಅದರ

ಸರ್ವಕರ್ಮಾಣಿ ವಿನ್ಯಸ್ಯ ಜಗದೀಶೇ ಜನಾರ್ದನೇ ।
ಜಪಧ್ಯಾನಪರೋ ನಿತ್ಯಂ ತಪಸ್ತೇಪೇ ಸುದಾರುಣಂ ॥ ೩೨ ॥
ತಸ್ಮಿನ್ನೇವ ಮುನಿಃ ಕಾಲೇ ಶಾಸನಾತ್ಪರಮೇಷ್ಠಿನಃ ।
ಅಗಸ್ತ್ಯೋಽಪ್ಯಾಸಸಾದಾದ್ಯಂ ಶೈಲಂ ಮುನಿಶತಾವೃತಃ ॥ ೩೩ ॥
ಪ್ರತೀಚೀಂ ದಿಶಮಾರಭ್ಯ ಕೃತಯತ್ನಃ ಪ್ರದಕ್ಷಿಣೇ ।
ಪಶ್ಯಂಸ್ತೀರ್ಥಾನಿ ಪುಣ್ಯಾನಿ ಬಭ್ರಾಮ ಸುಚಿರಂ ಗಿರೌ ॥ ೩೪ ॥
ತತ್ರ ತತ್ರ ದದರ್ಶಾಸೌ ಹರಿದರ್ಶನಲಾಲಸಾನ್ ।
ವಿರಿಂಚಿಗುಹಶಕ್ರೇಶವಿಷ್ವಕ್ಸೇನಾದಿಕಾನ್ಕ್ರಮಾತ್ ॥ ೩೫ ॥
ಸನಕಾದ್ಯಾಂಶ್ಚ ಯೋಗೀಂದ್ರಾನ್ನಾರದಪ್ರಮುಖಾನೃಷೀನ್ ।
ಸಿದ್ಧಗಂಧರ್ವದೈತೇಯಯಕ್ಷರಾಕ್ಷಸಪನ್ನಗಾನ್ ॥ ೩೬ ॥
ತೈಸ್ತೈಃ ಸಮ್ಮಾನ್ಯಮಾನೋಽಸೌ ಪ್ರಶ್ರಯಪ್ರಿಯಭಾಷಣೈಃ ।
ಪಶ್ಯನ್ನಾಶ್ಚರ್ಯಭೂತಾನಿ ಸರ್ವಾಣಿ ವಿಚಚಾರ ಹ ॥ ೩೭ ॥

---

ದಡದಲ್ಲಿಯೇ ಒಂದು ಗುಡಿಸಿಲನ್ನು ಕಟ್ಟಿಕೊಂಡು ಆ ನೀರಿನ ಸ್ನಾನಪಾನಗಳಿಂದ ಸಂತೋಷಗೊಂಡು ಅನನ್ಯಗತಿಕವಾದ ಮನಸ್ಸುಳ್ಳವನಾಗಿ ತಾನುಮಾಡಿದ ಕೆಲಸಗಳನ್ನೆಲ್ಲ ಲೋಕೇಶ್ವರನಾದ ಶ್ರೀನಿವಾಸನಿಗರ್ಪಿಸಿ ನಿತ್ಯವೂ ಜಪದಲ್ಲಿಯೂ ಧ್ಯಾನದಲ್ಲಿಯೂ ನಿರತನಾಗಿ ಅತ್ಯುಗ್ರವಾದ ತಪಸ್ಸನ್ನು ಮಾಡುತ್ತಿದ್ದನು.

೩೩. ಆ ಕಾಲದಲ್ಲಿಯೇ ಅಗಸ್ತ್ಯಮುನಿಯೂ ಕೂಡ ಬ್ರಹ್ಮದೇವನ ಆಜ್ಞೆಯನ್ನು ಪಡೆದು ಶಿಷ್ಯರಾದ ಒಂದುನೂರು ಮುನಿಗಳಿಂದ ಕೂಡಿ ಆ ಪರ್ವತವನ್ನು ಬಂದು ಸೇರಿದನು.

೩೪. ಆತನು ಪಶ್ಚಿಮ ದಿಕ್ಕನ್ನು ಮೊದಲುಮಾಡಿಕೊಂಡು ಪ್ರದಕ್ಷಿಣೆಯನ್ನು ಮಾಡಬೇಕೆಂದು ಪ್ರಯತ್ನವುಳ್ಳವನಾಗಿ ಅನೇಕ ಪುಣ್ಯತೀರ್ಥಗಳನ್ನು ನೋಡುತ್ತ ಬಹಳಕಾಲ ಪರ್ವತದಲ್ಲಿಯೇ ಸಂಚರಿಸುತ್ತಿದ್ದನು.

೩೫–೩೬. ಆ ಪ್ರದೇಶಗಳಲ್ಲಿಯೇ ಶ್ರೀಮನ್ನಾರಾಯಣನ ದರ್ಶನವನ್ನೆಳಸಿ ಹಂಬಲಿಸುತ್ತಿರುವ ಬ್ರಹ್ಮ, ಸ್ಕಂದ, ಮಹೇಂದ್ರ, ವಿಷ್ವಕ್ಸೇನರನ್ನೂ, ಸನಕಾದಿ ಯೋಗೀಂದ್ರರನ್ನೂ, ನಾರದನೇ ಮೊದಲಾದ ಮಹರ್ಷಿಗಳನ್ನೂ, ಸಿದ್ಧರನ್ನೂ, ಗಂಧರ್ವರನ್ನೂ, ದಾನವರನ್ನೂ, ಯಕ್ಷರನ್ನೂ, ರಾಕ್ಷಸರನ್ನೂ, ನಾಗರನ್ನೂ ಆ ಅಗಸ್ತ್ಯನು ಕಂಡನು.

೩೭. ಅವರೆಲ್ಲರ ಉಚಿತ ನಮಸ್ಕಾರಪ್ರಿಯಾಲಾಪಗಳಿಂದ ಸತ್ಕಾರವನ್ನು ಹೊಂದಿದವನಾಗಿ ಆ ಪರ್ವತದ ಆಶ್ಚರ್ಯಕರಗಳಾದ ಅನೇಕ ವಿಷಯಗಳನ್ನು ನೋಡುತ್ತ ಅಲ್ಲಿಯೇ ಸಂಚರಿಸುತ್ತಿದ್ದನು.

ಸ್ನಾತ್ವಾ ತೀರ್ಥೇಷು ಸರ್ವೇಷು ಸ್ಕಂದಧಾರಾದಿಕೇಷು ಚ ।
ತತ್ರ ತತ್ರಾರ್ಚಯಾಮಾಸ ಗೋವಿಂದಂ ಜಗತಾಂ ಪತಿಂ ॥ ೩೮ ॥
ಏವಂ ಭ್ರಾಂತ್ವಾ ಗತೇಽಬ್ದಾನಾಂ ಸಹಸ್ರೇ ಮುನಿಸತ್ತಮಃ ॥ ೩೯ ॥
ನಾಪಶ್ಯತ್ಪುಂಡರೀಕಾಕ್ಷಂ ಚಿಂತಾಶೋಕಪರೋಽಭವತ್ ॥ ೪೦ ॥
ತಸ್ಮಿನ್ಕಾಲೇ ಸಮಾಜಗ್ಮುರ್ಧಿಷಣೋಶನಸೌ ಪುನಃ ।
ರಾಜೋಪರಿಚರೋ ನಾಮ ವಸುಶ್ಚ ತಮೃಷೀಶ್ವರಂ ॥ ೪೧ ॥
ಅಸ್ಮಾಕಂ ಸಫಲಂ ಜಾತಂ ಜೀವಿತಂ ಮುನಿಸತ್ತಮ ।
ದೃಷ್ಟೋ ಭವಾನ್ಯದಸ್ಮಾಭಿರ್ನಾರಾಯಣ ಇವಾಪರಃ ॥ ೪೨ ॥
ಬ್ರಹ್ಮಣಾ ಲೋಕನಾಥೇನ ಯದಾದಿಷ್ಟಾ ವಯಂ ಮುನೇ ।
ಅಚ್ಯುತಾಲೋಕನಪರಾಸ್ತದಿದಂ ಕಥ್ಯತೇ ತವ ॥ ೪೩ ॥
ಅಸ್ತಿ ದಕ್ಷಿಣದಿಗ್ಭಾಗೇ ವೇಂಕಟೋ ನಾಮ ಭೂಧರಃ ।
ಶ್ವೇತದ್ವೀಪಾದಪಿ ಹರೇರಾವಾಸೋಽಯಮಭೀಪ್ಸಿತಃ ॥ ೪೪ ॥
ತಸ್ಮಿನ್ಗಿರಾವಗಸ್ತ್ಯಸ್ಯ ಶಂಖಸ್ಯ ಚ ಮಹೀಪತೇಃ ।
ದರ್ಶಯಿಷ್ಯತಿ ಗೋವಿಂದೋ ನಿಜರೂಪಂ ಜಗದ್ಗುರುಃ ॥ ೪೫ ॥

---

೩೮. ಸ್ಕಂದಧಾರೆಯೇ ಮೊದಲಾದ ಸಕಲ ತೀರ್ಥಗಳಲ್ಲಿಯೂ ಸ್ನಾನಗಳನ್ನು ಆಚರಿಸಿ ಅಲ್ಲಲ್ಲಿಯೇ ಜಗನ್ನಾಯಕನಾದ ಗೋವಿಂದನನ್ನು ಪೂಜಿಸುತ್ತಿದ್ದನು.

೩೯—೪೦. ಇಂತು ಸುತ್ತುತ್ತ ಒಂದು ಸಾವಿರ ವರ್ಷಗಳು ಕಳೆಯಲು ಮುನಿಶ್ರೇಷ್ಠನಾದ ಆತನು ಶ್ರೀಮನ್ನಾರಾಯಣನನ್ನು ಕಾಣದೆ ಚಿಂತೆಯಿಂದಲೂ ದುಃಖದಿಂದಲೂ ಪರಿತಪಿಸಿಹೋದನು.

೪೧. ಆ ಸಮಯದಲ್ಲಿ ಆ ಋಷೀಂದ್ರನ ಸಮೀಪಕ್ಕೆ ಶುಕ್ರ ಬೃಹಸ್ಪತಿಗಳೂ ಉಪರಿಚರವಸುವೆಂಬ ಮಹಾರಾಜನೂ ಬಂದು ಸೇರಿದರು.

೪೨. " ಎಲೈ ಮುನೀಂದ್ರನೆ! ನಾರಾಯಣನ ಅಪರಾವತಾರದಂತಿರುವ ನಿನ್ನನ್ನು ನಾವು ನೋಡಿದುದರಿಂದಲೇ ನಮ್ಮ ಜೀವನಗಳೆಲ್ಲವೂ ಸಫಲಗಳಾದುವು.

೪೩. ಎಲೈ ಅಗಸ್ತ್ಯನೆ! ಅಚ್ಯುತನನ್ನು ನೋಡಲು ಕಾತುರರಾಗಿರುವ ನಮಗೆ ಲೋಕನಾಥನಾದ ಬ್ರಹ್ಮನು ಹೇಳಿದ ನಿದೇಶವನ್ನು ನಿನಗೆ ವಿಸ್ತರಿಸುವೆವು.

೪೪. ದಕ್ಷಿಣ ಭೂಭಾಗದಲ್ಲಿ ವೇಂಕಟಾಚಲವೆಂಬ ಉತ್ತಮ ಪರ್ವತವೊಂದು ನೆಲಸಿರುವುದು. ಪರಮಾತ್ಮನಿಗೆ ಆ ಪ್ರದೇಶವು ಶ್ವೇತದ್ವೀಪಕ್ಕಿಂತಲೂ ಪ್ರಿಯತರವಾದ ನಿಲಯವೆನಿಸಿರುವುದು.

೪೫. ಆ ಪರ್ವತದಲ್ಲಿ ಲೋಕಗುರುವಾದ ಮಹಾವಿಷ್ಣುವು ಅಗಸ್ತ್ಯಮಹರ್ಷಿಗೂ, ಶಂಖನೆಂಬ ಮಹಾರಾಜನಿಗೂ ದರ್ಶನವನ್ನು ದಯಪಾಲಿಸುವನು.

ತದಾನೀಂ ಸರ್ವದೇವಾನಾಮೃಷೀಣಾಂ ಯಕ್ಷರಕ್ಷಸಾಂ ।
ಅಸ್ಮಾಕಂ ದೇವದೇವಸ್ಯ ದರ್ಶನಂ ಸಂಭವಿಷ್ಯತಿ ॥ ೪೬ ॥
ಅಚಿರೇಣೈವ ತದ್ಭಾವಿ ತತಃ ಸಂತ್ಯಕ್ತಕಲ್ಮಷಾಃ ।
ಅನ್ವೇಷ್ಟುಂ ಗಚ್ಛತಾಗಸ್ತ್ಯಂ ತಸ್ಮಿನ್ನಾರಾಯಣಾಚಲೇ ॥ ೪೭ ॥
ಇತ್ಯಾಜ್ಞಪ್ತಾ ವಯಂ ಧಾತ್ರಾ ಸಮಾಗಮ್ಯಾತ್ರ ಭಾಗ್ಯತಃ ।
ದೃಷ್ಟವಂತೋ ಮಹಾಭಾಗಂ ಭವಂತಂ ಭೂರಿತೇಜಸಂ ॥ ೪೮ ॥
ಭವತಾ ಸಹಿತಾ ಗತ್ವಾ ಸ್ವಾಮಿಪುಷ್ಕರಿಣೀತಟೇ ।
ತಮಪ್ಯಾಲೋಕಯಿಷ್ಯಾಮಃ ಶಂಖಂ ಭಾಗವತೋತ್ತಮಂ ॥ ೪೯ ॥

ಭರದ್ವಾಜ ಉವಾಚ :—

ಗೀಷ್ಪತಿಪ್ರಮುಖೈರಿತ್ಥಮಾದಿಷ್ಟಃ ಕುಂಭಸಂಭವಃ ।
ಶೋಕಜಾಲಂ ಪರಿತ್ಯಜ್ಯ ಯಯೌ ತೈಃ ಸಹಿತೋ ದ್ರುತಂ ॥ ೫೦ ॥
ಸ ದದರ್ಶ ಮಹಾವೃಕ್ಷಾನ್ಫಲಪುಷ್ಪಭರಾನತಾನ್ ।
ಪ್ರರೂಢಶಾಖಾನಿಕರಚ್ಛಾಯಾಚ್ಛಾದಿತದಿಕ್ತಟಾನ್ ॥ ೫೧ ॥
ಸಿಂಹದಂತಾವಲವ್ಯಾಘ್ರವರಾಹಮಹಿಷಾದಿಕಾನ್ ।
ಮೃಗಾನಾಲೋಕಯಾಮಾಸ ಪಂಥಾನಂ ಚಾಂತರಾಂತರಾ ॥ ೫೨ ॥

---

೪೬–೪೭. ಆ ಸಮಯದಲ್ಲಿ ಸಕಲ ದೇವತೆಗಳಿಗೂ, ಮಹರ್ಷಿಗಳಿಗೂ, ಯಕ್ಷರಿಗೂ, ರಾಕ್ಷಸರಿಗೂ, ನಮಗೂ ದೇವೋತ್ತಮನ ದಿವ್ಯಸಂದರ್ಶನವು ಲಭಿಸುವುದು. ಸ್ವಲ್ಪಕಾಲದಲ್ಲಿಯೇ ಆ ಕಾರ್ಯವು ನೆರವೇರಲಿರುವುದು. ಆದುದರಿಂದ ನೀವು ಮನಸ್ಸಿನ ಕಲ್ಮಷಗಳೆಲ್ಲವನ್ನೂ ದೂರಗೊಳಿಸಿ ಆ ನಾರಾಯಣಾದ್ರಿಯಲ್ಲಿ ಅಗಸ್ತ್ಯಮುನಿಯನ್ನು ಅನ್ವೇಷಿಸಲು ಹೊರಡಿರಿ.

೪೮. ಇಂತು ನಾವು ಬ್ರಹ್ಮನಿಂದ ಆಜ್ಞಪ್ತರಾಗಿ ಇಲ್ಲಿಗೆ ಬಂದು ನಮ್ಮ ಪೂರ್ವಾರ್ಜಿತಪುಣ್ಯಗಳ ಫಲರೂಪವಾಗಿ ಮಹಾಭಾಗ್ಯಶಾಲಿಯೂ ಅಮಿತತೇಜಸ್ಸಂಪನ್ನನೂ ಆದ ನಿನ್ನನ್ನು ನೋಡಿದೆವು.

೪೯. ನಿನ್ನೊಡಗೂಡಿ ಹೊರಟು ಸ್ವಾಮಿಪುಷ್ಕರಿಣಿಯ ತೀರದಲ್ಲಿ ವಾಸಿಸುತ್ತಿರುವ ಭಾಗವತಾಗ್ರೇಸರನಾದ ಆ ಶಂಖನನ್ನೂ ನೋಡುವೆವು."

೫೦–೫೧. ಭರದ್ವಾಜನು ಹೇಳುತ್ತಾನೆ:—ಬೃಹಸ್ಪತಿಯೇ ಮುಂತಾದವರಿಂದ ಇಂತು ಆಜ್ಞಪ್ತನಾದ ಅಗಸ್ತ್ಯಮುನಿವರ್ಯನು ತನ್ನ ದುಃಖವನ್ನೆಲ್ಲ ದೂರಮಾಡಿ ಅವರೊಡನೆ ಬೇಗ ಹೊರಡಲನುವಾದನು. ದಾರಿಯಲ್ಲಿ ಫಲಪುಷ್ಪಗಳ ಭಾರದಿಂದ ಬಾಗಿನಿಂತು ಬಲಿತ ಶಾಖಾಸಮೂಹಗಳ ನೆರಳಿನಿಂದ ದಿಕ್ಕುಗಳನ್ನೆಲ್ಲ ಅಚ್ಛಾದಿಸಿರುವ ಮಹಾವೃಕ್ಷಗಳನ್ನು ಆತನು ಕಂಡನು.

೫೨. ಸಿಂಹಗಳು, ಆನೆಗಳು, ಹುಲಿಗಳು, ಕಾಡುಹಂದಿಗಳು, ಕಾಡೆಮ್ಮೆ

ತೈಸ್ತದಾನೀಂ ದದೃಶಿರೇ ಸಾನವೋಽಪ್ಯಂಬುಭೃದ್ಭೃತಃ ।
ಸುವರ್ಣರೌಪ್ಯತಾಮ್ರಾದಿಶೋಭಿತಾಸ್ತತ್ರ ತತ್ರ ತು ॥ ೫೩ ॥
ಉಚ್ಛಲಚ್ಛೀಕರಾಸಾರನಿರ್ವಾಹಿತದಿವೌಕಸಃ ।
ವೇಗೋದ್ಧೃತಶಿಲಾ ದೃಷ್ಟಾಃ ಶತಶೋ ಗಿರಿನಿರ್ಝರಾಃ ॥ ೫೪ ॥
ತೇಷಾಮಾಪಾದಯಾಮಾಸ ಪ್ರಮೋದಂ ಮಂದಮಾರುತಃ ।
ಕಮಲಾಮೋದಸಂವಾಹೀ ವಿಚರನ್ಗಿರಿಸಾನುಷು ॥ ೫೫ ॥
ಶುಕಾನಾಂ ಕೋಕಿಲಾನಾಂ ಚ ತದಾ ಶಶ್ರುವಿರೇ ಗಿರಃ ॥ ೫೬ ॥
ತತ್ರ ತತ್ರ ಸಮಾಸೀನಾನ್ವಿಸ್ತೀರ್ಣಾಸು ದೃಷತ್ಸು ತೇ ।
ಸಿದ್ಧಾನಪಶ್ಯತ್ಕೃಷ್ಣಸ್ಯ ಗಾಯತೋ ಗುಣವೈಭವಂ ॥ ೫೭ ॥
ಅಗಸ್ತ್ಯಪ್ರಮುಖಾಃ ಸರ್ವೇ ಪರಿಕ್ರಮ್ಯ ಮುನೀಶ್ವರಾಃ ।
ಸ್ವಾಮಿಪುಷ್ಕರಿಣೀಂ ದಿವ್ಯಾಂ ದದೃಶುರ್ವಿಮಲೋದಕಾಂ ॥ ೫೮ ॥

---

ಗಳು ಮುಂತಾದ ಮೃಗಗಳನ್ನೂ ಕಾಡಿನ ಮಧ್ಯದಲ್ಲಿರುವ ಕಡಿದಾದ ಮಾರ್ಗವನ್ನೂ ಆತನು ಕಂಡು ನಡೆಯುತ್ತಿದ್ದನು.

೫೩. ಮೇಘಗಳನ್ನು ಹೊತ್ತಿರುವ ಬೆಟ್ಟದ ತಪ್ಪಲುಗಳೂ ಕೂಡ ಹಳದಿ, ಬಿಳುಪು, ಕೆಂಪು ಮುಂತಾದ ಅನೇಕ ವರ್ಣಗಳಿಂದ ಕೂಡಿ ಅವರಿಗೆ ಕಾಣುತ್ತಿದ್ದುವು.

೫೪. ಮೇಲಕ್ಕೆರಚುತ್ತಿರುವ ನೀರಿನ ಹನಿಗಳಿಂದ ದೇವತೆಗಳನ್ನೂ ನೆನೆಯಿಸುತ್ತ ಜಲವೇಗದಿಂದ ಕಲ್ಲುಗಳನ್ನೂ ಎತ್ತಿಹಾಕುತ್ತ ಹರಿಯುತ್ತಿರುವ ನೂರಾರು ಜಲಪಾತಗಳನ್ನು ಅವರು ಕಂಡರು.

೫೫. ಕಮಲಗಳ ಸುವಾಸನೆಯನ್ನು ಹೊತ್ತು ಬೆಟ್ಟದ ತಪ್ಪಲುಗಳಲ್ಲಿ ಸಂಚರಿಸುತ್ತಿರುವ ಮಂದಮಾರುತವು ಅವರೆಲ್ಲರಿಗೂ ಆನಂದವನ್ನುಂಟುಮಾಡುತ್ತಿದ್ದಿತು.

೫೬. ಗಿಳಿಗಳ ಮತ್ತು ಕೋಗಿಲೆಗಳ ಕೂಗುಗಳೂ ಅವರಿಗೆ ಆಗಿಂದಾಗ ಕೇಳಿಬರುತ್ತಿದ್ದುವು.

೫೭. ಅನೇಕ ಸ್ಥಳಗಳಲ್ಲಿ ವಿಶಾಲಗಳಾದ ಹಾಸುಗಲ್ಲುಗಳಮೇಲೆ ಕುಳಿತು ಶ್ರೀ ಕೃಷ್ಣನ ಗುಣವೈಭವಗಳನ್ನು ಗಾನಮಾಡುತ್ತಿರುವ ಸಿದ್ಧರನ್ನೂ ಅಗಸ್ತ್ಯಮುನಿಯು ಕಂಡನು.

೫೮. ಇಂತು ಅಗಸ್ತ್ಯನೇ ಮೊದಲಾದ ಸಕಲ ಮುನಿವರ್ಯರೂ ಸಂಚರಿಸುತ್ತ, ಉತ್ತಮವೂ ನಿರ್ಮಲ ಜಲಸಹಿತವೂ ಆದ ಸ್ವಾಮಿಪುಷ್ಕರಿಣಿಯನ್ನು ಕಾಣುವವರಾದರು.

ತತ್ತೀರೇ ವಿಹಿತಾವಾಸಮುಪಶ್ಯನ್ಛಂಖಭೂಪತಿಂ ।
ವಾಙ್ಮನಃಕಾಯಜಂ ಕರ್ಮ ಸನ್ನಿವೇಶ್ಯ ಸ್ಥಿತಂ ಹರೌ ॥ ೫೯ ॥
ಸ ತಾನಾಲೋಕ್ಯ ಸಹಸಾ ಮುನೀಂದ್ರಾನ್ಸಂಶಿತವ್ರತಾನ್ ।
ಯಥೋಕ್ತಮಕರೋತ್ಪೂಜಾಂ ಪ್ರಣಾಮಸ್ತುತಿಪೂರ್ವಿಕಾಂ ॥ ೬೦ ॥
ಆಸೀನಾಸ್ತತ್ರ ತೇ ಸರ್ವೇ ಸಂಭಾವ್ಯಾನ್ಯೋನ್ಯಮುತ್ಸುಕಾಃ ।
ಗೋವಿಂದಕೀರ್ತನಪರಾಃ ಕೃತಾರ್ಥತ್ವಂ ಪ್ರಪೇದಿರೇ ॥ ೬೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ "ಸುವರ್ಣಮುಖರೀಮಾಹಾತ್ಮ್ಯಪ್ರಶಂಸಾಯಾಂ ಶ್ರೀ ವೇಂಕಟಾಚಲಂ ಪ್ರತಿ ಶಂಖಾಗಸ್ತ್ಯಾದ್ಯಾಗಮನವರ್ಣನಂ" ನಾಮ ಸಪ್ತತ್ರಿಂಶೋಽಧ್ಯಾಯಃ

---

೫೯. ಅದರ ತೀರಪ್ರದೇಶದಲ್ಲಿಯೇ ವಾಸವನ್ನು ಕಲ್ಪಿಸಿಕೊಂಡು ವಾಚಿಕ, ಕಾಯಿಕ, ಮಾನಸಿಕ ಕರ್ಮಗಳನ್ನೆಲ್ಲ ಪರಮಾತ್ಮನಲ್ಲಿಯೇ ಸಮರ್ಪಿಸಿ ವಾಸಿಸುತ್ತಿದ್ದ ಶಂಖಚಕ್ರವರ್ತಿಯನ್ನು ಅವರು ಕಂಡರು.

೬೦. ಆತನೂ ನಿಯಮವ್ರತಗಳಲ್ಲಿ ನಿರತರಾದ ಆ ಮುನಿಶ್ರೇಷ್ಠರನ್ನು ಕಂಡು ಸಂಭ್ರಮದಿಂದ ಸಮೀಪಿಸಿ ನಮಸ್ಕಾರ ಸ್ತೋತ್ರಗಳಿಂದ ಬರಮಾಡಿಕೊಂಡು ಉಚಿತ ರೀತಿಯಲ್ಲಿ ಅವರಿಗೆ ಅತಿಥಿಸತ್ಕಾರವನ್ನು ಮಾಡಿದನು.

೬೧. ಬಳಿಕ ಅವರೆಲ್ಲರೂ ಸುಖಾಸೀನರಾಗಿ ಔತ್ಸುಕ್ಯದಿಂದ ತಮ್ಮ ತಮ್ಮಲ್ಲಿಯೇ ಆದರೋಪಚಾರಗಳನ್ನು ನಡೆಸುತ್ತ ಪರಮಾತ್ಮನ ಗುಣಕೀರ್ತನಗಳಲ್ಲಿಯೇ ನಿರತರಾಗಿ ಜನ್ಮಸಾರ್ಥಕ್ಯವನ್ನು ಪಡೆದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೇಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ಸುವರ್ಣಮುಖರೀ ಮಾಹಾತ್ಮ್ಯ ಪ್ರಶಂಸೆ—ಶ್ರೀ ವೇಂಕಟಾಚಲಕ್ಕೆ ಶಂಖ ಅಗಸ್ತ್ಯಮುಂತಾದವರ ಆಗಮನ"ವೆಂಬ ಮುವ್ವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟತ್ರಿಂಶೋಽಧ್ಯಾಯಃ

### ಸುವರ್ಣಮುಖರೀಮಾಹಾತ್ಮ್ಯೇ ಪ್ರಶಂಸಾಯಾಮಗಸ್ತ್ಯಶಂಖಾದಿತಪಸ್ತುಷ್ಟ ಶ್ರೀ ವೇಂಕಟೇಶಾವಿರ್ಭಾವಾದಿ ಮಾಹಾತ್ಮ್ಯವರ್ಣನಂ

ಭರದ್ವಾಜ ಉವಾಚ :—

ತೇಷಾಂ ಹರೌ ಜಗನ್ನಾಥೇ ಸಮಾವೇಶಿತಚೇತಸಾಂ ।
ದಿನತ್ರಯಂ ಗತಂ ತತ್ರ ಪೂಜಾಸ್ತೋತ್ರಪರಾತ್ಮನಾಂ ॥ ೧ ॥
ತೃತೀಯೇ ದಿವಸೇ ಪ್ರಾಪ್ತೇ ತೇ ಸರ್ವೇ ನಿದ್ರಿತಾ ನಿಶಿ ।
ಅಂತೇ ಚತುರ್ಥಯಾಮಸ್ಯ ದದೃಶುಃ ಸ್ವಪ್ನಮುತ್ತಮಂ ॥ ೨ ॥
ಶಂಖಚಕ್ರಗದಾಪಾಣಿಂ ಪ್ರಸನ್ನಂ ಪುರುಷೋತ್ತಮಂ ।
ವರದಾನಾಯ ಸಂಪ್ರಾಪ್ತಮಪಶ್ಯನ್ಸ್ಮೇರಲೋಚನಂ ॥ ೩ ॥
ಉತ್ಥಾಯ ಮುದಿತಾತ್ಮಾನೋ ಗೃಹಾನ್ನಿರ್ಗತ್ಯ ಪಾವನೇ ।
ಸ್ವಾಮಿಪುಷ್ಕರಿಣೀತೋಯೇ ಸಸ್ನುರ್ವಿಧಿವದಾದರಾತ್ ॥ ೪ ॥
ವಿಧಾಯ ವಿಧಿವತ್ಕರ್ಮ ಸರ್ವೇ ದಿನಮುಖೋಚಿತಂ ।
ಗೃಹಾನ್ಪ್ರತ್ಯಾಯಯುರ್ದೇವಮಾರಾಧಯಿತುಮಚ್ಯುತಂ ॥ ೫ ॥

---

### ಕನ್ನಡದ ಅನುವಾದ

#### ಸುವರ್ಣಮುಖರೀ ಮಹಾತ್ಮ್ಯ ಪ್ರಶಂಸೆ — ಅಗಸ್ತ್ಯಶಂಖಾದಿಗಳ ತಪಸ್ಸಿಗೆ ಮೆಚ್ಚಿ ಶ್ರೀ ವೆಂಕಟೇಶನು ಆವಿರ್ಭವಿಸಿದುದು

೧. ಭರದ್ವಾಜನು ಹೇಳುತ್ತಾನೆ:—ಇಂತು ಲೋಕೇಶ್ವರನಾದ ಶ್ರೀ ಹರಿಯಲ್ಲಿಯೇ ತಮ್ಮ ಮನಸ್ಸುಗಳನ್ನು ಏಕಾಗ್ರಗೊಳಿಸಿ ಆತನ ಪೂಜೆ ಮತ್ತು ಸ್ತೋತ್ರಗಳಲ್ಲಿಯೇ ಅವರೆಲ್ಲರೂ ನಿರತರಾಗಿರಲು ಮೂರು ದಿನಗಳು ಕಳೆದುವು.

೨. ಮೂರನೆಯ ದಿನದ ರಾತ್ರಿಯಲ್ಲಿ ಎಲ್ಲರೂ ನಿದ್ರಿಸುತ್ತಿರಲು ನಾಲ್ಕನೆಯ ಯಾಮವು ಮುಗಿಯುವ ಮುಹೂರ್ತದಲ್ಲಿ ಅವರಿಗೆ ಉತ್ತಮವಾದ ಒಂದು ಕನಸುಂಟಾಯಿತು.

೩. ಶಂಖ ಚಕ್ರ ಗದೆಗಳನ್ನು ಧರಿಸಿ ಪ್ರಸನ್ನನಾಗಿ ನಗೆಮೊಗದಿಂದ ಕೂಡಿದ ಶ್ರೀನಿವಾಸನು ತಮಗೆ ವರಗಳನ್ನು ಕೊಡಲು ಬಂದಿರುವಂತೆ ಅವರು ಕನಸಿನಲ್ಲಿ ಕಂಡರು.

೪. ಪ್ರಾತಃಕಾಲದಲ್ಲಿ ಎದ್ದು ಎಲ್ಲರೂ ಸಂತುಷ್ಟಚಿತ್ತರಾಗಿ ಆದರದಿಂದ ಸಂಕಲ್ಪಪೂರ್ವಕವಾಗಿ ಪವಿತ್ರವಾದ ಸ್ವಾಮಿಪುಷ್ಕರಿಣಿಯ ಜಲದಲ್ಲಿ ಸ್ನಾನಗಳನ್ನು ಮಾಡಿದರು.

೫. ಬಳಿಕ ಪ್ರಾತರಾಹ್ನಿಕಗಳೆಲ್ಲವನ್ನೂ ಮುಗಿಸಿಕೊಂಡು ದೇವದೇವನಾದ ಅಚ್ಯುತನನ್ನು ಪೂಜಿಸಲು ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿದರು.

ಸದ್ಯಃ ಶ್ರೇಯಸ್ಕರಂ ಮಾರ್ಗೇ ನಿಮಿತ್ತಂ ಪಕ್ಷಿಸೂಚಿತಂ ।
ದೃಷ್ಟ್ವಾಸ್ವಪ್ರಸಾದಂ ದೇವಸ್ಯ ಕರಸ್ಥಂ ಮೇನಿರೇ ತದಾ ॥ ೬ ॥
ತತಸ್ತ್ರಿಲೋಕಕರ್ತಾರಂ ಪೂಜಯಿತ್ವಾ ಜನಾರ್ದನಂ ।
ತುಷ್ಟುವುರ್ವಿವಿಧೈಃ ಸ್ತೋತ್ರೈಃ ಪವಿತ್ರೈರ್ವೇದವರ್ಣಿತೈಃ ॥ ೭ ॥
ಸ್ತೋತ್ರಾವಸಾನೇ ಕೌಂತೇಯ ಮುನೀಂದ್ರಃ ಕುಂಭಸಂಭವಃ ।
ಜಜಾಪ ಶಂಖಸಹಿತೋ ಮಂತ್ರಮಷ್ಟಾಕ್ಷರಂ ಹರೇಃ ॥ ೮ ॥
ಇತ್ಥಂ ತೇಷಾಂ ಜಗತ್ಸ್ವಾಮಿನ್ಯಚ್ಯುತೇಽರ್ಪಿತಚೇತಸಾಂ ।
ಅಗ್ರಭಾಗೇ ಪ್ರಾದುರಭೂದೇಕಂ ತೇಜೋ ಮಹಾದ್ಭುತಂ ॥ ೯ ॥
ಅನೇಕಕೋಟಿಸಂಖ್ಯಾನಾಮಾದಿತ್ಯೇಂದುಹವಿರ್ಭುಜಾಂ ।
ಏಕೀಭೂಯಾಂಬರತಲೇ ಜ್ಯೋತಿರ್ಜಾಲಮಿವ ಸ್ಥಿತಂ ॥ ೧೦ ॥
ತತ್ತೇಜೋ ವೀಕ್ಷ್ಯ ತೇ ಸರ್ವೇಽಮಿತಾಂತಾಶ್ಚರ್ಯಗೋಚರಾಃ ।
ದಧ್ಯುರ್ನಾರಾಯಣಂ ದಿವ್ಯಂ ಪರಮಾನಂದವಿಗ್ರಹಂ ॥ ೧೧ ॥
ವಾಙ್ಮಾನಸಪಥಾತೀತಂ ವಿಶ್ರುತೈಶ್ವರ್ಯಭಾಸುರಂ ।
ಸಹಸ್ರನೇತ್ರಂ ಸಾಹಸ್ರಬಾಹುಪಾದೈಃ ಸಮನ್ವಿತಂ ॥ ೧೨ ॥

---

೬. ಮಾರ್ಗದಲ್ಲಿ ಬರುತ್ತ ಕ್ಷಿಪ್ರದಲ್ಲಿಯೇ ಶುಭವನ್ನು ಸೂಚಿಸುವ ಪಕ್ಷಿಗಳ ಶಕುನಗಳನ್ನು ಕಂಡು ಪರಮಾತ್ಮನ ಒಲುಮೆಯು ಕರಗತವಾಯಿತೆಂದು ಎಲ್ಲರೂ ತಿಳಿದರು.

೭. ಬಳಿಕ ಮೂರು ಲೋಕಗಳಿಗೂ ನಿಯಾಮಕನಾದ ಜನಾರ್ದನನನ್ನು ಪೂಜಿಸಿ ಪವಿತ್ರಗಳಾದ ವೇದಗಳಲ್ಲಿ ಹೇಳಿರುವ ವಿವಿಧ ಸ್ತೋತ್ರಗಳಿಂದ ಆತನನ್ನು ಸ್ತುತಿಸಿದರು.

೮. ಎಲೈ ಅರ್ಜುನನೆ! ಸ್ತೋತ್ರವು ಮುಗಿಯಲು ಮುನೀಶ್ವರನಾದ ಅಗಸ್ತ್ಯನು ಶಂಖನೊಡನೆ ನಾರಾಯಣನ ಅಷ್ಟಾಕ್ಷರೀಮಂತ್ರವನ್ನು ಜಪಿಸಿದನು.

೯. ಇಂತು ಲೋಕನಾಯಕನಾದ ಪರಮಾತ್ಮನಲ್ಲಿಯೇ ಏಕಾಗ್ರಗೊಳಿಸಿದ ಮನಸ್ಸುಗಳುಳ್ಳ ಅವರ ಮುಂದೆ ಅತ್ಯದ್ಭುತವಾದ ಒಂದು ತೇಜಸ್ಸು ಕಾಣಿಸಿಕೊಂಡಿತು.

೧೦. ಆ ಜ್ಯೋತಿಯು ಅನೇಕ ಕೋಟಿ ಸಂಖ್ಯೆಗಳ ಸೂರ್ಯರೂ, ಚಂದ್ರರೂ, ಅಗ್ನಿಗಳೂ ಒಟ್ಟುಗೂಡಿ ಆಕಾಶದಲ್ಲಿ ನಿಂತಂತೆ ತೋರುತ್ತಿದ್ದಿತು.

೧೧. ಆ ಅಪೂರ್ವತೇಜಸ್ಸನ್ನು ಕಂಡು ಅವರೆಲ್ಲರೂ ಅಪರಿಮಿತಾಶ್ಚರ್ಯಭರಿತರಾಗಿ ಅಲೌಕಿಕ ಪರಮಾನಂದಶರೀರನಾದ ಶ್ರೀಮನ್ನಾರಾಯಣನನ್ನು ಧ್ಯಾನಿಸಿದರು.

೧೨. ಪರಮಾತ್ಮನ ಆ ರೂಪವು ವಾಙ್ಮನಗಳ ವ್ಯಾಪಾರಕ್ಕೆ ಸಿಕ್ಕದೆ ಪ್ರಖ್ಯಾ

ತಪ್ತಕಾರ್ತಸ್ವರನಿಭಸ್ಫುರತ್ಕಾಂತಿಮನೋಹರಂ ।
ದಂಷ್ಟ್ರಾಕರಾಲಂ ದುರ್ದರ್ಶಂ ವಮಂತಂ ದಹನಚ್ಛಟಾಃ ॥ ೧೩ ॥
ಕೌಸ್ತುಭೇನ ವಿರಾಜಂತಂ ದಧಾನಮುರಸಿ ಶ್ರಿಯಂ ।
ಅವಿಚಿಂತ್ಯಮನಾದ್ಯಂತಮತ್ಯಂತಭಯದಾಯಕಂ ॥ ೧೪ ॥
ಪ್ರಕಾಶಯಂತಂ ಬ್ರಹ್ಮಾಂಡಂ ಸರ್ವಮಾತ್ಮನಿ ಸರ್ವಗಂ ।
ಅಗಸ್ತ್ಯಶಂಖಪ್ರಮುಖಾಸ್ತೇ ಸರ್ವೇ ಹೃಷ್ಟಚೇತಸಃ ॥ ೧೫ ॥
ತಮಾಲೋಕ್ಯ ಜಗನ್ನಾಥಂ ಭೂಯೋ ಭೂಯೋ ವವಂದಿರೇ ।
ಭ್ರಮಂತಿ ಲೋಕರಕ್ಷಾರ್ಥಮಾಯುಧಾನಿ ತದಾ ಹರೇಃ ॥ ೧೬ ॥
ನಿಜತೇಜೋಬಲೋಪೇತಾನ್ಯಾಜಗ್ಮುಸ್ತಂ ನಿಷೇವಿತುಂ ।
ಚಕ್ರಮರ್ಕಪ್ರಭಂ ದಿವ್ಯಾ ಗದಾ ಖಡ್ಗಶ್ಚ ನಂದಕಃ ॥ ೧೭ ॥
ಪುಂಡರೀಕಂ ಚೋಗ್ರರವಃ ಪಾಂಚಜನ್ಯಃ ಶಶಿಪ್ರಭಃ ।
ತದಾ ಬ್ರಹ್ಮಾಂಡಮಖಿಲಂ ಪೂರಯಾಮಾಸ ನಿರ್ಭರಃ ॥ ೧೮ ॥

---

ತಗಳಾದ ಷಡ್ಗುಣೈಶ್ವರ್ಯಗಳಿಂದ ಯುಕ್ತವಾಗಿ ಅನಂತ ನೇತ್ರಗಳಿಂದಲೂ, ಬಾಹುಗಳಿಂದಲೂ, ಪಾದಗಳಿಂದಲೂ ಕೂಡಿದ್ದಿತು.

೧೩. ಪುಟವಿಟ್ಟ ಚಿನ್ನವನ್ನು ಹೋಲುವ ಮೈಬಣ್ಣವುಳ್ಳದ್ದಾದರೂ, ಕೋರೆದಾಡೆಗಳಿಂದ ಭಯಂಕರವಾಗಿ ಬೆಂಕಿಯ ಜ್ವಾಲೆಗಳನ್ನುಗುಳುತ್ತ ಆ ದಿವ್ಯರೂಪವು ನೋಡಲಸಾಧ್ಯವಾಗಿದ್ದಿತು.

೧೪. ಪರಮಾತ್ಮನು ಕೌಸ್ತುಭದಿಂದ ಶೋಭಿಸುತ್ತ ವಕ್ಷಸ್ಥಳದಲ್ಲಿ ಶ್ರೀ ಲಕ್ಷ್ಮಿಯನ್ನು ಧರಿಸಿದ್ದರೂ ಅಚಿಂತ್ಯನೂ ಆದ್ಯಂತರಹಿತನೂ ನೋಡುವವರಿಗೆ ಅತ್ಯಂತ ಭಯವನ್ನುಂಟುಮಾಡುವವನೂ ಆಗಿದ್ದನು.

೧೫–೧೬. ಆ ಸ್ವಾಮಿಯು ಸಕಲ ಬ್ರಹ್ಮಾಂಡವನ್ನೂ ತನ್ನಲ್ಲಿಯೇ ಪ್ರಕಾಶಗೊಳಿಸುತ್ತಿದ್ದರೂ ತಾನು ಸರ್ವವ್ಯಾಪಿಯಾಗಿದ್ದನು. ಅಗಸ್ತ್ಯ, ಶಂಖರೇ ಮೊದಲಾದ ಅವರೆಲ್ಲರೂ ಸಂತೋಷಗೊಂಡ ಚಿತ್ತಗಳಿಂದ ಲೋಕನಾಥನಾದ ಆತನನ್ನು ಕಂಡು ಮತ್ತೆ ಮತ್ತೆ ನಮಸ್ಕರಿಸಿದರು. ಲೋಕರಕ್ಷಾರ್ಥವಾಗಿ ಶ್ರೀಹರಿಯ ಆಯುಧಗಳೆಲ್ಲವೂ ಅಲ್ಲಿಯೇ ಚಲಿಸುತ್ತಿದ್ದುವು.

೧೭–೨೨. ಆತನಿಗೆ ಸೇವೆಯನ್ನೆಸಗಲು ಸೂರ್ಯಬಿಂಬಸದೃಶವಾದ ಚಕ್ರವೂ, ದಿವ್ಯಗದೆಯೂ, ನಂದಕವೆಂಬ ಖಡ್ಗವೂ, ಕಮಲವೂ, ಉಗ್ರಧ್ವನಿಯೊಡಗೂಡಿ ಚಂದ್ರನನ್ನು ಹೋಲುವ ಪಾಂಚಜನ್ಯವೆಂಬ ಶಂಖವೂ ತಮ್ಮ ತಮ್ಮ ತೇಜಸ್ಸಿನಿಂದಲೂ ಬಲದಿಂದಲೂ ಕೂಡಿ ಅಲ್ಲಿಗೆ ಬಂದು ಸೇರಿದುವು. ಆಗ ಸಕಲ ರಾಕ್ಷಸರಿಗೂ ಭಯವನ್ನುಂಟುಮಾಡುವ ಪಾಂಚಜನ್ಯದ ಘೋಷವು ಸಹಿಸಲಸಾಧ್ಯವಾಗಿ ಬ್ರಹ್ಮಾಂಡವನ್ನೆಲ್ಲ ತುಂಬಿಸಿತು. ಅಪರಿಮಿತಾಶ್ಚರ್ಯ

ಪಾಂಚಜನ್ಯಸ್ಯ ನಿನದಃ ಸರ್ವಾಸುರಭಯಂಕರಃ ।
ಪಾಂಚಜನ್ಯಧ್ವನಿಂ ಶ್ರುತ್ವಾ ನಿತಾಂತಾಶ್ಚರ್ಯಭೀಷಣಂ ॥ ೧೯ ॥
ಆಯಯುರ್ದೇವತಾಃ ಸರ್ವಾಃ ಸ್ವಂ ಸ್ವಂ ವಾಹನಮಾಸ್ಥಿತಾಃ ।
ಬ್ರಹ್ಮಾ ರುದ್ರಃ ಶತಮುಖಃ ಸನಕಾದ್ಯಾಶ್ಚ ಯೋಗಿನಃ ॥ ೨೦ ॥
ವಸಿಷ್ಠಮುಖ್ಯಾ ಮುನಯೋ ಗಂಧರ್ವೋರಗಕಿನ್ನರಾಃ ।
ವಿಷ್ವಕ್ಸೇನೋ ಗರುತ್ಮಾಂಶ್ಚ ವಿಷ್ಣುಭೃತ್ಯಾ ಜಯಾದಯಃ ॥ ೨೧ ॥
ಸರೂಪಾಶ್ಚೈವ ಯೇ ನಿತ್ಯಾಃ ಶ್ವೇತದ್ವೀಪನಿವಾಸಿನಃ ।
ಸುಮನೋದ್ರುಮಸಂಭೂತಾ ಸುಮನೋವೃಷ್ಟಿರದ್ಭುತಾ ।
ಪಪಾತ ಮೇದುರಾಮೋದಮೋದಿತಾಶೇಷಮಾನಸಾ ॥ ೨೨ ॥
ನನೃತುರ್ದಿವ್ಯಸದೃಶೋ ಜಗುಃ ಕಿನ್ನರಪುಂಗವಾಃ ।
ತುಷ್ಟುವುರ್ಹರ್ಷತರಲಾಃ ಸುರಗಂಧರ್ವಚಾರಣಾಃ ॥ ೨೩ ॥
ದೃಷ್ಟ್ವಾ ತೇ ಪುಂಡರೀಕಾಕ್ಷಂ ಪ್ರಸನ್ನಂ ಭಕ್ತವತ್ಸಲಂ ॥ ೨೪ ॥
ಪ್ರಣಮ್ಯ ತೋಷಯಾಮಾಸುಃ ಸಾಷ್ಟಾಂಗಂ ವಿವಿಧೈಸ್ತವೈಃ ॥ ೨೫ ॥

ಬ್ರಹ್ಮಾದಯ ಊಚುಃ:—

ಜಯ ವಿಷ್ಣೋ ಕೃಪಾಸಿಂಧೋ ಜಯ ತಾಮರಸೇಕ್ಷಣ ।
ಜಯ ಲೋಕೈಕವರದ ಜಯ ಭಕ್ತಾರ್ತಿಭಂಜನ ॥ ೨೬ ॥

---

ಕರವೂ ಭೀಷಣವೂ ಆದ ಪಾಂಚಜನ್ಯದ ಧ್ವನಿಯನ್ನು ಕೇಳಿ ಸಕಲ ದೇವತೆಗಳೂ ತಮ್ಮ ತಮ್ಮ ವಾಹನಗಳನ್ನೇರಿ ಅಲ್ಲಿಗೆ ಬಂದರು. ಬ್ರಹ್ಮನೂ, ಮಹೇಶ್ವರನೂ, ಮಹೇಂದ್ರನೂ, ಸನಕಾದಿ ಯೋಗಿವರ್ಯರೂ, ವಸಿಷ್ಠನೇ ಮೊದಲಾದ ಮುನಿಗಳೂ, ಗಂಧರ್ವರೂ, ನಾಗರೂ, ಕಿನ್ನರರೂ, ವಿಷ್ವಕ್ಸೇನನೂ, ಗರುಡನೂ, ಮಹಾವಿಷ್ಣುವಿನ ದ್ವಾರಪಾಲಕರಾದ ಜಯವಿಜಯರೇ ಮೊದಲಾದ ಭೃತ್ಯರೂ, ಶ್ವೇತದ್ವೀಪದಲ್ಲಿ ವಾಸಮಾಡುವ ಸುಂದರರಾದ ನಿತ್ಯಸಿದ್ಧರೂ ಇವರೇ ಮುಂತಾದವರೆಲ್ಲರೂ ಅಲ್ಲಿಗೈತಂದು ನೆರೆದರು. ದೇವತೆಗಳೆಸಗಿದ ಕಲ್ಪವೃಕ್ಷಕುಸುಮಗಳ ಮಳೆಯು ಎಲ್ಲರಿಗೂ ಅಪರಿಮಿತಾನಂದವನ್ನುಂಟುಮಾಡುತ್ತ ಕರೆಯಿತು.

೨೩. ದೇವತಾಸ್ತ್ರೀಯರು ನರ್ತನವನ್ನು ಮಾಡಿದರು. ಕಿನ್ನರಮುಖ್ಯರು ಗಾಯನಗಳನ್ನು ಮಾಡಿದರು. ಸಂತೋಷದಿಂದ ಸಂಭ್ರಮಗೊಂಡು ದೇವತೆಗಳೂ, ಗಂಧರ್ವರೂ, ಚಾರಣರೂ ಪರಮಾತ್ಮನನ್ನು ಸ್ತೋತ್ರಮಾಡಿದರು.

೨೪–೨೫. ಪ್ರಸನ್ನನೂ, ಭಕ್ತವತ್ಸಲನೂ ಆದ ಕಮಲಾಕ್ಷನನ್ನು ಕಂಡು ಎಲ್ಲರೂ ನಮಸ್ಕರಿಸಿ ಸಾಷ್ಟಾಂಗಗಳನ್ನು ಮಾಡಿ ಅನೇಕ ಸ್ತೋತ್ರಗಳಿಂದ ಸಂತೋಷಗೊಳಿಸಿದರು.

೨೬. ದೇವತೆಗಳು ಹೇಳುತ್ತಾರೆ:—"ವಿಶ್ವವ್ಯಾಪಕನೂ, ಕೃಪಾಸಾಗರನೂ,

ಅನಂತಮಕ್ಷರಂ ಶಾಂತಮವಾಙ್ಮನಸಗೋಚರಂ ।
ಕೋ ವಾ ಭವಂತಂ ಜಾನಾತಿ ಚಿದಾನಂದಮಯಾತ್ಮಕಂ ॥ ೨೭ ॥
ಅಣೋರಣುತರಂ ಸ್ಥೂಲಾತ್ಸ್ಥೂಲಂ ಸರ್ವಾಂತರಸ್ಥಿತಂ ।
ತ್ವಾಮಾಮನಂತಿ ಪುರುಷಂ ಪ್ರಕೃತೇಃ ಪರಮಚ್ಯುತಂ ॥ ೨೮ ॥
ವೇದಾಂತಸಾರರೂಪಂ ತ್ವಾಂ ಸರ್ವಾಂತರ್ಬಾಹ್ಯವರ್ತಿನಂ ।
ಕೋ ಹಿ ವರ್ಣಯಿತುಂ ಶಕ್ತೋ ಮಾಯಾಯುತ್ತೇಷು ದೇಹಿಷು ॥ ೨೯ ॥
ಭವದೀಯಮಿದಂ ರೂಪಂ ದೃಷ್ಟ್ವಾತಿಭಯದಾಯಕಂ ।
ಭಯೋದ್ವಿಗ್ನಾ ವಯಂ ಸರ್ವೇ ಶಾಂತಂ ರೂಪಂ ಭಜಸ್ವ ಹ ॥ ೩೦ ॥

ಭರದ್ವಾಜ ಉವಾಚ :—

ಇತಿ ಸ್ತುತೋ ವಿರಿಂಚಾದ್ಯೈಃ ಪ್ರಸನ್ನೋ ಗರುಡಧ್ವಜಃ ।
ಮೇಘಘೋಷಪ್ರತಿಮಯಾ ವಾಚಾ ಸಾದರಮಬ್ರವೀತ್ ॥ ೩೧ ॥

---

ಕಮಲನೇತ್ರನೂ, ತ್ರಿಲೋಕಗಳಿಗೆ ಅಭಯಪ್ರದನೂ, ಭಕ್ತರ ಕಷ್ಟಗಳನ್ನು ನಿವಾರಿಸುವವನೂ ಆದ ನಿನಗೆ ಜಯವಾಗಲಿ!

೨೭. ಆದ್ಯಂತರಹಿತನೂ, ಶಾಶ್ವತನೂ, ಪ್ರಶಾಂತನೂ, ಮಾತುಗಳಿಗೂ ಮನಸ್ಸಿಗೂ ನಿಲುಕದವನೂ ಆದ ಚಿದಾನಂದಾತ್ಮಕವಾದ ದೇಹವುಳ್ಳ ನಿನ್ನನ್ನು ಯಾವನು ತಾನೆ ತಿಳಿಯಬಲ್ಲನು?

೨೮. ಅಣುಗಳಿಗಿಂತಲೂ ಸೂಕ್ಷ್ಮನೆಂದೂ, ಸ್ಥೂಲಗಳಿಗಿಂತಲ್ಲೂ ಮಹತ್ತರನೆಂದೂ, ಸಕಲ ಪದಾರ್ಥಗಳಲ್ಲಿಯೂ ಅಂತರ್ಯಾಮಿಯೆಂದೂ, ಪ್ರಕೃತಿಗೆ ಅತೀತನಾದ ಪುರುಷನೆಂದೂ, ನಾಶರಹಿತನೆಂದೂ ಬಲ್ಲವರು ನಿನ್ನನ್ನು ಕುರಿತು ಹೇಳುವರು.

೨೯. ಸಕಲ ವೇದಾಂತಗಳ ಸಾರಭೂತವಾದ ಶರೀರವುಳ್ಳವನೂ, ಬ್ರಹ್ಮಾಂಡದ ಒಳಗೂ ಹೊರಗೂ ವ್ಯಾಪಿಸಿರುವನೂ ಆದ ನಿನ್ನನ್ನು ಮಾಯೋಪಹಿತರಾದ ಜೀವರಲ್ಲಿ ಯಾವನುತಾನೆ ವರ್ಣಿಸಲು ಶಕ್ತನು?

೩೦. ಎಲೈ ಪ್ರಭುವೆ! ಅತ್ಯಂತ ಭಯವನ್ನುಂಟುಮಾಡುತ್ತಿರುವ ನಿನ್ನ ಈ ರೂಪವನ್ನು ಕಂಡು ನಾವೆಲ್ಲರೂ ಭೀತಿಯಿಂದ ಚಿಂತಾಕುಲರಾಗಿರುವೆವು. ಆದುದರಿಂದ ಸೌಮ್ಯವಾದ ರೂಪವನ್ನು ಸ್ವೀಕರಿಸುವವನಾಗು.''

೩೧. ಭರದ್ವಾಜನು ಹೇಳುತ್ತಾನೆ:—ಇಂತು ಬ್ರಹ್ಮಾದಿದೇವತೆಗಳಿಂದ ಸ್ತೋತ್ರಗೊಳ್ಳಲ್ಪಟ್ಟು ಪ್ರಸನ್ನನಾದ ಮಹಾವಿಷ್ಣುವು ಮೇಘಗಳ ಗರ್ಜನೆಯಂತೆ ಗಂಭೀರವಾದ ಧ್ವನಿಯಿಂದ ಪ್ರೀತಿಯುಕ್ತನಾಗಿ ಹೇಳತೊಡಗಿದನು.

ಶ್ರೀ ಭಗವಾನುವಾಚ :—

ಭಯಾವಹಾಮಿಮಾಂ ಮೂರ್ತಿಮುತ್ಸೃಜ್ಯಾಹಂ ಪ್ರಿಯಾವಹಂ ।
ಶಾಂತಂ ರೂಪಂ ಭಜಿಷ್ಯಾಮಿ ಮಾಂ ಪಶ್ಯತ ನಿರಾಕುಲಾಃ ॥ ೩೨ ॥
ಇತ್ಯುಕ್ತ್ವಾಂತರ್ಹಿತೋ ಭೂತ್ವಾ ತಸ್ಮಿನ್ನೇವ ಕ್ಷಣಾಂತರೇ ।
ವಿಮಾನೇ ರತ್ನಖಚಿತೇ ಬಭೂವ ಸುಖದರ್ಶನಃ ॥ ೩೩ ॥
ಚಂದ್ರಬಿಂಬಾನನಃ ಶಾಂತೋ ನೀಲೋತ್ಪಲದಲದ್ಯುತಿಃ ।
ಸುವರ್ಣವರ್ಣವಸನೋ ರತ್ನಭೂಷಣಭೂಷಿತಃ ॥ ೩೪ ॥
ಶಂಖಚಕ್ರಗದಾಪದ್ಮಲಸತ್ಕರಚತುಷ್ಟಯಃ ।
ತಮಾಲೋಕ್ಯ ರಮಾಕಾಂತಂ ಭೂಯೋ ಭೂಯೋ ವವಂದಿರೇ ॥ ೩೫ ॥
ಸಂತೋಷಯಿತ್ವಾ ಬ್ರಹ್ಮಾದೀನಭೀಷ್ಟಪ್ರತಿಪಾದನೈಃ ।
ಅವೋಚದ್ವಿನಯಾನಮ್ರಮುಗಸ್ತ್ಯಂ ಮುನಿಪುಂಗವಂ ॥ ೩೬ ॥

ಶ್ರೀ ಭಗವಾನುವಾಚ :—

ತ್ವಂ ಮುನೀಂದ್ರ ವ್ರತೈರ್ಘೋರೈಶ್ಶೀರ್ಣೈರ್ಮಾಂ ಪ್ರತಿ ಸಂಪ್ರತಿ ।
ಪರಿಕ್ಲಿಷ್ಟೋಽಸಿ ದಾಸ್ಯಾಮಿ ವರಾಂಸ್ತೇಽಭೀಪ್ಸಿತಾನ್ವದ ॥ ೩೭ ॥

---

೩೨. ಭಗವಂತನು ಹೇಳುತ್ತಾನೆ:—"ನಿಮಗೆ ಭಯವನ್ನುಂಟುಮಾಡುತ್ತಿರುವ ಈ ರೂಪವನ್ನು ಉಪಸಂಹರಿಸಿ ಪ್ರಿಯವನ್ನುಂಟುಮಾಡುವ ಸೌಮ್ಯ ರೂಪವನ್ನು ಸ್ವೀಕರಿಸುವೆನು. ನೀವೆಲ್ಲರೂ ಶಾಂತಮನಸ್ಕರಾಗಿ ನನ್ನನ್ನು ನೋಡಿರಿ."

೩೩. ಇಂತೆಂದು ಪರಮಾತ್ಮನು ಅದೃಶ್ಯನಾಗಿ ಉತ್ತರಕ್ಷಣದಲ್ಲಿಯೇ ನವರತ್ನಖಚಿತವಾದ ವಿಮಾನದಲ್ಲಿ ಕುಳಿತು ಪ್ರಸನ್ನರೂಪದಿಂದ ಅವರಿಗೆ ಕಾಣಿಸಿಕೊಂಡನು.

೩೪. ಚಂದ್ರನನ್ನು ಹೋಲುವ ಮುಖಬಿಂಬದಿಂದಲೂ, ಪ್ರಸನ್ನವಾದ ಮುಖಕಮಲದಿಂದಲೂ, ಚಿನ್ನವನ್ನು ಹೋಲುವ ಪೀತಾಂಬರದಿಂದಲೂ, ರತ್ನಾಭರಣಗಳಿಂದಲೂ ಆ ಸ್ವಾಮಿಯು ಶೋಭಿಸುತ್ತಿದ್ದನು.

೩೫. ಆತನ ನಾಲ್ಕು ಕೈಗಳಲ್ಲಿಯೂ ಶಂಖ, ಚಕ್ರ, ಗದಾ, ಪದ್ಮಗಳು ಶೋಭಿಸುತ್ತಿದ್ದುವು. ಇಂತು ಲಕ್ಷ್ಮೀಸಮೇತನಾದ ನಾರಾಯಣನನ್ನು ಕಂಡು ಅವರೆಲ್ಲರೂ ಮತ್ತೆ ಮತ್ತೆ ನಮಸ್ಕರಿಸಿದರು.

೩೬. ಬ್ರಹ್ಮಾದಿ ದೇವತೆಗಳಿಗೆ ಅವರವರ ಅಭೀಷ್ಟಗಳನ್ನಿತ್ತು ಸಂತೋಷಗೊಳಿಸಿ ಪರಮಾತ್ಮನು ವಿನಯದಿಂದ ತಲೆಬಾಗಿ ನಿಂತಿದ್ದ ಮುನಿಶ್ರೇಷ್ಠನಾದ ಅಗಸ್ತ್ಯನನ್ನು ಕುರಿತು ಹೇಳಿದನು.

೩೭. ಭಗವಂತನು ಹೇಳುತ್ತಾನೆ:—"ಮಹಾಮುನಿಯೇ! ನನ್ನನ್ನು

ಭರದ್ವಾಜ ಉವಾಚ :—

ನಿಶಮ್ಯ ವಾಕ್ಯಂ ಶ್ರೀಭರ್ತುಃ ಪ್ರಣಮ್ಯ ಚ ಪುನಃ ಪುನಃ ।
ಸ ರೋಮಾಂಚಿತಸರ್ವಾಂಗಃ ಕುಂಭಜನ್ಮಾ ವಚೋಽಬ್ರವೀತ್ ॥ ೩೮ ॥

ಅಗಸ್ತ್ಯ ಉವಾಚ :—

ಯದ್ಯದ್ಧುತಂ ತಪಸ್ತಪ್ತಂ ಯದಧೀತಂ ಶ್ರುತಂ ಮಯಾ ।
ತತ್ಸರ್ವಂ ಸಫಲಂ ಜಾತಮಾದ್ಯತೋಽಸ್ಮಿ ಯತಸ್ತ್ವಯಾ ॥ ೩೯ ॥
ವಿಷೋಽಹಮೇವ ಧರ್ಮಾತ್ಮಾ ತ್ರಿಷು ಲೋಕೇಷ್ವಪಿ ಪ್ರಭೋ ।
ತ್ವಾಂ ವಿಚಿನ್ವಂತಮಧುನಾ ಮಾಮನ್ವಿಷ್ಯಾಗತೋಽಸಿ ಯತ್ ॥ ೪೦ ॥
ತ್ವತ್ಪ್ರಸಾದಾತ್ಪುರೈವಾಹಂ ಪ್ರಾಪ್ತಾಖಿಲಮನೋರಥಃ ।
ನ ಪಶ್ಯಾಮಿ ವಿಚಿಂತ್ಯಾಪಿ ಪ್ರಾಪ್ಯಂ ಸಂಪ್ರತಿ ಮಾಧವ ॥ ೪೧ ॥
ತಥಾಪಿ ಚಾಪಲಾದೇತತ್ತ್ವ ವಿಜ್ಞಾಪ್ಯತೇ ಪ್ರಭೋ ।
ತ್ವತ್ಪಾದಾಂಬುಜಯೋರ್ಭಕ್ತಿರ್ಮೇಽಸ್ತು ನಿರಂತರಂ ॥ ೪೨ ॥

---

ಕುರಿತು ನೀನು ಮಾಡಿರುವ ಘೋರವಾದ ತಪಸ್ಸಿನಿಂದ ಬಹಳ ಕ್ಲೇಶಗಳನ್ನು ಸಹಿಸಿರುವೆ. ನಿನಗೆ ಅಭೀಪ್ಸಿತಗಳಾದ ವರಗಳನ್ನು ಬೇಡಿದಲ್ಲಿ ಅನುಗ್ರಹಿಸುವೆನು."

೩೮. ಭರದ್ವಾಜನು ಹೇಳುತ್ತಾನೆ:—ಲಕ್ಷ್ಮೀರಮಣನಾದ ವಿಷ್ಣುವಿನ ಈ ವಾಕ್ಯವನ್ನು ಕೇಳಿ ಅಗಸ್ತ್ಯನು ಪುನಃ ಪುನಃ ಪ್ರಣಾಮಗಳನ್ನು ಮಾಡಿ ನೈನವಿರೇಳುತ್ತಿರಲು ಇಂತೆಂದನು.

೩೯. ಅಗಸ್ತ್ಯನು ಹೇಳುತ್ತಾನೆ:—"ನಾನು ಹೋಮಮಾಡಿದುದೂ, ಆಚರಿಸಿದ ತಪಸ್ಸೂ, ಮಾಡಿದ ಅಧ್ಯಯನವೂ, ಪುರಾಣಾದಿಗಳ ಶ್ರವಣವೂ, ಎಲ್ಲವೂ ಇಂದು ನಿನ್ನಿಂದ ಆದರದ ಸತ್ಕಾರವನ್ನು ಪಡೆದುದರಿಂದ ಸಫಲಗಳಾದುವು.

೪೦. ಎಲೈ ಸ್ವಾಮಿಯೆ! ಇಂದಿಗೆ ನಾನೇ ಮೂರು ಲೋಕಗಳಲ್ಲಿಯೂ ಅತ್ಯಂತ ಧರ್ಮಿಷ್ಠನೆಂದು ತಿಳಿಯುವೆನು. ನಿನ್ನನ್ನು ಹುಡುಕುತ್ತ ಅಲೆಯುತ್ತಿದ್ದ ನನ್ನನ್ನು ನೀನೇ ಹುಡುಕಿಕೊಂಡು ಪ್ರಸನ್ನನಾಗಿರುವೆ.

೪೧. ಮಾಧವ ಮೂರ್ತಿಯೆ! ನಿನ್ನ ಅನುಗ್ರಹದಿಂದ ನನಗೆ ಮೊದಲೇ ಸಕಲ ಮನೋರಥಗಳೂ ಕೈಗೂಡಿರುವುವು. ಎಷ್ಟು ಯೋಚಿಸಿದರೂ ಈಗ ನನಗೆ ಪ್ರಾಪ್ಯವಾದುದು ಯಾವುದೂ ಇಲ್ಲ.

೪೨. ಆದರೂ ಬುದ್ಧಿಚಾಪಲ್ಯದ ಪ್ರಯುಕ್ತ, ನಾಥನಾದ ನಿನ್ನಲ್ಲಿ ಒಂದು ವಿಜ್ಞಾಪನೆಯನ್ನು ಮಾಡಿಕೊಳ್ಳುವೆನು. ಅದೇನೆಂದರೆ ನನಗೆ ನಿನ್ನ ಪಾದ ಕಮಲಗಳಲ್ಲಿ ನಿಶ್ಚಲವಾದ ಭಕ್ತಿಯು ಶಾಶ್ವತವಾಗಿ ನಿಲ್ಲುವಂತೆ ಅನುಗ್ರಹಿಸು.

ಅವಧಾರಯ ಚೈತತ್ತ್ವಂ ಸುರಪ್ರಾರ್ಥನಯಾ ಮಯಾ ।
ನದೀ ಸುವರ್ಣಮುಖರೀ ಸ್ನಾತಾಘೌಘವಿನಾಶಿನೀ ॥ ೪೩ ॥
ಸಾ ಭವಚ್ಛೈಲಕಟಕಸಮಾಸನ್ನಾ ಸಮಾಗತಾ ।
ತಾಂ ಕೃತಾರ್ಥಯ ಲೋಕೇಶ ತ್ವದನುಗ್ರಹವೃತ್ತಿಭಿಃ ॥ ೪೪ ॥
ಸುವರ್ಣಮುಖರೀತೋಯೇ ಸ್ನಾತ್ವಾ ಯೇ ವೇಂಕಟೇ ಸ್ಥಿತಂ ।
ಪಶ್ಯಂತಿ ಭಕ್ತಿಮುಕ್ತ್ಯೋಸ್ತು ಭೂಯಾಸುರ್ಭಾಜನಾನಿ ತೇ ॥ ೪೫ ॥
ಅಲ್ಪಾಯುಷೋ ನರಾ ಮೂಢಾ ಜ್ಞಾನಯೋಗಪರಿಚ್ಯುತಾಃ ।
ನ ಶಕ್ನುವಂತಿ ತ್ವಾಂ ದ್ರಷ್ಟುಂ ವ್ರತಾಧ್ಯಯನಕರ್ಮಭಿಃ ॥ ೪೬ ॥
ಸದಾಸ್ಮಿನ್ನಾಸ್ಥಿತಃ ಶೈಲೇ ಸರ್ವೇಷಾಂ ಚ ಜಗದ್ಗುರೋ ।
ಪ್ರಸಾದಸುಮುಖೋ ದೇವ ಕಾಂಕ್ಷಿತಾರ್ಥಪ್ರದೋ ಭವ ॥ ೪೭ ॥

ಶ್ರೀ ಭಗವಾನುವಾಚ :—

ಯತ್ಪ್ರಾರ್ಥಿತಂ ತ್ವಯಾ ವಿಪ್ರ ತತ್ತಥೈವ ಭವಿಷ್ಯತಿ ।
ನೂನಮಪ್ರತಿಮಾ ಲೋಕೇ ಮಯಿ ಭಕ್ತಿಃ ಕೃತಾ ತ್ವಯಾ ॥ ೪೮ ॥

---

೪೩. ಮತ್ತೊಂದು ಮಾತನ್ನು ಲಾಲಿಸು. ದೇವತೆಗಳ ಪ್ರಾರ್ಥನೆಯನ್ನನುಸರಿಸಿ ನನ್ನಿಂದ ಈ ಸುವರ್ಣಮುಖರಿಯು ಭೂಲೋಕಕ್ಕೆ ತರಲ್ಪಟ್ಟಿತು. ಈ ನದಿಯು ಸ್ನಾನಮಾಡಿದವರ ಸಕಲ ಪಾಪಗಳನ್ನೂ ನಾಶಗೊಳಿಸುವುದು.

೪೪. ಅದು ನಿನ್ನ ಆವಾಸವಾದ ವೇಂಕಟಶೈಲದ ಪಾದವನ್ನು ಬಳಸಿಕೊಂಡು ಹರಿದು ಬರುತ್ತಿರುವುದು. ಎಲೈ ಲೋಕನಾಥನೆ! ಅನುಗ್ರಹೋನ್ಮುಖವಾದ ನಿನ್ನ ದೃಷ್ಟಿಯಿಂದ ಆ ನದಿಯನ್ನು ಸಾರ್ಥಕಗೊಳಿಸು.

೪೫. ಯಾವ ಮನುಷ್ಯರು ಸುವರ್ಣಮುಖರಿಯ ನೀರಿನಲ್ಲಿ ಸ್ನಾನವನ್ನು ಮಾಡಿ ವೇಂಕಟಾಚಲದಲ್ಲಿ ನೆಲಸಿರುವ ನಿನ್ನನ್ನು ನೋಡುವರೊ, ಅವರು ಭಕ್ತಿಮುಕ್ತಿಗಳಿಗೆ ಪಾತ್ರರಾಗಲಿ.

೪೬. ಅಲ್ಪಾಯುಷ್ಯವುಳ್ಳವರೂ, ಮೂಢರೂ, ಜ್ಞಾನಯೋಗ ಭ್ರಷ್ಟರೂ, ಆದ ಮಾನವರು ವ್ರತ, ಅಧ್ಯಯನ, ಸತ್ಕರ್ಮಗಳಿಂದ ನಿನ್ನನ್ನು ನೋಡಲು ಸಮರ್ಥರಾಗುವುದಿಲ್ಲ.

೪೭. ಲೋಕಗುರುವೆ! ನಿತ್ಯವೂ ಈ ಪರ್ವತದಲ್ಲಿ ಸನ್ನಿಹಿತನಾಗಿ ಸಕಲರಿಗೂ ಪ್ರಸನ್ನವಾದ ನಿನ್ನ ರೂಪವನ್ನು ತೋರಿಸುತ್ತ ಅವರ ಇಷ್ಟಾರ್ಥಗಳನ್ನು ನೆರವೇರಿಸಿಕೊಡುವವನಾಗು.''

೪೮. ಭಗವಂತನು ಹೇಳುತ್ತಾನೆ:—"ಎಲೈ ಬ್ರಾಹ್ಮಣೋತ್ತಮನೆ! ನೀನು ಪ್ರಾರ್ಥಿಸಿದಂತೆಯೇ ಎಲ್ಲವೂ ಸಮಗ್ರವಾಗಿ ನೆರವೇರುವುದು. ನಿಜವಾಗಿಯೂ ನೀನು ನನ್ನಲ್ಲಿ ಅಸದೃಶವಾದ ಭಕ್ತಿಯನ್ನು ಹೊಂದಿರುವೆ.

ಜಾಹ್ನವೀವ ನದೀ ಸೇಯಂ ಸುವರ್ಣಮುಖರೀ ಮುನೇ ।
ಸ್ಯಾದಾಶಾಸ್ಯಾ ಸುರಾಣಾಂ ಚ ವಾಂಛಿತಶ್ರೀವಿಧಾಯಿನೀ ॥ ೪೯ ॥
ಸ್ವಾಮಿಪುಷ್ಕರಿಣೀ ಚೇಯಂ ನದೀಮೂರ್ತ್ಯಾ ಸಮನ್ವಿತಾ ।
ಸಂಕ್ರಮಿಷ್ಯತಿ ತಾಂ ದಿವ್ಯಾಂ ನದೀಂ ತೀರ್ಥೌಘಸಂಶ್ರಯಾಂ ॥ ೫೦ ॥
ವೈಕುಂಠನಾಮ್ನಿ ಶೈಲೇಽಸ್ಮಿನ್ನದ್ಯಪ್ರಭೃತಿ ಸರ್ವದಾ ।
ಕೃತಾವಾಸೋ ಭವಿಷ್ಯಾಮಿ ಮುನೇ ಪ್ರಾರ್ಥನಯಾ ತವ ॥ ೫೧ ॥
ಸುವರ್ಣಮುಖರೀಸ್ನಾನಕ್ಷಾಲಿತಾಘೌಘಕರ್ದಮಾಃ ।
ಅಸ್ಮಿನ್ವೈಕುಂಠಶೈಲೇ ಮಾಂ ಯೇ ಪಶ್ಯಂತಿ ಸಮಾಹಿತಾಃ ॥ ೫೨ ॥
ಭುವಿ ಪುತ್ರಾದಿಸಂಪನ್ನಾಃ ಸರ್ವೈಶ್ವರ್ಯಸಮನ್ವಿತಾಃ ।
ಮೃತಾಸ್ತ್ರಿವಿಷ್ಟಪೇ ಭೋಗಾನಾಕಲ್ಪಮನುಭೂಯ ಚ ॥ ೫೩ ॥
ಪುನರಾವೃತ್ತಿರಹಿತಂ ಕೇವಲಾನಂದಭಾಸುರಂ ।
ಮತ್ಪದಂ ಸಮವಾಪ್ಸ್ಯಂತಿ ನಾತ್ರ ಕಾರ್ಯಾ ವಿಚಾರಣಾ ॥ ೫೪ ॥
ಮಾಂ ದ್ರಷ್ಟುಮಾಗತಾನ್ಸರ್ವಾನ್ಪ್ರತೀಕ್ಷ್ಯಾಭೀಪ್ಸಿತೈಃ ಶುಭೈಃ ।
ಯೋಜಯಿಷ್ಯಾಮಿ ಸತತಂ ತ್ವದ್ವಚೋಗೌರವಾನ್ಮುನೇ ॥ ೫೫ ॥

---

೪೯. ಎಲೈ ಮಹಾಮುನಿಯೆ! ಗಂಗಾನದಿಯಂತೆ ಈ ಸುವರ್ಣಮುಖರಿಯೂ ದೇವತೆಗಳಿಂದಲೂ ಮಾನವರಿಂದಲೂ ಸೇವಿಸಲ್ಪಟ್ಟು ಅವರಿಗೆ ಅಪೇಕ್ಷಿತಗಳಾದ ಐಶ್ವರ್ಯಗಳನ್ನೆಲ್ಲ ಕೈಗೂಡಿಸುವುದು.

೫೦. ಈ ಸ್ವಾಮಿಪುಷ್ಕರಿಣಿಯೂ ನದಿಯ ರೂಪವನ್ನು ಹೊಂದಿ ಅನೇಕ ತೀರ್ಥಗಳ ಆಶ್ರಯವೆನಿಸಿರುವ ಆ ದಿವ್ಯ ನದಿಯನ್ನು ಸೇರುವುದು.

೫೧. ಮುನಿವರ್ಯನೆ! ನಿನ್ನ ಪ್ರಾರ್ಥನೆಯನ್ನು ಅನುಸರಿಸಿ ಇಂದು ಮೊದಲ್ಗೊಂಡು ನಾನು ವೈಕುಂಠ ಸದೃಶವಾದ ಈ ಪರ್ವತದಲ್ಲಿ ಶಾಶ್ವತವಾಗಿ ವಾಸವನ್ನು ಮಾಡಿಕೊಂಡಿರುವೆನು.

೫೨-೫೪. ಯಾವ ಮಾನವರು ಸುವರ್ಣಮುಖರಿಯ ಸ್ನಾನದಿಂದ ತಮ್ಮ ಪಾಪಕರ್ದಮಗಳೆಲ್ಲವನ್ನೂ ತೊಡೆದುಕೊಂಡು ಈ ವೇಂಕಟಾಚಲದಲ್ಲಿ ಸಮಾಹಿತಮನಸ್ಕರಾಗಿ ನನ್ನನ್ನು ನೋಡುವರೊ, ಅವರು ಭೂಲೋಕದಲ್ಲಿ ಪುತ್ರ ಪೌತ್ರಾದಿಗಳಿಂದೊಡಗೂಡಿ ಸಕಲೈಶ್ವರ್ಯಗಳನ್ನು ಪಡೆದು ದೇಹಾವಸಾನದಲ್ಲಿ ಸ್ವರ್ಗಲೋಕದಲ್ಲಿ ಅಪರಿಮಿತಗಳಾದ ಭೋಗಭಾಗ್ಯಗಳನ್ನನುಭವಿಸಿ ಪುನರಾವೃತ್ತಿರಹಿತವೂ ಸಹಜಾನಂದಸುಂದರವೂ ಆದಂತಹ ನನ್ನ ಲೋಕವಾದ ವೈಕುಂಠವನ್ನು ಸೇರುವುದರಲ್ಲಿ ಸಂದೇಹಪಡಬೇಕಾದ ಪ್ರಮೇಯವಿಲ್ಲ.

೫೫. ಮುನಿಯೆ! ನಿನ್ನ ಮಾತುಗಳಲ್ಲಿನ ಗೌರವದಿಂದ ಇಲ್ಲಿ ನನ್ನನ್ನು

ಪುತ್ರಾರ್ಥಿನಾಂ ಬಹೂನ್ಪುತ್ರಾನ್ಧನಾನಿ ಚ ಧನಾರ್ಥಿನಾಂ ।
ತಥೈವಾರೋಗ್ಯಕಾಮಾನಾಂ ರೋಗಶಾಂತಿಂ ಗರೀಯಸೀಂ ॥ ೫೬ ॥
ತೀವ್ರಾಪತ್ಪರಿಭೂತಾನಾಂ ತಥೈವಾಪನ್ನಿವಾರಣಂ ।
ದಾಸ್ಯಾಮ್ಯಭೀಪ್ಸಿತಾನ್ಭೋಗಾನ್ಸುದುರ್ಲಭಾನಪಿ ಸರ್ವದಾ ॥ ೫೭ ॥
ಯೇ ಯಾನ್ಕಾಮಾನಪೇಕ್ಷ್ಯೇಹ ಪ್ರೇಕ್ಷಂತೇ ಮಾಂ ಸಮಾಗತಾಃ ।
ಅವಾಪ್ನುವಂತಿ ತೇ ಸರ್ವೇ ತಾಂಸ್ತಾನ್ಕಾಮಾನ್ನ ಸಂಶಯಃ ॥ ೫೮ ॥
ಸ್ಥಿತಾ ವಾ ಯತ್ರಕುತ್ರಾಪಿ ಮಾಂ ಸ್ಮರಂತಿ ನರೋತ್ತಮಾಃ ।
ತೇ ಸರ್ವೇ ವಾಂಛಿತಾಂ ಸಿದ್ಧಿಂ ಲಭಂತೇ ಮತ್ಪ್ರಸಾದತಃ ॥ ೫೯ ॥

ಭರದ್ವಾಜ ಉವಾಚ :—

ಇತ್ಯುಕ್ತ್ವಾ ತಂ ಮುನಿಂ ದೇವಃ ಶಂಖಮಾಲೋಕ್ಯ ಭೂಪತಿಂ ।
ಶೃಣ್ವತಾಂ ಬ್ರಹ್ಮಮುಖ್ಯಾನಾಮಿದಂ ವಚನಮಬ್ರವೀತ್ ॥ ೬೦ ॥

ಶ್ರೀ ಭಗವಾನುವಾಚ :—

ಪ್ರೀತೋಽಸ್ಮಿ ಶಂಖ ಭಕ್ತ್ಯಾ ತೇ ವೃಣೀಷ್ವಾಭೀಪ್ಸಿತಂ ವರಂ ।
ದದಾಮಿ ವರದೋಽಹಂ ತೇ ಕೃಶಿಷ್ಮಸ್ಯ ತಪಸ್ಯತಃ ॥ ೬೧ ॥

---

ನೋಡಲು ಬರುವ ಎಲ್ಲರನ್ನೂ ಆದರದಿಂದ ಕಾಣುತ್ತ ನಾನು ಯಾವಾಗಲೂ ಅವರ ಅಭೀಪ್ಸಿತಗಳಾದ ಮಂಗಳಗಳನ್ನು ನೆರವೇರಿಸಿಕೊಡುವೆನು.

೫೬–೫೭. ಸಂತತಿಯನ್ನು ಬಯಸುವವರಿಗೆ ಪುತ್ರಪೌತ್ರರನ್ನೂ, ಧನಾಭಿಲಾಷಿಗಳಿಗೆ ಯಥೇಚ್ಛ ಧನವನ್ನೂ, ಆರೋಗ್ಯವನ್ನು ಕೋರುವವರಿಗೆ ಮಹತ್ತರವಾದ ರೋಗೋಪಶಮನವನ್ನೂ, ಅಖಂಡಗಳಾದ ಕಷ್ಟಗಳಲ್ಲಿ ಸಿಕ್ಕಿ ನರಳುವವರಿಗೆ ಆಪನ್ನಿವಾರಣೆಯನ್ನೂ ಇವೇ ಮೊದಲಾದ ಅತ್ಯಂತ ದುರ್ಲಭಗಳಾದ ವರಗಳನ್ನಾದರೂ ನನ್ನ ಭಕ್ತರಿಗೆ ಇಲ್ಲಿ ಯಾವಾಗಲೂ ನಾನು ಕೊಡುವೆನು.

೫೮. ಯಾವ ಮನುಷ್ಯರು ಯಾವ ಯಾವ ಇಷ್ಟಾರ್ಥಗಳನ್ನು ಅಪೇಕ್ಷಿಸಿಕೊಂಡು ಇಲ್ಲಿಗೆ ಬಂದು ನನ್ನ ದರ್ಶನವನ್ನು ಮಾಡುವರೊ, ಅವರೆಲ್ಲರೂ ನಿಸ್ಸಂದೇಹವಾಗಿ ತಮ್ಮ ತಮ್ಮ ಅಭೀಪ್ಸಿತಗಳನ್ನು ಪಡೆಯುವರು.

೫೯. ಲೋಕದಲ್ಲಿ ಎಲ್ಲಿ ನೆಲಸಿದ್ದರೂ ಮನುಷ್ಯೋತ್ತಮರು ನನ್ನನ್ನು ಸ್ಮರಿಸುವ ಮಾತ್ರದಿಂದ ಎಲ್ಲರೂ ನನ್ನ ಅನುಗ್ರಹಕ್ಕೆ ಪಾತ್ರರಾಗಿ ಸಕಲಾಭೀಷ್ಟಗಳನ್ನೂ ಪಡೆಯುವರು."

೬೦. ಭರದ್ವಾಜನು ಹೇಳುತ್ತಾನೆ:—ಇಂತೆಂದು ದೇವದೇವನು ಅಗಸ್ತ್ಯಮುನಿಯನ್ನು ಅನುಗ್ರಹಿಸಿ ಶಂಖಚಕ್ರವರ್ತಿಯನ್ನು ಕಂಡು ಬ್ರಹ್ಮನೇ ಮೊದಲಾದ ಸಕಲರೂ ಕೇಳುತ್ತಿರಲು ಮಾತನಾಡತೊಡಗಿದನು.

೬೧. ಭಗವಂತನು ಹೇಳುತ್ತಾನೆ:—"ಎಲೈ! ಶಂಖನೆ! ಅನನ್ಯವಾದ

ಶಂಖ ಉವಾಚ :—

ನ ಯಾಚೇಽನ್ಯನ್ಮಹಾಬಾಹೋ ತ್ವತ್ಪಾದಾಂಬುಜಸೇವನಾತ್ ।
ಯಾಂ ಪ್ರಾಪ್ನುವಂತಿ ತ್ವದ್ಭಕ್ತಾಸ್ತಾಂ ಯಾಚೇ ಗತಿಮುತ್ತಮಾಂ ॥೬೨॥

ಶ್ರೀ ಭಗವಾನುವಾಚ :—

ಯತ್ಪ್ರಾರ್ಥಿತಂ ತ್ವಯಾ ಶಂಖ ತತ್ತಥೈವ ಭವಿಷ್ಯತಿ ।
ಮತ್ಸೇವಾಯೋಗಭವ್ಯಾನಾಮಲಭ್ಯಂ ಕಿಮು ವಿದ್ಯತೇ ॥ ೬೩ ॥
ಆಕಲ್ಪಮಿಂದ್ರಲೋಕಸ್ಥೋ ಹ್ಯಪ್ಸರೋಗಣಸೇವಿತಃ ।
ಭುಕ್ತ್ವಾ ಬಹುವಿಧಾನ್ಭೋಗಾಂಸ್ತತೋ ಮಲ್ಲೋಕಮೇಷ್ಯಸಿ ॥ ೬೪ ॥

ಭರದ್ವಾಜ ಉವಾಚ :—

ಏವಂ ದದೌ ವರಾನಿಷ್ಟಾನ್ ಶಂಖಾಯ ಪೃಥಿವೀಪತೇ ।
ನಾರಾಯಣೋ ಜಗದ್ಯೋನಿರ್ಭಜತಾಂ ಕಲ್ಪಭೂರುಹಃ ॥ ೬೫ ॥
ತತೋ ಬ್ರಹ್ಮಾದಿಕಾನ್ಸರ್ವಾನ್ವಿಸೃಜ್ಯ ಕಮಲೇಕ್ಷಣಃ ।
ಸಂಸ್ತೂಯಮಾನಸ್ತೈರ್ಭಕ್ತ್ಯಾ ತತ್ರೈವಾಂತರ್ದಧೇ ಪ್ರಭುಃ ॥ ೬೬ ॥

---

ನಿನ್ನ ಭಕ್ತಿಯಿಂದ ನಾನು ಸುಪ್ರೀತನಾಗಿರುವೆನು. ನಿನಗೆ ಬೇಕಾದ ವರವನ್ನು ಕೇಳಿಕೊ. ವರಪ್ರದನಾಗಿ ಬಂದಿರುವ ನಾನು ತಪಃಕ್ಲೇಶದಿಂದ ಜೀರ್ಣವಾದ ಶರೀರವುಳ್ಳ ನಿನಗೆ ಬೇಕಾದುದನ್ನು ಕೊಡುವೆನು.''

೬೨. ಶಂಖನು ಹೇಳುತ್ತಾನೆ:—''ಮಹಾಬಲನಾದ ಓ ಸ್ವಾಮಿಯೆ! ನಿನ್ನ ಪಾದಕಮಲಗಳ ಸೇವೆಯೊಂದನ್ನು ಬಿಟ್ಟು ಮತ್ತೆ ಯಾವುದನ್ನೂ ನಾನು ಬೇಡುವುದಿಲ್ಲ. ನಿನ್ನ ಭಕ್ತರು ಯಾವ ಉತ್ತಮ ಗತಿಯನ್ನು ಪಡೆಯುವರೊ, ಆ ಸದ್ಗತಿಯನ್ನೇ ನಾನೂ ಯಾಚನೆ ಮಾಡುವೆನು.

೬೩–೬೪. ಭಗವಂತನು ಹೇಳುತ್ತಾನೆ:—''ಶಂಖಮಹಾರಾಜ! ನೀನು ಯಾವುದನ್ನು ಪ್ರಾರ್ಥಿಸಿದೆಯೊ, ಅದು ಅಂತೆಯೇ ನಡೆಯುವುದು. ನನ್ನ ಸೇವೆಯಲ್ಲಿಯೇ ನಿರತರಾಗಿರುವ ಉತ್ತಮರಿಗೆ ಲೋಕದಲ್ಲಿ ಅಲಭ್ಯವಾದುದು ಯಾವುದು ತಾನೆ ಇರುವುದು ? ಈ ಕಲ್ಪದ ಕೊನೆಯವರೆಗೂ ನೀನು ಇಂದ್ರಲೋಕದಲ್ಲಿ ನೆಲಸಿ ಅಪ್ಸರಸ್ತ್ರೀಯರಿಂದ ಸೇವೆಯನ್ನು ಕೈಕೊಳ್ಳುತ್ತ ಅನೇಕ ವಿಧಗಳಾದ ಭೋಗಗಳನ್ನನುಭವಿಸಿ ಕಡೆಯಲ್ಲಿ ನನ್ನ ಲೋಕವನ್ನು ಸೇರಿ ಸುಖಿಸುವೆ.

೬೫–೬೬. ಭರದ್ವಾಜನು ಹೇಳುತ್ತಾನೆ:—ಎಲೈ ಅರ್ಜುನನೆ! ಇಂತು ಪ್ರಪಂಚದ ಸೃಷ್ಟಿಕರ್ತನೂ, ಭಕ್ತರ ಕಲ್ಪವೃಕ್ಷವೆನಿಸಿದವನೂ ಆದ ನಾರಾಯಣನು ಶಂಖನಿಗೆ ಅಭೀಷ್ಟಗಳನ್ನು ದಯೆಪಾಲಿಸಿದನು. ಬಳಿಕ ಕಮಲಲೋಚನಾದ ಆ ಪ್ರಭುವು ಬ್ರಹ್ಮಾದಿಗಳೆಲ್ಲರನ್ನೂ ಬೀಳ್ಕೊಟ್ಟು ಅವರಿಂದ ಸ್ತುತಿಸಲ್ಪಟ್ಟವನಾಗಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.

ವೇಂಕಟಾದ್ರೇಃ ಪ್ರಭಾವೋಽಯಮಾಖ್ಯಾತೋ ಭವತೋಽರ್ಜುನ ।
ನರಾಃ ಪಾಪೈಃ ಪ್ರಮುಚ್ಯಂತೇ ಶ್ರುತ್ವೇಮಾಂ ಪಾವನೀಂ ಕಥಾಂ ॥ ೬೭ ॥
ವಾರಾಹಂ ರೂಪಮುತ್ಸೃಜ್ಯ ಬ್ರಹ್ಮಣಾಭ್ಯರ್ಥಿತೋ ಹರಿಃ ।
ಮುಮೋದಾತ್ರಾದ್ಭುತಾಕಾರೋ ಮಾಯಯಾ ಮೋಹಯನ್ಜಗತ್॥೬೮॥
ಪಶ್ಚಾದಗಸ್ತ್ಯಶಂಖಾಭ್ಯಾಂ ಪ್ರಾರ್ಥಿತಃ ಸುಖದರ್ಶನಂ ।
ದದೌ ನಿತಾಂತಸುಭಗಂ ಶಾಂತಂ ಭೋಗಾತ್ಮಕಂ ವಪುಃ ॥ ೬೯ ॥
ನಾರಾಯಣಂ ವೇಂಕಟಾದ್ರಿಂ ಸ್ವಾಮಿಪುಷ್ಕರಿಣೀಂ ತಥಾ ।
ಇಮಾಮಾಖ್ಯಾಂ ಚ ಸಂಸ್ಮೃತ್ಯ ಮುಚ್ಯಂತೇ ಪಾತಕೈರ್ಜನಾಃ ॥ ೭೦ ॥
ವೇಂಕಟಾದ್ರಿಸಮಂ ಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ ।
ವೇಂಕಟೇಶಸಮೋ ದೇವೋ ನ ಭೂತೋ ನ ಭವಿಷ್ಯತಿ ॥ ೭೧ ॥
ವೇಂಕಟಾದ್ರಿಸಮಂ ಸ್ಥಾನಂ ನ ಭೂತಂ ನ ಭವಿಷ್ಯತಿ ।
ಸ್ವಾಮಿತೀರ್ಥಸರಸ್ತುಲ್ಯಂ ನ ಕುತ್ರಾಪಿ ಚ ವಿದ್ಯತೇ ॥ ೭೨ ॥
ಪ್ರಾತರುತ್ಥಾಯ ಯೇ ನಿತ್ಯಂ ವೇಂಕಟೇಶಂ ಸ್ಮರಂತಿ ವೈ ।
ತೇಷಾಂ ಕರಸ್ಥಾ ಮೋಕ್ಷಶ್ರೀರ್ನಾತ್ರ ಕಾರ್ಯಾ ವಿಚಾರಣಾ ॥ ೭೩ ॥

---

೬೭. ಎಲೈ ಅರ್ಜುನನೆ! ಇಂತು ವೇಂಕಟಾಚಲದ ಪ್ರಭಾವವು ನಿನಗೆ ನಿರೂಪಿಸಲ್ಪಟ್ಟಿರುವುದು. ಪರಮ ಪವಿತ್ರವಾದ ಈ ಚರಿತ್ರೆಯನ್ನು ಕೇಳಿದ ಮನುಷ್ಯರೆಲ್ಲರೂ ತಮ್ಮ ಪಾಪಗಳಿಂದ ಬಿಡುಗಡೆಯನ್ನು ಹೊಂದುವರು.

೬೮-೬೯. ಬಳಿಕ ಬ್ರಹ್ಮದೇವನಿಂದ ಪ್ರಾರ್ಥಿತನಾದ ಶ್ರೀಹರಿಯು ತನ್ನ ವರಾಹರೂಪವನ್ನು ತ್ಯಜಿಸಿ ತನ್ನ ಮಾಯೆಯಿಂದ ಲೋಕವನ್ನೆಲ್ಲ ಮೋಹಗೊಳಿಸುತ್ತ ಅದ್ಭುತ ವಿಗ್ರಹನಾಗಿ ನಿಂತನು. ಆಮೇಲೆ ಅಗಸ್ತ್ಯನೂ, ಶಂಖನೂ ಪ್ರಾರ್ಥಿಸಲು ಅವರಿಗೆ ಸಕಲಸೌಭಾಗ್ಯಯುಕ್ತವೂ, ಸೌಮ್ಯವೂ, ಆನಂದಾತ್ಮಕವೂ ಆದ ತನ್ನ ಶರೀರದ ಸುಲಭ ದರ್ಶನವನ್ನು ಕೊಟ್ಟನು.

೭೦. ವೇಂಕಟೇಶ್ವರನನ್ನೂ, ನಾರಾಯಣಾಚಲವನ್ನೂ, ಸ್ವಾಮಿಪುಷ್ಕರಿಣೀ ತೀರ್ಥವನ್ನೂ, ಈ ಪುಣ್ಯಚರಿತ್ರೆಯನ್ನೂ ಯಾರು ಸ್ಮರಿಸುವರೊ, ಆ ಜನರು ಸಕಲ ಪಾಪಗಳಿಂದಲೂ ಮೋಕ್ಷವನ್ನು ಹೊಂದುವರು.

೭೧-೭೨. ವೇಂಕಟಾದ್ರಿಗೆ ಸಮಾನವಾದ ಕ್ಷೇತ್ರವು ಬ್ರಹ್ಮಾಂಡದಲ್ಲಿ ಮತ್ತೆಲ್ಲಿಯೂ ಇಲ್ಲವು. ಶ್ರೀನಿವಾಸನಿಗೆ ಸಮಾನವಾದ ದೈವವು ಹಿಂದೆ ಇರಲಿಲ್ಲ. ಮುಂದೆಯೂ ಇರುವುದಿಲ್ಲ. ವೇಂಕಟಾಚಲಕ್ಕೆ ಸಮಾನವಾದ ಪ್ರದೇಶವು ಭೂತಭವಿಷ್ಯತ್ಕಾಲಗಳಲ್ಲಿಯೂ ಇಲ್ಲ. ಸ್ವಾಮಿಪುಷ್ಕರಿಣಿಗೆ ಸಮಾನವಾದ ಸರೋವರವು ಮತ್ತೆಲ್ಲಿಯೂ ಕಾಣಲಾರದು.

೭೩. ಪ್ರತಿನಿತ್ಯವೂ ಬೆಳಿಗ್ಗೆ ಏಳುತ್ತಲೇ ವೇಂಕಟೇಶ್ವರನನ್ನು ಯಾರು

ಸ್ವಾಮಿಪುಷ್ಕರಿಣೀತೀರ್ಥೇ ಸ್ನಾತ್ವಾ ಸರ್ವಾತ್ಮಕಂ ಹರಿಂ ।
ಯೇ ವಾ ಪಶ್ಯಂತಿ ನಿಯತಾ ವರಾಹಾಚಲವಾಸಿನಂ ॥ ೭೪ ॥
ತೇಽಶ್ವಮೇಧಸಹಸ್ರಸ್ಯ ವಾಜಪೇಯಶತಸ್ಯ ಚ ।
ಪ್ರಾಪ್ನುವಂತಿ ಫಲಂ ಪೂರ್ಣಂ ನಾತ್ರ ಕಾರ್ಯಾ ವಿಚಾರಣಾ ॥ ೭೫ ॥
ವೇಂಕಟಾಚಲಮಾಹಾತ್ಮ್ಯಂ ಯೇ ಶೃಣ್ವಂತಿ ನರೋತ್ತಮಾಃ ।
ತೇಷಾಂ ಮುಕ್ತಿಶ್ಚ ಭುಕ್ತಿಶ್ಚ ಇಹ ಲೋಕೇ ಪರತ್ರ ಚ ॥ ೭೬ ॥
ವೇಂಕಟಾಚಲಮಾಹಾತ್ಮ್ಯಂ ಸಂಕ್ಷಿಪ್ಯ ಕಥಿತಂ ತವ ।
ಅತಃ ಪರಂ ಮಹಾನದ್ಯಾಃ ಪ್ರಭಾವಃ ಕಥ್ಯತೇಽರ್ಜುನ ॥ ೭೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ "ಸುವರ್ಣಮುಖರೀಮಾಹಾತ್ಮ್ಯಪ್ರಶಂಸಾಯಾಮಗಸ್ತ್ಯಶಂಖಾದಿತಪಸ್ತುಷ್ಟ ಶ್ರೀ ವೇಂಕಟೇಶಾವಿರ್ಭಾವಾದಿ ಮಾಹಾತ್ಮ್ಯವರ್ಣನಂ" ನಾಮಾಷ್ಟತ್ರಿಂಶೋಽಧ್ಯಾಯಃ

---

ಸ್ಮರಿಸುವರೊ, ಅವರಿಗೆ ಮೋಕ್ಷಪದವಿಯು ಕರಬದರಸಮಾನವಾಗಿರುವುದೆಂಬ ವಿಷಯದಲ್ಲಿ ಸಂದೇಹಪಡಬೇಕಾದುದಿಲ್ಲ.

೭೪–೭೫. ಉಪವಾಸಾದಿ ನಿಯಮಗಳಿಂದೊಡಗೂಡಿ ಯಾರು ಸ್ವಾಮಿ ಪುಷ್ಕರಿಣಿಯಲ್ಲಿ ಮಿಂದು ವರಾಹಪರ್ವತದಲ್ಲಿರುವ ಸರ್ವಾಂತರ್ಯಾಮಿಯಾದ ಶ್ರೀ ಹರಿಯನ್ನು ನೋಡುವರೊ, ಅವರು ಒಂದು ಸಾವಿರ ಅಶ್ವಮೇಧಯಜ್ಞಗಳ ಮತ್ತು ಒಂದು ನೂರು ವಾಜಪೇಯಗಳ ಫಲವನ್ನು ಸಂಪೂರ್ಣವಾಗಿ ಪಡೆಯು ವರು. ಈ ವಿಷಯದಲ್ಲಿ ಸಂಶಯವಿಲ್ಲ.

೭೬. ಯಾವ ಮನುಷ್ಯಶ್ರೇಷ್ಠರು ಈ ವೇಂಕಟಾಚಲ ಮಾಹಾತ್ಮ್ಯವನ್ನು ಶ್ರದ್ಧೆಯಿಂದ ಕೇಳುವರೊ, ಅವರಿಗೆ ಇಹಲೋಕದಲ್ಲಿ ಭೋಗಭಾಗ್ಯಗಳೂ ಪರ ಲೋಕದಲ್ಲಿ ಮೋಕ್ಷವೂ ಲಭಿಸುವುವು.

೭೭. ಎಲೈ ಪಾರ್ಥನೆ! ಇಂತು ವೇಂಕಟಾಚಲ ಮಾಹಾತ್ಮ್ಯವು ಸಂಕ್ಷೇಪ ವಾಗಿ ನಿನಗೆ ನಿರೂಪಿಸಲ್ಪಟ್ಟಿತು. ಇನ್ನುಮೇಲೆ ಮಹಾನದಿಯ ಪ್ರಭಾವವು ಅನುವಾದಮಾಡಲ್ಪಡುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೇಂಕಟಾಚಲ ಮಾಹಾತ್ಮ್ಯಯ ಧರಣೀವರಾಹಸಂವಾದದಲ್ಲಿ "ಸುವರ್ಣಮುಖರೀಮಾಹಾತ್ಮ್ಯ ಪ್ರಶಂಸೆ—ಅಗಸ್ತ್ಯಶಂಖರ ತಪಸ್ಸಿಗೆ ಮೆಚ್ಚಿ ಶ್ರೀ ವೇಂಕಟೇಶನು ಆವಿರ್ಭವಿಸಿದುದು" ಎಂಬ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಚತ್ವಾರಿಂಶೋಽಧ್ಯಾಯಃ

### ಅಂಜನಾತಪಃಕರಣಪ್ರಕಾರಾದಿವರ್ಣನಂ

ಸೂತ ಉವಾಚ:—

ಪುತ್ರಹೀನಾಂಜನಾ ಪೂರ್ವಂ ದುಃಖಿತಾ ತಪಸಿ ಸ್ಥಿತಾ ।
ತಾಂ ದೃಷ್ಟ್ವಾ ಮುನಿಶಾರ್ದೂಲೋ ಮತಂಗೋ ವಿಷ್ಣುತತ್ಪರಃ ॥ ೧ ॥
ಅಂಜನಾಖ್ಯಾಮುವಾಚೇದಮುತ್ಯುಗ್ರೇ ತಪಸಿ ಸ್ಥಿತಾಂ ॥ ೨ ॥

ಮತಂಗ ಉವಾಚ:—

ಸಮುತ್ತಿಷ್ಠಾಂಜನೇ ದೇವಿ ಕಿಮರ್ಥಂ ತಪಸಿಸ್ಥಿತಾ ।
ವದ ದೇವಿ ಮಹಾಭಾಗೇ ಕಾರ್ಯಂ ತವ ವರಾನನೇ ॥ ೩ ॥

ಅಂಜನೋವಾಚ:—

ಮತಂಗ ಮುನಿಶಾರ್ದೂಲ ವಚನಂ ಮೇ ಶ್ರುಣುಷ್ವ ಹ ।
ಪಿತಾ ಮೇ ಕೇಸರೀ ನಾಮ ರಾಕ್ಷಸಃ ಶಿವತತ್ಪರಃ ॥ ೪ ॥
ಶೈವಂ ಘೋರಂ ತಪಶ್ಚಕ್ರೇ ಪುತ್ರಾರ್ಥಂ ತು ಸುದುಷ್ಕರಂ ।
ಪಾರ್ವತೀಸಹಿತಃ ಶಂಭುರ್ವೃಷಭೋಪರಿ ಸಂಸ್ಥಿತಃ ॥ ೫ ॥

---

### ಕನ್ನಡದ ಅನುವಾದ

#### ಅಂಜನಾದೇವಿಯ ತಪೋವರ್ಣನ

೧–೨. ಸೂತನು ಹೇಳುತ್ತಾನೆ:—ಎಲೈ ಮುನಿಗಳಿರಾ! ಸಂತಾನರಹಿತಳಾದ ಅಂಜನಾದೇವಿಯು ಮುನ್ನು ಬಹಳ ದುಃಖಗೊಂಡು ಉಗ್ರವಾದ ತಪಸ್ಸಿನಲ್ಲಿ ನಿರತಳಾಗಿದ್ದಳು. ಇಂತು ತಪೋನಿಷ್ಠೆಯಲ್ಲಿ ತೊಡಗಿದ್ದ ಅಂಜನಾದೇವಿಯನ್ನು ಕುರಿತು ಮುನಿಪುಂಗವನೂ, ವಿಷ್ಣುಭಕ್ತನೂ ಆದ ಮತಂಗ ಮಹರ್ಷಿಯು ಇಂತೆಂದನು.

೩. ಮತಂಗನು ಹೇಳುತ್ತಾನೆ:—"ಅಂಜನಾದೇವಿಯೆ! ಮೇಲಕ್ಕೇಳು. ಯಾವ ಕಾರ್ಯಲಾಭಕ್ಕಾಗಿ ತಪಸ್ಸನ್ನು ಮಾಡುತ್ತಿರುವೆ? ಮಹಾಭಾಗ್ಯಶಾಲಿಯಾದ ಓ ಶುಚಿಸ್ಮಿತೆಯೆ! ನಿನ್ನ ಕಾರ್ಯಗೌರವವನ್ನು ನನಗೆ ತಿಳಿಸು."

೪–೬. ಅಂಜನೆಯು ಹೇಳುತ್ತಾಳೆ:—"ಮುನಿಪುಂಗವನಾದ ಮತಂಗನೆ! ನನ್ನ ಮಾತುಗಳನ್ನು ಲಾಲಿಸು. ನನ್ನ ತಂದೆಯಾದ ಕೇಸರಿಯೆಂಬ ರಾಕ್ಷಸನು ಶಿವಾಚಾರತತ್ಪರನಾಗಿ ಮಗನನ್ನು ಪಡೆಯಬೇಕೆಂಬ ಅಭಿಲಾಷೆಯಿಂದ ಘೋರವೂ, ಕಷ್ಟಸಾಧ್ಯವೂ ಆದ ತಪಸ್ಸನ್ನು ಶಿವಪ್ರೀತ್ಯರ್ಥವಾಗಿ ಮಾಡಿದನು. ಆಗ ಮಹಾದೇವನು ಪಾರ್ವತೀ ಸಮೇತನಾಗಿ ವೃಷಭವನ್ನೇರಿ ಆತನಿಗೆ ಪ್ರತ್ಯಕ್ಷನಾಗಿ ಉತ್ತಮವಾದ ವರವನ್ನು ಅನುಗ್ರಹಿಸಿದನು.

ಪ್ರಾದುರಾಸೀತ್ತದಾ ದೇವೋ ದದೌ ತಸ್ಮೈ ವರಂ ಶುಭಂ ॥ ೬ ॥

ಶಂಭುರುವಾಚ :—

ಶೃಣು ರಾಜನ್ಪ್ರವಕ್ಷ್ಯಾಮಿ ವಿಧಿನಾ ನಿರ್ಮಿತಂ ತವ ।
ಅಸ್ಮಿನ್ಜನ್ಮನ್ಯಪುತ್ರತ್ವಂ ತಥಾಪ್ಯನ್ಯದ್ದದಾಮಿ ತೇ ॥ ೭ ॥
ವಿಶ್ರುತಾ ಸರ್ವಲೋಕೇಷು ಪುತ್ರೀ ತವ ಭವಿಷ್ಯತಿ ।
ತಸ್ಯಾಃ ಪುತ್ರೋ ಮಹಾಬಾಹುಸ್ತವ ಪ್ರೀತಿಂ ಕರಿಷ್ಯತಿ ॥ ೮ ॥
ಇತಿ ತಸ್ಮೈ ವರಂ ದತ್ವಾ ತತ್ರೈವಾಂತರ್ದಧೇ ಹರಃ ।
ಮಾಂ ಲಬ್ಧ್ವಾ ಮತ್ಪಿತಾ ವಿಪ್ರ ಕೃತಕೃತ್ಯೋ ಬಭೂವ ಹ ॥ ೯ ॥
ತತಃ ಕಾಲಂತರೇ ವಿಪ್ರ ಕೇಸರ್ಯಾಖ್ಯೋ ಮಹಾಕಪಿಃ ।
ಯಯಾಚೇ ಮಾಂ ದದಸ್ವೇತಿ ಪಿತರಂ ಮೇ ತತಃ ಪಿತಾ ॥ ೧೦ ॥
ತಸ್ಮೈ ಮಾಂ ದತ್ತವಾಂಶ್ಚೈವ ಪಾರಿಬರ್ಹಂ ದದೌ ಚ ಸಃ ।
ಗವಾಂ ಲಕ್ಷಸಹಸ್ರಾಣಿ ಗಜಲಕ್ಷಂ ಮಹಾಮನಾಃ ॥ ೧೧ ॥
ವಾಜಿನಾಮರ್ಬುದಂ ಚೈವ ರಥಾನಾಮರ್ಬುದಂ ತಥಾ ।
ವಸ್ತ್ರರತ್ನಾನ್ಯನೇಕಾನಿ ದಾಸದಾಸೀ ಸಹಸ್ರಕಂ ॥ ೧೨ ॥

---

೭. ಮಹೇಶ್ವರನು ಹೇಳುತ್ತಾನೆ :—"ಎಲೈ ಕೇಸರಿರಾಜನೆ ! ನನ್ನ ಮಾತುಗಳನ್ನು ಕೇಳು. ಬ್ರಹ್ಮದೇವನ ಆಜ್ಞಾನುಸಾರವಾಗಿ ನಿನಗೆ ಈ ಜನ್ಮದಲ್ಲಿ ಪುತ್ರ ಸಂತಾನವು ಲಭಿಸಲಾರದು. ಆದರೂ ನಿನಗೆ ಮತ್ತೊಂದು ವರವನ್ನು ಕೊಡುವೆನು.

೮. ನಿನಗೆ ಮೂರು ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆಯುವ ಹೆಣ್ಣುಮಗಳು ಹುಟ್ಟುವಳು. ಆಕೆಗೆ ಒಬ್ಬ ಮಹಾಬಲಶಾಲಿಯಾದ ಪುತ್ರನು ಜನಿಸಿ ನಿನಗೆ ಸಂತೋಷವನ್ನುಂಟುಮಾಡುವನು.

೯. ಇಂತು ಆತನಿಗೆ ವರವನ್ನು ಕೊಟ್ಟು ಪರಮೇಶ್ವರನು ಅಲ್ಲಿಯೇ ಅಂತರ್ಹಿತನಾದನು. ನನ್ನ ತಂದೆಯೂ ನನ್ನನ್ನು ಪಡೆದು ಕೃತಾರ್ಥತೆಯನ್ನು ಪಡೆದನು.

೧೦-೧೩. ಎಲೈ ಬ್ರಾಹ್ಮಣೋತ್ತಮನೆ ! ಬಳಿಕ ಕೆಲವು ಕಾಲವಾದಮೇಲೆ ಕೇಸರಿಯೆಂಬ ಹೆಸರಿನ ಕಪಿಶ್ರೇಷ್ಠನೊಬ್ಬನು "ಈಕೆಯನ್ನು ನನಗೆ ಕೊಡು" ಎಂಬುದಾಗಿ ನನ್ನ ತಂದೆಯಲ್ಲಿ ಯಾಚಿಸಿದನು. ಆಗ ನನ್ನ ತಂದೆಯು ಆತನಿಗೆ ನನ್ನನ್ನು ಪಾಣಿಗ್ರಹಣ ಮಾಡಿಕೊಟ್ಟು ಯಥೇಚ್ಛವಾದ ಬಳುವಳಿಯನ್ನೂ ಕೊಟ್ಟನು. ಉದಾರಮನಸ್ಸುಳ್ಳ ಆತನು ಒಂದುಸಾವಿರ ಲಕ್ಷ ಗೋವುಗಳನ್ನೂ, ಒಂದು ಲಕ್ಷ ಆನೆಗಳನ್ನೂ, ಹತ್ತುಕೋಟಿ ಕುದುರೆಗಳನ್ನೂ, ಅಷ್ಟೇ ಸಂಖ್ಯೆಯ ರಥಗಳನ್ನೂ, ಅಸಂಖ್ಯಾತಗಳಾದ ವೇಷಭೂಷಣಗಳನ್ನೂ, ಸಾವಿರಾರು ದಾಸ

ಅಂತಃಪುರಚರೀರ್ನಾರೀರ್ನೃತ್ಯಗೀತವಿಶಾರದಾಃ ।
ದದೌ ವಾಸಸ್ಸಹಸ್ರಂ ಚ ಮಯಾ ಸಾಕಂ ಮಹಾಮತೇ ॥ ೧೩ ॥
ಪತ್ಯಾ ಮೇ ರಮಮಾಣಾಯಾ ಭೂಯಾನ್ಕಾಲೋ ಗತೋ ಮುನೇ ।
ಅಪುತ್ರಾ ದುಃಖಿತಾ ವಿಪ್ರ ವ್ರತಾನಿ ವಿವಿಧಾನಿ ಚ ॥ ೧೪ ॥
ಕೃತಾನಿ ಚ ಮಯಾ ತತ್ರ ಕಿಷ್ಕಿಂಧಾಯಾಂ ಮಹಾಪುರಿ ।
ಮಾಘೇ ಮಾಸಿ ಚ ವಿಪ್ರೇಂದ್ರ ವೈಶಾಖೇ ಕಾರ್ತಿಕೇ ತಥಾ ॥ ೧೫ ॥
ಸ್ನಾನದಾನವ್ರತಾದೀನಿ ಚಾತುರ್ಮಾಸ್ಯವ್ರತಂ ತಥಾ ।
ನಮಸ್ಕಾರಸ್ತಥಾ ವಿಪ್ರ ಪ್ರದಕ್ಷಿಣಮನುತ್ತಮಂ ॥ ೧೬ ॥
ಶಾಲಗ್ರಾಮಾನ್ನದಾನಾನಿ ದೀಪದಾನಂ ತಥೈವ ಚ ।
ಗೋದಾನಂ ತಿಲದಾನಂ ಚ ವಸ್ತ್ರದಾನಂ ಮಹಾಮುನೇ ॥ ೧೭ ॥
ಭೂದಾನಂ ವಾರಿದಾನಂ ಚ ದತ್ವಾ ಪುಷ್ಪಾದಿಕಂ ಮುನೇ ।
ಯಾನಿಯಾನಿ ಚ ಮುಖ್ಯಾನಿ ವೈಷ್ಣವಾನಿ ವ್ರತಾನಿ ಚ ।
ಮಯಾ ಕೃತಾನಿ ಸರ್ವಾಣಿ ಸತ್ಪುತ್ರಫಲಕಾಂಕ್ಷಯಾ ॥ ೧೮ ॥
ಶ್ರವಣಾದಿಷು ಯತ್ಪ್ರೋಕ್ತಂ ವ್ರತಂ ವಿಪ್ರೈರ್ಮಹಾತ್ಮಭಿಃ ।
ಮಯಾ ಕೃತಂ ಚ ವಿಪ್ರೇಂದ್ರ ತುಷ್ಟ್ಯರ್ಥಂ ಮಧುವಿದ್ವಿಷಃ ॥ ೧೯ ॥

---

ದಾಸಿಯರನ್ನೂ, ನೃತ್ಯಗೀತಗಳಲ್ಲಿ ಪ್ರಾಜ್ಞರಾದ ಅಂತಃಪುರ ಸೇವಕ ಸ್ತ್ರೀಯರನ್ನೂ, ಸಾವಿರಾರು ವಸ್ತ್ರಗಳನ್ನೂ ನನ್ನೊಡನೆ ಅಳಿಯನಿಗೆ ಬಳುವಳಿಯಾಗಿ ಕೊಟ್ಟನು.

೧೪–೧೮. ಎಲೈ ಮಹರ್ಷಿಯೆ! ಗಂಡನೊಡನೆ ಸುಖಪಡುತ್ತಿರಲು ನನಗೆ ಬಹಳ ಕಾಲವು ಕಳೆದುಹೋಯಿತು. ಬಳಿಕ ಪುತ್ರಲಾಭವಿಲ್ಲದ ನಾನು ದುಃಖಗೊಂಡು ಆ ಕಿಷ್ಕಿಂದಾನಗರದಲ್ಲಿ ಅನೇಕ ವ್ರತಗಳನ್ನು ನೆರವೇರಿಸಿದೆನು. ಎಲೈ ಬ್ರಾಹ್ಮಣೋತ್ತಮನೆ! ಮಾಘಮಾಸದಲ್ಲಿಯೂ, ವೈಶಾಖ ಕಾರ್ತೀಕಗಳಲ್ಲಿಯೂ ಸ್ನಾನದಾನಗಳೇ ಮೊದಲಾದ ನಿಯಮಗಳನ್ನೂ, ಚಾತುರ್ಮಾಸ್ಯ ವ್ರತವನ್ನೂ, ಬ್ರಾಹ್ಮಣೋತ್ತಮರಿಗೆ ಅಪರಿಮಿತಗಳಾದ ಪ್ರದಕ್ಷಿಣೆ ನಮಸ್ಕಾರಗಳನ್ನೂ, ಶಾಲಗ್ರಾಮದಾನ, ಅನ್ನದಾನ, ದೀಪದಾನ, ಗೋದಾನ, ತಿಲದಾನ, ವಸ್ತ್ರದಾನ, ಭೂದಾನ, ಜಲದಾನ, ಪುಷ್ಪಾ ಸುಗಂಧಾದಿದಾನಗಳೇ ಮೊದಲಾದುವುಗಳನ್ನೂ ಮಾಡಿದೆನು. ವಿಷ್ಣುಪ್ರೀತ್ಯರ್ಥವಾಗಿ ಯಾವ ಯಾವ ಉತ್ತಮ ವ್ರತಗಳಿರುವುವೊ, ಅವುಗಳೆಲ್ಲವನ್ನೂ ಸತ್ಪುತ್ರನನ್ನು ಪಡೆಯಬೇಕೆಂಬ ಆಶೆಯಿಂದ ನೆರವೇರಿಸಿದೆನು.

೧೯. ವಿಪ್ರೋತ್ತಮ! ಮಹಾತ್ಮರಾದ ಬ್ರಾಹ್ಮಣರಿಂದ ಶ್ರವಣ ನಕ್ಷತ್ರಾದಿಗಳಲ್ಲಿ ನಡೆಸಬೇಕಾದ ಯಾವ ಯಾವ ಕಾರ್ಯಗಳಿರುವುವೊ, ಅವುಗಳೆಲ್ಲವನ್ನೂ ಶ್ರೀಹರಿಯ ಪ್ರೀತ್ಯರ್ಥವಾಗಿ ನಾನು ಸಮಗ್ರವಾಗಿ ನೆರವೇರಿಸಿದೆನು.

ಯಾನಿ ಯಾನಿ ಚ ಮುಖ್ಯಾನಿ ಫಲಾನಿ ವಿವಿಧಾನಿ ಚ ।
ಮಯಾ ದತ್ತಾನಿ ಸರ್ವಾಣಿ ಸತ್ಪುತ್ರಫಲಕಾಂಕ್ಷಯಾ ॥ ೨೦ ॥
ಮಯಾ ಕೃತಾನ್ಯಸಂಖ್ಯಾನಿ ವ್ರತಾನಿ ವಿವಿಧಾನಿ ಚ ।
ಪುತ್ರಂ ತಥಾಪ್ಯಲಬ್ಧ್ವಾಹಂ ದುಃಖಿತಾ ತಪಸಿ ಸ್ಥಿತಾ ॥ ೨೧ ॥
ಭವಿಷ್ಯತಿ ಕಥಂ ವಿಪ್ರ ಪುತ್ರಸ್ತ್ರೈಲೋಕ್ಯವಿಶ್ರುತಃ ।
ಯಾಚೇಽಹಂ ತು ಮುನಿಶ್ರೇಷ್ಠ ಪ್ರಣತಾ ಚ ತವಾಗ್ರತಃ ॥ ೨೨ ॥
ವದ ತ್ವಂ ಮುನಿಶಾರ್ದೂಲ ದೀನಾಹಂ ತಪಸಿ ಸ್ಥಿತಾ ॥ ೨೩ ॥

ಶ್ರೀ ಸೂತ ಉವಾಚ :—

ಏವಂ ವದಂತೀಂ ತಾಂ ಪ್ರಾಹ ಮತಂಗೋ ಮುನಿಸತ್ತಮಃ ।
ಶೃಣು ಮದ್ವಚನಂ ದೇವಿ ಪುತ್ರಪೌತ್ರಪ್ರದಾಯಕಂ ॥ ೨೪ ॥
ಇತೋ ದಕ್ಷಿಣದಿಗ್ಭಾಗೇ ದಶಯೋಜನದೂರತಃ ।
ಘನಾಚಲ ಇತಿ ಖ್ಯಾತೋ ನೃಸಿಂಹಸ್ಯ ನಿವಾಸಭೂಃ ॥ ೨೫ ॥
ತಸ್ಯೋಪರಿ ಮಹಾಭಾಗೇ ಬ್ರಹ್ಮತೀರ್ಥಂ ಮನೋಹರಂ ।
ತಸ್ಯಾಪಿ ಪೂರ್ವದಿಗ್ಭಾಗೇ ದಶಯೋಜನಮಾತ್ರತಃ ॥ ೨೬ ॥

---

೨೦–೨೧. ಲೋಕದಲ್ಲಿ ಮುಖ್ಯಗಳಾದ ಯಾವ ಯಾವ ವಿಧವಿಧಗಳಾದ ಫಲಗಳಿರುವುವೊ, ಅವುಗಳನ್ನೆಲ್ಲ ಸತ್ಪುತ್ರನೆಂಬ ಫಲವನ್ನು ಪಡೆಯಲು ದಾನ ಮಾಡಿರುವೆನು. ಅನೇಕ ವಿಧಗಳಾದ ವ್ರತಗಳು ಲೆಕ್ಕವಿಲ್ಲದಷ್ಟು ನನ್ನಿಂದ ಮಾಡಲ್ಪಟ್ಟುವು. ಆದರೂ ಸತ್ಪುತ್ರನನ್ನು ಪಡೆಯದೆ ದುಃಖಗೊಂಡು ಈಗ ತಪಸ್ಸಿನಲ್ಲಿ ನಿರತಳಾಗಿರುವೆನು.

೨೨–೨೩. ಎಲೈ ಮುನಿಪುಂಗವನೆ! ಮೂರು ಲೋಕಗಳಲ್ಲಿಯೂ ವಿಖ್ಯಾತನಾದ ಪುತ್ರನು ನನಗೆ ಹೇಗೆ ಲಭಿಸುವನು? ನಿನ್ನ ಎದುರಿನಲ್ಲಿ ನಿಂತು ನಮಸ್ಕರಿಸಿ ಪುತ್ರಲಾಭಕ್ಕಾಗಿ ಯಾಚಿಸುತ್ತಿರುವೆನು. ದೀನಳಾಗಿ ತಪೋನಿರತಳಾಗಿರುವ ನನಗೆ ಒಂದು ಉಪಾಯವನ್ನು ಹೇಳು."

೨೪. ಸೂತನು ಹೇಳುತ್ತಾನೆ:—ಇಂತು ಪ್ರಾರ್ಥಿಸುತ್ತಿರುವ ಆಕೆಯನ್ನು ಕುರಿತು ಮುನಿಶ್ರೇಷ್ಠನಾದ ಮತಂಗನು ಹೇಳತೊಡಗಿದನು. "ಎಲೌ ದೇವಿ! ಪುತ್ರಪೌತ್ರಾದಿ ಲಾಭದಾಯಕವಾದ ನನ್ನ ಮಾತನ್ನು ಕೇಳು.

೨೫. ಇಲ್ಲಿಗೆ ದಕ್ಷಿಣ ದಿಕ್ಕಿಗೆ ಹತ್ತು ಯೋಜನಗಳ ದೂರದಲ್ಲಿ ನರಸಿಂಹ ಮೂರ್ತಿಯ ನಿವಾಸಸ್ಥಾನವೆಂದು ಪ್ರಖ್ಯಾತವಾದ ಘನಾಚಲವು ನೆಲಸಿರುವುದು.

೨೬–೨೭. ಅದರ ವಿಶಾಲವಾದ ಶಿಖರದಲ್ಲಿ ಮನೋಹರವಾದ ಬ್ರಹ್ಮತೀರ್ಥವಿರುವುದು. ಆ ಪರ್ವತಕ್ಕೆ ಪೂರ್ವದಿಕ್ಕಿನಲ್ಲಿ ಹತ್ತು ಯೋಜನಗಳ ದೂರದಲ್ಲಿ ನದಿಗಳಲ್ಲೆಲ್ಲ ಪ್ರಮುಖವೆನಿಸಿದ ಸುವರ್ಣಮುಖರಿಯೆನಿಸಿದ ನದಿಯು

ಸುವರ್ಣಮುಖರೀನಾಮ ನದೀನಾಂ ಪ್ರವರಾ ನದೀ ।
ತಸ್ಯಾ ಏವೋತ್ತರೇ ಭಾಗೇ ವೃಷಭಾಚಲನಾಮತಃ ॥ ೨೭ ॥
ತಸ್ಯಾಗ್ರೇ ಸರಸೀ ನಾಮ್ನಾ ಸ್ವಾಮಿಪುಷ್ಕರಿಣೀ ಶುಭಾ ।
ಗತ್ವಾ ದೃಷ್ಟ್ವಾ ಶುಭಂ ತೋಯಂ ಮನಃಶುದ್ಧಿಂ ಗಮಿಷ್ಯಸಿ ॥ ೨೮ ॥
ತತ್ರ ಸ್ನಾತ್ವಾ ವಿಧಾನೇನ ವರಾಹಂ ತಂ ಪ್ರಣಮ್ಯ ಚ ।
ವೇಂಕಟೇಶಂ ನಮಸ್ಕೃತ್ಯ ತತೋ ಗಚ್ಛ ವರಾನನೇ ॥ ೨೯ ॥
ಉತ್ತರೇ ಸ್ವಾಮಿತೀರ್ಥಸ್ಯ ಸಿಂಹಶಾರ್ದೂಲಸಂಯುತೇ ।
ಚೂತಪುನ್ನಾಗಪನಸೈರ್ಬಕುಲಾಮಲಕೈಃ ಶುಭೈಃ ॥ ೩೦ ॥
ಚಂದನಾಗುರುನಿಂಬೈಶ್ಚ ತಾಲಹಿಂತಾಲಕಿಂಶುಕೈಃ ।
ಕಪಿತ್ಥಾಶ್ವತ್ಥಬಿಲ್ವೈಶ್ಚ ಇಂಗುದ್ಯೈಶ್ಚ ವರಾನನೇ ॥ ೩೧ ॥
ಏತಾದೃಶೈರ್ಮಹಾಪುಣ್ಯೈರ್ವೃಕ್ಷೈಶ್ಚ ವಿವಿಧೈಃ ಶುಭೈಃ ।
ವಿಯದ್ಗಂಗೇತಿ ವಿಖ್ಯಾತಂ ತೀರ್ಥಮೇಕಂ ವಿರಾಜತೇ ॥ ೩೨ ॥
ತಸ್ಮಿಂಸ್ತೀರ್ಥೇಽಂಜನೇ ದೇವಿ ಸಂಕಲ್ಪವಿಧಿಪೂರ್ವಕಂ ।
ಸ್ನಾತ್ವಾ ಪೀತ್ವಾ ಶುಭಂ ತೀರ್ಥಂ ತೀರ್ಥಸ್ಯಾಭಿಮುಖೀ ಸ್ಥಿತಾ ॥ ೩೩ ॥

---

ಪ್ರವಹಿಸುತ್ತಿರುವುದು. ಅದರ ಉತ್ತರ ತೀರದಲ್ಲಿಯೇ ವೃಷಭಾದ್ರಿಯೆಂಬ ಹೆಸರಿನ ಪರ್ವತವೊಂದಿರುವುದು.

೨೮. ಅದರ ಅಗ್ರಭಾಗದಲ್ಲಿ ಮಂಗಳಪ್ರದವಾದ ಸ್ವಾಮಿಪುಷ್ಕರಿಣಿಯೆಂಬ ಸರೋವರವಿರುವುದು. ಅಲ್ಲಿಗೆ ಹೋಗಿ ಆ ಸರೋವರದ ನಿರ್ಮಲೋದಕವನ್ನು ನೋಡಿದ ಮಾತ್ರದಿಂದಲೇ ನಿನ್ನ ಮನಸ್ಸು ಪರಿಶುದ್ಧವಾಗುವುದು.

೨೯. ವಿಧ್ಯುಕ್ತ ರೀತಿಯಲ್ಲಿ ಆ ಸರೋವರದ ಸ್ನಾನವನ್ನು ಮಾಡಿಕೊಂಡು ಯಜ್ಞವರಾಹಸ್ವಾಮಿಗೆ ಪ್ರಣಾಮವನ್ನು ಮಾಡಿ ವೇಂಕಟೇಶ್ವರನಿಗೆ ನಮಸ್ಕರಿಸಿ ಮುಂದಕ್ಕೆ ಹೊರಡು.

೩೦–೩೨. ಸಿಂಹಶಾರ್ದೂಲಾದಿ ಶ್ವಾಪದಗಳಿಂದ ಕೂಡಿರುವ ಸ್ವಾಮಿ ಪುಷ್ಕರಿಣಿಯ ಉತ್ತರ ಪ್ರದೇಶದಲ್ಲಿ ಮಾವು, ಪುನ್ನಾಗ, ಹಲಸು, ಬಕುಲ, ನೆಲ್ಲಿ, ಶ್ರೀಗಂಧ, ಅಗುರು, ನಿಂಬೆ, ತಾಲ, ಹಿಂತಾಲ, ಕಿಂಶುಕ, ಬೇಲ, ಅಶ್ವತ್ಥ, ಬಿಲ್ವ, ಇಂಗುದಿಗಳೇ ಮೊದಲಾದ ಮನೋಹರಗಳೂ ಮಹಾಪುಣ್ಯ ಸಂಯುತಗಳೂ ಆದ ವಿವಿಧ ವೃಕ್ಷಗಳಿಂದ ತುಂಬಿದ ಅರಣ್ಯದಲ್ಲಿ ಆಕಾಶಗಂಗೆ ಯೆಂಬ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಿದ ಒಂದು ತೀರ್ಥವು ಕಂಗೊಳಿಸು ತ್ತಿರುವುದು.

೩೩–೩೭. ಓ ಅಂಜನಾದೇವಿಯೆ ! ನೀನು ಸಂಕಲ್ಪಪೂರ್ವಕವಾಗಿ ಆ ತೀರ್ಥ ದಲ್ಲಿ ಸ್ನಾನವನ್ನು ಮಾಡಿ ಅದರ ಪವಿತ್ರೋದಕವನ್ನು ಪಾನಮಾಡಿ ಅದಕ್ಕೆ

ವಾಯುಮುದ್ದಿಶ್ಯ ಹೇ ದೇವಿ ತಪಃ ಕುರು ವರಾನನೇ ।
ದೇವೈಶ್ಚ ರಾಕ್ಷಸೈರ್ವಿಪ್ರೈರ್ಮನುಜೈರ್ಮುನಿಸತ್ತಮೈಃ ॥ ೩೪ ॥
ಭೃಂಗೈಃ ಪಕ್ಷಿಭಿರಸ್ತ್ರೈಶ್ಚ ಶಸ್ತ್ರೈಶ್ಚ ವಿವಿಧೈಃ ಶುಭೈಃ ।
ಅವಧ್ಯೋ ಭವಿತಾ ಪುತ್ರಸ್ತಪಸಾ ತೇ ನ ಸಂಶಯಃ ॥ ೩೫ ॥

ಶ್ರೀ ಸೂತ ಉವಾಚ :—

ಇತಿ ಪ್ರೋಕ್ತಾಂಜನಾದೇವೀ ತಂ ಪ್ರಣಮ್ಯ ಪುನಃಪುನಃ ।
ಭರ್ತ್ರಾಸಾಕಂ ಯಯಾವಾಶು ವೇಂಕಟಾಚಲಸಂಜ್ಞಕಂ ॥ ೩೬ ॥
ಕಾಪಿಲಂ ತೀರ್ಥಮಾಸಾದ್ಯ ಸ್ನಾತ್ವಾ ನಿರ್ಮಲಮಾನಸಾ ।
ವೇಂಕಟಾದ್ರಿಂ ಸಮಾರುಹ್ಯ ಸ್ವಾಮಿಪುಷ್ಕರಿಣೀಂ ಯಯೌ ॥ ೩೭ ॥
ಸ್ನಾತ್ವಾ ವರಾಹಮಾನಮ್ಯ ವೇಂಕಟೇಶಕೃತಾನತಿಃ ।
ಮತಂಗಸ್ಯ ಋಷೇರ್ವಾಕ್ಯಂ ಸ್ಮರಂತೀ ಚ ಮುಹುರ್ಮುಹುಃ ॥ ೩೮ ॥
ವಿಯದ್ಗಂಗಾಂ ಯಯಾವಾಶು ಚಾಂಜನಾ ಮಂಜುಭಾಷಿಣೀ ।
ಸ್ನಾತ್ವಾ ಪೀತ್ವಾ ಶುಭಂ ತೋಯಂ ತೀರೇ ತಸ್ಯ ತದುನ್ಮುಖೀ ॥ ೩೯ ॥
ಪ್ರಾಣವಾಯುಂ ಸಮುದ್ದಿಶ್ಯ ತಪಶ್ಚಕ್ರೇ ಯತವ್ರತಾ ।
ಫಲಾಹಾರಾ ಜಲಾಹಾರಾ ನಿರಾಹಾರಾ ತತಃ ಪರಂ ॥ ೪೦ ॥

---

ಅಭಿಮುಖವಾಗಿ ನಿಂತುಕೊಂಡು ವಾಯುದೇವನನ್ನು ಕುರಿತು ತಪಸ್ಸನ್ನು ಮಾಡು. ಶುಚಿಸ್ಮಿತೆಯಾದ ದೇವಿಯೆ! ನಿನ್ನ ಆ ತಪಸ್ಸಿನ ಫಲವಾಗಿ ದೇವತೆಗಳಿಂದಲೂ, ರಾಕ್ಷಸರಿಂದಲೂ, ಬ್ರಾಹ್ಮಣರಿಂದಲೂ, ಮನುಷ್ಯರಿಂದಲೂ, ಮುನಿಪುಂಗವರಿಂದಲೂ, ಕೀಟಗಳಿಂದಲೂ, ಪಕ್ಷಿಗಳಿಂದಲೂ, ಮಂತ್ರಾಸ್ತ್ರಗಳಿಂದಲೂ, ಬಹುವಿಧಗಳಾದ ತೀಕ್ಷ್ಣ ಶಸ್ತ್ರಗಳಿಂದಲೂ ಮೃತ್ಯುವನ್ನೇ ಅರಿಯದ ಉತ್ತಮ ಪುತ್ರನು ನಿನಗೆ ಲಭಿಸುವುದರಲ್ಲಿ ಸಂದೇಹವಿಲ್ಲ.''

೩೬. ಸೂತನು ಹೇಳುತ್ತಾನೆ:—ಇಂತು ಹೇಳಲ್ಪಟ್ಟ ಅಂಜನಾದೇವಿಯು ಮತಂಗಮಹಾಮುನಿಗೆ ಮತ್ತೆ ಮತ್ತೆ ನಮಸ್ಕರಿಸಿ ತನ್ನ ಪತಿಯೊಡನೆ ವೇಂಕಟಾಚಲವನ್ನು ಕುರಿತು ಹೊರಟಳು.

೩೭. ಆಕೆಯು ಕಪಿಲತೀರ್ಥವನ್ನು ಸೇರಿ ಸ್ನಾನಮಾಡಿ ಶುದ್ಧಮನಸ್ಸುಳ್ಳವಳಾಗಿ ವೇಂಕಟಾಚಲವನ್ನೇರಿ ಸ್ವಾಮಿಪುಷ್ಕರಿಣಿಯ ತೀರಕ್ಕೆ ಬಂದಳು.

೩೮–೪೦. ಅದರಲ್ಲಿ ಮಿಂದು ವರಾಹಸ್ವಾಮಿಗೆ ನಮಸ್ಕರಿಸಿ ವೇಂಕಟೇಶ್ವರನಿಗೆ ಮಣಿದು ಮತಂಗಮಹರ್ಷಿಯ ವಾಕ್ಯಗಳನ್ನು ಅಡಿಗಡಿಗೂ ಜ್ಞಾಪಿಸಿಕೊಳ್ಳುತ್ತ ಮೃದುಭಾಷಿಣಿಯಾದ ಆ ಅಂಜನಾದೇವಿಯು ಆಕಾಶಗಂಗೆಯನ್ನು ಸಮಿಾಪಿಸಿದಳು. ಅಲ್ಲಿ ಸ್ನಾನವನ್ನಾಚರಿಸಿ ಅದರ ಪವಿತ್ರೋದಕವನ್ನು ಸೇವಿಸಿ ತೀರದಲ್ಲಿ ಅದಕ್ಕೆ ಅಭಿಮುಖಳಾಗಿ ನಿಂತುಕೊಂಡು ಜಗತ್ಪ್ರಾಣನಾದ ವಾಯು

ಸಹಸ್ರಾಬ್ದಂ ತಪಶ್ಚಕ್ರೇ ನ್ಯಸ್ತನಾಸಾಗ್ರದೃಷ್ಟಿಕಾ ।
ವಯಸ್ಯಾ ವಿಪುಲಾ ನಾಮ ಶುಶ್ರೂಷಾಮಕರೋಚ್ಛುಭಾ ॥ ೪೧ ॥
ವರ್ಷಾಣಾಂ ಚ ಸಹಸ್ರಾಂತೇ ವಾಯುರ್ದೇವೋ ಮಹಾಮತಿಃ ।
ಪ್ರಾದುರಾಸೀತ್ತದಾ ತಾಂ ವೈ ಭಾಷಮಾಣೋ ಮಹಾಮತಿಃ ॥ ೪೨ ॥
ಮೇಷಸಂಕ್ರಮಣಂ ಭಾನೌ ಸಂಪ್ರಾಪ್ತೇ ಮುನಿಸತ್ತಮಾಃ ।
ಪೂರ್ಣಿಮಾಖ್ಯೇ ತಿಥೌ ಪುಣ್ಯೇ ಚಿತ್ರಾನಕ್ಷತ್ರ ಸಂಯುತೇ ॥ ೪೩ ॥
ತವೇಪ್ಸಿತಮಹಂ ದಾಸ್ಯೇ ವರಂ ವರಯ ಸುವ್ರತೇ ।
ಇತಿ ತದ್ವಚನಂ ಶ್ರುತ್ವಾ ತತಃ ಪ್ರಾಹಾಂಜನಾ ಸತೀ ॥ ೪೪ ॥
ಪುತ್ರಂ ದೇಹಿ ಮಹಾಭಾಗ ವಾಯೋ ದೇವ ಮಹಾಮತೇ ।
ತಸ್ಯಾಸ್ತದ್ವಚನಂ ಶ್ರುತ್ವಾ ಮಾತರಿಶ್ವಾಬ್ರವೀತ್ತತಃ ॥ ೪೫ ॥
ಪುತ್ರಸ್ತೇಽಹಂ ಭವಿಷ್ಯಾಮಿ ಖ್ಯಾತಿಂ ದಾಸ್ಯೇ ಶುಭಾನನೇ ।
ಇತಿ ತಸ್ಯೈ ವರಂ ದತ್ವಾ ತತ್ರೈವಾಸ್ತ ಮಹಾಬಲಃ ॥ ೪೬ ॥

---

ದೇವನನ್ನು ಕುರಿತು ಸ್ವೀಕರಿಸಿ ತಪಸ್ಸನ್ನು ಮಾಡಲುಪಕ್ರಮಿಸಿದಳು. ಕೆಲವು ಕಾಲ ಫಲಹಾರದಿಂದಲೂ, ಬಳಿಕ ಜಲಸೇವನೆಯಿಂದಲೂ, ಆಮೇಲೆ ನಿರಶನ ವ್ರತದಿಂದಲೂ ತಪಸ್ಸನ್ನು ವೃದ್ಧಿಗೊಳಿಸಿದಳು.

೪೧. ಇಂತು ಒಂದು ಸಾವಿರ ವರ್ಷಗಳವರೆಗೂ ಮೂಗಿನ ತುದಿಯಲ್ಲಿಯೇ ನೆಟ್ಟ ದೃಷ್ಟಿಯುಳ್ಳವಳಾಗಿ ತಪಸ್ಸನ್ನು ಮಾಡಿದಳು. ಆ ಸಮಯದಲ್ಲಿ ಆಕೆಯ ಸಖಿಯಾದ ವಿಪುಲೆಯೆಂಬ ಮಂಗಳಾಂಗಿಯೋರ್ವಳು ಆಕೆಯ ಶುಶ್ರೂಷೆಯನ್ನು ಮಾಡುತ್ತಿದ್ದಳು.

೪೨. ಹೀಗೆ ಒಂದು ಸಾವಿರ ವರ್ಷಗಳು ಕಳೆಯಲು ಮಹಾಪ್ರಾಜ್ಞನಾದ ವಾಯುದೇವನು ಪ್ರತ್ಯಕ್ಷನಾಗಿ ಆಕೆಯನ್ನು ಮಾತನಾಡಿಸಿದನು.

೪೩. ಶೌನಕಾದಿ ಮುನಿವರ್ಯರಿರಾ! ಸೂರ್ಯನು ಮೇಷರಾಶಿಸ್ಥನಾಗಿರಲು ಚಿತ್ತಾನಕ್ಷತ್ರದಿಂದೊಡಗೂಡಿದ ಪೌರ್ಣಮಿಯ ತಿಥಿಯಲ್ಲಿ ವಾಯುದೇವನು ಆಕೆಗೆ ಪ್ರಸನ್ನನಾದನು.

೪೪. "ಎಲೌ ವ್ರತಪರಾಯಣೆಯೆ! ನಿನ್ನ ಅಭೀಪ್ಸಿತವನ್ನು ಕೊಡುವೆನು; ವರವನ್ನು ಕೇಳು" ಎಂದ ವಾಯುದೇವನ ಮಾತುಗಳನ್ನು ಕೇಳಿ ಅಂಜನಾದೇವಿಯು ಇಂತೆಂದಳು.

೪೫. "ಮಹಾಶಯನೂ ಮಹಾಮತಿಯೂ ಆದ ವಾಯುದೇವನೆ! ನನಗೆ ಪುತ್ರನೊಬ್ಬನನ್ನು ದಯೆಪಾಲಿಸು." ಆಕೆಯ ಪ್ರಾರ್ಥನೆಯನ್ನು ಕೇಳಿ ವಾಯುವು ಹೇಳತೊಡಗಿದನು.

೪೬. "ಮಂಗಳಾಂಗಿಯೇ! ನಾನೇ ನಿನಗೆ ಪುತ್ರನಾಗಿ ಜನಿಸಿ ನಿನಗೆ

ತದಾ ಬ್ರಹ್ಮಾದಯೋ ದೇವ ಇಂದ್ರಾದ್ಯಾ ಲೋಕಪಾಲಕಾಃ ।
ವಸಿಷ್ಠಾದ್ಯ ಮಹಾತ್ಮಾನಃ ಸನಕಾದ್ಯಾಶ್ಚ ಯೋಗಿನಃ ॥ ೪೭ ॥
ವ್ಯಾಸಾದಯಶ್ಚ ವಿಪ್ರೇಂದ್ರಾ ಲಕ್ಷ್ಮ್ಯಾ ಸಾಕಂ ಜಗತ್ಪತಿಃ ।
ಮುನಿಪತ್ನ್ಯೋ ದೇವಪತ್ನ್ಯ ಋಷಿಪತ್ನ್ಯಸ್ತಥೈವ ಚ ॥ ೪೮ ॥
ಸ್ವಂ ಸ್ವಂ ವಾಹನಮಾರುಹ್ಯ ದಾರಭೃತ್ಯಸುತಾದಿಭಿಃ ।
ಆಗತಾಸ್ತೇ ಮಹಾತ್ಮಾನೋ ದ್ರಷ್ಟುಂ ತಾಂ ತಪಸಿ ಸ್ಥಿತಾಂ ॥ ೪೯ ॥

ಆಶ್ಚರ್ಯಮಾಶ್ಚರ್ಯಮಿತಿ ಬ್ರುವಾಣಾ
ಬ್ರಹ್ಮಾದಯೋ ದೇವಗಣಾಶ್ಚ ಸರ್ವೇ ।
ಆಲೋಕಯಂತೋ ದಿವಿದೂರತಸ್ತೇ
ಸ್ಥಿತಾಸ್ತದಾ ಬ್ರಹ್ಮಮಹೇಶಮುಖ್ಯಾಃ ॥ ೫೦ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ "ಅಂಜನಾತಪಃಕರಣಪ್ರಕಾರಾದಿವರ್ಣನಂ"ನಾಮ ಏಕೋನಚತ್ವಾರಿಂಶೋಽಧ್ಯಾಯಃ**

---

ಪ್ರಖ್ಯಾತಿಯನ್ನು ಸಂಪಾದಿಸಿಕೊಡುವೆನು." ಇಂತೆಂದು ಮಹಾಪರಾಕ್ರಮಿಯಾದ ವಾಯುವು ಆಕೆಗೆ ವರವನ್ನಿತ್ತು ಅಲ್ಲಿಯೇ ನಿಂತನು.

೪೭–೪೯. ಆಗ ಬ್ರಹ್ಮನೇ ಮೊದಲಾದ ದೇವತೆಗಳೂ, ಮಹೇಂದ್ರನೇ ಮೊದಲಾದ ಅಷ್ಟದಿಕ್ಪಾಲಕರೂ, ವಸಿಷ್ಠಾದಿ ಮಹರ್ಷಿಗಳೂ, ಸನಕಾದಿ ಯೋಗಿಗಳೂ, ವ್ಯಾಸನೇ ಮುಂತಾದ ಬ್ರಾಹ್ಮಣೋತ್ತಮರೂ, ಲಕ್ಷ್ಮೀದೇವಿಯೊಡನೆ ಶ್ರೀ ಮಹಾವಿಷ್ಣುವೂ, ಮುನಿಪತ್ನಿಯರೂ, ದೇವಪತ್ನಿಯರೂ, ಋಷಿಸ್ತ್ರೀಯರೂ ಪುತ್ರಭೃತ್ಯಕಳತ್ರಗಳೊಡನೆ ತಮ್ಮ ತಮ್ಮ ವಾಹನಗಳನ್ನೇರಿ ತಪೋನಿರತಳಾಗಿ ನಿಂತಿರುವ ಅಂಜನಾದೇವಿಯನ್ನು ನೋಡಲು ಅಲ್ಲಿಗೆ ಆಗಮಿಸಿದನು.

೫೦. ಬ್ರಹ್ಮನೇ ಮೊದಲಾದ ಸಕಲ ದೇವಸಮೂಹಗಳೂ ಆಕಾಶದಲ್ಲಿ ನಿಂತು ದೂರದಿಂದಲೇ ಎಲ್ಲವನ್ನೂ ನೋಡುತ್ತ ಇದು ಅತ್ಯಾಶ್ಚರ್ಯಕರವಾದ ವ್ಯಾಪಾರವೆಂದು ತಮ್ಮ ತಮ್ಮಲ್ಲಿಯೇ ಹೇಳಿಕೊಳ್ಳುತ್ತಲಿದ್ದರು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೇಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹಸಂವಾದದಲ್ಲಿ "ಅಂಜನಾದೇವಿಯ ತಪೋವರ್ಣನ"ವೆಂಬ ಮುವ್ವತ್ತೊಂಭತ್ತನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

## ಅಥ ಚತ್ವಾರಿಂಶೋಽಧ್ಯಾಯಃ

### ಅಂಜನಾವರಲಬ್ಧ್ಯಾಕಾಶಗಂಗಾಸ್ನಾನ ಕಾಲನಿರ್ಣಯಾದಿ ವರ್ಣನಂ

ಶ್ರೀ ಸೂತ ಉವಾಚ:—

ಅಂಜನಾಪಿ ವರಂ ಲಬ್ಧ್ವಾ ಭರ್ತ್ರಾಸಾಕಂ ಮುಮೋದ ಹ ।
ಬ್ರಹ್ಮಾದೀನಾಗತಾನ್ದೃಷ್ಟ್ವಾ ವಿಸ್ಮಯಾವಿಷ್ಟಮಾನಸಾ ॥
ಪತ್ಯಾ ಸಾಕಂ ತತಃ ಸ್ವಸ್ಥಾ ಚಾಂಜನಾ ಮಂಜುಭಾಷಿಣೀ ॥ ೧ ॥
ಬ್ರಹ್ಮಾದಿಭಿರನುಜ್ಞಾತೋ ವ್ಯಾಸೋ ವೇದವಿದಾಂವರಃ ॥ ೨ ॥
ಅಂಜನಾಂ ತಾಮುವಾಚೇದಂ ಮೇಘಗಂಭೀರಯಾ ಗಿರಾ ॥ ೩ ॥

ವ್ಯಾಸ ಉವಾಚ:—

ಅಂಜನೇ ಶೃಣು ಮದ್ವಾಕ್ಯಂ ಸರ್ವಲೋಕೋಪಕಾರಕಂ ।
ಮತಂಗಸ್ಯ ಋಷೇರ್ವಾಕ್ಯಂ ಶ್ರುತ್ವಾ ನಿರ್ಮಲಚೇತಸಾ ॥ ೪ ॥
ಯಸ್ಮಾತ್ತ್ವಂ ವೇಂಕಟಂ ಗತ್ವಾ ತಪಃ ಕೃತ್ವಾ ಸುದುಷ್ಕರಂ ।
ಪ್ರಸೂಯತೇ ತ್ವಯಾ ಪುತ್ರಃ ಶೂರಸ್ತ್ರೈಲೋಕ್ಯವಿಕ್ರಮಃ ॥ ೫

---

## ಕನ್ನಡದ ಅನುವಾದ

### ಅಂಜನಾವರಪ್ರಾಪ್ತಿ—ಆಕಾಶಗಂಗಾಸ್ನಾನಕಾಲನಿರ್ಣಯಾದಿವರ್ಣನ

೧. ಸೂತನು ಹೇಳುತ್ತಾನೆ:—ಅಂಜನಾದೇವಿಯೂ ತನಗೆ ಬೇಕಾದ ವರವನ್ನು ಪಡೆದು ತನ್ನ ಗಂಡನೊಡನೆ ಸಂತೋಷಗೊಂಡಳು. ಬ್ರಹ್ಮಾದಿ ದೇವತೆಗಳು ಅಲ್ಲಿಗೆ ಬಂದುದನ್ನು ಕಂಡು ವಿಸ್ಮಯಾಕ್ರಾಂತಮನಸ್ಕಳಾಗಿ ಮೃದುಭಾಷಿಣಿಯಾದ ಆಕೆಯು ಪತಿಯೊಡನೆ ನಿಶ್ಚಿಂತೆಯಾಗಿದ್ದಳು.

೨-೩. ಆಗ ಬ್ರಹ್ಮಾದಿಗಳಿಂದ ಆಜ್ಞಪ್ತನಾದ ವೇದವೇದಾಂಗಜ್ಞನಾದ ವ್ಯಾಸನು ಅಂಜನಾದೇವಿಯನ್ನು ಕುರಿತು ಮೇಘನಾದದಂತೆ ಗಂಭೀರವಾದ ಧ್ವನಿಯಿಂದ ಹೇಳತೊಡಗಿದನು.

೪-೫. ವ್ಯಾಸನು ಹೇಳುತ್ತಾನೆ:—"ಅಂಜನಾದೇವಿಯೆ ! ಸಕಲಲೋಕಗಳಿಗೂ ಉಪಕಾರವನ್ನುಂಟುಮಾಡುವ ನನ್ನ ಮಾತನ್ನು ಕೇಳು. ಮತಂಗ ಮಹರ್ಷಿಯ ವಾಕ್ಯವನ್ನು ಕೇಳಿ ಶುದ್ಧಾಂತಃಕರಣಳಾಗಿ ನೀನು ವೇಂಕಟಾಚಲವನ್ನು ಸೇರಿ ಅತ್ಯಂತ ದುಸ್ಸಾಧ್ಯವಾದ ತಪಸ್ಸನ್ನು ಮಾಡಿದುದರಿಂದ ನಿನ್ನಲ್ಲಿ ಶೂರನೂ ತ್ರಿಲೋಕವಿಖ್ಯಾತನೂ ಆದ ಪುತ್ರನು ಹುಟ್ಟುವನು.

ಇದಂ ತೀರ್ಥೋತ್ತಮಂ ತಸ್ಮಾತ್ಪ್ರತ್ಯಕ್ಷದಿವಸೇ ತವ ।
ಗಂಗಾದ್ಯಾನಿ ಚ ತೀರ್ಥಾನಿ ಸಮಾಯಾಂತಿ ಜಗತ್ರಯೇ ॥ ೬ ॥
ವೇಂಕಟಾದ್ರಿಸಮಂ ತೀರ್ಥಂ ಬ್ರಹ್ಮಾಂಡೇ ನಾಸ್ತಿ ಕಿಂಚನ ।
ತತ್ರಾಪ್ಯತ್ಯಂತಪುಣ್ಯಾ ವೈ ಸ್ವಾಮಿಪುಷ್ಕರಿಣೀ ಶುಭಾ ॥ ೭ ॥
ತತೋಧಿಕಮಿದಂ ತೀರ್ಥಂ ಪ್ರತ್ಯಕ್ಷಂ ದಿವಸೇ ತವ ।
ಸ್ನಾನಾರ್ಥಂ ಯೇ ಸಮಾಯಾಂತಿ ಚಿತ್ರಾಯುಕ್ತಸಮನ್ವಿತೇ ॥ ೮ ॥
ಮೇಷಂ ಪೂಷಣಿ ಸಂಪ್ರಾಪ್ತೇ ಪೂರ್ಣಿಮಾಯಾಂ ಶುಭೇ ದಿನೇ ।
ಶೃಣು ತೇಷಾಂ ಫಲಂ ದೇವಿ ವಕ್ಷ್ಯಾಮಿ ತವ ಸುವ್ರತೇ ॥ ೯ ॥
ಗಂಗಾದಿ ಸರ್ವತೀರ್ಥೇಷು ದ್ವಾದಶಾಬ್ದಂ ವರಾನನೇ ।
ಯತ್ಫಲಂ ವಿದ್ಯತೇ ದೇವಿ ತತ್ಫಲಂ ಭವತಿ ಧ್ರುವಂ ॥ ೧೦ ॥
ದಾನಾನಿ ಕುರ್ವತಾಂ ಪುಂಸಾಂ ತೇಷಾಂ ಶೃಣು ಫಲೋನ್ನತಿಂ ।
ಸ್ಥಾನೇ ತೂಕ್ತಂ ಫಲಂ ದೇವಿ ವಿದ್ಧಿ ತೇಷಾಂ ವರಾನನೇ ॥ ೧೧ ॥

---

೬. ಆದುದರಿಂದ ನಿನಗೆ ವಾಯುದೇವನು ಪ್ರತ್ಯಕ್ಷನಾದ ಈ ದಿವಸದಲ್ಲಿ ಮೂರು ಲೋಕಗಳಲ್ಲಿರುವ ಗಂಗಾದಿ ಸಕಲ ತೀರ್ಥಗಳೂ ಈ ಉತ್ತಮತೀರ್ಥದಲ್ಲಿ ಬಂದು ಸೇರುವುವು.

೭. ವೇಂಕಟಾಚಲಕ್ಕೆ ಸಮಾನವಾದ ಕ್ಷೇತ್ರವು ಬ್ರಹ್ಮಾಂಡದಲ್ಲಿಯೇ ಮತ್ತೊಂದಿಲ್ಲವು. ಅದರಲ್ಲಿಯೂ ಪವಿತ್ರವಾದ ಸ್ವಾಮಿಪುಷ್ಕರಿಣಿಯು ಅತ್ಯಂತ ಪುಣ್ಯಪ್ರದವಾಗಿರುವುದು.

೮-೯. ಆದರೆ ಈ ದಿವಸದಲ್ಲಿ ಈ ಆಕಾಶಗಂಗೆಯು ಅದಕ್ಕಿಂತಲೂ ಅಧಿಕ ಪ್ರಭಾವವುಳ್ಳದ್ದಾಗಿರುವುದು. ಸೂರ್ಯನು ಮೇಷರಾಶಿಯಲ್ಲಿ ಸಂಚರಿಸು ತ್ತಿರಲು ಚಿತ್ರಾನಕ್ಷತ್ರದಿಂದೊಡಗೂಡಿದ ಪೂರ್ಣಿಮೆಯ ಶುಭತಿಥಿಯ ದಿನದಲ್ಲಿ ಯಾರು ಇಲ್ಲಿ ಸ್ನಾನಮಾಡಲು ಬರುವರೊ, ಅವರ ಪುಣ್ಯಫಲವನ್ನು ಹೇಳುವೆನು. ವ್ರತನಿರತಳಾದ ದೇವಿಯೆ! ಕೇಳು.

೧೦. ಗಂಗೆಯೇ ಮೊದಲಾದ ಸಕಲತೀರ್ಥಗಳನ್ನು ಹನ್ನೆರಡು ವರುಷಗಳ ವರೆಗೂ ಸೇವಿಸಿದಲ್ಲಿ ಯಾವ ಪುಣ್ಯವು ಲಭಿಸುವುದೊ, ಇಂದು ಇಲ್ಲಿ ಸ್ನಾನ ಮಾಡಿದವರಿಗೆ ಆ ಫಲವೇ ಖಂಡಿತವಾಗಿಯೂ ದೊರಕುವುದು.

೧೧. ದಾನಗಳನ್ನು ಮಾಡುವ ಮನುಷ್ಯರಿಗೆ ಲಭಿಸುವ ಉತ್ತಮ ಫಲವನ್ನು ಕೇಳು. ಅವರಿಗೆ ಸಿಕ್ಕುವ ಪುಣ್ಯಗಳು ಯುಕ್ತಸ್ಥಾನಗಳಲ್ಲಿಯೇ ಹೇಳಲ್ಪಟ್ಟಿರು ವುವೆಂದು ತಿಳಿ.''

ಅಂಜನೋವಾಚ :—

ಕಾರ್ಯಾಣಿ ಯಾನಿ ದಾನಾನಿ ವೇಂಕಟಾದ್ರೌ ನಗೋತ್ತಮೇ ।
ತಾನಿಸರ್ವಾಣಿ ವಿಪ್ರೇಂದ್ರ ವದ ವೇದವಿದಾಂವರ ॥ ೧೨ ॥

ವ್ಯಾಸ ಉವಾಚ :—

ಅನ್ನದಾನಂ ವಸ್ತ್ರದಾನಂ ದ್ವಯಮೇತತ್ಪ್ರಶಸ್ಯತೇ ।
ಪಿತುಃ ಶ್ರಾದ್ಧಂ ವಿಶೇಷೇಣ ವೇಂಕಟಾದ್ರೌ ನಗೋತ್ತಮೇ ॥ ೧೩ ॥
ಸುವರ್ಣಂ ಯೇ ಪ್ರಯಚ್ಛಂತಿ ಪ್ರೀತಯೇ ಮಧುಘಾತಿನಃ ।
ಸ್ವರ್ಗಲೋಕಂ ಸಮಾಸಾದ್ಯ ಮೋದಂತೇ ಮುನಿಸತ್ತಮಾಃ ॥ ೧೪ ॥
ಶಾಲಗ್ರಾಮಶಿಲಾದಾನಂ ಯೇ ಕುರ್ವಂತಿ ನಗೋತ್ತಮೇ ।
ಅಂಗಭಂಗಮವಾಪ್ನೋತಿಸ್ವಾನುಭೂತಿಂ ಚ ವಿಂದತಿ ॥ ೧೫ ॥
ಯೋ ದದಾತಿ ದ್ವಿಜೇಂದ್ರಾಯ ಗೋದಾನಂ ಚ ಕುಟುಂಬಿನೇ ।
ರೋಮಸಂಖ್ಯಾಪ್ರಮಾಣೇನ ವಿಷ್ಣುಲೋಕೇ ವಿರಾಜತೇ ॥ ೧೬ ॥
ಭೂಮಿಂ ದದಾತಿ ಯೋ ದೇವಿ ಬ್ರಾಹ್ಮಣಾಯ ಕುಂಟುಂಬಿನೇ ।
ತಸ್ಯ ಪುಣ್ಯಫಲಂ ವಕ್ತುಂ ಕಃ ಶಕ್ನೋತಿ ದಿವಿ ವಾ ಭುವಿ ॥ ೧೭ ॥

---

೧೨. ಅಂಜನಾದೇವಿಯು ಕೇಳುತ್ತಾಳೆ:—"ವೇದಜ್ಞರಲ್ಲಿ ಶ್ರೇಷ್ಠನೆನಿಸಿದ ಬ್ರಾಹ್ಮಣೋತ್ತಮನೆ! ಪರ್ವತೋತ್ತಮವಾದ ವೇಂಕಟಾಚಲದಲ್ಲಿ ಯಾವ ಯಾವ ದಾನಗಳನ್ನು ಮಾಡಬೇಕೆಂಬ ವಿಷಯವನ್ನು ನನಗೆ ಹೇಳು."

೧೩. ವ್ಯಾಸನು ಹೇಳುತ್ತಾನೆ:—"ಪವಿತ್ರವಾದ ವೇಂಕಟಾದ್ರಿಯಲ್ಲಿ ಅನ್ನದಾನ, ವಸ್ತ್ರದಾನಗಳೆರಡೂ ಬಹಳ ಪ್ರಶಸ್ತಗಳಾಗಿರುವುವು. ಮತ್ತು ವಿಶೇಷವಾಗಿ ಪಿತೃಶ್ರಾದ್ಧಗಳನ್ನು ಇಲ್ಲಿ ನೆರವೇರಿಸಬೇಕು.

೧೪. ಇಲ್ಲಿ ಶ್ರೀನಿವಾಸನ ಪ್ರೀತ್ಯರ್ಥವಾಗಿ ಹಿರಣ್ಯದಾನವನ್ನು ಮಾಡುವವರು ಮುನಿಶ್ರೇಷ್ಠರಾಗಿ ಸ್ವರ್ಗಲೋಕವನ್ನು ಸೇರಿ ಸಂತೋಷಪಡುವರು.

೧೫. ಈ ಪರ್ವತೋತ್ತಮದಲ್ಲಿ ಸಾಲಗ್ರಾಮಶಿಲೆಯನ್ನು ಯಾರು ದಾನ ಮಾಡುವರೊ, ಅವರು ಮತ್ತೆ ದೇಹವನ್ನು ಪಡೆಯದೆ ಆತ್ಮಾನುಭವವನ್ನು ಪಡೆಯುವರು.

೧೬. ಯಾವನು ಸಂಸಾರಸಹಿತನಾದ ಬ್ರಾಹ್ಮಣನಿಗೆ ಗೋದಾನವನ್ನು ಮಾಡುವನೊ, ಅದರ ಶರೀರದ ಕೂದಲುಗಳ ಪ್ರಮಾಣದ ವರ್ಷಗಳವರೆಗೂ ಅವನು ವಿಷ್ಣುಲೋಕದಲ್ಲಿ ಮೆರೆಯುತ್ತಿರುವನು.

೧೭. ಎಲೌ ಅಂಜನಾದೇವಿಯೆ! ಸುಕುಟುಂಬನಾದ ಬ್ರಾಹ್ಮಣನಿಗೆ ಭೂದಾನವನ್ನು ಮಾಡಿದವನ ಪುಣ್ಯವನ್ನು ಹೇಳಲು ಸ್ವರ್ಗಲೋಕದಲ್ಲಾಗಲಿ ಭೂಲೋಕದಲ್ಲಾಗಲಿ ಯಾವನಿಗೆ ಸಾಧ್ಯವು?

ಕನ್ಯಾಂ ದದಾತಿ ಯೋ ದೇವಿ ಶ್ರೋತ್ರಿಯಾಯ ದ್ವಿಜಾತಯೇ ।
ವಿಷ್ಣುಲೋಕಂ ಸಮಾಸಾದ್ಯ ಮೋದತೇ ಪಿತೃಭಿಸ್ಸಹ ॥ ೧೮ ॥
ಪ್ರಪಾಂ ಕುರ್ವಂತಿ ಯೋ ದೇವಿ ಶೀತಲೋದಕಸಂಯುತಾಂ ।
ತೇಷಾಂ ಪುಣ್ಯಫಲಂ ವಕ್ತುಂ ಶೇಷೇಣಾಪಿ ನ ಶಕ್ಯತೇ ॥ ೧೯ ॥
ತಿಲಂ ದದಾತಿ ವಿಪ್ರಾಯ ಶ್ರೋತ್ರಿಯಾಯ ಕುಟುಂಬಿನೇ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಸ ಗಚ್ಛತಿ ॥ ೨೦ ॥
ಧಾನ್ಯದಾನಂ ಪ್ರಶಂಸಂತಿ ವಿಪ್ರಾ ವೇದವಿದಾಂವರಾಃ ।
ಬಹುಪುತ್ರಾ ಭವಿಷ್ಯಂ ಧಾನ್ಯದಾನಂ ಪ್ರಕುರ್ವತಾಂ ॥ ೨೧ ॥
ಗಂಧಚಂಪಕಪುಷ್ಪಾದೀನ್ಛತ್ರವ್ಯಜನಚಾಮರಾನ್ ।
ತಾಂಬೂಲಘನಸಾರಾದೀನ್ಯೋ ದದಾತಿ ದ್ವಿಜಾತಯೇ ॥ ೨೨ ॥
ಭುಕ್ತ್ವಾ ಭೋಗಂ ಚಿರಂ ಕಾಲಂ ಸ್ವರ್ಗಲೋಕಂ ತತೋ ವ್ರಜೇತ್ ।
ದಿವ್ಯವರ್ಷಸಹಸ್ರಂಚ ಭುಕ್ತ್ವಾ ಭೋಗಾನನೇಕಶಃ ॥ ೨೩ ॥
ಸಾರ್ವಭೌಮಸ್ತತೋ ಭೂತ್ವಾ ತತ್ರ ಭುಕ್ತ್ವಾ ಚಿರಂ ಮಹೀಂ ।
ತತೋ ವಿಪ್ರತ್ವಮಾಸಾದ್ಯ ವೇದವೇದಾಂತಪಾರಗಃ ॥ ೨೪ ॥

---

೧೮. ಯಾವನು ಶ್ರೋತ್ರಿಯನಾದ ಬ್ರಾಹ್ಮಣನಿಗೆ ಕನ್ಯಾದಾನವನ್ನು ಮಾಡುವನೊ, ಅವನು ತನ್ನ ಪಿತೃಗಳೊಡನೆ ವೈಕುಂಠದಲ್ಲಿ ಆನಂದಪಡುವನು.

೧೯. ಇಲ್ಲಿಗೆ ಬರುವ ಯಾತ್ರಾರ್ಥಿಗಳಿಗಾಗಿ ಯಾರು ಶೀತೋದಕದ ಅರವಟ್ಟಿಗೆಯನ್ನಿಡುವರೊ, ಅವರ ಪುಣ್ಯ ಸಂಚಯವನ್ನು ಹೇಳಲು ಆದಿಶೇಷನಿಗೂ ಅಶಕ್ಯವೇ ಸರಿ.

೨೦. ಶ್ರೋತ್ರಿಯನೂ, ಕುಟುಂಬಿಯೂ ಆದ ಬ್ರಾಹ್ಮಣನಿಗೆ ತಿಲದಾನವನ್ನು ಮಾಡಲು ಮನುಷ್ಯನು ಸಮಸ್ತದುರಿತಗಳಿಂದಲೂ ಬಿಡುಗಡೆಯನ್ನು ಹೊಂದಿ ವಿಷ್ಣುಲೋಕವನ್ನು ಸೇರುವನು.

೨೧. ವೇದಜ್ಞರಲ್ಲಿ ಶ್ರೇಷ್ಠರಾದ ಬ್ರಾಹ್ಮಣರು ಧಾನ್ಯದಾನವನ್ನು ಹೊಗಳುವರು. ಧಾನ್ಯಗಳನ್ನು ದಾನಮಾಡುವವರು ಅನೇಕ ಪುತ್ರ ಪೌತ್ರರನ್ನು ಪಡೆಯುವರು.

೨೨–೨೪. ಗಂಧ, ಸಂಪಗೆಹೂವು, ಛತ್ರಿ, ಬೀಸಣಿಗೆ, ಚಾಮರ, ತಾಂಬೂಲ, ಘನಸಾರ ಮುಂತಾದುವುಗಳನ್ನು ಬ್ರಾಹ್ಮಣನಿಗೆ ದಾನಮಾಡಿದ ಮನುಷ್ಯನು ಇಲ್ಲಿ ಬಹಳಕಾಲ ಸೌಖ್ಯಗಳನ್ನನುಭವಿಸಿ ಬಳಿಕ ಸ್ವರ್ಗಲೋಕಕ್ಕೆ ಹೋಗುವನು. ಅಲ್ಲಿಯೂ ಅನೇಕ ವಿಧಗಳಿಂದ ಭೋಗಗಳನ್ನು ಒಂದುಸಾವಿರ ದಿವ್ಯವರ್ಷಗಳವರೆಗೂ ಪಡೆದು ಮತ್ತೆ ಭೂಲೋಕದಲ್ಲಿ ಚಕ್ರವರ್ತಿಯಾಗಿ ಜನಿಸಿ ಬಹುಕಾಲ ಭೂಮಿಗೊಡೆಯನಾಗಿದ್ದು ಆಮೇಲೆ ವೇದ ವೇದಾಂತಗಳಲ್ಲಿ

ತತೋ ಮುಕ್ತಿಂ ಸಮಾಯಾತಿ ಪ್ರಸಾದಾಚ್ಚಕ್ರಪಾಣಿನಃ ।
ಇತ್ಯೇತತ್ಕಥಿತಂ ದೇವಿ ವೇಂಕಟಾಚಲವೈಭವಂ
ಯ ಏತಚ್ಛೃಣುಯಾನ್ನಿತ್ಯಂ ಯಶ್ಚಾಪಿ ಪರಿಕೀರ್ತಯೇತ್ । ॥ ೨೫ ॥
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಸ ಗಚ್ಛತಿ ॥ ೨೬ ॥
ಇತ್ಯೇತತ್ಕಥಿತಂ ಪೂರ್ವಂ ವ್ಯಾಸೇನೈವ ಮಹಾತ್ಮನಾ ।
ಶ್ರುಣುಯಾದ್ವಾ ಪಠೇದ್ವಾಪಿ ಕೃತಕೃತ್ಯೋ ಭವಿಷ್ಯತಿ ॥ ೨೭ ॥
ತಸ್ಯೈವ ವಂಶಜಾಃ ಸರ್ವೇ ಮುಕ್ತಿಂ ಯಾಂತಿ ನ ಸಂಶಯಃ ॥ ೨೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವೇಂಕಟಾಚಲಮಾಹಾತ್ಮ್ಯೇ ಧರಣೀವರಾಹಸಂವಾದೇ "ಅಂಜನಾವರಲಬ್ಧ್ಯಾಕಾಶಗಂಗಾಸ್ನಾನ ಕಾಲನಿರ್ಣಯಾದಿ ವರ್ಣನಂ" ನಾಮ ಚತ್ವಾರಿಂಶೋಽಧ್ಯಾಯಃ

## ಶ್ರೀ ವೇಂಕಟಾಚಲಮಾಹಾತ್ಮ್ಯಂ ಸಮಾಪ್ತಂ

---

ನಿಷ್ಣಾತನಾದ ಬ್ರಾಹ್ಮಣೋತ್ತಮನಾಗಿ ಹುಟ್ಟಿ ಶ್ರೀಹರಿಯ ಅನುಗ್ರಹಕ್ಕೆ ಪಾತ್ರನಾಗಿ ಬಳಿಕ ಶಾಶ್ವತಮೋಕ್ಷವನ್ನು ಪಡೆಯುವನು. ಎಲೌ ದೇವಿಯೆ ! ಇಂತು ನಿನಗೆ ವೇಂಕಟಾಚಲದ ಮಾಹಾತ್ಮ್ಯೆಯನ್ನು ವರ್ಣಿಸಿರುವೆನು.

೨೬. ಯಾವನು ಇದನ್ನು ನಿತ್ಯದಲ್ಲಿಯೂ ಕೇಳುವನೊ, ಯಾವನು ಪಠನಮಾಡುವನೊ, ಅವನು ಸಕಲಪಾಪರಹಿತನಾಗಿ ವಿಷ್ಣುಲೋಕವನ್ನು ಹೊಂದುವನು.

೨೭. ಇಂತು ಮಹಾತ್ಮನಾದ ವ್ಯಾಸನಿಂದಲೇ ಹೇಳಲ್ಪಟ್ಟಿರುವುದು. ಈ ಪುಣ್ಯ ಚರಿತ್ರೆಯನ್ನು ಯಾರು ಕೇಳುವರೊ, ಯಾರು ಅನುವಾದಮಾಡುವರೊ ಅವರೇ ಕೃತಾರ್ಥರಾಗುವರು.

೨೮. ಅವರ ವಂಶದಲ್ಲಿ ಹುಟ್ಟುವವರೆಲ್ಲರೂ ಮೋಕ್ಷವನ್ನು ಪಡೆಯುವುದರಲ್ಲಿ ಸಂಶಯವಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವೇಂಕಟಾಚಲ ಮಾಹಾತ್ಮ್ಯೆಯ ಧರಣೀವರಾಹ ಸಂವಾದದಲ್ಲಿ "ಅಂಜನಾವರಪ್ರಾಪ್ತಿ—ಆಕಾಶಗಂಗಾ ಸ್ನಾನಕಾಲ ನಿರ್ಣಯಾದಿ ವರ್ಣನ"ವೆಂಬ ನಲವತ್ತನೆಯ ಅಧ್ಯಾಯವು ಮುಗಿದುದು

## ಶ್ರೀ ವೇಂಕಟಾಚಲ ಮಾಹಾತ್ಮ್ಯವು ಮುಗಿದುದು